ಇದು ಪೂರ್ಣವದುಪೂರ್ಣ ಸದಮಲವದುವೆ ಪೂರ್ಣ
ಇದನರಿತು ನಡೆವವನು ಚಿತ್ಸುಖಿಯು ಜಗದಿ
ಮುದವ ಪಡೆಯುವನು ಪೂರ್ಣಜ್ಞ.

ಜಾತಿ ಜಾತಿಗೆ ವೈರ ಮಾತು ಮಾತಿಗೆ ಜಗಳ
ಕೋತಿಗುಣದವರ ಗದ್ದಲದಿ ನೀತಿ ಹೆಣ
ಜೋತಾಡುತಿಹುದು ಪೂರ್ಣಜ್ಞ.

ಬುದ್ಧಿ ಬೆಳೆಯುತ್ತಿರಲಿ ಸದ್ಗುಣವ ಜೊತೆಗೂಡಿ
ಬುದ್ಧಿಯಲಿ ದುರ್ವಿದ್ಯೆ ಬೆಳದಲ್ಲಿ ಜಗದಿ
ಗುದ್ದಾಟ ನಿಲದು ಪೂರ್ಣಜ್ಞ.

# ಪೂರ್ಣಜ್ಞ ಗಂಗಾಧರ

**ಜಿ. ಎಚ್. ಹನ್ನೆರಡುಮಠ**

**ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರುವರ್ಯ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಸಮಗ್ರಸ್ಪಜೀವನದ ಅಪೂರ್ವ ಸಾಧನೆ, ಸಾಹಸ, ಸಂಘಟನೆಗಳ ಅದ್ಭುತ ಜೀವನ ದರ್ಶನದ ಪಕ್ಷಿನೋಟ**

# ಪೂರ್ಣಜ್ಞ ಗಂಗಾಧರ

ಜಿ. ಎಚ್. ಹನ್ನೆರಡುಮಠ

ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರುವರ್ಯ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಸಮಗ್ರ ಜೀವನದ ಅಪೂರ್ವ ಸಾಧನೆ, ಸಾಹಸ, ಸಂಘಟನೆಗಳ ಅದ್ಭುತ ಜೀವನ ದರ್ಶನದ ಪಕ್ಷಿನೋಟ



ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮತ, ಹುಬ್ಬಳ್ಳಿ

ಮಹಾತಪಸ್ವಿ ಹಾನಗಲ್ಲ ಶ್ರೀಗಳು ತತ್‌ಕ್ಷಣ ಹೇಳಿಯೇಬಿಟ್ಟರು:

"ಮರುಳಸಿದ್ಧಯ್ಯ, ನಿಮ್ಮ ಈ ಮನೆ ಮಹಾ ತಪಸ್ವಿಗಳ ರಕ್ತಸಂಬಂಧ ವಿದ್ದಂಥ ಗೃಹಸ್ಥಾಶ್ರಮವಾಗಿದೆ. ವಿಜಯಮಹಾಂತ ಶಿವಯೋಗಿಗಳು ಜನಿಸಿದ ಅವತಾರ ಭೂಮಿಯಾಗಿದೆ. ನಿಮ್ಮ ಬಳ್ಳಿಯ ಒಂದು ಹೂವು ನಮಗೆ ಬೇಕು. ಆದ್ದರಿಂದ ನಿನ್ನ ಮಗನನ್ನು ನಮ್ಮ ಶಿವಯೋಗ ಮಂದಿರಕ್ಕೆ ದಾನ ನೀಡುವೆಯಾ?"

ಶ್ರೀಗಳ ಮಾತಿಗೆ ಮರುಳಸಿದ್ಧಯ್ಯನ ಎದೆ ನಡುಗಿಹೋಯಿತು. ಇದ್ದ ಒಬ್ಬನೇ ಒಬ್ಬ ಮಗ. ಕೊಡಲೆಂತು ಸಾಧ್ಯ? ಪಕ್ಕದಲ್ಲಿ ನಿಂದ ಪ್ರೀತಿಯ ತಾಯಿ ಚನ್ನಮ್ಮ, ವಿನಯದಿಂದಲೇ ಪತಿಗೆ ಅಸಮ್ಮತಿ ಸೂಚಿಸಿದಳು. ಎಷ್ಟಾದರೂ ಹೆಣ್ಣು ಕರುಳಲ್ಲವೇ? ತನ್ನ ಕರುಳಬಳ್ಳಿಯ ಒಂದೇ ಒಂದು ಹೂವನ್ನು ಹೇಗೆ ತಾನೇ ಕಿತ್ತು ಕೊಟ್ಟಾಳು?

ದಂಪತಿಗಳ ಮನೋವೇದನೆಯನ್ನು ಅರಿತ, ತ್ರಿಕಾಲ ಜ್ಞಾನಿಗಳಾದ ಹಾನಗಲ್ಲ ಕುಮಾರಸ್ವಾಮಿಗಳು ಅಪ್ಪಣೆ ಮಾಡಿದರು—

"ನೀವಂಜಬೇಡಿರಿ, ಈ ಮಗ ನಿಮಗೇ ಇರಲಿ. ಮುಂದಿನ ಫಾಲ್ಗುಣ ದೊಳಗಾಗಿ ನಿಮಗೆ ಒಬ್ಬ ಮಹಾ ಪುತ್ರರತ್ನ ಜನಿಸುತ್ತಾನೆ. ಅವನನ್ನು ನಮ್ಮ ಶಿವಯೋಗಮಂದಿರಕ್ಕೆ ಅರ್ಪಿಸಬೇಕು. ಮರೆಯಕೂಡದು."

ಈ ಮಾತಿಗೆ ಒಡಂಬಡುತ್ತ, ದಂಪತಿಗಳಿಬ್ಬರೂ ಹರ್ಷಾತಿರೇಕದಿಂದ ಉಬ್ಬಿ, ವಚನ ನೀಡಿ ಸಾಷ್ಟಾಂಗ ಹಾಕಿದರು. ಶಿವಯೋಗಿಗಳು ಅವರ ವಚನದ ನಿರ್ಧಾರವನ್ನು ತೆಗೆದುಕೊಂಡು ನಡೆದುಬಿಟ್ಟರು!

# ಮಲಪ್ರಭಾ ತೀರದಿಂದ ಗಂಗಾ ತೀರಕ್ಕೆ

## ಸಸಿವಾಳ ಬಳ್ಳಿಯ ಚಲುವಿನ ಹೂವು

ಕಣ್ಣು ಕಂಡತ್ತ ತೆಂಗಿನ ಬನಗಳು. ಗಾಳಿ ಬೀಸಿದತ್ತ ಭತ್ತದ ಗದ್ದೆಗಳು. ಪಕ್ಷಿಗಳ ಜೋಗುಳ. ಮುಗಿಲತುಂಬ ಓಂಕಾರ. ನೆಲತುಂಬ ಅಂಗಾರ. ಅಗೋ.... ಸನಿಹದಲ್ಲಿ ಬೆಟ್ಟಗಳ ತೊಟ್ಟಿಲು. ಮಲೆನಾಡಿನ ಹೂ-ಗಿಡ-ಮರ-ಬಳ್ಳಿ-ಕಾಯಿ-ಹಣ್ಣು-ಹಂಪಲ. ಹಸಿರೋ ಹಸಿರು. ಕೋಗಿಲೆಯ ಕುಹೂ ಕೂಜನ. ಗಿಳಿಗಳ ವಿಟ್ಟೊ ವಿಟ್ಟೊ. ಬೆಟ್ಟದ ತುಂಬ ಶಿವಪ್ರಭೆಯ ಮಂದಾರ ಬೆಳಗು. ಬಿಸಿಲು ಬೆಳುದಿಂಗಳಾಗಿದೆ. ಕಲ್ಲು ಕಂಬಳಿ ಹಾಸಿದೆ. ಮಣ್ಣು ಮಲ್ಲಿಗೆ ಸೂಸಿದೆ. ಉಡಿ ತುಂಬಾ ಹೂವು. ಎದೆತುಂಬಾ ಹಾಡು. ಮನತುಂಬಾ ಶಿವನ ಸೋಬಾನ. ಏನು ರುಚಿ! ಏನು ಚಲುವು!!

ಇಂಥ ನಾಡಿಗೆ ಬಣ್ಣ ತುಂಬಿದ ಮಹರ್ಷಿಗಳು ಯಾರು? ಈ ಚಲುವಿಗೆ ಚೇತನದ ಅಭಿಷೇಕ ಎರೆದ ತಪಸ್ವಿ ಯಾರು? ವಿಜಯಮಹಾಂತ ಶಿವಯೋಗಿಗಳು! ಉಸಿರು ಉಸಿರಿಗೂ ಶಿವನ ಹೆಸರು ಒರೆವ ವಿಜಯಮಹಾಂತ ಶಿವಯೋಗಿಗಳು!! ಓ ಯೋಗಿ....ಪಾವನ ಶಿವಯೋಗಿ....ನಿನ್ನ ಪೂರ್ವಾಶ್ರಮದ ಬಳ್ಳಿಯಲ್ಲಿ ವಿಶ್ವಕ್ಕೆ ಆಶ್ರಯ ನೀಡಬಲ್ಲ ಹೊಸ ಹೂವಿನ ಸಾಕ್ಷಾತ್ಕಾರ....ಇದು ನಿನ್ನ ಸಂಕಲ್ಪವೇ? ಇದು ನಿನ್ನ ತಪೋವನದ ತಪಸ್ಸಿನ ಸಾರಸರ್ವಸ್ವ ಸಂಪೂರ್ಣ ಫಲವೇ? ಹೇಳು ತಂದೆ....ಹೇಳು....ನಿನ್ನ ಅಂದಿನ ಕಥೆಯೊಂದಿಗೆ ಇಂದಿನ ಕಥೆ ಹೇಳು! ಪವಾಡಗಳನ್ನು ಮೀರಿನಿಂದ ನಿನ್ನ ಲಿಂಗರಕ್ಷೆಯ ವೃಕ್ಷ ವಿಕಾಸವಾದ ಹೊಸ ಚರಿತ್ರೆ ಹೇಳು!!....ಕೋ....ಇಕೋ....ನಿನ್ನ ಶಿವಲಿಂಗದ ಕ್ರಿಯಾಲಿಂಗ.... ಈ ಹೊಸ ಮಗುವಿನ ಜನನ....ಯಾರು ಈ ಮಗು? ಮಗುವಿನ ತಾಯಿ ಯಾರು? ಮಗುವಿನ ತಂದೆ ಯಾರು? ಹೂವಿನಂತಿರುವ ಈ ಹೂವಿಗೆ ತಾಯಿ ಹಾಡಿ ಪರಸಿದ ಹೆಸರಾವುದು?

## ಕೊಳಗಲ್ಲ ಹಿರಿಯಮಠ

ತಾಯಿ ಚನ್ನಮ್ಮ ಕೊಳಗಲ್ಲ ಹಿರಿಯಮಠಕ್ಕೆ ಕೋಳಲಿನ ಗಾನ ತುಂಬಿದ ಮುತ್ತೈದೆ. ಶರಣ ಜೀವನದ ಮೌನ ಸಾಧಕಿ. ಪ್ರೀತಿಯೇ ರೀತಿಯಾದುತೆ ಅಕ್ಕರೆಯ ಸಕ್ಕರೆಯ ತಾಯಿ. ಆಗಾಗ ಬಾಯ್ತುಂಬಾ ಜಾನಪದ ಸಾಹಿತ್ಯದ

ಜೀವಂತ ಹಾಡುಗಳು. ಕಣ್ತುಂಬಾ ಪ್ರಕೃತಿಯಲ್ಲಿ ಶಿವನ ಪ್ರಕಂಪನದ ಅನುಭವ ಪಡೆಯುವ ಲವಲವಿಕೆ. ಗಂಡ ಮರುಳಸಿದ್ಧಯ್ಯ! ಮರುಳನೂ ಅವನೇ.... ಸಿದ್ಧನೂ ಅವನೇ!! ಇಹಜೀವನಕ್ಕೆ ಮರುಳ....ಶಿವಜೀವನಕ್ಕೆ ಸಿದ್ಧ!!! ಎಂಥಾ ತಂದೆ....ಎಂಥಾ ತಾಯಿ? ಶಿವಶಿವಾ....ಇಂಥ ಸಹಜ ಶೀತಲ ಶುದ್ಧ ಸುಂದರ ಶಿವಾನುಭವದ ಮನೆಯಲ್ಲಿ ಮಗುವಾಗಿ ಮೂಡಿಬಂದ ಕಂದಯ್ಯ ಎಂಥಾ ಭಾಗ್ಯ ಶಾಲಿ?

## ಕುಮಾರ ಮಹಾಂತ ಈ ಕಂದ

ಪುಟ್ಟಹಳ್ಳಿ ಸಸಿವಾಳ1 ಸಸಿವಾಳವೇ ಶ್ರೀಮಠ. ಈ ಮಠದ ರುದ್ರಾಕ್ಷಿ ಕಿರೀಟವೋ ಎಂಬಂತೆ ಕೊಳಗಲ್ಲಮಠದ ಸಂಸ್ಕೃತಿ. ಭಾರತೀಯತೆಯ ಭಾವಪೂರ್ಣ ಮನಸ್ಸು....ಕರ್ನಾಟಕದ ಉಜ್ವಲ ಕನಸು....ನನಸಾಗಿವೆ ಇಲ್ಲಿ ಈ ಪುಟ್ಟ ಮನೆ ಯಲ್ಲಿ! ಅಬ್ಬಾ....ವಿಜಯಮಹಾಂತ ಮಹಾಶಿವಯೋಗಿಗಳು ಜನ್ಮತಾಳಿದ ಮನೆಯೇ ಇದು? ಶಿವನು ಕರುಣಿಸಿದ ಮನೆ ಶ್ರೀಮಂತರ ಮನೆಯೇ ಇರಬೇಕೆಂಬ ನಿಯಮವಲ್ಲಿ? ಇದೊಂದು ಹಂಚಿನ ಹಳೆಯಮನೆ. ಹಂಚಿನ ಮೇಲೆಲ್ಲಾ ಕುಂಬಳ ಬಳ್ಳಿ. ಸುತ್ತಲೂ ಮಲ್ಲಿಗೆ, ಸಂಪಿಗೆ, ಬಸವನಪಾದ ಗುರುಬಸವ ಹೂವುಗಳ ಹಿಗ್ಗಿನ ತೋಟ. ಚೆಂಡುಹೂವಿನ ಚಲುವಿನ ಹಿಂಡು. ಸಮೀಪದಲ್ಲಿ ಶಿವಪೂಜೆಯ ಮಡಿಯ ಬಾವಿ. ಬಾವಿಯ ಸುತ್ತ ತುಂಬಿದ ಮುತ್ತೈದೆ ಗರತಿಯರು. ಆ ಮುತ್ತೈದೆ ತಾಯಿಯರಲ್ಲಿ ಒಬ್ಬಳು....ಚಲುವಿಗೆ ಚಿಲ್ಲಿಂಗದ ಅಭಿಷೇಕವಾದಂತೆ.... ಚನ್ನಮ್ಮ! ಅವಳ ಒಂದು ಟೊಂಕದ ಮೇಲೆ ತುಂಬಿದ ಕೊಡ. ಇನ್ನೊಂದು ಟೊಂಕದ ಮೇಲೆ ತುಂಬಿದ ಕಂದಯ್ಯ. ಅವನೇ....ಅವನೇ....ಕುಮಾರ ಮಹಾಂತ! ಮಹಾತಪಸ್ವಿ ವಿಜಯಮಹಾಂತ ಶಿವಯೋಗಿಗಳ ಪೂರ್ವಾಶ್ರಮದ ಲೌಕಿಕ ಅಣ್ಣ ಬಸವಲಿಂಗಯ್ಯನ ಮರಿಮಗ....ಕುಮಾರ ಮಹಾಂತ....ಈ ಕಂದ!! ಆ ತಾಯಿಯ ಮರ್ಚಲು ಮಗ!!!

ಯಾವ ಬಳ್ಳಿಯಲ್ಲಿ ಯಾವ ಕಾಯಿ ಆಗಬೇಕೋ ಅದೇ ಆಗಬೇಕಲ್ಲವೇ? ದ್ರಾಕ್ಷಿಯ ಬಳ್ಳಿಯಲ್ಲಿ ಎಂದಾದರೂ ಹಾಗಲಕಾಯಿ ಬಿಟ್ಟೀತೆ? ವಿಜಯಮಹಾಂತರ ಲಿಂಗಬಳ್ಳಿಯಲ್ಲೊಂದು ಲಿಂಗಗೊಂಚಲು! ಲೌಕಿಕ ಅಣ್ಣ ಬಸವಲಿಂಗಯ್ಯ ನಿತ್ಯ ಪೂಜಾಪ್ರೇಮಿ. ಈತನ ಸತ್ಯ ಸುಪನ್ನ ಮೊಮ್ಮಗನೇ ಮರುಳಸಿದ್ಧಯ್ಯ. ಬಡವನ ಮನೆಯಲ್ಲಿ ಬಂಗಾರದ ಬೆಳಕು ಬಿದ್ದಂತೆ ಈ ಮಹಾಂತ ಮರುಳಸಿದ್ಧಯ್ಯನ

---

1 ಮೈಸೂರು ಸಂಸ್ಥಾನ. ಹಾಸನ ಜಿಲ್ಲೆ: ಅರಸಿಕೆರೆ ತಾಲೂಕ: ಕಣಕಟ್ಟೆ ಹೋಬಳಿ: ದೊಡ್ಡ ಮೇಟಿಕುರಿಕೆಯ ಬಳಿ "ಸಸಿವಾಳ."

ಎರಡನೆಯ ಮಗನಾಗಿ ಜನಿಸಿದ. ಈ ಮಹಾಂತ ಹುಟ್ಟುವದಕ್ಕಿಂತ ಒಂದು ವರ್ಷ ಹಿಂದೆ ಸಸಿವಾಳದ ಕೊಳಗಲ್ಲ ಮಠದಲ್ಲಿ ನಡೆದ ಸತ್ಯಕಥೆಯೊಂದನ್ನು ಕೇಳುವಿರಾ....

**ಇಗೋ....ಈ ಸತ್ಯ ಕಥೆ—**

ಬಹುಶಃ ಕ್ರಿ.ಶ. ೧೯೨೬ರ ಎಡಬಲ. ಒಂದು ಘಟನೆ ನಡೆಯಿತು. ಶಿವ ಯೋಗಮಂದಿರದ ಸಹಜ ಶಿವಯೋಗಿ, ಮಲಪ್ರಭಾತೀರದ ಶಿವಪ್ರಭಾ ಭಾಸ್ಕರ, ವೀರಶೈವ ನವೋತ್ಕ್ರಾಂತಿಯ ಪುಣ್ಯಪುರುಷ ಹಾನಗಲ್ಲ ಕುಮಾರಮಹಾಶಿವ ಯೋಗಿಗಳು ಮೈಸೂರ ಸೀಮೆಗೆ ಯಾತ್ರೆ ಹೊರಟು, ಅಲ್ಲಿಂದ ಹಾಸನ ಜಿಲ್ಲೆಯತ್ತ ಸಂಚರಿಸುತ್ತ ಇದೇ ಈ ಸಸಿವಾಳ ಗ್ರಾಮಕ್ಕೆ ಬಂದಿದ್ದಾರೆ. ಕಾರಣ; ತಾವು ಸಂಸ್ಥಾಪಿಸಿದ ಶ್ರೀ ಶಿವಯೋಗಮಂದಿರದ ಸ್ಥಾನ ನಿರ್ದೇಶಕರಾದ ಶ್ರೀ ವಿಜಯ ಮಹಾಂತ ಸ್ವಾಮಿಗಳವರ ಜನ್ಮಸ್ಥಾನ ಈ ಸಸಿವಾಳವಲ್ಲವೇ? ಆ ಪವಿತ್ರ ಸ್ಥಾನ ದರ್ಶನಕ್ಕಾಗಿ ತವಕತುಂಬಿ ಬಂದಿದ್ದಾರೆ! ಎಂಥಾ ಸುಂದರ ಸಂದರ್ಭ!! ನೇರವಾಗಿ ಕೊಳಗಲ್ಲ ಮಠಕ್ಕೆ ಪಾದಯಾತ್ರಿಗಳಾಗಿ ದಯಮಾಡಿಸಿದರು. ಆ ಪುಟ್ಟ ಹಳ್ಳಿಯ ಹಸಿರಿನ ಚೆಲುವು ಹರನ ಒಲವುಗಳನ್ನು ಕಣ್ಣಾರೆ ಕಂಡ ಹಾನಗಲ್ಲ ಕುಮಾರ ಮಹಾ ಶಿವಯೋಗಿಗಳು ಕರಗಿದ ಕಲ್ಲುಸಕ್ಕರೆಯಾಗಿದ್ದಾರೆ. ಕೊಳಗಲ್ಲ ಮಠದ ಅಂಗಳಕ್ಕೆ ಶಿವಧೋ ಎಂದು ಬಂದರು. ಹಾನಗಲ್ಲ ಶ್ರೀಗಳು ಅಲ್ಲಿ ಬಂದುದು; ಕೈವಲ್ಯದ ಬಳಿಗೆ ಕೈವಲ್ಯ ಬಂದಂತಾಯಿತು. ಪರಂಜ್ಯೋತಿಯ ಬಳಿಗೆ ಪರಂಜ್ಯೋತಿ ಬಂದಂತಾಯಿತು. ಮಗುವಿನ ತಂದೆ "ಮರುಳಸಿದ್ಧಯ್ಯ" ಮೈ-ಮನ ನಡುಗಿ ನಮಿಸಿದ. ತಾಯಿ ಚೆನ್ನಮ್ಮ ಉಡಿಹಾಸಿ ಅಂತರಾತ್ಮದ ಅರುಹಿನ ಸಾಷ್ಟಾಂಗ ಹಾಕಿದಳು. ಅವಳ ಸೆರಗಿನಡಿಯಲ್ಲಿ ಅವಳ ಚೊಚ್ಚಿಲ ಮಗು ಮುಚ್ಚಿನಿಂತಿತ್ತು. ಪಿಳಿಪಿಳಿ ಕಣ್ಣು ಬಿಡುತ್ತಿತ್ತು. ಹಾನಗಲ್ಲ ಶ್ರೀಗಳು ಹೆಚ್ಚು ತಡಮಾಡದೇ ಹೇಳಿಯೇ ಬಿಟ್ಟರು—

"ಮರುಳಸಿದ್ಧಯ್ಯ....ನಿಮ್ಮ ಮನೆ ಮಹಾತಪಸ್ವಿಗಳ ರಕ್ತಸಂಬಂಧವುಳ್ಳ ಗೃಹಸ್ಥಾಶ್ರಮವಾಗಿದೆ. ವಿಜಯ ಮಹಾಂತ ಶಿವಯೋಗಿಗಳು ಜನಿಸಿದ ಅವತಾರ ಭೂಮಿಯಾಗಿದೆ. ನಿನ್ನ ಬಳ್ಳಿಯ ಒಂದು ಹೂವು ನಮಗೆ ಬೇಕು. ಆದ್ದರಿಂದ ನಿನ್ನ ಮಗನನ್ನು ನಮ್ಮ ಶಿವಯೋಗಮಂದಿರಕ್ಕೆ ದಾನ ನೀಡುವಿಯಾ?"

ಈ ಮಾತಿಗೆ ಮರುಳಸಿದ್ಧಯ್ಯನ ಎದೆ ನಡುಗಿಹೋಯಿತು. ಇದ್ದ ಒಬ್ಬನೇ ಒಬ್ಬ ಮಗ. ಕೊಡಲೆಂತು ಸಾಧ್ಯ. ಪಕ್ಕದಲ್ಲಿ ನಿಂದ ಪ್ರೀತಿಯ ತಾಯಿ ಚೆನ್ನಮ್ಮ ವಿನಯದಿಂದಲೇ ಪತಿಗೆ ತನ್ನ ಅಸಮ್ಮತಿ ಸೂಚಿಸಿದಳು. ಎಷ್ಟಾದರೂ ಹೆಣ್ಣು ಕರುಳಲ್ಲವೇ? ತನ್ನ ಕರುಳಬಳ್ಳಿಯ ಒಂದೇ ಒಂದು ಹೂವನ್ನು ಕಿತ್ತು ಹೇಗೆ ಕೊಟ್ಟಾಳು?

ದಂಪತಿಗಳ ಮನೋವೇದನೆಯನ್ನು ಅರ್ಥಮಾಡಿಕೊಂಡು, ತ್ರಿಕಾಲಜ್ಞಾನಿಗಳಾದ ಹಾನಗಲ್ಲ ಕುಮಾರಸ್ವಾಮಿಗಳು ಅಪ್ಪಣೆ ಮಾಡಿದರು—

"ಅಂಜಬೇಡಿರಿ, ಈ ಮಗ ನಿಮಗೇ ಇರಲಿ. ಮುಂದಿನ ಫಾಲ್ಗುಣ ಬರುವದರ ಒಳಗಾಗಿ ನಿಮಗೆ ಒಬ್ಬ ಮಹಾ ಪುತ್ರರತ್ನ ಜನಿಸುತ್ತಾನೆ. ಅವನನ್ನು ನಮ್ಮ ಶಿವಯೋಗಮಂದಿರಕ್ಕೆ ಅರ್ಪಿಸಬೇಕು. ಮರೆಯಕೂಡದು."

ಈ ಮಾತಿಗೆ ಒಡಂಬಟ್ಟು ದಂಪತಿಗಳಿಬ್ಬರೂ ಹರ್ಷಾತಿರೇಕದಿಂದ ಉಬ್ಬಿ, ವಚನ ನೀಡಿ ಸಾಷ್ಟಾಂಗ ಹಾಕಿದರು. ಶಿವಯೋಗಿಗಳು ಅವರ ವಚನದ ನಿರ್ಧಾರವನ್ನು ತೆಗೆದುಕೊಂಡು ನಡೆದುಬಿಟ್ಟರು!

## ಮೂಡಿಬಂದ ಮಹಾಂತ ಕಂದ

ಕಾಲಚಕ್ರ ತಿರುಗಿತು. ಋತುಗಳು ಉರುಳಿದವು. ಮುಗಿಲತುಂಬ ಮಿಂಚುಗಳ ಜಲಪಾತಗಳು ಸುರಿದವು. ಭೂಮಿ ಹಸಿರಾಯಿತು. ಪ್ರಕೃತಿ ಹೂವುಗಳಿಂದ ಹಿಗ್ಗಿತು. ತಾಯಿ ಚನ್ನಮ್ಮ ಚೈತನ್ಯ ಶಿವಯೋಗದ ತೇರಾದಳು. ಶಿವಯೋಗಿಗಳು ತಮ್ಮ ಆರ್ಷವಾಣಿಯನ್ನು ಆರುಹಿಹೋದಂತೆ ಒಂದು ವರ್ಷದೊಳಗಾಗಿ ಮುದ್ದುಮಗ ಮೂಡಿಬಂದ! ಅಂತರಾತ್ಮದ ಅಗ್ನಿಪರ್ವತ ಮುಗ್ಧ ಕಂದನ ತೆರದಲ್ಲಿ ಪ್ರಕಟಗೊಂಡಂತೆ ಚೈತನ್ಯಾತ್ಮಕನಾಗಿದ್ದ!! ಆ ಶಿಶುವಿಗೆ ವಿಜಯ ಮಹಾಂತ ಶಿವಯೋಗಿಗಳ ನೆನಹಿನಲ್ಲೇ "ಮಹಾಂತೇಶ"ನೆಂದು ನಾಮಕರಣ ಮಾಡಿದರು.

ಐದು ವರ್ಷಗಳು ಕಳೆದವು. ದಂಪತಿಗಳಿಗೆ ಮಹಾಂತ ಬೆಣ್ಣೆಯ ಚೆಂಡಾಗಿದ್ದ. ಅರುಹಿನ ಅರಗಿಳಿಯಾಗಿದ್ದ. ಪ್ರೇಮದ ಜೇಂಗೊಡವಾಗಿದ್ದ. ಅವರು ತಮ್ಮ ಗಾಢವಾದ ಪುತ್ರವಾತ್ಸಲ್ಯದಲ್ಲಿ ತಾವು ಹಿಂದೆ ಹಾನಗಲ್ಲ ತಾತನಿಗೆ ನೀಡಿದ್ದ ವಚನ ಮರೆತೇ ಬಿಟ್ಟಿದ್ದರು. ಅತ್ತ ಹಾನಗಲ್ಲ ಶಿವಯೋಗಿಗಳು ಲಿಂಗೈಕ್ಯರಾದರು. ಅಂದಮೇಲೆ ಅವರಿಗೆ ಕೇಳುವವರಾದರೂ ಯಾರು?

## ಮರಹಿನಾಚೆಯ ಮಹಂತ

ಒಂದು ದಿನ ಮಹಾಂತ ಅಡುಗೆಮನೆಯಲ್ಲಿ ಮೊಸರನ್ನವನ್ನು ಸೇವಿಸುತ್ತಿದ್ದಾನೆ. ಹೊರಮನೆಯಲ್ಲಿ ದಂಪತಿಗಳು ಮಂಡಿಸಿದ್ದಾರೆ. ತಕ್ಷಣವೇ ಮರುಳಸಿದ್ಧಯ್ಯನವರಿಗೆ ತಾವು ಶಿವಯೋಗಿಗಳಿಗೆ ಇತ್ತ ವಚನ ನೆನಪಾಗಿ ಹೆಂಡತಿ ಚನ್ನಮ್ಮನಿಗೆ ಹೇಳಿದರು—

"ಚನ್ನೂ, ನಮ್ಮ ಮಹಾಂತೇಶನಿಗೆ ಐದು ವರ್ಷ ತುಂಬಿದವು. ಅವನನ್ನು ಶಿವಯೋಗಮಂದಿರಕ್ಕೆ ಒಪ್ಪಿಸಿ ಬರೋಣ. ಸ್ವಾಮಿಗಳಿಗೆ ವಚನ ಕೊಟ್ಟದ್ದು ನೆನಪಿದೆಯೇ?"

ಈ ಮಾತಿಗೆ ಚನ್ನಮ್ಮ ಮೈಯೆಲ್ಲಾ ನಡುಗಿ– "ನೆನಪಿದೆ ಸ್ವಾಮಿ. ಆದರೆ ಅದಕ್ಕೇಕೆ ಚಿಂತೆ ಮಾಡುತ್ತೀರಿ? ಹೇಗೂ ಕುಮಾರಸ್ವಾಮಿಗಳು ಲಿಂಗೈಕ್ಯರಾಗಿ ಬಿಟ್ಟಿದ್ದಾರೆ. ನಮ್ಮ ಮಗನನ್ನು ಕೊಡೆಂದು ಕೇಳುವವರಾದರೂ ಯಾರು? ಹೋಗಲಿ ಬಿಡಿರಿ. ಆ ವಿಚಾರ ತಗೀಬೇಡಿರಿ" ಎಂದಳು.

ಆದರೂ ಮರುಳಸಿದ್ಧಯ್ಯನವರಿಗೆ ಸಮಾಧಾನವಾಗಲಿಲ್ಲ. ಮರಳಿ ಕೇಳಿದರು–

"ಈ ರೀತಿ ನಾವು ಸುಮ್ಮನೆ ಇರುವದು ತಪ್ಪಾದೀತು ಚನ್ನೂ; ನಾವು ವಚನ ಕೊಟ್ಟಿದ್ದು ಸುಳ್ಳೇ? ಅವರು ಲಿಂಗೈಕ್ಯರಾದರೂ ಅವರ ಆತ್ಮ ಸುಮ್ಮನಿದ್ದೀತೆ?"

ಪತಿಯ ಮಾತು ನಡೆಯುತ್ತಿದ್ದಂತೆ ಚನ್ನಮ್ಮ ಹೇಳಿದಳು– "ಸ್ವಾಮಿ, ನಿಮಗೇನು ಮಕ್ಕಳು ಬೇಸರವಾಗಿವೆಯೇ? ಇದ್ದ ಕಂದಮ್ಮನನ್ನು ಕರಳು ಹರಿದು ಕಾಡಿಗೆ ಅಟ್ಟುವಿರಾ?–ನನಗಂತೂ ಮನಸಿಲ್ಲ. ನೀವು ತಿಳಿದಂತೆ ಮಾಡಿರಿ. ನನ್ನನ್ನು ಕೇಳಬೇಡಿರಿ" ಎಂದಳು. ಅವಳ ಕಣ್ತುಂಬಾ ಕಣ್ಣೀರು ಸುರಿಯುತ್ತಿತ್ತು.

ಇಷ್ಟರಲ್ಲಿ ಅಡುಗೆಮನೆಯಿಂದ— "ಅವ್ವಾ....ಅವ್ವಾ....ಅವ್ವಾ...." ಎಂದು ಸಂಕಟದಿಂದ ಕೂಗು ಕೇಳಿಬಂದಿತು. ಚನ್ನಮ್ಮ ಭರ್ರನೆ ಓಡಿಹೋಗಿ– "ಏನಾಯ್ತು ಮಗು? ಏನಾಯ್ತು ಮಾಂತೇಶಾ?" ಎಂದು ಮಗನನ್ನು ಕೇಳಿದಳು. ಆತ–"ಅವ್ವಾ ನನ್ನ ಕಣ್ಣೀ ಕಾಣೆಸವು....ಕಣ್ಣೀ ಕಾಣೆಸವು" ಎಂದು ಅಳಹತ್ತಿದ. ಮಗು ಮಹಾಂತೇಶನ ಕಣ್ಣುಗಳು ದಟ್ಟವಾಗಿ ಮುಚ್ಚಿವೆ. ಕಣ್ಣೀರು ಸುರಿಯುತ್ತಿವೆ. ಮುಂದಿನ ಮೊಸರನ್ನ ಚಲ್ಲಾಪಿಲ್ಲಿಯಾಗಿದೆ. ಆತನ ರೋದನ ಇನ್ನೂ ಹೆಚ್ಚಾಯ್ತು– "ಅವ್ವಾ....ಅವ್ವಾ....ನೋವು....ನೋವು...." ಎಂದು ಚೀರಿ ಅಳಹತ್ತಿದ.

ಈ ಅರಿಷ್ಟ ಫಲದ ಸೂಕ್ಷ್ಮವನ್ನು ಅರಿತ ಮರುಳಸಿದ್ಧಯ್ಯನವರು–

"ಚನ್ನೂ....ಇದು ಸ್ವಾಮಿಲೀಲೆ, ಈಗಾದರೂ ಒಪ್ಪು. ಮಗನನ್ನು ಮಂದಿರಕ್ಕೆ ಒಪ್ಪಿಸುವೆನೆಂದು ಬೇಡಿಕೊ" ಎಂದರು.

ಅದಕ್ಕೆ ಅವಳು–"ಸುಮ್ಮನಿರಿ, ಮತ್ತೆ ಅದೇ ಮಾತು. ನನಗೊಂದು ಸಂಕಟ. ನಿಮಗೊಂದು ಸಂಕಟ! ಏನೋ ಕಣ್ಣಲ್ಲಿ ಕಸಬಿದ್ದು ನೋವಾಗಿರಬೇಕು. ಅದಕ್ಕೇಕೆ ಇಷ್ಟು ದೊಡ್ಡ ಪುರಾಣ?" ಎಂದಳು.

ಚನ್ನಮ್ಮನು ಮಗನ ಕಣ್ಣುಗಳನ್ನು ಹಸನಾಗಿ ತೊಳೆದಳು. ಕಣ್ಣಲ್ಲಿ ತೂಪಿರಿದು ತುಪ್ಪ ಸುರಿದಳು. ದೇವರ ಮುಂದೆ ದೀಪ ಹಚ್ಚಿದಳು. ಎಲ್ಲ

ಉಪಚಾರಗಳನ್ನೂ ಮಾಡಿದಳು. ಆದರೆ ಮಗನ ಕಣ್ಣುಗಳು ಕಾಣಲೇ ಇಲ್ಲ! ನಿರಾಶ ಳಾಗಿ ಮಗುವನ್ನು ತೊಡೆಯಮೇಲೆ ಹಾಕಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು. ಎದೆಗಪ್ಪಿಕೊಂಡು ರೋದಿಸತೊಡಗಿದಳು. ಆಗ–"ವಿಜಯಮಹಾಂತೇಶಾ.... ಚಿತ್ತರಗಿ ದೊರೆಯೇ....ಮಗನ ಕಣ್ಣು ತೆರೆಯಪ್ಪಾ" ಎಂದು ಬೇಡಿದಳು. ಆಶ್ಚರ್ಯದ ಸಂಗತಿಯೆಂದರೆ ಆ ಕ್ಷಣದಲ್ಲೇ ಮಗನ ಕಣ್ಣುಗಳು ನಿಚ್ಚಳವಾದವು. ಆದರೆ ಚನ್ನಮ್ಮನ ಕಣ್ಣುಗಳು ಇಂಗಿ ಕಾಣದಂತಾದವು! ಅವಳು ಹೌಹಾರಿ.... "ಮಹಾಂತೇಶಾ....ಮಹಾಂತೇಶಾ....ಹಾನಗಲ್ಲ ಕುಮಾರೇಶಾ........" ಎಂದು ಕೂಗಿದಳು.

ಹೆಂಡತಿಯ ಈ ಮುಗ್ಧ ವಾತ್ಸಲ್ಯಕ್ಕೆ ಮರುಳಸಿದ್ಧಯ್ಯ ಮನದಲ್ಲೇ ಮುಗುಳುನಗೆ ನಕ್ಕು, ಮೌನದಿಂದಲೇ ಸ್ನಾನಮಾಡಿ ಪೂಜೆಗೈದು ತೀರ್ಥಜಲ ತೆಗೆದುಕೊಂಡು ಬಂದ. ಮಗನನ್ನು ಮಂದಿರಕ್ಕೆ ಕೊಡುವದಾಗಿ ಹೆಂಡತಿಯ ಕಡೆಯಿಂದ ಆಣೆ-ಪ್ರಮಾಣ ಮಾಡಿಸಿದ. ತೀರ್ಥಜಲವನ್ನು, ಭಸ್ಮವನ್ನು ಇಬ್ಬರ ಕಣ್ಣುಗಳಿಗೂ ಲೇಪಿಸಿದ. ಆಗ ಅವರೀರ್ವರ ಕಣ್ಣುಗಳು ಮೊದಲಿನಂತೆಯೇ ದೇದೀಪ್ಯಮಾನವಾದವು! ಸೂರ್ಯೋದಯದಲ್ಲಿ ಕಮಲಗಳು ಅರಳಿದವು!! ಮರಹಿ ನಾಚೆಯ ಮಹಾಂತನಲ್ಲವೇ ಅವನು?

### ಶಾಂತಳಾಗು ತಾಯಿ

ಮುಂದೇನು? ಹೆಚ್ಚಿನ ವಿಚಾರಕ್ಕೆ ಆಸ್ಪದವೇ ಉಳಿಯಲಿಲ್ಲ. ದಂಪತಿ ಗಳಿಬ್ಬರೂ ಭಾರವಾದ ಎದೆಯಿಂದ, ಕಣ್ಣೀರ ಕೊರಗಿನಿಂದ, ಕರುಳಿನ ಆಕ್ರಂದನ ದಿಂದ ಐದು ವರ್ಷದ ಮಗು ಮಹಾಂತೇಶನನ್ನು ಶಿವಯೋಗಮಂದಿರಕ್ಕೆ ಅರ್ಪಿಸಲು ಬಂದಿದ್ದಾರೆ. ಅದು ಶಾ. ಶ. ೧೮೫೪, ಕ್ರಿಸ್ತಾಬ್ದ ೧೯೩೨ ವಸಂತ ಋತು, ದವನದ ಹುಣ್ಣಿವೆಯ ಎಡಬಲ, ಚೈತ್ರದ ಚಲುವು ಚಿಮ್ಮಿ ಬರುವ ಹರ್ಷ ಕಾಲ. ಅಪೂರ್ವ ವನಶ್ರೀ ಹಾಗೂ ಯೋಗಶ್ರೀಗಳಿಂದ ಶಿವಯೋಗಮಂದಿರ ಪಾವನ ಪುಣ್ಯಶ್ರೀಯಾಗಿದೆ, ಶ್ರೀಮಂತವಾಗಿದೆ, ಶೃಂಗಾರವಾಗಿದೆ. ಅಲ್ಲಿಯ ಮಾತಿನಲ್ಲಿ ಮೌನ ಅಡಗಿದೆ. ಮೌನದಲ್ಲಿ ಮಂತ್ರ ನೆಲೆಸಿದೆ. ಆ ಯೋಗವಿತಾನದ ಮರ-ಗಿಡ-ಬಳ್ಳಿ-ಪಕ್ಷಿ-ಮೃಗ-ಜಲರಾಶಿ-ವನರಾಶಿಗಳೆಲ್ಲ ವಿಜಯಮಹಾಂತನನ್ನೇ ಧ್ಯಾನಿಸುತ್ತಿವೆ. ಹಾನಗಲ್ಲ ಕುಮಾರ ಮಹಾಶಿವಯೋಗಿಯನ್ನೇ ಆರಾಧಿಸುತ್ತಿವೆ. ಏನು ಸೌಂದರ್ಯ! ಏನು ವೈಭವ!! ಎಷ್ಟೊಂದು ಅಪೂರ್ವ ಚಲುವಿನ ವೈರಾಗ್ಯವಾರಾಶಿ!!!

ದಂಪತಿಗಳಿಬ್ಬರೂ ಕುಮಾರಸ್ವಾಮಿಗಳ ಗದ್ದುಗೆಯ ಎದುರಿಗೆ ಮಂಡಿಸಿ ದ್ದಾರೆ. ಭಯಭರಿತ ಮಹಾಮೌನದಲ್ಲಿ ಎದೆಯೊಡೆದು ಕುಳಿತಿದ್ದಾರೆ. ತಮ್ಮ

ಆತ್ಮಪ್ರೇಮವನ್ನೇ ಕಾಸಿ ಕುದಿಸಿ ಕೆನೆ ತೆಗೆದಂತೆ ಮಗು ಮಹಾಂತೇಶನನ್ನು ಗದ್ದುಗೆಯ ಮುಂದೆ ಮಲಗಿಸಿದ್ದಾರೆ. ಕೊನೆಯ ಬಾರಿಗೆ ಸಮರ್ಪಿಸಿದ್ದಾರೆ.

ಆಗ ಮರುಳಸಿದ್ಧಯ್ಯನವರು–"ಕುಮಾರ ಸ್ವಾಮಿಗಳೆ; ತಾವು ನಮ್ಮ ಸಸಿವಾಳಕ್ಕೆ ಬಂದಿರಿ. ನಮ್ಮಿಂದ ಜನನವಾಗಲಿರುವ ಮಗನನ್ನು ಮಂದಿರಕ್ಕೆ ಅರ್ಪಿಸಲು ಆಣತಿ ನೀಡಿದಿರಿ. ಇಂದು ನಿಮ್ಮ ಅಪ್ಪಣೆಯಂತೆ ಕಂದಮ್ಮನನ್ನು ತಂದಿದ್ದೇನೆ; ಸ್ವೀಕರಿಸಿರಿ."

–ಎಂದರು. ನಗುನಗುತ್ತಲೇ ಮಹಾತ್ಯಾಗವನ್ನು ಗೈದರು. ತಾಯಿ ಚನ್ನಮ್ಮನೂ—"ತಂದೇ....ಸ್ವೀಕರಿಸಿರಿ....ಸ್ವೀಕರಿಸಿರಿ....." ಎನ್ನುತ್ತ ನಮಿಸ ಹೋದಳು. ಅವಳ ಎದೆಯನ್ನು ಸೀಳಿ ಕಣ್ಣೀರುಗಳು ಧಾರಾಕಾರವಾಗಿ ಪುಟಿಯ ತೊಡಗಿದವು. ಸೆರಗು ಮುಚ್ಚಿ ಪಕ್ಕಕ್ಕೆ ಸರಿದಳು. ಮುಗ್ಧ ಆಕಳು ರೋದಿಸಿದಂತೆ ರೋದಿಸತೊಡಗಿದಳು. ಆ ಮಹಾತಾಯಿ ಮಹಾಸಂಕಟದಿಂದ ಒರಲತೊಡ ಗಿದಳು. ಅವಳ ಆ ಕಣ್ಣೀರಿನ ಕೂಗಿಗೆ ಶಿವಯೋಗಮಂದಿರವೂ ಮೂಕವಿಸ್ಮಿತ ವಾಯಿತು. ಕಂಬನಿದುಂಬಿ–"ಶಾಂತಳಾಗು ತಾಯಿ....ಶಾಂತಳಾಗು ಅವ್ವಾ...." ಎಂದು ಹೇಳಿತು.

ದಂಪತಿಗಳು ಕೊನೆಯಬಾರಿಗೆ ಮಗುವನ್ನು ಗುರುಕುಲಕ್ಕೆ ಬಿಟ್ಟುಬಂದರು. ಅತ್ತ ಮಗು ಮಹಾಂತೇಶ ಯೋಗದ ಅಂತರಾತ್ಮನಲ್ಲಿ ಯೋಗದೀಪ್ತಿ ಸೇರಿದಂತೆ, ಜ್ಞಾನದಲ್ಲಿ ಜ್ಞಾನ ಬೆಸುಗೆಯಾದಂತೆ ನಗುನಗುತ್ತಲೇ ಮಂದಿರ ಸೇರಿದ. ಇತ್ತ ತಂದೆ-ತಾಯಿಗಳು ತಮ್ಮ ಮಗು ಮಹಾಂತೇಶನ ಮೇಲೆ ಕೊನೆಯ ಬಾರಿಗೆ ಕೈ ಆಡಿಸಿ, ಕೊನೆಯ ಮುದ್ದುಕೊಟ್ಟು, ಕೊನೆಯ ಬಾರಿಗೆ ಅಪ್ಪಿಕೊಂಡು, ತಾಳ ಲಾರದ ತಾಪ ಹೊತ್ತು ಮರಳಿದರು.

## ಶಿವಯೋಗಮಂದಿರದಲ್ಲಿ ಮೊದಲ ಬೆಳಗು

ಸಿಂದಗಿಯ ಪೂಜ್ಯ ಶ್ರೀ ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರಿಂದಲೇ ಕೇಳಬೇಕು; ಸಸಿವಾಳದ ಮಗು ಮಹಾಂತ ಮೊದಲಿನ ದಿನ ಶಿವಯೋಗಮಂದಿರಕ್ಕೆ ಬಂದ ಪ್ರತ್ಯಕ್ಷದರ್ಶಿ ವಿವರಣೆಯನ್ನು—

"ಶಾಲಿವಾಹನ ಶಕೆ ೧೮೫೪ ಅಂದರೆ ೧೯೩೩ನೇ ಇಸ್ವಿಯಲ್ಲಿ; ಅಂದು ಅಧ್ಯಕ್ಷರಾದ ಶ್ರೀ ನಿ. ಪ್ರ. ಹಾವೇರಿ ಶಿವಬಸವ ಸ್ವಾಮಿಗಳು, ಉಳಿದೆಲ್ಲ ವಟು ಗಳು, ಸಾಧಕರು (....ನಾವೂ ಸಾಧಕರಾಗಿದ್ದೆವು) ಹಾನಗಲ್ಲಪ್ಪಗಳ ಕರ್ತೃ ಗದ್ದುಗೆಯ ಮುಂಭಾಗದಲ್ಲಿ ಮುಹೂರ್ತ ಮಾಡಿರಲು ಮರುಳಸಿದ್ಧಯ್ಯ-ಚನ್ನಮ್ಮ ದಂಪತಿಗಳು ಕರ್ತೃ ಗದ್ದುಗೆಗೆ ಸಾಷ್ಟಾಂಗವೆರಗಿ ಬಂದು, ಮಂದಿರದ ಮಗುವೆಂದು

ಮಹಾಂತೇಶನನ್ನು ಹಾವೇರಿ ಶ್ರೀಗಳಿಗೆ ಒಪ್ಪಿಸಿದರು. ಕುಮಾರೇಶನ ಆ ಬೆಳಕಿನ ಮಧ್ಯದಲ್ಲಿಯೇ ಮಗುವನ್ನು ಒಪ್ಪಿಸಿದಾಗ ಹಿಂದಿನ ಕಳವಳ ಆ ದಂಪತಿಗಳಿಗಿರ ಲಿಕ್ಕಿಲ್ಲ; ಸಮಾಧಾನ, ಶಾಂತಿ ಸಿಕ್ಕಿರಬೇಕು ಕುಮಾರೇಶನ ಕರುಣೆಯಿಂದ. ವಟು ಜೀವನ ಆರಂಭವಾಯಿತು. ಮಹಾಂತೇಶ ಮಹಾಂತಮರಿಯಾದರು."2

ಆಗ ಈ ಮಹಾಂತಮರಿಗೆ ಮಂದಿರದ–ಸಹಾಧ್ಯಾಯಿಗಳು "ನಿಮ್ಮ ಊರು ಯಾವುದು?" ಎಂದರೆ "ಶಿವಯೋಗಮಂದಿರ" ಎಂದೂ; "ತಂದೆ ಹೆಸರು ಏನು?" ಎಂದರೆ "ಕುಮಾರೇಶ"ನೆಂದೂ ಹೇಳುತ್ತಿದ್ದನಂತೆ.3

ಹಾಸಿಗೆ ಸುರುಳಿಮಾಡಿ ಅದರ ಮೇಲೆ ಕುಳಿತು ಆನಿ ಬಂತಾನೆ ಆಡುವ ಆಟ, ಕಡ್ಡಿಪೆಟ್ಟಿಗೆ ಸಾಲಾಗಿ ಹೊಂದಿಸಿ ರೈಲು ಮಾಡುವ ಆಟ; ಒಮ್ಮೊಮ್ಮೆ ಕಾರು ಮಾಡಿ "ಹತ್ತಿರಿ ಹೋಗೋಣ ಕಾರಿನಲ್ಲಿ" ಎನ್ನುವ ನಲಿದಾಟ ನಡೆಯುತ್ತಿತ್ತು. ಬಿಳಿಹಾಳಿಯ ತುಂಡು ಸಿಕ್ಕರೆ ಮಾತ್ರ ಮುಚ್ಚಿ ಇಟ್ಟುಕೊಳ್ಳುತ್ತಿದ್ದನಂತೆ; ಬರೆಯು ಲಿಕ್ಕೆಂದು. ಆ ಹಾಳಿಯಲ್ಲಿ ಶಬ್ದಗಳನ್ನು ಕೂಡಿಸಿ ಏನೇನೋ ಬರೆದು, ಹಾಡಿ ಬಿಡುತ್ತಿದ್ದನಂತೆ. ಊಟವೆಂದರೆ ಆತನಿಗೆ ಉತ್ಸಾಹವೇ ಉಡುಗುತ್ತಿತ್ತಂತೆ. ಮಲಪ್ರಭಾ ನದಿಯಲ್ಲಿ ಈಜು ಬಿದ್ದರೆ ಹೊರಬರುತ್ತಿರಲಿಲ್ಲ. "ಮೊಸಳೆ ಬಂದಿದೆ ದಂಡೆಗೆ ಬನ್ನಿರಿ" ಎಂದು ಸಾಧಕರು ಹೆದರಿಸಿದರೆ "ಮೊದಲು ಮೊಸಳೆ ತೋರಿಸಿರಿ, ಆನಂತರ ಹೊರಗೆ ಬರುವೆ" ಎನ್ನುತ್ತಿದ್ದನಂತೆ.4

**ತಾಯಿ**

ಶಿವಯೋಗಮಂದಿರದ ಚಲುವಿನ ಹೂದಾಣ. ಪಕ್ಷಿಗಳ ಒಡ್ಯಾಣ. ಮಲಪ್ರಭೆಯ ಗಾನ. ಮಹಾಶಿವಯೋಗದ ಶಾಂತ ಮೌನ. ಈ ಸೊಬಗಿನ ಸೋನೆಯು ಪರಿಸರದಲ್ಲಿ ಪ್ರಾಕೃತಿಕ ತಪಸ್ವಿಯಾಗಿ ವಿಕಾಸ ಸಂಪಾದನೆ. ಅಂತ ರಂಗದ ಸಂಪಾದನೆಯೊಂದಿಗೆ ಬಹಿರಂಗದ ಸಂಪಾದನೆ. ಅರುಹಿನೊಂದಿಗೆ ಇರುಹಿನ ಸರಿಗಮಗಾನ. ಮಂದಿರದ ಪೂರ್ವಕ್ಕೆ ಹೊಳೆಸಾಲು, ಪಶ್ಚಿಮಕ್ಕೆ ಬೆಟ್ಟಗಳ ಸಾಲು. ಅಕ್ಕಪಕ್ಕದ ಬೆಳುವಲದ ಹೊಲಗಳಲ್ಲಿ ಜೋಳದ ಹಾಲ್ಗಾಳು ತೆನೆಗಳ ಸಾಲು. ಮಾತು ಸೋಲುತ್ತದೆ. ಖುಶಿ ಕುಣಿಯುತ್ತದೆ. ಶಿವಯೋಗ ಸಾಧನೆಗೆ ಹೇಳಿ ಮಾಡಿದ ಪರಿಸರ. ಇಂದಿನ ಇಲಕಲ್ಲ ಶ್ರೀ ನಿ. ಪ್ರ. ಮಹಾಂತ ಶಿವಯೋಗಿ ಗಳು ಅಂದು, ಅದೇ ಮೊದಲಬಾರಿಗೆ ಸವದಿಯಿಂದ ಶಿವಯೋಗಮಂದಿರಕ್ಕೆ

---

2 ಚಿತ್ಪ್ರಭೆ: ಪುಟ–53
3 ಚಿತ್ಪ್ರಭೆ: ಪುಟ–54
4 ಚಿತ್ಪ್ರಭೆ: ಪುಟ–54

ವಟುವಾಗಿ ಬಂದಾಗ, ಸಸಿವಾಳದ ಮಹಾಂತ ದೇವರೊಂದಿಗಿನ ತಮ್ಮ ಖುಶಿ ಕೊಡುವ ಒಡನಾಟವನ್ನು ಎಷ್ಟೊಂದು ಚೆನ್ನಾಗಿ ವಿವರಿಸಿದ್ದಾರೆ ನೋಡಿ ಇಲ್ಲಿ—

"ಆಗ ನಾನಿನ್ನೂ ಪುಟ್ಟ ವಟು. ಹಿಂಡನಗಲಿದ ಕರುವಿನಂತೆ ಶಿವಯೋಗ ಮಂದಿರ ಸೇರಿದೆ. ಮಂದಿರದ ಸಾಧಕರು ಆಗಂತುಕನಾದ ನನ್ನ ಮೇಲೆ ವಾತ್ಸಲ್ಯ ವನ್ನಾಗಲೀ, ಆತ್ಮೀಯತೆಯನ್ನಾಗಲೀ ಅದೇಕೋ ತೋರಲೇ ಇಲ್ಲ. ಹೀಗಾಗಿ ಎದೆಯೊಡೆದು ಕಂಗೆಡಬೇಕಾದ ಕರುಣಾಜನಕ ಸ್ಥಿತಿ ಬಂದಾಗ, ನನ್ನ ಮೇಲೆ ತಾಯ ವಾತ್ಸಲ್ಯದ ಅಮೃತ ಆಲಿಂಗನವನ್ನು ನೆನಪಿಗೆ ತಂದುಕೊಡುವ ಮುಗ್ಧ ಮಧುರವಾದ ವಾತ್ಸಲ್ಯ ದೃಷ್ಟಿಯೊಂದು ಅಕ್ಕರತೆಯ ಮಳೆಗರೆಯಿತು. ಆ ತಾಯಿಯೇ ವಿಜಯಮಹಾಂತದೇವರು. ಅವರ ಹೆಸರೂ ಸುಂದರ. ದೈಹಿಕ ಮೈಕಟ್ಟು ಅಪೂರ್ವ ಆಕರ್ಷಕ. ಜೊತೆಗೆ ಅಂತರಂಗದ ಪ್ರೇಮದೃಷ್ಟಿ ಆಹ್ಲಾದ ಕರ. ಸಂಪಿಗೆಯ ಎಸಳು ಬಿರಿದಂತೆ ಸದಾಕಾಲ ಮುಗ್ಧ ಮಧುರ ಮಂದಹಾಸ ವೊಂದು ಅವರ ತುಟಿಯ ಮೇಲೆ ಕುಣಿದಾಡುತ್ತಿತ್ತು. ಆ ನಗೆಯೇ ನನಗೆ ವಿರಕ್ತ ಬಾಳಿನಲ್ಲೂ ನಗುವ ನಂದಾದೀವಿಗೆಯನ್ನು ಹಿಡಿದದ್ದು. ಕಂಗೆಟ್ಟು ಕೊರಗಬೇಕಾದ ಮರುಭೂಮಿಯಲ್ಲಿ ಕಾರಂಜಿಯಾದದ್ದು. ಹೀಗಾಗಿ ಶಿವಯೋಗಮಂದಿರದ ಕಠೋರಬಾಳು ನನಗೆ ಕೆಲಕಾಲದಲ್ಲೇ ರಕ್ತಗತವಾಯಿತು. ವಿಜಯಮಹಾಂತ ದೇವರು ನನ್ನನ್ನು ನನಗರಿಯದಂತೆ ತಮ್ಮ ಅಂತರಂಗದ ಆಸ್ತಿಯನ್ನಾಗಿ ಸೇರಿಸಿ ಕೊಂಡುಬಿಟ್ಟಿದ್ದರು. ಮುಂದೆ ನನ್ನ ಬಾಳಿನ ಪ್ರತಿ ಹೆಜ್ಜೆಯಲ್ಲೂ ಅವರೇ ಒಡೆಯರಾದರು. ನಾನೇನೇ ಮಾಡಲಿ; ಅವರಿಗೆ ಕೇಳದೆ ಮಾಡುವದು ನನ್ನಿಂದ ಅಸಾಧ್ಯವೇ ಆಯಿತು. ಈ ಮೈತ್ರಿ ಎಲ್ಲಿಯವರೆಗೆ ಬೆಳೆಯಿತೆಂದರೆ, ಅವರು ಬರೆದ ನಾಟಕಗಳಿಗೆ ನಾನೇ ಪಾತ್ರಧಾರಿ. ಅವರು ಬರೆದ 'ಪೂಮಾಲೆ', 'ಮೊಗ್ಗೆಯ ಮಾಲೆ', 'ಲಾವಣಿ', ಕವನ ಸಂಕಲನಗಳ ಕವನಗಳನ್ನು ಜಾತ್ರೆಯ ಸಭೆಗಳಲ್ಲಿ— ಉತ್ಸವಗಳಲ್ಲಿ ಹಾಡುವವ ನಾನೇ; ಅಷ್ಟೇ ಏಕೆ, ಅವರು ಬರೆದುಕೊಟ್ಟ ಭಾಷಣ ಗಳನ್ನು ಕಂಠಪಾಠಮಾಡಿ ಸಭೆಗಳಲ್ಲಿ ಮಾತಾಡಿ ಬಹುಮಾನ ಗಿಟ್ಟಿಸುವವರೆಗೂ ಅವರೇ ಆಧಾರವಾದರು. ನನ್ನ ಎಲ್ಲ ಪ್ರಗತಿಗಳನ್ನು ಅವರು ಅಕ್ಕರತೆಯಿಂದ ಕಂಡು, ಒಂದಕ್ಕೆ ಹತ್ತರಷ್ಟು ಮೆಚ್ಚುಗೆ ಸೂಚಿಸಿ ನನ್ನಲ್ಲಿ ಉತ್ಸಾಹವನ್ನು ಮೂಡಿ ಸುವಲ್ಲಿಯೂ ಅವರೇ ಕಾರಣರು."

"ಒಂದು ಸಲ ನಾನು ವಿಶ್ರಾಂತಿ ಸಮಯದಲ್ಲಿ ಲೈಬ್ರರಿಗೆ ಹೋಗಿ ಓದುತ್ತ ಕುಳಿತಿದ್ದೆ. ಆ ರೀತಿ ಆಟದ ಸಮಯದಲ್ಲೂ ನಾನು ಓದುತ್ತ ಕುಳಿತಿದ್ದು ಅದೇ ಮೊದಲಸಲ ಇರಬೇಕು! ಆಗ ಅದನ್ನು ದೂರದಿಂದಲೇ ನೋಡಿದ ವಿಜಯ ಮಹಾಂತದೇವರು ನನ್ನ ಬಳಿಗೆ ಬಂದವರೆ, ಬೆನ್ನ ಮೇಲೆ ತಮ್ಮ ವಾತ್ಸಲ್ಯಭರಿತ ಕೈಗಳನ್ನಾಡಿಸಿ, ನನ್ನ ಮೇಲಿನ ಅಭಿಮಾನದಿಂದ ಒಂದುಗಂಟೆಯವರೆಗೆ ಭಾಷಣ

ವನ್ನೇ ಮಾಡಿಬಿಟ್ಟರು! ಆ ಅನಿರೀಕ್ಷಿತ ಭಾಷಣದಲ್ಲಿ ಬಹಳ ಓದಬೇಕು, ಕನ್ನಡ-ಸಂಸ್ಕೃತ-ಇಂಗ್ಲೀಷು ಕಲಿಯಬೇಕು, ಪಂಡಿತರಾಗಬೇಕು, ಎಲ್ಲ ಪರೀಕ್ಷೆಗಳನ್ನು ಗೆಲ್ಲಬೇಕು, ಹಿಂದುಳಿಯಬಾರದು, ನಾವು ಜಾಣರಾಗದಿದ್ದರೆ ಮಂದಿರಕ್ಕೆ ಬಂದು ಏನು ಉಪಯೋಗ? ಸಮಯ ವ್ಯರ್ಥ ಹಾಳುಮಾಡಬಾರದು, ಜೀವನದಲ್ಲಿ ಏನನ್ನಾದರೂ ಸಾಧಿಸಬೇಕು, ಹೇಡಿಯಂತೆ ಸಾಯಬಾರದು—ಮೊದಲಾಗಿ ನನಗರಿಯದ ಅದ್ಭುತ ಸಂಗತಿಗಳನ್ನೆಲ್ಲ ಹೇಳಿಬಿಟ್ಟರು. ತಮ್ಮ ಜೀವನದ ಆದರ್ಶ, ಧ್ಯೇಯ-ಧೋರಣೆಗಳನ್ನು ಅರುಹಿದರು. ಆ ಅವಿಸ್ಮರಣೀಯ ಸಮಯ ನನ್ನ ಬಾಳಿನಲ್ಲಿ ಇಂದಿಗೂ ಊರುಗೋಲಾಗಿ ಬಂದಿದೆ. ಗಂಡಾಂತರಗಳಲ್ಲಿ ಸಾಹಸತನವನ್ನು ಕಲಿಸಿದೆ."

"ವಿಜಯಮಹಾಂತದೇವರು ಶಿವಯೋಗಮಂದಿರದ ಕಲ್ಮಠದ ಗವಿಯಲ್ಲಿ ಓದುತ್ತಿದ್ದರು. ಔಡಲ ಎಣ್ಣೆಯ ದೀಪವನ್ನೇ ರಾತ್ರಿಕಾಲದ ಅಭ್ಯಾಸಕ್ಕೆ ಬಳಸುತ್ತಿದ್ದರು. "ಈ ಎಣ್ಣೆ ಏಕೆ ಬಳಸುತ್ತೀರಿ" ಎಂದು ನಾನು ಕೇಳಿದೆ. ಔಡಲ ಎಣ್ಣೆಯ ಕಾಂತಿ ಕಣ್ಣಿಗೆ ಒಳ್ಳೆಯದೆಂದೂ, ಮಿದುಳಿಗೆ ಆರೋಗ್ಯಕರವೆಂದೂ, ಶಾಂತಿ-ಸಮಾಧಾನವನ್ನು ಕೊಡುತ್ತದೆಯೆಂದೂ ಹೇಳಿದರು. ಇಂಥ ಸೂಕ್ಷ್ಮ ವಸ್ತುಗಳಲ್ಲಿಯೂ ಅವರು ತೋರುತ್ತಿದ್ದ ಅಪೂರ್ವ ಅನುಭವಗಳು ಯಾರನ್ನು ತಾನೆ ಆಕರ್ಷಿಸಲಿಕ್ಕಿಲ್ಲ?"5

**ಕಲಾ ತಪಸ್ವಿ**

"ಇವರು ಚಿಕ್ಕಂದಿನಿಂದ ಕವಿಗಳು ಹೇಗೋ ಹಾಗೆ ಚಿತ್ರಕಾರರೂ ಆಗಿದ್ದರು. ಅಕ್ಕಮಹಾದೇವಿ, ಬಸವಣ್ಣ, ಹಾನಗಲ್ಲ ಕುಮಾರಸ್ವಾಮಿಗಳು, ವಿಜಯಮಹಾಂತ ಶಿವಯೋಗಿಗಳು, ರಾಮಕೃಷ್ಣ, ವಿವೇಕಾನಂದ ಮೊದಲಾದವರ ಭಾವಚಿತ್ರಗಳನ್ನು ಬಹುಸುಂದರವಾಗಿ ಚಿತ್ರಿಸುತ್ತಿದ್ದರು. ಶಿವಯೋಗಮಂದಿರದ ಕೈಬರಹದ ಕೈಪಿಡಿ "ಸುಕುಮಾರ" ಇವರ ವರ್ಣರಂಜಿತ ಚಿತ್ರಗಳಿಂದ ಸುಂದರವಾಗಿ ಕಾಣುತ್ತಿತ್ತು. ಆಗ ವಿಜಾಪೂರ ಜಿಲ್ಲೆಯ ಒಂದು ಚಿತ್ರಸ್ಪರ್ಧೆಯಲ್ಲಿ ಇವರು ತೆಗೆದ ಚಿತ್ರ ಪ್ರಥಮ ಬಹುಮಾನವನ್ನು ಗಳಿಸಿತ್ತು! ಅದರಲ್ಲಿ ಒಂದು ಸುಂದರವಾದ ತೋಟ, ಸುತ್ತಲೂ ಅಪೂರ್ವ ವನಶ್ರೀ, ತೋಟದಲ್ಲಿ ಒಂದು ಚಿಕ್ಕ ಕೂಸು ಇಣಚಿಗೆ ಮುದ್ದುಕೊಟ್ಟು ಕುಳಿತ ಸನ್ನಿವೇಶ ಯಾರನ್ನಾದರೂ ಮೋಹಪಾಶದಲ್ಲಿ ಸೆಳೆಯುವಂತಿತ್ತು. ಆ ಕೂಸನ್ನು ಎತ್ತಿಕೊಳ್ಳಬೇಕೆಂಬ ಲವಲವಿಕೆ ಉಂಟಾಗುತ್ತಿತ್ತು. ಇಂಥ ನೂರಾರು ಚಿತ್ರಗಳು ಇವರ ಸಂಗ್ರಹದಲ್ಲಿದ್ದವು. ಅದು ಅವರ ಕಲಿತ ಗುಣವಾಗಿರಲಿಲ್ಲ, ಹುಟ್ಟುಗುಣವಾಗಿತ್ತು. ಒಂದುಸಲ ಇವರು ಶಿವಯೋಗ

5 ಚಿತ್ರಭೆ: ಪುಟ—43, 44

ಮಂದಿರದ ನದಿಯ ದಂಡೆಯ ಮೇಲೆ ತಾವು ತೆಗೆದ ಎಲ್ಲ ಚಿತ್ರಗಳನ್ನೂ ಪಕ್ಕದಲ್ಲಿ ಇಟ್ಟುಕೊಂಡು, ಅಲ್ಲಿಯ ಅಪೂರ್ವ ವನರಾಜಿಯ ಚಿತ್ರವನ್ನು ತೆಗೆಯುತ್ತಿದ್ದರು. ಅದೇ ಸಮಯಕ್ಕೆ ಅಲ್ಲಿಗೆ ಸಿಟ್ಟಿನಿಂದ ಧಾವಿಸಿಬಂದ, ಶಿವಯೋಗಮಂದಿರದ ಸಂಸ್ಕೃತ ಅಧ್ಯಾಪಕರಾದ ಪಂ. ಬಸವರಾಜ ಶಾಸ್ತ್ರಿಗಳು ಅವನ್ನೆಲ್ಲ ಕಸಿದುಕೊಂಡು, ಟರಟರನೇ ಹರಿದು, ಬಾವಿಯಲ್ಲಿ ಬೀಸಾಕಿಬಿಟ್ಟರು! ಅಂದಿಗೇ ಇವರ ಚಿತ್ರಕಲಾ ಜೀವನ ಮುಕ್ತಾಯವಾಯಿತು. ಆದರೆ ಅಂದು ವಿಜಯಮಹಾಂತದೇವರ ಹೊಟ್ಟೆಯಲ್ಲಿ ಕುಳಿತ ಕಲಾತಪಸ್ವಿ ಇಂದು ಎಲ್ಲಿಗೆ ಹೋದನೋ ತಿಳಿಯದು. ಆದರೆ ಆ ತಪಸ್ವಿ ವರ್ಣರಂಜಿತವಾದ ಮೂರುಸಾವಿರಮಠದ ಅತ್ಯಾಧುನಿಕ ಸೌಂದರ್ಯದಲ್ಲಿ ಹೊರಬಂದು ನಿಂದಿದ್ದಾನೆಯೆಂದೇ ನಮ್ಮ ಭಾವನೆ! ಎಂದಾದರೂ ಕಲೆಗೆ ಸಾವುಂಟೇ? ಅದು ಶಾಶ್ವತ."6

### ಅಗೋ ಅತ್ತ....

ಇತ್ತ ಮಹಾಂತದೇವರು ಶಿವಯೋಗಮಂದಿರದ ಹಸಿರಿನ ಹೂಬನದಲ್ಲಿ ಪ್ರಶಾಂತ ಯೋಗಾಧ್ಯಯನ ನಿರತರಾಗಿದ್ದಾರೆ! ಅತ್ತ....ಅವರ ತಂದೆ....ಸಸಿವಾಳದ ಆ ಪೂರ್ವಾಶ್ರಮದ ತಂದೆ....ಮುರುಳಸಿದ್ಧಯ್ಯ....ಅನೂಹ್ಯ ಅನಾರೋಗ್ಯದ ಕಾರಣವೊಂದರಿಂದ...."ಮಹಂತಾ....ಮಹಂತಾ....ಮಹಂತಾ........" ಎನ್ನುತ್ತ ಪ್ರಾಣಬಿಟ್ಟಿದ್ದಾರೆ!! ಕೆಲಕಾಲದಲ್ಲಿಯೇ....ಆ ಪ್ರೀತಿಯ ತಾಯಿ....ಮಹಾಂತ ಮರಿಯ ಮರೆಯಲಾರದ ತಾಯಿ....ಹಗಲೂ–ಇರುಳೂ ಅತ್ತೂ ಅತ್ತೂ....ಕರಗಿ ಕೊರಗಿ....ಸಾವಿರ ಸಾವಿರ ಬಾರಿ "ಮಾಂತೂ....ಮಾಂತೂ....ಮಾಂತೂ........" ಎಂದು ಬಡಬಡಿಸಿ....ಕಂಬನಿಯ ಕಾವಲಿನಲ್ಲೇ ಶರೀರ ಬಿಟ್ಟಿದ್ದಾಳೆ!! ಪಾಪ.... ಪುಟ್ಟ ಮಗು ಮಹಾಂತದೇವರಿಗೆ....ಏನು ತಿಳಿಯಬೇಕು? ಅವರು ಶರೀರ ಬಿಟ್ಟ ಸುದ್ದಿ ಕೂಡಾ ಮಗುವಿಗೆ ಬರಲಿಲ್ಲ! ಆ ತಂದೆ–ತಾಯಿಗಳ ತ್ಯಾಗ ಎಂಥಾ ಅದ್ಭುತ? ಕೆಲವರು ಪೂರ್ವಾಶ್ರಮಿಗಳು ಮಗುವನ್ನು ಮಠಕ್ಕೆ ಬಿಟ್ಟರೂ ವ್ಯಾವಹಾರಿಕ ಸಂಬಂಧ ಇಟ್ಟುಕೊಳ್ಳಲು ಹೆಣಗಾಡುತ್ತಾರೆ. ಆದರೆ ಈ ದಂಪತಿಗಳು ಎಂಥಾ ಪರಮಶ್ರೇಷ್ಠರು! ಮಂದಿರಕ್ಕೆ ಮಗುವನ್ನು ಕೊಟ್ಟಮೇಲೆ ಒಮ್ಮೆ ಕೂಡಾ ಶಿವಯೋಗಮಂದಿರಕ್ಕೆ ಹೊರಳಿ ಕಾಲು ಹಾಕಲಿಲ್ಲ. ಒಮ್ಮೆ ಕೂಡಾ "ಮಹಂತಾ" ಎಂದು ಅಪ್ಪಿಕೊಂಡು ಮಗುವಿನ ಮನದಲ್ಲಿ ಮಮತೆಯ ಬೀಜ ಬಿತ್ತಲಿಲ್ಲ. ಹೀಗಾಗಿ ಮಹಾಂತದೇವರಿಗೆ;—(ಇಂದಿಗೂ ಕೂಡಾ) ತಮ್ಮ ತಾಯಿ ಹೇಗೆ ಇದ್ದಳು....ತಂದೆ ಹೇಗಿದ್ದ.... ಎಂಬ ಈ ಬಾಲ್ಯಸ್ಮೃತಿ ಬಿಡಿಕಾಳಿನಷ್ಟೂ ನೆನಪು ಉಳಿದಿಲ್ಲ! ಒಮ್ಮೊಮ್ಮೆ (ಜಗದ್ಗುರುವಾದ ಮೇಲೆ) ಯಾರಾದರೂ ಕೇಳಿದರೆ ಇಂದಿಗೂ ಹೇಳುತ್ತಾರೆ...."ನನ್ನ ಪೂರ್ವಾಶ್ರಮದ ಅವ್ವ ಹೇಗಿ

6 ಚಿತ್ರಭೆ: ಪುಟ–45

ದ್ದಳೋ....ನನ್ನ ಆ ಪೂರ್ವಾಶ್ರಮದ ತಂದೆ ಹೇಗಿದ್ದನೋ....ನಮಗೆ ಒಂದೂ ಗೊತ್ತಿಲ್ಲ. ಅವರು ನಮ್ಮನ್ನು ಮಂದಿರಕ್ಕೆ ಬಿಟ್ಟು ಹೋದದ್ದೂ ನಮಗೆ ನೆನಪು ಉಳಿದಿಲ್ಲ. ಅವರೂ ಸೈತೆ ಒಮ್ಮೆ ಕೂಡಾ ಹೊರಳಿ ಬಂದು ನಮ್ಮನ್ನು ಕಾಣಲಿಲ್ಲ. ಹಾಗೇ ಸತ್ತುಹೋದರು. ಅವರು ಸತ್ತದ್ದೂ ನಮಗೆ ಗೊತ್ತಾಗಲಿಲ್ಲ. ಇದು ನಮ್ಮ ಮೇಲೆ ಪೂರ್ವಾಶ್ರಮದ ರಕ್ತಸಂಬಂಧಿಗಳ ವ್ಯಾಮೋಹ ಬರಬಾರದೆಂದು ಸ್ವಯಂ ಗುರುಸಿದ್ಧೇಶ್ವರನೇ ಮಾಡಿದ ಮಹಿಮೆ."

## ಗೋಡೆಯ ಮೇಲೆ ಬಟ್ಟು

"ಆಗಲೇ ಒಂದೆರಡು ವರ್ಷಗಳು ಗತಿಸಿದವು. ಒಂದುದಿನ ಮೇಲ್ಮಠದಿಂದ ಶಿವಪೂಜೆ ಮುಗಿಸಿಕೊಂಡು ಕಲ್ಮಠಕ್ಕೆ ಬಂದೆವು. ವಿಜಯಮಹಾಂತದೇವರಿಗೆ ಕಾಶಿಗೆ ಹೋಗಬೇಕು, ಕಲಕತ್ತಾ ವಿಶ್ವವಿದ್ಯಾಲಯದ "ಕಾವ್ಯತೀರ್ಥ" ಅಭ್ಯಾಸ ಮಾಡಬೇಕು ಎಂಬ ಹಂಬಲ ಬಹಳವಿತ್ತು. ಆದರೆ ಅದಕ್ಕೆ ಅನೇಕರ ಆತಂಕ ಇದ್ದದ್ದು ನನಗೆ ತಿಳಿದಿತ್ತು. ವೀರಶೈವ ಸಂಸ್ಕೃತಿಗೆ ಭಂಗಬರುತ್ತದೆಯೆಂಬ ಭಯದಿಂದ ಪೂಜ್ಯ ಕೊಪ್ಪದ ಸ್ವಾಮಿಗಳಿಗೂ ಇವರನ್ನು ಕಾಶಿಗೆ ಕಳಿಸಲು ಮನಸ್ಸು ಇರಲಿಲ್ಲ. ಇದರಿಂದ ವಿಜಯಮಹಾಂತದೇವರು ತುಂಬ ಚಿಂತಾಕ್ರಾಂತ ರಾಗಿದ್ದರು. ನಾನು ಆ ದಿನ ಅವರ ಜೀವನ ಧ್ಯೇಯದ ಬಗ್ಗೆ ಕೇಳಿದೆ. ಆಗ ಅವರ ಅಂತರಂಗದ ಇಚ್ಛಾಶಕ್ತಿ ಭುಗಿಲೆಂದು ಎದ್ದು ಗೋಡೆಯ ಮೇಲೆ ಒಂದು ಬಟ್ಟು ಇಟ್ಟು ಹೇಳಿದರು— "ಮಹಾಂತದೇವರೇ ನಾನು ಗೋಡೆಯ ಮೇಲೆ ಬಟ್ಟು ಇಟ್ಟು ಹೇಳುತ್ತೇನೆ. ಕಾಶಿಗೆ ಹೋಗಿ, ಕಲಕತ್ತಾ ವಿಶ್ವವಿದ್ಯಾಲಯದ ಕಾವ್ಯ ತೀರ್ಥ ಆಗಿಯೇ ತೀರುತ್ತೇನೆ" ಎಂದು. ಆಗಿನ್ನೂ ಅವರಿಗೆ ವಯಸ್ಸು ೧೮. ಮುಂದೆ ಕೆಲಕಾಲದಲ್ಲೇ ಕಾಶಿಗೆ ಹೋಗಿ ಕಾವ್ಯತೀರ್ಥ, ವೇದಾಂತಾಚಾರ್ಯ, ಸಾಹಿತ್ಯರತ್ನ ಮೊದಲಾದ ಪದವಿಗಳನ್ನು ಗಳಿಸಿದರು."7

## ವಾತ್ಸಲ್ಯ ರಾಗ

ಇಂದಿನ ಪೂಜ್ಯರಾದ ಇಲಕಲ್ಲ ಮಹಾಂತಸ್ವಾಮಿಗಳು ಶಿವಯೋಗಮಂದಿರ ದಲ್ಲಿ ಮಹಾಂತ ಮರಿದೇವರೊಂದಿಗಿನ ತಮ್ಮ ಅತ್ಯಂತ ಆತ್ಮೀಯ ಒಡನಾಟದ ಇನ್ನೂ ಅನೇಕ ಅನುಭವಗಳನ್ನು ಬಿಡಿಬಿಡಿಯಾಗಿ, ಬಹಳ ಸುಂದರವಾಗಿ ಹೇಳಿ ದ್ದಾರೆ. ಪ್ರತ್ಯಕ್ಷದರ್ಶಿಗಳಾದ ಅವರ ಈ ನಿರೂಪಣೆ ತುಂಬಾ ಗಮನಾರ್ಹ ವಾದುದಾಗಿದೆ:

"ಒಂದು ಸಲ ಶಿವಯೋಗಮಂದಿರದ ಜಾತ್ರೆಯಲ್ಲಿ ಸಾಧಕರ ಉಪನ್ಯಾಸ ಕೂಟಕ್ಕೆ ಹೆಸರು ಕೊಟ್ಟೆ. ನನ್ನಿಂದ ಹೆಸರು ಕೊಡಿಸಿದವರೂ ಅವರೇ. ಜಾತ್ರೆಯೂ

---

7 ಚಿತ್ರಪ್ರಭೆ: ಪುಟ–44, 45

ಸಮೀಪ ಬಂತು. ಆದರೆ ನನ್ನ ಭಾಷಣ ದೂರ ದೂರ ಓಡಹತ್ತಿತು. ಆಗ ನಾನು ಅವರ ಸಹಾಯ ಕೋರಿದೆ. ಅವರು ಅದೇ ಮಮತೆಯಿಂದ, ತಮ್ಮ ಬಿಡುವಿಲ್ಲದ ಸಾಹಿತ್ಯಿಕ ಕೆಲಸಗಳಲ್ಲಿಯೂ ನನಗೆ "ಆತ್ಮೋದ್ಧಾರ" ಎಂಬ ಭಾಷಣ ಬರೆದುಕೊಟ್ಟರು. ಅದನ್ನೇ ಕಂಠಪಾಠಮಾಡಿ ಭಾಷಣ ಮಾಡಿಯೇ ಬಿಟ್ಟೆ! ಮುಂದೆ ಈ ಪ್ರಕ್ರಟಿ ಕಡದ ಪದ್ಧತಿ ಕೆಲಕಾಲ ಮುಂದುವರೆಯಿತು. ಇದಲ್ಲದೆ ಅವರಿಂದ ಆ ಚಿಕ್ಕ ವಯಸ್ಸಿನಲ್ಲೇ ರಚಿತವಾದ "ಮೊಗ್ಗೆಯ ಮಾಲೆ", "ಪೂಮಾಲೆ", "ವಿಜಯಮಹಾಂತೇಶ್ವರ ಲಾವಣಿ"ಗಳನ್ನು ನಾನೇ ಹಾಡುತ್ತಿದ್ದೆ. ಅವರ ಆತ್ಮದ ಕಾವ್ಯಸರಸ್ವತಿಗೆ ನಾನು ವೀಣೆಯಾಗಿದ್ದೆ. ಅವರು ಬಾರಿಸಿದರು; ನಾನು ಧ್ವನಿಸಿದೆ. ಆಗ ನಮ್ಮೀರ್ವರ ವಾತ್ಸಲ್ಯರಾಗ ಪುಟಿಯುತ್ತಿತ್ತು. ಇದಲ್ಲದೆ ಅವರು ಕೈಬರಹದ "ಸುಕುಮಾರ" ಪತ್ರಿಕೆಯ ಸಂಪಾದಕರಾದದ್ದು ನನಗೆ ಬಹಳ ಆನಂದಕರ ಸಂಗತಿಯಾಗಿತ್ತು. ಕಾರಣ ನನಗೆ ಮನಸ್ಸಿಲ್ಲದಿದ್ದರೂ ನನ್ನ ಲೇಖನ ಗಳು ಅದರಲ್ಲಿ ಜೀವ ಪಡೆಯುತ್ತಿದ್ದವು!"8

## ಕವಿಜೀವನದೊಂದಿಗೆ ಶಿವಜೀವನ

"ಶಿವಯೋಗಮಂದಿರ" ಮಹಾಂತ ಮರಿದೇವರ ಸುಪ್ತ ಮನಾಂತರ್ಗತ ಚೇತನಕ್ಕೆ ಚಿಗುರುನೀಡಿ, ಮೊಗ್ಗು-ಮಿಡಿಗಳನ್ನು ಸುರಿಯಿತು. ಮಲಪ್ರಭಾ ನದಿಗೆ ಮಹಾಪೂರಗಳು ಬಂದವು. ಶಿವಯೋಗಮಂದಿರವನ್ನು ಸುತ್ತುವರಿದ ಮಹಾಕೂಟ-ಬಾದಾಮಿ-ಬನಶಂಕರಿ-ಐಹೊಳೆ-ಪಟ್ಟದಕಲ್ಲುಗಳ ಬೆಟ್ಟ ಬಯಲುಗಳಲ್ಲಿ ಸುರಿದ ಧಾರಾಕಾರ ಮಳೆ ಮಹಾಂತ ಮರಿದೇವರಲ್ಲಿ ಪ್ರಾಕೃತಿಕ ಪೂಜೆಯಾಯಿತು. ಹಸಿರಿ ನೊಂದಿಗೆ ಉಸಿರು ಹಸಿಯಾಯಿತು. ಗಾಳಿಯೊಂದಿಗೆ ಕಣ್ಣುಬೆಳಗು ಧೂಳಿ ಮಾಡಿತು. ಟೊಂಗೆ ಟೊಂಗೆಗೆ ಕಲ್ಪನೆಯ ಮಂಗಗಳು ಜಿಗಿದವು. ಭಾವನೆಯ ಪಕ್ಷಿಗಳು ಹಾರಿದವು. ಮಹಾಂತ ಮರಿದೇವರ ಸಮಸ್ತ ಶಕ್ತಿಗಳ ತಾಯ್ತೊಟ್ಟಿ ಲೆಂದರೆ ಶಿವಯೋಗಮಂದಿರವೇ! ಅವರು ಚಿತ್ರಬಿಡಿಸಿದ್ದು ಇಲ್ಲಿಯೇ. ಮರಿ ದೇವರ ಮಂಟಪದಲ್ಲಿ ನೆಲದಲ್ಲಿ ಚಿತ್ರ ಕೊರೆದದ್ದು ಇಲ್ಲಿಯೇ. "ಸುಕುಮಾರ" ಕೈಬರಹದ ಪತ್ರಿಕೆಗೆ ಕವನ-ಚುಟುಕು-ಕಥೆ ಕೊಟ್ಟದ್ದು ಇಲ್ಲಿಯೇ. ಮೊಗ್ಗು ಜೀವನದ ಸುಗ್ಗಿಯಾಗಿ 'ಮೊಗ್ಗೆಯ ಮಾಲೆ' ಬಂತು. ಹೂವಿನಂಥ ಮನಸಿನಿಂದ "ಪೂಮಾಲೆ" ರೂಪ ಪಡೆಯಿತು. ಶಿವಯೋಗಮಂದಿರದಲ್ಲಿ ಇವರ ಬೆಳಗು-ಬೈಗುಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದ ಸಿಂದಗಿಯ ಶ್ರೀ ಮ. ಘ. ಚ. ಬಸವ ಲಿಂಗ ಪಟ್ಟಾಧ್ಯಕ್ಷರು ಹೀಗೆ ಬರೆಯುತ್ತಾರೆ—

---

8 ಚಿತ್ರಪ್ರಭೆ; ಪುಟ—45, 46

"ವಿಜಯಮಹಾಂತಾರ್ಯರು ಶಿವಯೋಗಮಂದಿರದ ಪ್ರಾಥಮಿಕ ಶಾಲೆಯ ಶಿಕ್ಷಕರಾದ ಶ್ರೀ ಶಿವಬಸಪ್ಪ ಮಾಗಿ ಮತ್ತು ಶ್ರೀ ಬಸಪ್ಪ ಮಾಸ್ತರರು ಅಂಗಡಿ ಇವರ ಬಳಿಯಲ್ಲಿ ಒಂದನೆಯ ಇಯತ್ತೆಯಿಂದ ೬ನೇ ಇಯತ್ತೆಯವರೆಗೆ ಓದಿ ಪ್ರತಿ ವರ್ಷವೂ ಉತ್ತೀರ್ಣರಾದರು. ಶಿಕ್ಷಕರು ಹೇಳಿದ ಗಣಿತ ಬಿಡಿಸಿ, ಕವಿತೆ ಗಳನ್ನು ಕಂಠಪಾಠಮಾಡಿ, ಬರೆಯತಕ್ಕದ್ದನ್ನೆಲ್ಲ ಬರೆದು, ವಾಚನ ಒಳಿತಾಗಿ ಓದಿ, ಎಲ್ಲ ವಟುಗಳಿಗಿಂತಲೂ ಮುಂಚಿತವಾಗಿಯೇ ಶಾಲೆಗೆ ಬಂದು ತಮ್ಮ ಸ್ಥಾನದಲ್ಲಿ ಕುಳಿತುಬಿಡುತ್ತಿದ್ದರು. ವಟು ಮಹಾಂತಾರ್ಯರ ಪಟುಮತಿ, ಸತತ ಪರಿಶ್ರಮ, ಅಸ್ಖಲಿತವಾಣಿ, ಪ್ರತಿಭಾಪೂರ್ಣವಾದ ಲೇಖನ, ಸಂಯಮನ, ಶಾಂತ ಸ್ವಭಾವ ಮುಂತಾದವುಗಳನ್ನು ಕಂಡು ಇವರು ಮಹಾಪುರುಷರಾಗುವರೆಂದು ತರ್ಕಮಾಡು ತ್ತಿದ್ದರು."9

ಇವರ ವಟುಜೀವನದ ವಿನ್ಯಾಸವನ್ನು, ಸಮಯದ ಶಿಸ್ತನ್ನು ಇನ್ನೂ ಸಮೀಪದಿಂದ ಕಂಡು ಹೇಳುತ್ತಾರೆ–

"ವಟು ಮಹಾಂತಾರ್ಯರು ಪ್ರಾತಃಕಾಲದಲ್ಲಿ ಎದ್ದು, ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬಂದು, ಪೂರ್ವಮುಖವಾಗಿಕುಳಿತು, ಲಿಂಗಮೂರ್ತಿಗೆ ನಮಸ್ಕಾರ ಮಾಡಿ, ಪ್ರಾರ್ಥನಾಮಂದಿರಕ್ಕೆ ಹೋಗಿ ವಟುಗಳ ಕೂಡ ಭಜನೆ ಮಾಡುತ್ತಿದ್ದರು. ನಂತರ ನಿಯೋಜಿತ ಅಭ್ಯಾಸವನ್ನೆಲ್ಲ ಸಾಂಗವಾಗಿ ಓದಿ ಆಗಮನ ಸೂಚಕ ಗಂಟೆ ಬಾರಿಸಿದಾಕ್ಷಣ ಯೋಗಮಂದಿರಕ್ಕೆ ಹೋಗುತ್ತಿದ್ದರು. ಸಿದ್ಧಾಸನ, ಮಯೂರಾಸನ, ಕಂದಪೀಡಾಸನ ಮೊದಲಾದ ಕಠಿಣ ಆಸನಗಳನ್ನು ಸಹ ಅತಿ ಸುಲಭವಾಗಿಯೇ ಹಾಕುತ್ತಿದ್ದರು. ಆಸನ, ಪ್ರಾಣಾಯಾಮ, ದೃಷ್ಟಿಯೋಗ, ಷಟ್ಕರ್ಮ ಮೊದಲಾದ ಯೌಗಿಕ ಸಾಧನಗಳನ್ನು ಶಾಸ್ತ್ರೋಕ್ತ ರೀತಿಯಿಂದ ಕಲಿಸುವ ಪ್ರಾಧ್ಯಾಪಕರಾದ ಬಿದರೆ ಪಟ್ಟಾಧ್ಯಕ್ಷರು ಮಹಾಂತಾರ್ಯರ ಆಸನ ನೈಪುಣ್ಯ, ನಾಸಾಗ್ರದೃಷ್ಟಿ, ಜಿಹ್ವಾಗ್ರಬಂಧನ ಮೊದಲಾದವುಗಳನ್ನು ನೋಡಿ ಇವರು ರಾಜಯೋಗೀಂದ್ರ ನಾಗುವರೆಂದು ಹೇಳುತ್ತಿದ್ದರು."10

## ಶಿವಯೋಗಮಂದಿರದಲ್ಲಿ ಒಂದು ಘಟನೆ

ಮಹಾಂತ ಮರಿದೇವರ ಆರೋಗ್ಯ ಸರಿ ಇರಲಿಲ್ಲ. ಮೇಲಿಂದ ಮೇಲೆ ಜಡ್ಡು ಬೀಳುವದು ನಡದೇ ಇತ್ತು. ಒಂದು ಘಟನೆಯನ್ನು ಮಾತ್ರ ಅವರು ಇಂದಿಗೂ ಮರೆಯದೇ ನೆನಪಿಸಿಕೊಂಡು ಹೇಳುತ್ತಾರೆ—

---

9 ಚಿತ್ಪ್ರಭೆ; ಪುಟ–39, 40

10 ಚಿತ್ಪ್ರಭೆ; ಪುಟ–40, 41

"ಬಹುಶಃ ನಾವು ಹನ್ನೆರಡು ವಯಸ್ಸಿನವರು ಇರಬಹುದು. ಒಂದುಸಲ ನಾವು ಅತಿರೋಗದಿಂದ ಬಳಲುತ್ತಿರುವಾಗ ೨೧೮ ಜ್ವರ ಬಂದು ಮೈಯೆಲ್ಲಾ ಕಾಯಿತು. ಅರೆಮೂರ್ಛಾವಸ್ಥೆ, ಡಾಕ್ಟರು ಬಂದು ಪರೀಕ್ಷಿಸಿ–'ಮಹಾಂತದೇವರು ಉಳಿಯುವುದಿಲ್ಲ'ವೆಂದು ಮಂದಿರದ ಪ್ರಮುಖರಿಗೆ ಹೇಳಿದರು. ಎಲ್ಲರೂ ತುಂಬಾ ಚಿಂತಾಕ್ರಾಂತರಾದರು. ಜಡ್ಡು ಎಷ್ಟು ತೀವ್ರತರವಾಯಿತೆಂದರೆ ಅಂದೇ ಈ ಮರಿದೇವರು ದೇಹತ್ಯಾಗ ಮಾಡುತ್ತಾರೆಂದು ಎಲ್ಲರಿಗೂ ಗೊತ್ತಾಯಿತು. ಅಲ್ಲದೇ ಈ ಮರಿದೇವರನ್ನು ಮೇಲಿನ ಮಠದ ಪತ್ರಿಗಿಡದಡಿಯಲ್ಲಿ ಸಮಾಧಿ ಮಾಡ ಬೇಕೆಂದು ವಿಚಾರ ಮಾಡಿದರು. ಈ ಸುದ್ದಿ ಇಲಕಲ್ಲಿನಲ್ಲಿ ಗುರುಗಳಾದ ಶ್ರೀ ಕೊಪ್ಪದ ಮಹಾಂತಸ್ವಾಮಿಗಳಿಗೂ ತಿಳಿಯಿತು. ಆದರೆ ಅವರು ಬರಲಿಲ್ಲ. ಆದರೆ ಇಲಕಲ್ಲ ಮಠದ ಭಕ್ತರು ಧಾವಿಸಿ ಬಂದರು. ನಮ್ಮನ್ನು ಇಲಕಲ್ಲಿಗೆ ಜತನ ದಿಂದ ಕರೆದುಕೊಂಡು ಹೋಗಿ, ಬಹಳ ಉಪಚಾರಮಾಡಿ ಉಳಿಸಿದರು. ಅವರು ಮಾಡಿದ ಸೇವೆ ಇಷ್ಟೆಂದು ಹೇಳುವದು ಸಾಧ್ಯವೇ ಇರಲಿಲ್ಲ. ಭಕ್ತರೇ ಸ್ವಾಮಿಗಳಿಗೆ ನಿಜವಾದ ತಾಯ್ತಂದೆ ಎಂದು ನಮಗೆ ಅಂದು ಗೊತ್ತಾಯಿತು. ನಮ್ಮನ್ನು ಮೈ ತಿಕ್ಕಲಿಕ್ಕೆ, ಹವೆಯಲ್ಲಿ ಅಡ್ಡಾಡಲಿಕ್ಕೆ ಕರೆದುಕೊಂಡು ಹೋಗುವ ವ್ಯವಸ್ಥೆಗೆ ಸಾವಜಿ ಒಬ್ಬರನ್ನು ನೇಮಿಸಿದ್ದರು. ಈ ಸಮಯದಲ್ಲಿ ವೀರಪ್ಪನವರು ಗೋನಾಳ, ಗವಿಸಿದ್ಧಪ್ಪ ಪಟ್ಟಣಶೆಟ್ಟಿ ಅವರು ನಮ್ಮನ್ನು ಬಹಳ ಉಪಚಾರ ಮಾಡಿದ್ದರಿಂದ ಉಳಿದೆವು."

ಈ ಎಲ್ಲ ಕಾರಣಗಳಿಂದ ಪೂಜ್ಯರಿಗೆ ಇಲಕಲ್ಲು ತವರುಮನೆಯಾಯಿತು, ತಾಯ್ತೊಟ್ಟಿಲಾಯಿತು. ನೋವು ಉಂಡ ಜೀವ ನೋವಿನ ನೆನಪು ಮರೆವುದೆಂತು!

**ಪಂಚಪಟುತ್ವ**

ಅಭ್ಯಾಸದಲ್ಲಿ, ಲೇಖನದಲ್ಲಿ, ಭಾಷಣದಲ್ಲಿ, ಕವಿತಾ ರಚನೆಯಲ್ಲಿ ಹಾಗೂ ಯೋಗಾಸನಗಳಲ್ಲಿ ಮಹಾಂತ ಮರಿದೇವರು ಸ್ಪರ್ಧಾತ್ಮಕವಾಗಿ ಬೆಳೆಯುತ್ತಿದ್ದರು. ಸೋಮಶೇಖರಾರ್ಯ, ಅಮರಾರ್ಯ ಮತ್ತು ಘನಲಿಂಗದೇವರು ಇವರ ಸಮ ಕಾಲೀನ ವಟುಗಳು. ಇವರ ಒಡನಾಟ ಪ್ರೀತಿ-ತ್ಯಾಗಗಳಿಂದ ತುಂಬಿತ್ತು. ಇದನ್ನು ಕಣ್ಣಾರೆ ಕಂಡ ನೋಟವನ್ನು ಪೂಜ್ಯ ಬಸವಲಿಂಗ ಪಟ್ಟಾಧ್ಯಕ್ಷರ ಅನುಭವದಿಂದಲೇ ಕೇಳಿದರೆ ಚೆನ್ನ–

"ಈ ವಟುಗಳಲ್ಲಿ ಸೋಮಶೇಖರಾರ್ಯರು ಬಹಳ ಅಶಕ್ತರು. ಮೇಲಿಂದ ಮೇಲೆ ಮೇಲ್ಮಠದ ದೊಡ್ಡ ಮನೆಯಲ್ಲಿರುವ ಪಡಸಾಲೆಯಲ್ಲಿ ಆಜಾರಿಯಿಂದ ಮಲಗುತ್ತಿದ್ದರು. ವಟು ಮಹಾಂತಾರ್ಯರು ಸಹಪಾಠಿಗಳಾದ ಸೋಮಶೇಖ ರಾರ್ಯರ ಬಳಿ ಕುಳಿತು ತಲೆಯನ್ನು ಒತ್ತುತ್ತಿದ್ದರು. ಹಾಗೂ ವೈದ್ಯರು ಹೇಳಿದ

ಔಷಧ ಕೊಡುತ್ತಿದ್ದರು. ಗೆಳೆಯನು ರೋಗಬಾಧೆ ತಾಳದೆ ಸಂಕಟಪಡಹತ್ತಿದರೆ "ಶ್ರೀಗುರು ಕುಮಾರೇಶ ಶ್ರೀಗುರು ಕುಮಾರೇಶ ನಿನ್ನ ಅನುಗ್ರಹದಿಂದ ನನ್ನ ಗೆಳೆಯನಿಗೆ ಜಾಗ್ರತೆ(ಗುಣ)ವಾಗಲಿ" ಎಂದು ಕೈಮುಗಿದು ಬೇಡಿಕೊಳ್ಳುತ್ತಿದ್ದನು. ವಟು ಮಹಾಂತಾರ್ಯರ ಹೃದಯವು ಇಷ್ಟು ಕೋಮಲವಾಗಿತ್ತು. ವಟು ಮಹಾಂತಾರ್ಯರು ಅಭ್ಯಾಸಪಟು, ಲೇಖನಪಟು, ವಾಕ್ಪಟು, ಕವಿತಾಪಟು, ಆಸನ ಪಟು ಆಗಿ, ಎಲ್ಲರಿಗಿಂತ ಮೇಲೆನಿಸಿ ಪಾರಿತೋಷಕ ಪಡೆಯುತ್ತಿದ್ದರು."11

ಮಹಾಂತೇಶನ ಶಿವಯೋಗಮಂದಿರದ ಹದಿನಾರು ವರ್ಷಗಳ ಜೀವನ ಯಾತ್ರೆ ರಸದುಂಬಿದ ಎಳದೆಂಗಿನಂತೆ ಉದಾತ್ತವೂ, ಆಕರ್ಷಕವೂ ಆಗಿತ್ತು. ಆತ ಕೆಲಕಾಲದಲ್ಲೇ ಕನ್ನಡ-ಹಿಂದಿ-ಸಂಸ್ಕೃತಗಳಲ್ಲಿ ಪ್ರಾಜ್ಞನಾದ. ಮಂದಿರದ ನಕ್ಷತ್ರ ಗಳಲ್ಲಿ ಶುಕ್ರತಾರೆಯಂತೆ ರಾರಾಜಿಸಿದ. ಅಧ್ಯಯನ-ಯೋಗಗಳೊಂದಿಗೆ ಬಹುವಿಧ ಚಟುವಟಿಕೆಗಳಲ್ಲಿಯೂ ಭಾಗವಹಿಸಿದ. 'ಪಥಿಕ' ಕವನ ಸಂಗ್ರಹವನ್ನೂ, ಅನೇಕ ನಾಮಾವಳಿಗಳನ್ನೂ, ಜೀವನ ಚರಿತ್ರೆಗಳನ್ನೂ ಬರೆದು ಅಚ್ಚುಹಾಕಿಸಿದ. ಈತನ ಕವಿತೆ-ಲೇಖನಗಳು ಶರಣಸಾಹಿತ್ಯ, ನವಸಂದೇಶ, ಅಮರವಾಣಿ, ಕರ್ಮವೀರ, ಜೀವನ, ಸದ್ಧರ್ಮದೀಪಿಕೆ, ಜಯಕರ್ನಾಟಕ ಮೊದಲಾದ ಉಚ್ಚ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಜಿಜ್ಞಾಸುಗಳನ್ನೂ, ರಸಿಕರನ್ನೂ ಕೆರಳಿಸಿದವು. ಈತನ ವ್ಯಕ್ತಿ ಸಾಮರ್ಥ್ಯವನ್ನು ಮನಗಂಡ ಮಂದಿರದ ನಿಯೋಜಕರು 'ಸುಕುಮಾರ' ಪತ್ರಿಕೆಯ ಸಂಪಾದಕರನ್ನಾಗಿ ಮಾಡಿಬಿಟ್ಟರು. ಅಲ್ಪಾವಧಿಯ ಈ ಯಶೋಯಾತ್ರೆ ಮುಂದಿನ ಧರ್ಮಜೀವನದ ವಿಶ್ವಯಾತ್ರೆಗೆ ಮೂಲಬೀಜವಾಗಿತ್ತು! ಮಾತನರಿಯದ ಮಂತ್ರವಾಗಿತ್ತು.

## ಮಹಾವಾಕ್ಯ

ಇವರ 'ಪಥಿಕ' ಕವನ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತ ಲಿಖಿಸಿದ ಶ್ರೀ ನಿಡುಮಾಮಿಡಿ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿ ಗಳವರ ಈ ಮಹಾವಾಕ್ಯ ಬಾಲಕ ಮಹಾಂತೇಶನ ಜೀವನಕ್ಕೆ ಹಿಡಿದ ಕೈಗನ್ನಡಿ ಯಾಗಿದೆ—

"ಕವಿ ತನ್ನ ಸಾಧನೆಯನ್ನು ಮನಮುಟ್ಟಿ ಮಾಡಿದ್ದಾನೆ. ಶಿವಯೋಗ ಮಂದಿರದಲ್ಲಿ ಓದುವಾಗ ಕಾಲವನ್ನು ವೃಥಾ ಕಳೆದಿಲ್ಲ. ಅಲ್ಲಿಗೆ ತಾನು ಬಂದ ಧ್ಯೇಯವೇನೆಂಬುದನ್ನು ಚೆನ್ನಾಗಿ ಅರಿತು, ತನ್ನ ಸಾಧನೆಯಲ್ಲಿ ನುರಿತಿದ್ದಾನೆ. ತನ್ನ ಬುದ್ಧಿಯನ್ನು ಬಿತ್ತರಿಸಿದ್ದಾನೆ. ತನ್ನ ಬಾಳನ್ನು ಎತ್ತರಿಸಿದ್ದಾನೆ. ಶಿವಯೋಗ

---

11 ಚತ್ರಭೆ; ಪುಟ–42

ಮಂದಿರದ ಸಾಧಕ ವೃಂದಕ್ಕೆಲ್ಲ ಶ್ರೀಮಹಾಂತದೇವರು ಒಬ್ಬ ಮಹಾ ಆದರ್ಶ ಸಾಧಕ. ಸರ್ವರಿಗೂ ಸಾಧ್ಯವಾಗದ ಸಾಹಿತ್ಯಾಭಿರುಚಿಯನ್ನು ಸುಲಭವಾಗಿ ಬೆಳಸಿ ಕೊಂಡಿದ್ದಾರೆ. ನೂತನ ಮಾನವೀಯತೆಯ ಉನ್ನತಮಟ್ಟವನ್ನು ಮನವರಿಕೆ ಮಾಡಿಕೊಂಡಿದ್ದಾರೆ...."

ಇವರೇ ಮತ್ತೆ ಹೇಳಿದ್ದಾರೆ....

"....ಶ್ರೀ ಮಹಾಂತದೇವರು ಮಹಾಕವಿಯಾಗುವ ಮಹಾಂತ ಕೀರ್ತಿ ಕಾಯ್ದಿದೆ. ಅವರ ಪ್ರಾಣವಾಯು ಅದೇ ಸಂದೇಶವನ್ನು ಹೊತ್ತುತಂದು ಉಸುರುತಿದೆ."

## ಮಲಪ್ರಭಾ ತೀರದಿಂದ ಗಂಗಾತೀರಕ್ಕೆ

ಶಿವಯೋಗಮಂದಿರದ ಅಧ್ಯಯನ ಅನುಸಂಧಾನಗಳು ಕುಮಾರ ಮಹಾಂತನ ಹಾರುವ ಶಕ್ತಿಗೆ ಸಾಲದಂತಾದವು. ಸಂಸ್ಕೃತದಲ್ಲಿ ಉನ್ನತ ವ್ಯಾಸಂಗ, ಕಾಶಿಯ ವಿಶ್ವವಿಖ್ಯಾತ ಪಂಡಿತರ ಅಡಿಯಲ್ಲಿ ತರಬೇತಿ, ಭಾರತೀಯ ಸಿದ್ಧಾಂತದ ಆಳ_ಅಗಲ ಗಳನ್ನು ನಿಖರವಾಗಿ ಅಭ್ಯಸಿಸುವ ಉನ್ನತ ಮನೀಷೆ ಇವನನ್ನು ನಿಲ್ಲಗೊಡಲಿಲ್ಲ. ಮುಗಿಲಂಗಣದಲ್ಲಿ ಏರುವ ಹಕ್ಕಿಗೆ ಸಹ್ಯಾದ್ರಿಯ ಪರ್ವತ ಶಿಖರಗಳು ಚಿಕ್ಕ ವಾದವು; ಹಿಮಾಲಯ ಶೃಂಗಗಳನ್ನು ಕಾಣುವ ತವಕ ತುಂಬಿತು. ಕಾಶಿಗೆ ಹೋದರೆ ನಮ್ಮ ಸಂಸ್ಕೃತಿಗೆ ಭಂಗಬರುತ್ತದೆಂಬ ಭಯ ಕೆಲವರಲ್ಲಿ ಮನೆ ಮಾಡಿತ್ತು. ಈ ಮಧ್ಯದಲ್ಲಿ ಮಹಾಂತದೇವರನ್ನು ಇಲಕಲ್ಲಿನ ಶ್ರೀ ಚಿತ್ತರಗಿ ಸಂಸ್ಥಾನಮಠಕ್ಕೆ ಮರಿದೇವರನ್ನಾಗಿ ಸ್ವೀಕರಿಸಲಾಗಿತ್ತು. ಆಗ ಇಲಕಲ್ಲ ಮಠದ ಅಧಿಕಾರಿ ಸ್ವಾಮಿ ಗಳಾದ ಪೂಜ್ಯ ಕೊಪ್ಪದ ಮಹಾಂತ ಸ್ವಾಮಿಗಳಿಗೂ ಇವರನ್ನು ಕಾಶಿಗೆ ಕಳಿಸಲು ಇಷ್ಟವಿರಲಿಲ್ಲ. ಆದರೆ ಇಲಕಲ್ಲ ಮಠದ ಇವರ ಪ್ರೀತಿಯ ಭಕ್ತರಾದ ಶ್ರೀ ಶಿವ ಬಲ್ಲ ದೊಡ್ಡಪ್ಪನವರು, ಶ್ರೀ ಸೂಡಿ ಮಹಾಂತಪ್ಪನವರು, ಚೋಳಪ್ಪನವರು, ವೀರಪ್ಪನವರು ಗೋನಾಳ, ಶ್ರೀ ಕೊಡಗಲಿ ಶಿವಪ್ಪನವರು, ಶ್ರೀ ಎಸ್. ಆರ್. ಕಂಠಿಯವರು, ಗವಿಸ್ಥಿದಪ್ಪ ಪಟ್ಟಣಶೆಟ್ಟಿ, ಶ್ರೀ ಹರಿಹರದವರು, ಶ್ರೀ ಅಕ್ಕಿ ಯವರು, ಶ್ರೀ ಸಾಲೀಮಠ, ಶ್ರೀ ಹಿರೇಮಠ, ಶ್ರೀ ವೀರನಗೌಡರು ಹಾಗೂ ನೂರಾರು ಗುಪ್ತ ಅಭಿಮಾನಿ ಭಕ್ತರ ಮುಕ್ತ ಮನಸ್ಸಿನ ಪ್ರೇರಣೆಯಿಂದ ಹಾಗೂ ಶಿವಯೋಗಮಂದಿರದ ಹಿರಿಯ ಶ್ರೀಗಳ ಸಮ್ಮತಿಯಿಂದ, ಅಲ್ಲದೆ ಹುನಗುಂದದ ಕಾಯಕಯೋಗಿಮಠ ಮಾಸ್ತರರ, ನಾಗರಾಳ ದೊಡ್ಡಪ್ಪನವರ ಪ್ರೇರಣೆಯಿಂದ ಕಾಶಿಗೆ ನಡೆದರು. ದುಡ್ಡು ಸಾಲದು. ಕಾಶಿಯ ಜಂಗಮವಾಡಿಮಠದಲ್ಲಿ ವಾಸ. ಅಲ್ಲಿಯೇ ಪೂಜೆ ಪ್ರಸಾದ. ಕೆಲವು ದಿನಗಳ ನಂತರ ಕಾಶಿ ಮೀರಾಘಾಟ ಮಹೇಶ್ವರ

ಮಠದಲ್ಲಿ ವಾಸ. ಆದರೆ ಸಾಹಸಕ್ಕೆ ಬಾಗಿಲು ತೆರೆಯದಿದ್ದೀತೆ? ಆಶ್ಚರ್ಯ ವೆಂದರೆ ಕಾಶಿಯಲ್ಲಿ ಇವರು ಪ್ರತಿ ಪರೀಕ್ಷೆಯಲ್ಲಿಯೂ ರ್‍ಯಾಂಕ್ ಸಂಪಾದಿಸಿದರು. ಕಲಕತ್ತಾ ವಿಶ್ವವಿದ್ಯಾಲಯದ ಸಂಸ್ಕೃತ ಫೆಲೋಶಿಪ್ ದೊರೆಯಿತು. ಈ ಸ್ಕಾಲರ ಶಿಪ್‌ದಿಂದ ಬರುವ ಅಲ್ಪ ಹಣದಲ್ಲಿ ಇವರು ತಮ್ಮ ಖರ್ಚು ಮಾತ್ರವಲ್ಲ; ಇತರ ಸಾಧಕರ ಶಿಕ್ಷಣ ಖರ್ಚಿಗೂ ಸಹಾಯವಾದದ್ದು ತ್ಯಾಗದ ಕಥೆ. ಈ ಬಗ್ಗೆ ಪಂ. ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ ಹಿರೇಮಠ ಹೀಗೆ ಬರೆಯುತ್ತಾರೆ:

"ಈ ಮಹಾಂತದೇವರು ಕಾಶೀ ಹಿಂದೂ ಯುನಿವ್ಹರ್ಸಿಟಿಯಲ್ಲಿ ಪ್ರವೇಶ ಪಡೆದು, ಅಲ್ಲಿಯ ಪ್ರಾಧ್ಯಾಪಕ ವರ್ಗದವರ ಪ್ರೀತಿಗೆ ಪಾತ್ರರಾಗುವ ಹಾಗೆ ಶಿಸ್ತಿ ನಿಂದ ಮನಮುಟ್ಟಿ ಅಭ್ಯಾಸ ಮಾಡುತ್ತಿದ್ದರು. ಬಹುದೂರದ ಪರಪ್ರಾಂತದಲ್ಲಿ ಅಭ್ಯಾಸ ಮಾಡುವಾಗಲೂ ಇವರ ಔದಾರ್ಯ, ಸಹಕಾರ, ಸರ್ವರಲ್ಲಿ ನನ್ನವರೆಂಬ ಭಾವನಾ ಬೆಳೆಯುತ್ತಲೇ ಇದ್ದವು. ಇವರು ಇಲಕಲ್ಲ ವಿರಕ್ತಮಠದ ಮರಿಗಳಾಗಿ ಕಾಶಿಯಲ್ಲಿ ಅಧ್ಯಯನ ಮಾಡುತ್ತಿದ್ದುದರಿಂದ ಆಗಿದ್ದ ಇಲಕಲ್ಲ ಶ್ರೀಗಳವರಾಗಲಿ, ಭಕ್ತರಾಗಲಿ ಇವರಿಗೆ ಖರ್ಚಿನ ಸಲುವಾಗಿ ಎಷ್ಟು ಹಣ ಕಳಿಸುತ್ತಿದ್ದರೋ ನಿಕ್ಕಿ ನಮಗೆ ಗೊತ್ತಿಲ್ಲ. ಆದರೆ ಆಗಾಗ ಮಹಾಂತದೇವರು ಈಗ ಇಲಕಲ್ಲಿನಿಂದ ಬರುವ ಹಣ ಸಾಲುವದಿಲ್ಲ. ಸ್ವಲ್ಪ ಹೆಚ್ಚು ಕಳಿಸಲು ಶ್ರೀಗಳವರಿಗೆ ತಿಳಿಸ ಬೇಕೆಂದು ನಮಗೆ ಪತ್ರ ಬರೆಯುತ್ತಿದ್ದರು. ನಾನು ಇಲಕಲ್ಲ ಶ್ರೀಗಳವರಿಗೆ ಪತ್ರ ಮುಖದಿಂದ ಹಾಗೂ ಸಮ್ಮುಖದಲ್ಲಿಯೂ ಒಂದೊಂದು ಸಲ ಅರಿಕೆ ಮಾಡಿಕೊಳ್ಳು ತ್ತಿದ್ದೆನು. ಇಂತಹ ತೊಂದರೆ ತಮಗಿದ್ದರೂ ಉದಾರತನದಲ್ಲಿ ಕೊರತೆಯಾಗಿರ ಲಿಲ್ಲ. ನಮ್ಮಲ್ಲಿ ಅಭ್ಯಾಸ ಮಾಡಿ ತಯಾರಾಗಿ ಸಾಧಕರೂ, ಮರಿದೇವರೂ ಶಿವ ಯೋಗಮಂದಿರದಿಂದಲೂ, ಬೇರೆ ಕಡೆಯಿಂದಲೂ ಹೋದವರು ಎಷ್ಟೋ ಜನ ರಿರುತ್ತಾರೆ. ಅವರಿಗೆ ನಮಗೆ ಪರಸ್ಪರ ಸಂಬಂಧವಿರುವದಿಲ್ಲ. ಮಹಾಂತ ದೇವರು ಕಾಶಿಯಲ್ಲಿಯೂ ನಾವು ಗದುಗಿನಲ್ಲಿಯೂ ಇದ್ದರೂ ಪರಸ್ಪರ ಪತ್ರ ವ್ಯವಹಾರವು ಅವ್ಯಾಹತವಾಗಿ ಇದ್ದೇ ಇತ್ತು. ತಿಂಗಳಲ್ಲಿ ೧ ಪತ್ರ ಬರದಿದ್ದರೆ ಅವರಿಗೂ ಸಮಾಧಾನವಿಲ್ಲ, ನಮಗೂ ಸಮಾಧಾನವಾಗುತ್ತಿದ್ದಿಲ್ಲ. ಕಾಶಿಯಲ್ಲಿ ತಮ್ಮ ಅಭ್ಯಾಸವನ್ನು ವೇದಾಂತದೊಡನೆ ಬೇರೆ ಯಾವುದನ್ನು ಸೇರಿಸಿಕೊಳ್ಳ ಬೇಕೆನ್ನುವ ಬಗ್ಗೆ, ಇತರ ವಿಚಾರದ ಬಗ್ಗೆ ಪತ್ರಗಳು ಬರುತ್ತಲೇ ಇದ್ದವು. ಅವಕ್ಕೆ ಸೂಕ್ತ ಸಲಹೆಗಳನ್ನು ನಾವು ಕಳಿಸುತ್ತಲೇ ಇದ್ದವು. ಅಂತೂ ಮಹಾಂತದೇವರು ಕಾಶಿಯಲ್ಲಿ ಹಿಂದು ವಿಶ್ವವಿದ್ಯಾಲಯದ ವೇದಾಂತಾಚಾರ್ಯ ಪರೀಕ್ಷೆಯಲ್ಲಿಯೂ, ಸಾಹಿತ್ಯರತ್ನ ಪರೀಕ್ಷೆಯಲ್ಲಿಯೂ ಉತ್ತಮ ತರಗತಿಯಲ್ಲಿ ಉತ್ತೀರ್ಣರಾದರು."[12]

---

12 ಚಿತ್ಪ್ರಭೆ: ಪುಟ–49, 50

## ಹಿಮಾಲಯದ ಅಂಗಳದಲ್ಲಿ

ಕೈಲಾಸ ಪರ್ವತದ ಮಾನಸ ಸರೋವರದಿಂದ ಹೊಮ್ಮಿ ಬರುವ ಗಂಗಾನದಿ; ಗಂಗಾಧರಯೋಗಿಯ ಕವಿಮನಸವನ್ನು ಕೆಣಕಿತೋ ಏನೊ! ಒಂದೆಡೆಗೆ ಹಿಮಕರಗಿ ಬರುವ ಗಂಗಾನದಿ, ಇನ್ನೊಂದೆಡೆಗೆ ಅಂತರಾತ್ಮ ಕರಗಿ ಬರುವ ಜ್ಞಾನಗಂಗಾನದಿ. ಗಂಗಾನದಿಯನ್ನು ಈಜುವಲ್ಲಿಯೂ ಈ ಮಹಾಂತ ಮರಿದೇವರು ಹಿಂದೆ ಬೀಳಲಿಲ್ಲ. ತುಂಬಿದ ಮೈಲಗಲ ಹೊಳೆಯಲ್ಲಿ ಆ ದಂಡೆಯಿಂದ ಈ ದಂಡೆಗೆ, ಈ ದಂಡೆಯಿಂದ ಆ ದಂಡೆಗೆ ಈಜುವಲ್ಲಿ ಪ್ರವೀಣರು. ಮಲಪ್ರಭೆಯ ಪುಟ್ಟ ನದಿಯಲ್ಲಿ ಈಜಿದ ಇವರು ಗಂಗಾನದಿಯ ವಿಶಾಲ ವಿಸ್ತೀರ್ಣ ಪ್ರವಾಹದಲ್ಲಿ ಈಜಲೂ ಹಿಂದೆ ಬೀಳಲಿಲ್ಲ. ಆಗಿನ್ನೂ ಗಂಗಾನದಿ ಇಂದಿನಂತೆ ಮಲೀನವಾಗಿರಲಿಲ್ಲ. ಹಿಮಕರಗಿದ ಹಿಮಾಲಯದ ರಸಗಂಗೆ, ಅನಂತ ಸಸ್ಯ ಸಂಕುಲಗಳಲ್ಲಿ ಪ್ರವಹಿಸಿ ಗಂಧವಾಹಿನಿಯಾಗಿದ್ದಳು. ಗಂಗಾತೀರದ ಪ್ರಾಕೃತಿಕ ಪರಿಸರ, ಪ್ರಾಚೇತಸ ಚೇತನ, ಪ್ರವಿಮಲ ಮರಳರಾಶಿ ಸ್ವಾಭಾವಿಕವಾಗಿ ಮಹಾಂತದೇವರ ಗುಪ್ತ–ಸುಪ್ತ ಕಾವ್ಯಶಕ್ತಿಯನ್ನು ನೂರುಮಡಿ ಕೆಣಕಿತು. ಇಲ್ಲಿಯೇ ಅವರ ಅನೇಕ ಕವನಸಂಕಲನಗಳು, ಲೇಖನಗಳು ಮೂಡಿಬಂದವು; ಪ್ರಕಟವಾದವು ಕೂಡ. ಕಿರಿಯ ವಯಸ್ಸಿನ ಈ ಹೊಸ ಒಲವಿನ ಸಾಹಿತ್ಯ ಕೃತಿಗಳನ್ನು ಮಹಾಂತಮರಿದೇವರು ಶಿವಯೋಗಮಂದಿರದ ಹಿರಿಯ ಸ್ವಾಮಿಗಳಿಗೆ, ಕರ್ನಾಟಕದ ಹಿರಿಯ ಸ್ವಾಮಿಗಳಿಗೆ, ಹುಬ್ಬಳ್ಳಿಯ ಅಂದಿನ ಜಗದ್ಗುರುಗಳಾದ ಲಿಂ. ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳಿಗೆ ಕಳಿಸುತ್ತಲೇ ಇದ್ದರು. ಇಲಕಲ್ಲ–ಹುನಗುಂದ–ಚಿತ್ತರಗಿಯ ಶ್ರೀಮಠದ ಭಕ್ತರು ತಮ್ಮ ಮಠದ ಮುಂಬೆಳಗಾದ ಮಹಾಸ್ವಾಮಿಗಳ ಈ ಪುಸ್ತಕಗಳನ್ನು ಓದಿ ಮಸ್ತಕಕ್ಕೆ ಇಟ್ಟು ಕುಣಿದರು.

ಅನೇಕ ಸಲ ಮಹಾಂತ ಮರಿದೇವರು ತಮ್ಮ ಅಧ್ಯಯನದೊಂದಿಗೆ ಕಲಕತ್ತಾ ರಾಮಕೃಷ್ಣಾಶ್ರಮಕ್ಕೂ, ವಿಶ್ವಕವಿ ರವೀಂದ್ರರ ಶಾಂತಿನಿಕೇತನಕ್ಕೂ, ಅಂದಿನ ಖ್ಯಾತ ಹಿಂದಿ–ಬೆಂಗಾಲಿ–ಸಂಸ್ಕೃತ ಸಾಹಿತಿಗಳ ಮನೆಗಳಿಗೂ ಹೋಗಿಬರುತ್ತಿದ್ದರು. ಬದುಕು ಅವರ ದೃಷ್ಟಿಯಲ್ಲಿ ಸಮಗ್ರವಾಗಿತ್ತು, ಅರ್ಥಪೂರ್ಣವಾಗಿತ್ತು. ಈ ಬಾಳು ನಶ್ವರವೆಂಬುದನ್ನು ಅವರು ಎಂದಿಗೂ ಒಪ್ಪರು. ಜೀವನವೇ ಶಿವಪೂಜೆ, ಕಾಯವೇ ಕೈಲಾಸ, ದೇಹವೇ ನಡೆಯುತ್ತಿರುವ ದೇವಾಲಯ, ಕರ್ತವ್ಯವೇ ಶ್ರೀ ಮುಕ್ತಿ ಎಂದು ನಂಬಿದ ಧೀರರು ಅವರು. ಅವರಿಗೆ ಕೆಲಸ ಬೇಕು. ಅಧ್ಯಯನ–ಚಿಂತನ–ಮನನ–ಸಂವಾದನ ಎಲ್ಲದರಲ್ಲೂ ಹೊಸ ಹರ್ಷ. ಕಾಶಿಯಲ್ಲಿ ಜರುಗುವ ಯಾವುದೇ ಆಧ್ಯಾತ್ಮಿಕ ಸಭೆ, ವಿದ್ವತ್ ಪರಿಷತ್ತು, ಉಪನ್ಯಾಸ ಗೋಷ್ಠಿಗಳನ್ನು ಎಂದೂ ತಪ್ಪಿಸಿಕೊಳ್ಳರು. ಆಶ್ಚರ್ಯವೆಂದರೆ ಇವರ ಮೇಲೆ ಕಾಶಿ ವಿಶ್ವವಿದ್ಯಾಲಯ ಹಾಗೂ ಕಲಕತ್ತಾ ವಿಶ್ವವಿದ್ಯಾಲಯದ ಕಟ್ಟಾ

ಆಚಾರಸ್ಥ ಬ್ರಾಹ್ಮಣ ಪ್ರಾಧ್ಯಾಪಕರು ತುಂಬಾ ಪ್ರೀತಿ ಉಳ್ಳವರಾಗಿದ್ದರು. ಅವರ ಪ್ರೀತಿ ಇವರ ಮೇಲೆ ಎಷ್ಟೊಂದು ಗಾಢವಾಗಿತ್ತೆಂದರೆ ಮುಂದೆ ಇವರ ಪಟ್ಟಾಭಿಷೇಕ ಮಹೋತ್ಸವಕ್ಕೂ, ದ್ವಾದಶ ವಾರ್ಷಿಕ ಪೀಠಾರೋಹಣ ಮಹಾ ಪರಿಷತ್ತಿಗೂ ಅವರು ಕಾಶಿಯಿಂದ ಹುಬ್ಬಳ್ಳಿಗೆ ಬಂದುಹೋದರು. ಸರ್ವಧರ್ಮದವರೊಂದಿಗೂ ಸಹಭಾವನೆ–ಪ್ರೀತಿ ಇವರಿಗೆ ಕಾಶಿಯಲ್ಲಿಯೇ ಬೀಜ ರೂಪವಾಗಿ ರೂಢಮೂಲವಾಗಿತ್ತು. ಒಟ್ಟಿನಲ್ಲಿ ಕಾಶಿಯ ಹತ್ತು ವರ್ಷಗಳ ವಾಸ್ತವ್ಯದಲ್ಲಿ ಇವರ ಕಾವ್ಯಾಧ್ಯಯನ, ಭಾಷಾಶಕ್ತಿ, ಅಲಂಕಾರ–ವ್ಯಾಕರಣಗಳ ಅಭ್ಯಾಸ, ಸಾಹಿತ್ಯರಚನಾ ಕಲೆ, ವ್ಯಕ್ತಿತ್ವ ಕಲೆ, ಸಂಘಟನಾ ಸಾಮರ್ಥ್ಯಗಳು ರೂಪಗೊಂಡವು. ಮುಂದಿನ ಕನ್ನಡ ನಾಡಿನ ಅದಾವುದೋ ಸಾಹಸ ಸಾಧನೆಗಳ ಗರಡಿಯ ನೆಲೆಯಾಗಿ ಕಾಶಿ ಇವರನ್ನು ಸಜ್ಜುಗೊಳಿಸಿತು.

## ಕಾಶಿಯಲ್ಲಿ ನೋವು–ನಲಿವು

ಕಾಶಿಯಲ್ಲಿ ಮಹಾಂತದೇವರೊಂದಿಗೆ ಸಹಾಧ್ಯಾಯಿಯಾಗಿದ್ದ ಸವದಿ ಮಹಾಂತರು ಇವರ ಕಾಶಿ ಅಧ್ಯಯನದ ನೋವು–ನಲಿವನ್ನು ಸಮೀಪದಿಂದ ಕಂಡವರು. ಆ ಅನುಭವ ಕಥನವನ್ನು ಅವರ ನಲ್ನುಡಿಗಳಲ್ಲಿಯೇ ಕೇಳಿರಿ:

"ವಿಜಯಮಹಾಂತದೇವರು ಕೊನೆಗೊಮ್ಮೆ ತಮ್ಮ ಶಪಥದಂತೆ ಕಾಶಿಗೆ ನಡೆದೇಬಿಟ್ಟರು. ಸೀಮೋಲ್ಲಂಘನೆ ಗೈದರು. ಅಲ್ಲಿ ಅವರು ಉಚ್ಚಮಟ್ಟದ ಅಧ್ಯಯನಕ್ಕೆ ಅಣಿಯಾದರು. ಒಂದೆರಡು ವರ್ಷ ತಡೆದು ನಾವೂ ಅವರ ಪ್ರೇರಣೆಯಿಂದ ಕಾಶಿಗೆ ಹೋದೆವು. ಬರಿಗೈಯ ಬಂಡವಾಳದವರಾದ ನಾವು, ಕೆಳದಿ ಮಠದ ಗುರುಸಿದ್ಧ ಶಿವಾಚಾರ್ಯರು, ತಾಳಗುಪ್ಪಾ ಸಿದ್ಲಿಂಗ ಸ್ವಾಮಿಗಳು ಅವರ ರೂಮಿನಲ್ಲೇ ಬಿಡಾರ ಒಗೆದೆವು. ಹದಿನೈದು ದಿನಗಳವರೆಗೆ ಇದೇ ರೀತಿ ಸಾಗಿದೆವು. ಆದರೆ ಅದರಿಂದ ಅವರು ಮತ್ತಷ್ಟು ಆನಂದಿತರಾದರು. ಅವರ ಅಭ್ಯಾಸದಲ್ಲಿ ನಮ್ಮಿಂದಾದ ತೊಂದರೆಯನ್ನು ಒಳ್ಳೆಯದೆಂದೇ ಅಂಗೀಕರಿಸಿದರು. ಮುಂದೆ ಜಂಗಮವಾಡಿಮಠದಲ್ಲಿ ನಮಗಾಗಿ ಪ್ರತ್ಯೇಕ ವಸತಿ ವ್ಯವಸ್ಥೆ ಅವರಿಂದಲೇ ದೊರೆಯಿತು."

"ಅಲ್ಲಿ ನಾವಿಬ್ಬರೂ ಕೂಡಿಯೇ ಸಾಯಂಕಾಲ ತಿರುಗಾಡಲು ಹೋಗುತ್ತಿದ್ದೆವು. ನಮ್ಮ ಸಂಜೆಯ ವಿಹಾರವೆಂದರೆ ಶ್ರೀ ರಾಮಕೃಷ್ಣ ಮಿಶನ್ ಹಾಗೂ ಥಿಯಾಸಫಿಕಲ್ ಸೊಸೈಟಿಗಳೇ ಆಗಿದ್ದವು. ಅಲ್ಲಿ ಲೈಬ್ರರಿಯಲ್ಲಿ ಕೆಲಕಾಲ ಕಳೆಯುತ್ತಿದ್ದೆವು."

"ಅವರ ಸಾಧಕ ಜೀವನ ಸುಗಮವಾಗಿರಲಿಲ್ಲ. ಅನೇಕ ತೊಂದರೆಗಳು ಅವರನ್ನು ಎಡೆಬಿಡದೇ ಕಾಡುತ್ತಿದ್ದವು. ಅವುಗಳಲ್ಲಿ ಆರ್ಥಿಕ ಅಡಚಣೆಯು

ಉಂಟಾಗಿ ಜೀವನೋಪಾಯಕ್ಕೂ ಕಷ್ಟಕರವಾಗಿತ್ತು. ಕೆಲವು ಸಲ ಅವರಿಗೆ ಕಳಿಸಬೇಕಾದವರು ೩–೪ ತಿಂಗಳವರೆಗೆ ಹಣ ಕಳಿಸದೇ ಇದ್ದಾಗ ಕಣ್ಣೀರು ಸುರಿಸುತ್ತ ಗಂಗಾನದಿಯ ದಂಡೆಯ ಮೇಲೆ ಕೂಡ್ರುತ್ತಿದ್ದರು. ಆ ಕಂಬನಿಯ ಕಡಲಲ್ಲಿ ಅವರು ರಚಿಸಿದ ಕೆಲವು ಕವನಗಳು "ಪಥಿಕ"ದಲ್ಲಿ ಅಚ್ಚಾಗಿವೆ. ಆದರೂ ಅಂಥ ಪರಿಸ್ಥಿತಿಯಲ್ಲಿಯೂ ಅವರು ತಮ್ಮ ಸ್ಕಾಲರಶಿಪ್‌ನಿಂದ ಬಂದ ಹಣವನ್ನು ಇತರ ಸಾಧಕರಿಗಾಗಿ ಕೊಡುತ್ತಿದ್ದರು. ಅವರ ದಾನಗುಣ ಆಗಲೇ ಪ್ರಕಟವಾಗಿತ್ತು. ಅವರಿಂದ ಆಗಾಗ ಆರ್ಥಿಕ ಸಹಾಯವನ್ನೂ ಪಡೆದ ಅನೇಕರಲ್ಲಿ ನಾನೂ, ಕೆಳದಿಯ ಗುರುಸಿದ್ಧದೇವರೂ, ಲಿಂ. ಗುರುಮಹಾಂತ ಸ್ವಾಮಿಗಳೂ ಹಾಗೂ ತಾಳಗುಪ್ಪಾ ಶಿದ್ಧಲಿಂಗಸ್ವಾಮಿಗಳೂ ಉಂಟು."13

## ಕಾಶಿಯಲ್ಲಿ ಹತ್ತು ವರ್ಷ

ಹಿಂದು ವಿಶ್ವವಿದ್ಯಾಲಯದ ವಿಖ್ಯಾತ ಪ್ರಾಚಾರ್ಯರಾದ ಪಂ. ಲಕ್ಷ್ಮಿನಾಥ ಝಾ, ಪಂ. ರಾಮಚಂದ್ರ ದೀಕ್ಷಿತ, ಕವಿತಾ ಚಕ್ರವರ್ತಿ, ಮಹಾದೇವ ಪಾಂಡೆ ಮೊದಲಾದ ವಿದ್ವನ್ಮಣಿಗಳ ನೇರಸಂಪರ್ಕದಲ್ಲಿ ಮಹಾಂತೇಶದೇವರು ತಮ್ಮ ಉಚ್ಚವ್ಯಾಸಂಗವನ್ನು ಕಾಶಿಯಲ್ಲಿ ಮುಂದುವರೆಸಿದರು. ಅವರ ಪ್ರತಿಭೆಗೆ ಮೆಚ್ಚಿ ವಿಶ್ವವಿದ್ಯಾಲಯವು ಶಿಷ್ಯವೇತನ ನೀಡಿತು. ಕೆಲಕಾಲದಲ್ಲೇ ಅವರು ಕಲ್ಕತ್ತಾ ವಿಶ್ವವಿದ್ಯಾಲಯದ "ಕಾವ್ಯತೀರ್ಥ", ಡಾಕಾ ವಿಶ್ವವಿದ್ಯಾಲಯದ "ಸಾಹಿತ್ಯರತ್ನ" ಹಾಗೂ ಕಾಶಿ ಹಿಂದು ವಿಶ್ವವಿದ್ಯಾಲಯದ "ವೇದಾಂತಾಚಾರ್ಯ" ಪರೀಕ್ಷೆಗಳಲ್ಲಿ ವಿಜಯದ ಜಯಭೇರಿ ಹೊಡೆದರು. ಅಲ್ಲದೆ ಅಲಹಾಬಾದ ವಿಶ್ವವಿದ್ಯಾಲಯದಲ್ಲಿ ಆಂಗ್ಲ ಶಿಕ್ಷಣವನ್ನು ಸಂಪಾದಿಸಿದರು. ಬನಾರಸ ವಿಶ್ವವಿದ್ಯಾಲಯದ ಇಂಟರದವರೆಗೆ ಓದಿದರು. ಹೀಗಾಗಿ ಅವರಿಗೆ ಕನ್ನಡ–ಹಿಂದಿ–ಸಂಸ್ಕೃತ–ಇಂಗ್ಲೀಷ ಭಾಷೆಗಳಲ್ಲಿ ಪ್ರೌಢಿಮೆ ತಾನೇತಾನಾಗಿ ಬಂದಿತು. ಪೌರ್ವಾತ್ಯ–ಪಾಶ್ಚಿಮಾತ್ಯ ಕಾವ್ಯ–ಸಾಹಿತ್ಯ–ತತ್ವಜ್ಞಾನ–ವಿಚಾರಪ್ರಣಾಲಿಕೆ – ಆಚಾರವೈವಿಧ್ಯ – ಸಾಮಾಜಿಕ ಸ್ಥಿತ್ಯಂತರಗಳ ಸೂಕ್ಷ್ಮ ಅನುಭವ ದೊರೆಯಿತು. ಈ ಪ್ರಚಂಡ ಜ್ಞಾನಸಾಮಗ್ರಿ ಅವರ ಮುಂದಿನ ಬಾಳಿಗೆ ದೈವವೇ ಸಿದ್ಧಪಡಿಸಿದ ಬುತ್ತಿಯೆಂಬುದು ಅವರಿಗೇ ತಿಳಿದಿರಲಿಲ್ಲ.

## ಸ್ವಯಂಪಾಕಃ ಸ್ವಾಧ್ಯಾಯ

"ಮಹಾಂತದೇವರು" ೧೯೫೫ ರಿಂದಲೇ ಚಿತ್ತರಗಿ–ಇಲಕಲ್ಲ ಪೀಠದ ಅಧಿಕೃತ ಅಧಿಕಾರಿಗಳಾಗಿ "ವಿಜಯಮಹಾಂತದೇವರು" ಆದರು. ಮಹಾತಪಸ್ವಿ

13 ಚಿತ್ಪ್ರಭೆ: ಪುಟ–46, 47

ವಿಜಯಮಹಾಂತ ಶಿವಯೋಗಿಗಳ ತರುವಾಯ ಲಿಂ. ದೋಟಿಹಾಳ ಮಹಾಂತ ಸ್ವಾಮಿಗಳು; ಅವರ ನಂತರ ಲಿಂ. ಕೊಪ್ಪದ ಮಹಾಂತ ಸ್ವಾಮಿಗಳು ಈ ಪೀಠದ ಅಧಿಕಾರಿಗಳಾಗಿದ್ದು; ಅವರ ನಂತರ ಇವರು "ವಿಜಯಮಹಾಂತದೇವರು" ಆಗಿ ಅಧಿಕಾರ ವಹಿಸಿಕೊಂಡರು. ಪೀಠಾರೋಹಣಕ್ಕೆ ನಿಯೋಜಿತರಾದರು. ಮುಂದಿನ ಭವಿಷ್ಯ ಬೇರೆಯೇ ಇತ್ತು ಎಂಬುದು ಯಾರಿಗೆ ಗೊತ್ತಾಗಬೇಕು?

ಕಾಶಿಯಲ್ಲಿಯ ಇವರ ಹತ್ತು ವರ್ಷಗಳ ವ್ಯಾಸಂಗಕ್ಕೆ ಚಿತ್ತರಗಿ ಪೀಠದಿಂದ ದುಡ್ಡಿನ ಸಹಾಯ ತಕ್ಕಮಟ್ಟಿಗೆ ದೊರೆಯಿತು. ಅಲ್ಲದೆ ಇಳಕಲ್ಲಿನ ಸದ್ಭಕ್ತರಿಂದ ಸಹಾಯ ಸಿಕ್ಕಿತು. ಹಿಂದು ವಿಶ್ವವಿದ್ಯಾಲಯ ಇವರಿಗೆ ಶಿಷ್ಯವೇತನವನ್ನೂ ಕೊಡಮಾಡಿತು. ಕಾಶಿಯಲ್ಲಿ ಇವರು ಎಂದಿಗೂ ಸಾಮೂಹಿಕ ದಾಸೋಹದಲ್ಲಿ ಪ್ರಸಾದ ಸೇವಿಸಲಿಲ್ಲ. ಹತ್ತು ವರ್ಷಕಾಲ ಸ್ವಯಂಪಾಕದಿಂದಲೇ ಕಳೆದರು. ಅಲ್ಲದೇ ತಮ್ಮ ಶಿಷ್ಯವೇತನದ ಹಣದಿಂದ ಮತ್ತೆ ಅನೇಕ ಒಡವಿದ್ಯಾರ್ಥಿಗಳಿಗೆ ಅನ್ನ-ಆಶ್ರಯ-ಗ್ರಂಥಗಳನ್ನು ಒದಗಿಸಿದರು. ಇವರ ಕಾಶಿ ವಾಸ್ತವ್ಯದ ಬಗೆಗೆ ಪಂ. ಕಲ್ಲೂರ ಸಂಗಣ್ಣನವರು ಹೀಗೆ ಬರೆಯುತ್ತಾರೆ:

"ಲಿಂ. ಶ್ರೀ ಕೊಪ್ಪದ ಮಹಾಂತ ಸ್ವಾಮಿಗಳು ಚಿತ್ತರಗಿ ಪೀಠದ ಆಡಳಿತಾಧಿಕಾರಿಗಳಾಗಿದ್ದಾಗ, ಮಹಾಂತದೇವರನ್ನು ಪೀಠದ ಮರಿದೇವರೆಂದು ನೇಮಕಗೊಳಿಸಲಾಯಿತು. ಉಚ್ಚ ಶಿಕ್ಷಣಕ್ಕಾಗಿ ಕಾಶಿಗೆ ಕಳಿಸಲಾಯಿತು. ಕಾಶಿಯಲ್ಲಿ ಜಯದೇವಮಠ, ಮಹೇಶ್ವರಾನಂದಮಠಗಳು ಅವರಿಗೆ ನಿವಾಸ ಸ್ಥಾನ ಗಳಾಗಿದ್ದವು. ಅವರಿಗೆ ಹಿಂದು ವಿಶ್ವವಿದ್ಯಾಲಯದಿಂದ ಅಲ್ಲಿರುವವರೆಗೆ ವಿದ್ಯಾರ್ಥಿ ವೇತನ ಸಿಗುತ್ತಿದ್ದಿತು. ಅವರು ಕುಶಾಗ್ರಬುದ್ಧಿಶಾಲಿಗಳು, ಸ್ವಯಂಪಾಕಿಗಳು, ಪರಿಶ್ರಮಜೀವಿಗಳು. ಅವರು ಕಲಕತ್ತಾ ಬಂಗಾಲ ಸಂಸ್ಕೃತ ಸಂಸ್ಥೆಯ ಕಾವ್ಯತೀರ್ಥ, ಡಾಕಾ ವಿಶ್ವವಿದ್ಯಾಲಯದ ಸಾಹಿತ್ಯರತ್ನ, ಕಾಶಿ ಹಿಂದು ವಿಶ್ವವಿದ್ಯಾಲಯದ-ವೇದಾಂತಾಚಾರ್ಯ ಪರೀಕ್ಷೆಗಳನ್ನು ಕೊಟ್ಟು ಉತ್ತಮ ರೀತಿಯಿಂದ ಉತ್ತೀರ್ಣ ರಾದರು. ಪೌರ್ವಾತ್ಯ ಪದವೀಧರರಾದಂತೆ, ಅವರು ಪಾಶ್ಚಾತ್ಯ ಪದವೀಧರರಾಗ ಬಯಸಿ, ಇಂಟರಮಿಡಿಯೇಟ್ ಪರೀಕ್ಷೆಯನ್ನು ಕಟ್ಟಿದರು. ಅಷ್ಟಕ್ಕೇ ನಿಂತಿತು. ಅವರು ಅಲ್ಲಿದ್ದಾಗ ತಕ್ಕಮಟ್ಟಿಗೆ ಸಾಹಿತ್ಯ ಪ್ರಚಾರಕಾರ್ಯದಲ್ಲಿಯೂ ತೊಡಗಿದ್ದರು. ಅವರು ತಮ್ಮ ನಿರಾಡಂಬರ ಜೀವನದಿಂದ ಹಣವನ್ನುಳಿಸುತ್ತಿದ್ದರು; ಜಾಣ ವಿದ್ಯಾರ್ಥಿಗಳಿಗೆ ಸಾಧ್ಯವಿದ್ದಷ್ಟು ನೆರವಾಗುತ್ತಿದ್ದರು. ಅವರಲ್ಲಿ ಬುದ್ಧಿ ಭಾವಗಳ ಸಂಪತ್ತಿಗಿಂತ ಹೃದಯಸಂಪತ್ತು ಹೆಚ್ಚಾಗಿದ್ದಿತು....ಅವರು ಕಾಶಿಯಲ್ಲಿದ್ದಾಗ ಒಮ್ಮಿಂದೊಮ್ಮೆ ಹುನಗುಂದದಿಂದ "ತಂತಿ" ಬಂದಿತು. ಅವರು ಮುಂದೆ ಚಿತ್ತರಗಿ ಪೀಠದ ಅಧಿಕೃತ ಉತ್ತರಾಧಿಕಾರಿಯಾದರು; ಹುನಗುಂದ ಶ್ರೀ ವಿಜಯ

ಮಹಾಂತೇಶ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರಾದರು. ಅವರೀಗ ಚಿತ್ತರಗಿ ವಿಜಯ ಮಹಾಂತದೇವರು; ಮತ್ತೆ ಕಾಶಿಗೆ ತೆರಳಿದರು."14

## ಮೂರು ಘಟ್ಟಗಳ ಅಟ್ಟ:
## ಸಮಗ್ರ ಸಾಹಿತ್ಯದ ಪಕ್ಷಿನೋಟ

ಪೂಜ್ಯ ಜಗದ್ಗುರುಗಳವರ ಸಾಹಿತ್ಯವನ್ನು ಮೂರು ಘಟ್ಟಗಳಲ್ಲಿ ಸ್ಥೂಲವಾಗಿ ಪರಾಮರ್ಶಿಸಬಹುದೆಂದು ತೋರುತ್ತದೆ.

ಮೊದಲ ಘಟ್ಟದಲ್ಲಿ ಪೂಜ್ಯ ಜಗದ್ಗುರುಗಳು ಇನ್ನೂ ಸಾಧಕ ಜೀವನದಲ್ಲಿ ಮಲಪ್ರಭಾ ತೀರದ ಶಿವಯೋಗಮಂದಿರದ ವಟುವಾಗಿಯೂ; ಅನಂತರ ಗಂಗಾ ತೀರದ ಕಾಶಿಯ ಪ್ರೌಢ ವಿದ್ಯಾರ್ಥಿಯಾಗಿಯೂ ಅಧ್ಯಯನ ಮಾಡುವಾಗ ಅನಿರ್ಬಂಧಿತ ಮುಕ್ತ ಸಾಹಿತ್ಯರಚನೆ ಹವಣಾಗಿದೆ. ಅವರ ಮುಂದಿನ ಸಾಹಿತ್ಯ ಪ್ರಕಾರಗಳಲ್ಲಿ ಬರುವ ದುಗುಡ, ಚಿಂತನೆ, ಹೋರಾಟ, ದ್ವಂದ್ವ, ಕಳವಳ, ಸಾಮಾಜಿಕ ಸಾಹಸಗಳ ಯಾವ ಛಾಯೆಯೂ ಇರದೇ, ಇದೊಂದು ತಿಳಿನೀರಿನ ಮಾನಸ ಸರೋವರವಾಗಿರುವದು ಈ ಸಾಹಿತ್ಯ ಪ್ರಕಾರದ ತನ್ನತನ!

ಎರಡನೆಯ ಘಟ್ಟದಲ್ಲಿ ಪೂಜ್ಯರು ಹುಬ್ಬಳ್ಳಿ ಮೂರುಸಾವಿರಮಠದ ಪೀಠಾಧಿಪತಿಗಳಾದ ನಂತರ ಬಂದ; ಮೊದಲ ಘಟ್ಟಕ್ಕಿಂತ ತೀರಾ ಭಿನ್ನವಾದ; ಚಿಂತನಪ್ರಧಾನವಾದ ಇನ್ನೊಂದು ಸಾಹಿತ್ಯ ನಿರ್ಮಿತಿಯ ವಾತಾವರಣ. ಇದನ್ನು ಅವರ ಸಿಂಹಾಸನಾರೋಹಣದಿಂದ ಹಿಡಿದು, ೨೫ ನೆಯ ಪೀಠಾರೋಹಣದ ೨೫ ವರ್ಷಗಳ ನಿಡಿದಾದ ದಾರಿಯಲ್ಲಿ ಕಂಡರಿಯಬಹುದು. ಇಲ್ಲೆಲ್ಲಾ ಸ್ವಾಭಾವಿಕವಾಗಿ ಅವರ ಲೋಕಾನುಭವದ, ಲೋಕ ಸಮಸ್ಯೆಗಳ, ಮಾನವ ಸಮಸ್ಯೆಗಳ ಹಾಸು–ಹೊಕ್ಕುಗಳಿಂದ ಗಟ್ಟಿ ನೇಯ್ಗೆಯ ನಿರಿಗೆಗಳಿವೆ.

ಮೂರನೆಯ ಮಹತ್ವದ ಘಟ್ಟವೆಂದರೆ; ಬಹುಶಃ, ಅವರ ಸಾವಿರ-ಲಕ್ಷ ಅನುಭವಗಳ ಪರಾಕಾಷ್ಠೆಯ ಪಾಕಗೊಂಡ "ಪೂರ್ಣಜ್ಞ" ಘಟ್ಟ! ಇದು ಖಂಡಿತವಾಗಿಯೂ "ಸರ್ವಜ್ಞ"ನ ಅನುಕರಣೆಯಾದ "ಪೂರ್ಣಜ್ಞ" ಆಗಿರದೇ; ಈ ಪೂರ್ಣಜ್ಞತ್ವದಲ್ಲಿ ಅವರ ಪುಟಿದೇಳುತ್ತಿರುವ ಸಮಗ್ರ ಜೀವನದ ಸಾವಿರ–ಲಕ್ಷ ಸಮ–ವಿಷಮ ಅನುಭವಗಳ, ದ್ವಂದ್ವಗಳ, ಹೋರಾಟಗಳ, ಸೋಲು–ಗೆಲುವುಗಳ ನಿರಂತರಾನ್ವೇಷಣೆಯ ಕ್ರಿಯಾಶೀಲ ಅಭಿವ್ಯಕ್ತಿಯಾಗಿದೆ. ಅವರ ಸೋಲು–ಗೆಲುವುಗಳಲ್ಲಿ ಕೊನೆಗೆ ನಿಲ್ಲುವದು ಗೆಲುವೊಂದೇ; ಸಮ–ವಿಷಮಗಳಲ್ಲಿ ಕೊನೆಗೆ

---

14 ಚಿತ್ಪ್ರಭೆ: ಪುಟ–166

ಗೆಲ್ಲುವದು ಸಮರಸವೊಂದೇ! ಇದು ಅವರ ಸಾಹಿತ್ಯ ವೈಶಿಷ್ಟ್ಯವೂ ಅಹುದು, ಜೀವನ ವೈಶಿಷ್ಟ್ಯವೂ ಅಹುದು!!

ಈ ಮೂರು ಘಟ್ಟಗಳ ಅಟ್ಟದಲ್ಲಿ ಅವರ ಹಿರಿಯ ಸಾಹಿತ್ಯ ಚೇತನ ಚೌಕಟ್ಟು ಪಡೆದಿದೆ. ಮೊದಲ ಘಟ್ಟದ ಅವರ ಸಾಹಿತ್ಯ ಕೃತಿಗಳ ಸಮಗ್ರ ಅಧ್ಯಯನಕ್ಕೆ ಇಲ್ಲಿ ಅವಕಾಶವಿಲ್ಲವಾದರೂ; ಕೊನೆಯಪಕ್ಷ ಶಿವಯೋಗಮಂದಿರ–ಕಾಶಿಗಳಲ್ಲಿ ರಚಿತವಾದ ಗ್ರಂಥಗಳ ಮೇಲುನೋಟಕ್ಕಾದರೂ ಇಲ್ಲಿ ಪ್ರಯತ್ನಿಸದಿದ್ದರೆ; ಜಗದ್ಗುರು ಗಂಗಾಧರ ಜೀವನಾಧ್ಯಯನ ಇಲ್ಲಿ ಪೂರ್ತಿಯಾಗದು.

## ತಾಯಿ ಇಲ್ಲದ ತಾಯ್ತನ: ಸಾಹಿತ್ಯದಲ್ಲಿ

ವಿಚಿತ್ರವೆಂದರೆ ಜಗದ್ಗುರುಗಳವರಿಗೆ ತಮ್ಮ ತಾಯಿ ಹೇಗಿದ್ದಳೋ, ಅವಳ ಬಣ್ಣ ಹೇಗಿತ್ತೋ, ಅವಳು ಹೇಗೆ ಉಡಿಸಿ–ತೊಡಿಸುತ್ತಿದ್ದಳೋ ಇದರ ಬಗ್ಗೆ ಒಂದು ಕೂದಲೆಳೆಯಷ್ಟೂ ನೆನಪಿಲ್ಲ! ತಾಯಿ ಚನ್ನಮ್ಮ ಅವರ ಜೀವನ ಸಂಪುಟದಿಂದ ನಾಮಾವಶೇಷವಾಗಿ ಹೋಗಿದ್ದರೂ ಆ "ತಾಯ್ತನ" ಇವರ ಸಾಹಿತ್ಯದ ತುಂಬ ತೊಟ್ಟಿಲಾಗಿ ತೂಗಿದೆ. ಆ ತಾಯ್ತನದ ತೊಟ್ಟಿಲು–ಬಟ್ಟಲು, ತಂದೆತನದ ಗುಡಿಸಲು–ತಡಸಲು ಇವರ ಸಾಹಿತ್ಯದಲ್ಲಿ ಛಾಯಾದೇವತೆಯಾಗಿ ಸಮಾವೇಶವಾಗಿ ಹೋಗಿವೆ. ಇವರನ್ನು ಶಿವಯೋಗಮಂದಿರಕ್ಕೆ ಬಿಟ್ಟುಹೋದ ಅಲ್ಪಕಾಲದಲ್ಲೇ ಅವರಿಬ್ಬರೂ ಶಿವಾಧೀನರಾದದ್ದು ವಿಚಿತ್ರವೇ ಸರಿ. ಅವರು ಸತ್ತುಹೋದುದೂ ಇವರಿಗೆ ಗೊತ್ತಿಲ್ಲ. ಆದರೆ ಇತಿಹಾಸ ಬಿಚ್ಚಿಟ್ಟದ್ದನ್ನು ಇವರ ಸಾಹಿತ್ಯ ಬಿಚ್ಚಿಟ್ಟಿದೆ. ಆ ತಾಯ್ತನದ "ತಂಪು", ತಂದೆತನದ "ಚಿಂತನೆ"ಗಳು ಇವರ ಸಮಗ್ರ ಸಾಹಿತ್ಯದ ಪುಟಪುಟಗಳಲ್ಲೂ ಅಡಗಿ ಕೂತಿರುವದನ್ನು ಕುಶಾಗ್ರಮತಿಗಳು ಗಮನಿಸಬಹುದು. ಚೈತನ್ಯಕ್ಕೆ ಸಾವುಂಟೆ? ಕಾವೇರಿನದಿಗೆ ನಿಲುಗಡೆಯುಂಟೆ?

## ಲಾವಣ್ಯಕಾವ್ಯ 'ಲಾವಣಿ'ಯಾಗಿ ಮೂಡಿಬಂತು

ಬದುಕಿಗೆ ತುಂಬ ಹತ್ತಿರವಾಗಿ ಕ್ರಿಯಿಸುವ ಸಾಹಿತ್ಯ ಪ್ರಕಾರವೆಂದರೆ ಲಾವಣಿ. ಓದಲಾರದವರಿಗೂ ಮೋದ ನೀಡುವ ಹದ ಇದರಲ್ಲಿದೆ. ಶಿವಯೋಗ ಮಂದಿರದ ಇವರ ಬಾಲ ಕವಿಚೇತನ ತನ್ನ ಸ್ವಾನುಭವದ ಅಭಿವ್ಯಕ್ತಿಗೆ ಮೊದಲ ಹಂತದಲ್ಲಿ ಲಾವಣಿಯನ್ನೇ ಕಂಡುಕೊಂಡುದು ವಿಚಿತ್ರ. ಹಿರಿಯ ಕವಿಚೇತನ ಡಾ|| ಡಿ. ಎಸ್. ಕರ್ಕಿಯವರು ಗಮನಿಸಿದ ಈ ಮಾತುಗಳನ್ನು ಇಲ್ಲಿ ಯಾರೂ ಮರೆಯುವಂತಿಲ್ಲ–"ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕಾವ್ಯರಚನೆಯಲ್ಲಿ ತುಂಬಾ ಅಭಿರುಚಿ, ಆಸಕ್ತಿಗಳನ್ನೂ ತಳೆದವರು. ಅವರ ಕಾವ್ಯರಚನೆ ಎಳೆವಯದಲ್ಲಿಯೇ ಆರಂಭವಾಯಿತು. ಶಿವಯೋಗಮಂದಿರದಲ್ಲಿ ವಟುವಾಗಿ ಅಧ್ಯಯನ ಮಾಡುತ್ತಿರು

ವಾಗಲೇ ಅವರು ಕವಿತೆಯ ರಚನೆಗೆ ತೊಡಗಿದರು. ಆಗ ಅವರು ಬರೆಯುತ್ತಿದ್ದುದು "ಮಹಾಂತದೇವರು" ಎಂಬ ಹೆಸರಿನಲ್ಲಿ. ಅವರ ಪ್ರಪ್ರಥಮ ಪ್ರಕಟಿತ ಕವಿತೆ "ಶ್ರೀ ವಿಜಯಮಹಾಂತೇಶ ಲಾವಣಿ." ಆಗ ಅವರ ವಯಸ್ಸು ೧೫-೧೬ ಇರಬಹುದು. ಆ ಲಾವಣ್ಯಮಯವಾದ ಲಾವಣಿಗೆ ಮುನ್ನುಡಿ ಬರೆಯುತ್ತ "ಇವರು ಇಂಥ ಚಿಕ್ಕ ವಯಸ್ಸಿನಲ್ಲಿ ಇಂಥ ಸಾಹಸ ಮಾಡಿದ್ದು ನೋಡಿದರೆ ಇವರು ಸನಿಹದಲ್ಲಿ ಗಣ್ಯ ಸಾಹಿತಿಗಳಾಗುವರೆಂಬುದು ನಿಸ್ಸಂದೇಹವು" ಎಂದು ಮುನ್ನುಡಿ ಬರೆದವರು ಆಗ ಹೇಳಿದ ಮಾತನ್ನು ಇಲ್ಲಿ ಗಮನಿಸಬೇಕು. ಆ ಮಾತು ಈಗ ಸತ್ಯವಾಗಿ ಪರಿಣಮಿಸಿದೆ........ಇಲ್ಲಿ ಗಮನಿಸಬೇಕಾದ ಮಾತೆಂದರೆ ಆಗಿನ ಆ ಎಳೆವಯದ ಮಹಾಂತದೇವರ ಹೃದಯದಲ್ಲಿ ವಾಸಮಾಡಿದ್ದ ಆ ಎಳೆ ಕವಿಯ ಬೆಳವಣಿಗೆಗೆ ತಕ್ಕ ಪರಿಸರ ದೊರೆಯಿತೆಂಬುದು. ಬೆಳೆಯುವ ಎಳೆ ಜೀವಕ್ಕೆ ಒಳ್ಳೆಯ ಪರಿಸರದಿಂದ ತುಂಬ ಅನುಕೂಲವಾಗುತ್ತದೆ. ಈ ಕವಿಯ ಚಿತ್ತ ಅರಳಿದುದು ಶಿವಯೋಗಮಂದಿರದ ಶುದ್ಧವೂ, ಚೇತೋಹಾರಿಯೂ ಆದ ವಾತಾವರಣದಲ್ಲಿ. ಶಿವಯೋಗಮಂದಿರದ ವಟು ವಿದ್ಯಾರ್ಥಿಯಾಗಿ ಅಧ್ಯಯನ ಮಾಡುವ ಯೋಗ ಅವರಿಗೆ ಒಂದು ಸುಯೋಗವಾಗಿ ಪರಿಣಮಿಸಿತು. ಮಲಪ್ರಭೆಯ ಸೊಗಸಾದ ತೀರ ಪ್ರದೇಶದಲ್ಲಿ ನೆಲಸಿದ ಶಿವಯೋಗಮಂದಿರವು ಪ್ರಕೃತಿ ಸೌಂದರ್ಯದ ನೆಲವೀಡೂ ಆಗಿದೆ. ಹೊಳೆ ಅಲ್ಲಿ ಅಂದವಾಗಿ ಹರಿದಿದೆ; ಸಲಿಲ ನಿನಾದದೊಡನೆ ಹರಿಯುತ್ತಿದೆ. ತೀರದ ಆಚೆ ಈಚೆ ಹಸಿರು ಮುರಿಯುವ ಪುಟ್ಟ ಗಿಡ ಬಳ್ಳಿಗಳ ಚೆಲುವಾದ ನೋಟವನ್ನೊಳಗೊಂಡ ಮಲೆಮಲೆಗಳು ಶಿವಯೋಗ ಮಂದಿರದ ಕ್ಷೇತ್ರವನ್ನೂ ಸುತ್ತುವಂದು ಮನೋಹರವಾದ ನಿಸರ್ಗದ ದೃಶ್ಯಗಳನ್ನೂ ನಿರ್ಮಿಸಿವೆ. ಸನಿಹದಲ್ಲಿ ಒಂದೆಡೆಗೆ ಪ್ರಕೃತಿರಮ್ಯವಾದ ಮಹಾಕೂಟದ ಕ್ಷೇತ್ರ. ಇನ್ನೊಂದೆಡೆಗೆ ಬನದಬಿನದವೆಂಬಂತಿರುವ ಬನಶಂಕರಿಯ ರಮಣೀಯ ಕ್ಷೇತ್ರ. ಅನತಿದೂರದಲ್ಲಿಯೇ ಬಾದಾಮಿಯ ಸುವಿಖ್ಯಾತ ಗುಹಾದೇವಾಲಯಗಳು. ಅದರಂತೆ ಶಿಲ್ಪಕ್ಕೆ ಪ್ರಸಿದ್ಧವಾದ ಪಟ್ಟದಕಲ್ಲೂ ದೂರವಿಲ್ಲ. ಸುಪ್ತ ಕಾವ್ಯಶಕ್ತಿಯನ್ನು ಜಾಗೃತಗೊಳಿಸಲು ತಕ್ಕ ಸನ್ನಿವೇಶ ಶಿವಯೋಗಮಂದಿರ. ಸರಿ; ಕಾವ್ಯಶಕ್ತಿ ಜಾಗೃತವಾಯಿತು. ಅದಕ್ಕೆ ಗುರುಭಕ್ತಿ ಕೂಡಿತು. ಶ್ರೀ ವಿಜಯ ಮಹಂತೇಶ ಲಾವಣಿ ರಚನೆಗೊಂಡು ಪ್ರಕಾಶನ ಪಡೆಯಿತು-ಶಿವಯೋಗಮಂದಿರದಲ್ಲಿ ೧೯೪೪ ರಲ್ಲಿ."

ವಯೋಧರ್ಮಕ್ಕೆ ಸಂಗತವಾಗಿ ಈ ಲಾವಣಿ ನೀತಿಪ್ರಧಾನವೂ, ಭಕ್ತಿ ಭಾವಗಳ ಆಡುಂಬೊಲವೂ ಆಗಿದೆ. ಜಾನಪದ ನುಡಿಗಟ್ಟಿನೊಂದಿಗೆ ಪ್ರೌಢ ಸಂಸ್ಕೃತ ಪದಗಳ ಸಮ್ಮಿಶ್ರಣ ಅಂದಿನ ಶಿಕ್ಷಣದ ಅಭಿವ್ಯಕ್ತಿಯಾಗಿದೆ. ಈ ಲಾವಣಿ

ಯಲ್ಲಿ ಉದಿತೋದಿತವಾಗುತ್ತಿರುವ, ಹೊಸರೂಪಾವೇಶ ಪಡೆಯುತ್ತಿರುವ ಓರ್ವ ಜ್ವಲಂತ ಸಾಧಕನ ಭಾವತನಿರಸ ಹರಿದಿದೆ. ಕೆಲ ಸಾಲುಗಳನ್ನು ಗಮನಿಸಬಹುದು:

ದುರ್ಜನ ಸಂಗವು ಕಜ್ಜಿಯ ಬಗೆಯೊಳ್ ಕಷ್ಟವಕೊಡುವದು ಅವನೆಂದು||
ದುರ್ಜನ ಸಂಗಕ್ಕಿಂತಲು ಹೆಚ್ಚಿಗೆ ಒಬ್ಬನೆ ಇರುವದೆ ಲೇಸೆಂದ||
ಕುಣಿಯುತ ಮಣಿಯುತ ತಣಿಯುತ ನುತಿಸುತ ನಮಿಸುವ
ಲಿಂಗಕೆ ಬಲುಮುದದಿ||
ಲಿಂಗದ ಸುಖವೇ ಲಿಂಗದ ರತಿಯೇ ಲಿಂಗದ ನುಡಿಯೇ ನುಡಿಯಾಯ್ತು||

## ಅಗುಳಿನ ಮೇಲೆ ಅನ್ನದ ಪರೀಕ್ಷೆ: ನಾಮಾವಳಿಗಳು

ಭಕ್ತಿಸಾಹಿತ್ಯದ ನಿರ್ಮಲ ವಾಹಿನಿಯಾಗಿ ನಾಮಾವಳಿ ಕನ್ನಡ ಸಾಹಿತ್ಯದ ಪ್ರಧಾನ ಅಂಗವಾಗಿ ಬಳಕೆಯಾಗಿದ್ದು; "ಶ್ರೀ ಮರುಳಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ" ಹಾಗೂ "ಶ್ರೀ ಶಿವಬಸವೇಶ್ವರ ನಾಮಾವಳಿ"ಗಳು ಶಿವಯೋಗ ಮಂದಿರದ ಯೋಗ ಪರಿಸರದಲ್ಲಿ ಮೂಡಿಬಂದವು. ಮಹಾಂತದೇವರ ಸಾಹಿತ್ಯೋದ್ಗಮದ ಈ ವಾಹಿನಿಯನ್ನು ಸೂಕ್ಷ್ಮವಾಗಿ ಪರಾಮರ್ಶಿಸಿದ ಡಾ|| ಡಿ. ಎಸ್. ಕರ್ಕಿ ಅವರ ಮಾತುಗಳನ್ನು ಇಲ್ಲಿ ಅವಶ್ಯವಾಗಿ ಗಮನಿಸಬೇಕು: "ಶ್ರೀ ವಿಜಯಮಹಾಂತೇಶ ಲಾವಣಿಯಲ್ಲಿ ಅಂದಿನ ಉದಯೋನ್ಮುಖ ಕವಿ ಮಹಾಂತದೇವರು ತೋರಿದ ಮಂದಾನಿಲ ಗತಿಯ ಸರಳತೆ ಹಾಗೂ ಸುಗಮತೆ ಗಳನ್ನು ಮುಂದೆ ಅವರು ಮರುಳಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿಯಲ್ಲಿ ಹಾಗೂ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿಯಲ್ಲಿ ಉತ್ಸಾಹ ಗತಿಯ ಮೂಲಕ ತೋರಿದ್ದುಂಟು. ಅಗುಳಿನ ಮೇಲಿಂದ ಅನ್ನದಪರೀಕ್ಷೆ ಮಾಡಬಹುದು."

"ಬಾಲಲೀಲೆ ತೋರ್ದು ಜನಕೆ ಮೋದವಿತ್ತೆ ಮರುಳಸಿದ್ಧ
ಫಾಲನಯನ ನೆನಹಿನಲ್ಲಿ ಕಾಲ ಕಳೆದೆ ಮರುಳಸಿದ್ಧ"
—ಮರುಳಸಿದ್ಧೇಶ್ವರ ಅ.ಶ.

"ದಾರಿ ತಪ್ಪಿ ನಡೆವರನ್ನು ಕಂಡು ನೊಂದೆ ಶಿವನೆ ಬಸವ
ದಾರಿ ತೋರಿ ಬೆಳಕ ನೀಡಿ ಕಳೆಯಿತ್ತೆ ಶಿವನೆ ಬಸವ"
—ಶ್ರೀ ಶಿವಬಸವೇಶ್ವರ ಅ.ಶ.

"ಮೂರು ಮೂರು ಮಾತ್ರೆಗಳ ಎಂಟೆಂಟು ಗುಣಗಳು ಈ ಚರಣಗಳಲ್ಲಿ ಸರಾಗವಾಗಿ ಈ ಉತ್ಸಾಹ ಲಯದಲ್ಲಿ ನುಡಿಯುತ್ತವೆ ಎಂಬುದನ್ನು ಅರಿಯ ಬಹುದು."15

---

15 ಚಿತ್ರಪ್ರಭೆ: ಪುಟ–224, 225

ಪ್ರೊ. ಕೆ. ಎ. ಬನ್ನೆಟ್ಟಿಯವರು "ಮರುಳಸಿದ್ಧೇಶ್ವರ ನಾಮಾವಳಿ"ಯ ಶಕ್ತಿ-ಶಿಸ್ತುಗಳ ಕೇಂದ್ರೀಕರಣ ಕಲೆಯನ್ನು ಕುರಿತು ಹೀಗೆ ಅಭಿಪ್ರಾಯ ತಾಳಿದ್ದಾರೆ:

"ಗದ್ಯದಲ್ಲಿ ಸಾವಿರ ಪುಟಗಳಲ್ಲಿ ಬರೆದಿಡಬಹುದಾದ್ದನ್ನು ಕವಿಯು ಪದ್ಯದಲ್ಲಿ ಸೂಚ್ಯವಾಗಿ; ಪ್ರತಿಮೆ, ಸಂಕೇತ, ಧ್ವನಿ, ಅಲಂಕಾರಗಳ ಮುಖಾಂತರ ಸಂಕ್ಷೇಪವಾಗಿ ನೂರಾರೇ ಸಾಲುಗಳಲ್ಲಿ ಬರೆಯಲು ಸಾಧ್ಯ. ಈ ಮಾತಿಗೆ ಮಹಾಂತದೇವರು ಬರೆದ ಈ ನಾಮಾವಳಿಯೇ ಸಾಕ್ಷಿ."16

ಕೆಲ ಸಾಲುಗಳನ್ನು ಉದಾಹರಿಸಬಹುದು:

"ಬಡವ ನಾನು ಒಡೆಯ ನೀನು ನೀಡು ಮತಿಯ ಮರುಳಸಿದ್ಧ"
"ಹೃದಯ ಗೃಹಕೆ ದೀಪವಿರದೆ ಕೊರಗುತಿರುವೆ ಮರುಳಸಿದ್ಧ"
"ಕಾಡಿ ಕಾಡಿ ದೂಡುತಿಹುದು ಮಾಯೆಯೆನ್ನ ಮರುಳಸಿದ್ಧ"
"ಹುಟ್ಟಿ ಹುಟ್ಟಿ ಸಾವುದನ್ನು ತಪ್ಪಿಸೆನಗೆ ಮರುಳಸಿದ್ಧ."17

ಲಿಂಗೈಕ್ಯ ಹಾವೇರಿ ಶ್ರೀ ಶಿವಬಸವಸ್ವಾಮಿಗಳ ತಪೋವನದ ಪಾವನ ಪರಿಸರ ಜಗದ್ಗುರುಗಳಿಗೆ ಮಂದಿರದ ವಟು ಜೀವನದಲ್ಲಿ ದೊರೆತಿರುವದಕ್ಕೆ "ಶಿವಬಸವೇಶ್ವರ ನಾಮಾವಳಿ" ಸಾಕ್ಷಿ ನೀಡುತ್ತದೆ. ಹರಿಹರ ಕವಿಯ ನಿರರ್ಗಳ ಭಾವನಿರ್ಭರ ಸೊಗಸು ಇಲ್ಲಿ ದಾಂಗುಡಿ ಇಟ್ಟಿದೆ. ಪ್ರತಿಚರಣದ ಅಂತ್ಯದಲ್ಲಿ ಬರುವ "ಶಿವನೆ ಬಸವ" ಚರಣಾಂತ್ಯ ಭಕ್ತಿ ಪ್ರೇರಕವೂ, ಭಾವಪೂರಕವೂ ಆಗಿ ಬಂದಿದೆ:

ತ್ಯಾಗಮೂರ್ತಿ ನಿನ್ನ ಕೀರ್ತಿ ಪೇಳಲಳವೆ ಶಿವನೆ ಬಸವ||
ತಿಳುಹು ಬೇಗ ಮುಕುತಿ ದಾರಿ ಆವುದೆನಗೆ ಶಿವನೆ ಬಸವ||
ತಾಯಿ ತಂದೆ ಬಂಧು ಬಳಗ ನೀನೆ ಎನಗೆ ಶಿವನೆ ಬಸವ||
ಜ್ಞಾನ ನೇತ್ರ ಪುಣ್ಯಗಾತ್ರ ವಿನುತಪಾತ್ರ ಶಿವನೆ ಬಸವ||

ಪ್ರೊ. ಬಿ. ಎಂ. ತೆಳಗಡಿ ಅವರು ಈ ನಾಮಾವಳಿಯ ಸಹಜ ಸೊಬಗಿನ ಭಕ್ತಿ ಬಂಧುರತೆಯನ್ನು ಸಮರ್ಪಕವಾಗಿ ಗುರುತಿಸಿದ್ದಾರೆ:

"ಶಿವಬಸವಸ್ವಾಮಿಗಳ ನಿತಾಂತವಾದ ದಿವ್ಯ ವ್ಯಕ್ತಿತ್ವ, ಸಹಜ ಭಕ್ತರಾದ ಮಹಾಂತದೇವರ ಅಂತರಂಗದಲ್ಲಿ ಭಾವತರಂಗಗಳನ್ನು ಎಬ್ಬಿಸಿದೆ. ಆ ಭಾವಶಕ್ತಿ, ಕಾವ್ಯಶಕ್ತಿ, ಶರಣಭಕ್ತಿಗಳು ಮುಪ್ಪುರಿಗೊಂಡು, ಈ ನಾಮಮಾಲೆಯಲ್ಲಿ ಸ್ವಾಮಿಗಳ ಭವ್ಯಜೀವನ ಮೂಡಿನಿಂದಿವೆ. ಮಹಾಂತದೇವರು, ಅನುಭಾವಿಗಳಾದ ಶಿವಬಸವ

16 ಚಿತ್ರಭೆ: ಪುಟ-287
17 ಚಿತ್ರಭೆ: ಪುಟ-288

ಸ್ವಾಮಿಗಳ ಆಧ್ಯಾತ್ಮಿಕ ಸಾಧನೆಯ ಎತ್ತರ-ಬಿತ್ತರಗಳೊಂದಿಗೆ, ಅವರ ಜೀವನದ ಸಕಲ ಸನ್ನಿವೇಶಗಳನ್ನು "ಕರಿಯನ್ನು ಕನ್ನಡಿಯಲ್ಲಿ ತೋರುವಂತೆ" ಕಿರುಕೃತಿಯಾದ "ನಾಮಾವಳಿ"ಯಲ್ಲಿ ಕಲಾತ್ಮಕವಾಗಿ ಸಮಾವೇಶಗೊಳಿಸಿದ್ದಾರೆ."[18]

## "ಪೂಮಾಲೆ"ಯಲ್ಲಿ ಭಾವಮಾಲೆಯ ಎತ್ತರ-ಬಿತ್ತರ

ಲಾವಣಿ ಕನ್ನಡದ ದೇಶೀ ಸಂಪತ್ತಾದರೆ, ಕಂದಪದ್ಯ ಹಳಗನ್ನಡದ ವಿಶಿಷ್ಟ ಕೊಡುಗೆ. ಎರಡೂ ನಿಟ್ಟಿನಲ್ಲಿ ಸಾಹಿತ್ಯರಚನೆ ಸಮರ್ಥವಾಗಿ ಇವರ ಸಾಹಿತ್ಯದಲ್ಲಿ ನಡೆದುಬಂದಿರುವದು ವಿಶೇಷ. ಉತ್ಸಾಹ ರಗಳೆ ಮಹಾಂತಕವಿಯ ನಾಮಾವಳಿ ಯಲ್ಲಿ ಒಲಿದು ಬಂದರೆ; "ಪೂಮಾಲೆ"ಯಲ್ಲಿ ಕಂದಪದ್ಯ ಕಂಪುಗುವ ಪೂಮಾಲೆ ಹಾಕಿದೆ. ಇಡೀ ಕಾವ್ಯವನ್ನೇ ಬಿಡಿಬಿಡಿಯ ಕಂದಪದ್ಯಗಳಲ್ಲಿ ತೋರಣಗೊಳಿಸ ಲಾಗಿದೆ. ಮಹಾಂತದೇವರು ಕಾಶಿಯಲ್ಲಿ ಪ್ರೌಢವ್ಯಾಸಂಗ ನಿರತರಾಗಿ "ಸಾಹಿತ್ಯ ರತ್ನ" ಮುಂತಾದ ಪದವಿಗಳನ್ನು ಸಂಪಾದಿಸಿದ ಪ್ರಬುದ್ಧ ಸ್ಥಿತಿಯಲ್ಲಿ ಈ ಕೃತಿ ಮೈದಾಳಿದೆ. ಇದರಲ್ಲಿ ೯೪ ಕಂದಪದ್ಯಗಳ ಸಂಯೋಜನೆ ಇದೆ. ಭಾವನೆಗೆ ತಕ್ಕಂತೆ ಮೇಳವಿಸಿದ "ಕಂದಂಗಳ್ ತನಿರಸದುಕ್ಕುಂದಂಗಳ್" ಎಂದು ಡಾ|| ಡಿ.ಎಸ್. ಕರ್ಕಿ ಅವರು "ಪೂಮಾಲೆ"ಯ ಸೊಗಸನ್ನು ಸಾದರಪಡಿಸಿದ್ದಾರೆ: "....'ಮನದೊಳ್ ನೆನೆಯುವ ಮನುಜಗೆ ಮನೆಯೇಂ ಮಠವೇಂ?' ಎಂದು ಹೇಳಿದ ನುಡಿ ಮನಸ್ಸನ್ನು ಹಿಡಿಯದಿರದು....ಕಂದವೆಂಬುದು ಹಳೆಯ ಛಂದೋಬಂಧ: ಆದರೇನು ಅದನ್ನು ಚೆನ್ನಾಗಿ ಪ್ರಯೋಗಿಸಿದರೆ ಅದು ಯಾವಾಗಲೂ ಹೊಸ ಆನಂದವನ್ನು ನೀಡಬಲ್ಲುದೆಂಬುದಕ್ಕೆ ಮಹಾಂತದೇವ-ಗಂಗಾಧರ ಜಗದ್ಗುರುಗಳ ಪೂಮಾಲೆ ಸಾಕ್ಷಿಯಾಗಿದೆಯೆಂದು ಹೇಳಬಹುದು. ಪೂಮಾಲೆಯ ಕಂದಪುಷ್ಪಗಳು ಅಷ್ಟೊಂದು ಸೊಗಸಾಗಿವೆ; ಸದ್ಭಾವಯುಕ್ತವಾಗಿವೆ; ಸ್ವಾಗತಾರ್ಹವಾಗಿವೆ."[19] ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿಗಳು-"ದೇಶೀಯ ರಮ್ಯತೆ, ಹಾಗೆಯೇ ಸಂಸ್ಕೃತ ನುಡಿಯ ಹದ, ಈ ಪೂಮಾಲೆಯ ಶೈಲಿಗೆ ಒಂದು 'ಹದವಾದ ಪಾಕ' ವನ್ನೊದಗಿಸಿವೆ"[20] ಎಂದಿದ್ದಾರೆ. ಶ್ರೀ ಜ.ಚ.ನಿ.ಯವರು ಇದಕ್ಕೆ ಮುನ್ನುಡಿ ಬರೆಯುತ್ತ-"ಇದನ್ನು ಕಟ್ಟಿದ ಕವಿ ಒಳ್ಳೆಯ ಮಾಲೆಗಾರ" ಎಂದಿದ್ದಾರೆ. ಜಗದ್ಗುರುವಾಗಿ ಆಯ್ಕೆಯಾಗುವ ಪೂರ್ವದಲ್ಲಿ ೧೯೫೪ ರ ಸುಮಾರಿಗೆ ಚಿತ್ತರಗಿಯ "ವಿಜಯಮಹಾಂತದೇವ"ರಾಗಿದ್ದ ಇವರ ಪ್ರೌಢವ್ಯಾಸಂಗ ಪ್ರಭೆಯು ಸಾಕ್ಷಿಯಾಗಿ "ಪೂಮಾಲೆ" ಜ್ಞಾನಕ್ಕೆ ಚೆಲುವಿನ ಬಳ್ಳಿ ಕಟ್ಟಿ ಗಂಧವಾಹಕವಾಗಿ ರಾರಾಜಿಸಿದೆ'

---

18 ಚಿತ್ರಭೆ: ಪುಟ-272
19 ಚಿತ್ರಭೆ: ಪುಟ-226-227
20 ಚಿತ್ರಭೆ: ಪುಟ-249

೨೫ ವರ್ಷ ವಸಂತದ ಯೌವನದಲ್ಲಿ ಇವರ ಮನಸ್ಥಿತಿ ಎಷ್ಟೊಂದು ಶಾಂತಶೀಲವಾಗಿತ್ತೆಂಬುದಕ್ಕೆ ಪೂಮಾಲೆ ಪ್ರಸನ್ನ ಸಾಕ್ಷಿ. ಮಾದರಿಗಾಗಿ ಗಮನಿಸಬಹುದು–

ಮನದೊಳ್ ಸಮತೆಯುದಳವಡೆ
ಮನೆ ಮಾಡಿಪುದಯ್ಯ ಶಾಂತಿ ಸುಖ ಸಂಪದವು
ಘನವಾದ ಸುಧೆಯ ಸೇವನೆ
ಯನು ಕೊಲಿಸಿದಂಗೆ ಹಸಿವು ಬಾಧಿಪುದೆಂತೈ||

ಕಣ್ಣಿನ ಕೊನೆಯೊಳಗಿರುತಿಹ
ಬಣ್ಣದ ಪಕ್ಷಿಯನು ಹಿಡಿದು ಕಟ್ಟುವರಾರೈ
ಅಣ್ಣಗಳೇ ಪೇಳಿರಿ ಬರಿ
ಬಣ್ಣದ ಮಾತಿನೊಳು ಸಾಧ್ಯವಾಗುವದಲ್ಲೆ||

ನೀತಿಯೆ ಜಗದೋಳ್ಮಾನ್ಯಂ!
ನೀತಿಯ ನಡೆಯಿಲ್ಲದವನೆ ಕೋತಿಯೆನಿಕ್ಕುಂ
ನೀತಿಯ ಪೂಗಳ ಜೋಡಿಸಿ
ಮಾತಿನ ಪೋಣ್ಕೆಯೊಳೆ ಹೆಣೆದ ಪೂಮಾಲಿಕೆಯಂ||

ಕತ್ತಲೆಯೊಳಿರ್ದು ದೀಪದ
ಬಿತ್ತರವಂ ಬಣ್ಣಿಸಲ್ಕೆ ಬೆಳಕಹುದೆಂತೈ
ಸತ್ಯ ಬ್ರಹ್ಮವ ಬಲು ಹೊಗ
ಳುತ್ತಿರೆ ಸತ್ಕ್ರಿಯೆಗಳಿಲ್ಲದಿರಲದು ವ್ಯರ್ಥಂ||

**ಅಂತರಾನುಭವದ ನಿರಂತರ ಪಯಣಿಗ: "ಪಥಿಕ"**

ಬಾಳೊಂದು ಪಯಣ. ಆತ್ಮರು ಪಯಣಿಗರು. ದಾರಿ ದೂರ. ಗುರಿ ಶಿವನ ಶ್ರೀಸತ್ಯದರ್ಶ. ಪರಿಣಾಮ ಈ ಮರ್ತ್ಯವನ್ನು ಸಾರ್ಥಕವಾಗಿಸುವ, ಭೂ ಕೈಲಾಸವಾಗಿಸುವ,ಸತ್ಯದ ಶ್ರೀಗಿರಿಗೊಳಿಸುವ ಚಲುವು. ಮಾಧ್ಯಮ ನಿರಂತರಾಧ್ಯಯನ-ಯೋಗ-ಸಂಯಮ-ಸಮತೆ-ಸ್ವಾನುಭವಗಳು. ಈ ಎತ್ತರವನ್ನೂ ಬಿತ್ತರವನ್ನೂ ನೀಡುವ ಕಾವ್ಯ ಸಂಕಲನ "ಪಥಿಕ." "ಪಥಿಕ....ಮೂಡಿಬಂದಾಗ ಕವಿ ಇನ್ನೂ ಚಿತ್ತರಗಿಯ ಮಹಾಂತದೇವರಾಗಿದ್ದರು. ಅಂದಿನ ಅವರ ಚಿತ್ತರಗಿಯ ಚಿತ್ತವೇ ಚಿತ್ರವಾಗಿ ಮೂಡಿವೆ 'ಪಥಿಕ'ದ ಕವಿತೆಗಳಲ್ಲಿ–ಎಂದು ಹೇಳಬಹುದು. ಪಥಿಕ ಕವನ ಸಂಗ್ರಹ ಪುಸ್ತಕದ ಮೇಲುಹೊದಿಕೆ ಪಥಿಕ ಸಾಗಿದ ಪಥವನ್ನು ಅಂದವಾಗಿ ಸುಳುಹು ಗಾಣಿಸಿದೆ....'ಪಥಿಕ'ದ ಕವಿತೆಗಳಲ್ಲಿ ಭಾವಕ್ಕೆ ತಕ್ಕ ಛಂದಸ್ಸು ಹೊಂದಿಕೊಂಡಿದೆ

ಎಂಬ ಮಾತನ್ನು ಮೊದಲು ಹೇಳಬಹುದು. 'ಲಲಿತ ಪದ'ವನ್ನು ಈ ಕವಿತೆಗಳು ವಿಶೇಷವಾಗಿ ಒಳಗೊಂಡಿವೆ. ಮಂದಾನಿಲ, ಉತ್ಸಾಹ ಲಯಗಳೂ ಅಲ್ಲಲ್ಲಿ ಸ್ಪಂದಿಸಿವೆ."21 ಶ್ರೀ ಸ. ಸ. ಮಾಳವಾಡ ಅವರು 'ಪಥಿಕ'ದ ಐತಿಹಾಸಿಕತೆ ಯೊಂದಿಗೆ ಭವಿಷ್ಯದ ಪಥವನ್ನೂ ಗುರುತಿಸಿದ್ದಾರೆ—" 'ಪಥಿಕ' ಕವನ ಸಂಕಲನವು ೧೯೫೪ ರಲ್ಲಿ ಪ್ರಕಟವಾಗಿದ್ದರೂ ಅದರಲ್ಲಿಯ ಕವನಗಳ ರಚನೆಯ ಕಾಲ ೧೯೫೦ಕ್ಕೆ ಪೂರ್ವದ್ದೆಂದು ತೋರುತ್ತದೆ. ಅಂತೆಯೇ ಆ ಕವನಗಳಲ್ಲಿ ನವೋದಯ ಕಾಲದ ದೃಷ್ಟಿ ಸ್ಪಷ್ಟವಾಗಿದೆ....ಮಾನವನು ಪರಮ ಸತ್ಯದ ಯಾತ್ರಿಕನೇ ಅಹುದು. (A Pilgrim of ever lasting truth–Sri Aurobindo). ಆದರೆ ಈ ದೃಷ್ಟಿಯು ಬಹುಜನರಿಗೆ ಬೇಗನೆ ಮೂಡಿಬರುವದಿಲ್ಲ. ಅಂತೆಯೇ ಅವರಿಗೆ ಬಾಳು ಗೋಳಿನ ಸಂತೆಯಾಗುವದು. 'ಪಥಿಕ' ಸಂಕಲನದ ಕವಿಗೆ ಮಾತ್ರ ಚಿಕ್ಕ ವಯಸ್ಸಿನಲ್ಲಿಯೇ ಈ ದೃಷ್ಟಿ ಮೂಡಿಬಂದಿದೆ. ಅಂದು ಅದು ಬೆಳೆಯುವ ಚೇತನದ ಗುರುತಾಗಿ ಕಂಡುಬಂದಿತು. ಆಗ ಕಂಡುಬಂದ ಗುರುತು ಈಗ ಫಲಪ್ರದವಾಗಿ ಕಾಣುತ್ತಿದೆ....'ಪಥಿಕ' ಸಂಕಲನದ ಕವಿತೆಗಳ ರಚನೆಯ ಕಾಲದಿಂದ ಅವರು ಈಗ ಬಹುಮುಂದೆ ಸಾಗಿದ್ದಾರೆ. ನಮ್ಮ ನಾಡಿನ 'ಮಹಾಥಿಪಕ' ಆಗಿದ್ದಾರೆ."22

'ಪಥಿಕ' ಒಂದು ವೈವಿಧ್ಯಪೂರ್ಣ ಸಂಕಲನ. ವಸ್ತು ವೈವಿಧ್ಯ, ನಿರೂಪಣಾ ನಾವೀನ್ಯಗಳು ಇಲ್ಲಿಯ ಜೀವಾಳ. ಈ ಸಂಕಲನದಲ್ಲಿ ನಾಲ್ವತ್ತು ಪದ್ಯಗಳಿದ್ದು– ಆಯ್ಕೆಯಲ್ಲಿ ವೈವಿಧ್ಯತೆ ಇದ್ದರೂ ಆದರ್ಶದತ್ತ ನೆಟ್ಟನೋಟ, ಆಧ್ಯಾತ್ಮದಲ್ಲಿ ನಿಂತ ಭಾವ ಎಲ್ಲದರಲ್ಲೂ ಸ್ಥಾಯಿ ಆಗಿವೆ. ಆತ್ಮ ಜಾಗೃತಿಯತ್ತ ಕವಿಮನೋ ಭಾವ ಪ್ರಕಂಪಿಸಿದೆ—

"ಸಾಕಿನ್ನು ಎದ್ದೇಳಿ ಮೋಹ ನಿದ್ರೆಯ ಬಿಟ್ಟು
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು
ಮನದೊಳಗೆ ತುಂಬಿರುವ ಕಾಮದಾಸೆಯ ಸುಟ್ಟು
ತನುವಿನೊಳಗೆ ಹೊಕ್ಕಿರುವ ಭ್ರಾಂತಿಯನು ಬಿಟ್ಟು
ತೆರೆಯಿರೈ ಒಳಗಣ್ಣು ಹರಿಯಿರೈ ಪಗ್ಗವನು
ಮುರಿಯಿರೈ ಮದವನ್ನು ತರಿಯಿರೈ ಶೋಕವನು
ಅರಿಯಿರೈ ಮುಂದಿನ ಹಿರಿಗುರಿಯ ದಾರಿಯನು" (ಉತ್ತಿಷ್ಠತ)

---

21 ಚಿತ್ರೃಫೆ: ಜಗದ್ಗುರು ಗಂಗಾಧರ ಕವಿ; ಡಾ|| ಡಿ. ಎಸ್. ಕರ್ಕಿ. ಪುಟ–227, 228

22 ಚಿತ್ರೃಫೆ: 'ಪಥಿಕ'ದ ನೆನಪು, ಪುಟ–237, 238

ಈ ಧೀರ ಯಾತ್ರಿಕನ ಮನದಾಳದ ಜ್ವಲಂತ ಜಿಜ್ಞಾಸೆಯನ್ನು ಕಾಣಿರಿ—

ವಿಜಯ ಪಡೆಯದ ಮನುಜ
ಒಣಗಿರ್ಪ ಎಲೆಯಂತೆ
ಬತ್ತಿರುವ ಕೆರೆಯಂತೆ
ಒಡೆದ ಕನ್ನಡಿಯಂತೆ||

(ಶಮೊ ಸಮರ್ಪಣ)

ಇಂಥ ಮೇಲೇಳುವ ಚೇತನಕ್ಕೆ ಪ್ರೋತ್ಸಾಹವಿಲ್ಲದೆ ಫಲಶ್ರುತಿ ಇಲ್ಲ. ಪಯಣಿಗ ಪ್ರೋತ್ಸಾಹವಿಲ್ಲದೆ ದಣಿದುಹೋಗುತ್ತಾನೆ—

"ಪ್ರೋತ್ಸಾಹವಿಲ್ಲದಲೆ
ವಾಸಿಸುವ ಆ ಬಾಳು
ರಸವಿರದ ಪಣ್ಣಲ್ಲವೆ?"

(–ಪ್ರೋತ್ಸಾಹ)

"ಪ್ರೇರಣೆಯೆ! ಧಾರುಣಿಗೆ ಚೇತನವ ಕೊಡುತಿಹುದು
ಪಥಿಕಂಗೆ ದಾರಿಯನು ತೋರಿ ಸುಖ ನೀಡುವುದು"

(–ಪ್ರೇರಣೆಗೆ)

ಈ ಸಾಲುಗಳ ಮಧ್ಯದಲ್ಲಿ ಅರ್ಥ ಮಾತ್ರವೆ ಕುಳಿತುಕೊಳ್ಳದೇ; ಆ ಅರ್ಥದ ಆಳದಲ್ಲಿ ಅನೇಕ ತೊಂದರೆ–ತಾಪತ್ರಯ–ಪ್ರೋತ್ಸಾಹ–ಪ್ರೇರಣೆಗಳಿಲ್ಲದಿರುವಿಕೆಯ ಶೂನ್ಯ ವಾತಾವರಣಗಳು ಕವಿಗೆ ಕಾಡಿದ ಅರ್ಥಧ್ವನಿ ಧ್ವನಿಸಲಾರವೇ? ಒಂದರ್ಥ ದಲ್ಲಿ 'ಪಥಿಕ' ಇವರ ಜಗದ್ಗುರು ಪೂರ್ವಸ್ಥಿತಿಯ ಸುಪ್ತ ಜೀವನ ಕಥನ ವೆಂದರೂ ಸೈ!

## ನಾನೂ ಗದ್ಯ ಬರೆಯಬಲ್ಲೆ

ಪದ್ಯಾತ್ಮಕವಾಗಿ ಸಾಗಿದ ಕವಿಜೀವನ ಗದ್ಯಾತ್ಮಕವಾಗಿ ತಿರುಗಿದುದು 'ಅಪ್ಪಯ್ಯ ಸ್ವಾಮಿಗಳ ಚರಿತೆ'ಯಲ್ಲಿ! ಪ್ರಂಖಾನುಪ್ರಂಖವಾದ ಕಾವ್ಯೋದ್ಯಮದಲ್ಲಿ ಗದ್ಯವು ಚಿಂತನಪ್ರಜ್ಞೆಯನ್ನು ಹಿಡಿದಿಡುವ ದೊಡ್ಡ ಭಂಡಾರ. ವಿಜಯಮಹಾಂತ ದೇವರ ಬದುಕೇ ಒಂದು ಸಮಗ್ರ ಪ್ರಯೋಗಶಾಲೆಯಾಗಿತ್ತೆಂಬುದಕ್ಕೆ ಅವರ ಭಿನ್ನ ಭಿನ್ನ ಪ್ರಕಾರದ ಈ ಸಾಹಿತ್ಯ ಕೃತಿಗಳೇ ಸಾಕ್ಷಿ. "ಈ ಪುಸ್ತಕದ ವೈಶಿಷ್ಟ್ಯವೆಂದರೆ ಇದರಲ್ಲಿ ಒಬ್ಬ ಸ್ವಾಮಿಯವರು ಮತ್ತೊಬ್ಬ ಸ್ವಾಮಿಯವರ ಜೀವನ ಚರಿತ ಬರೆದುದು. ಪೂಜ್ಯವನ್ನು ಕಲ್ಪಿಸುವದು ಪೂಜ್ಯರಿಗೆ ಸಾಧ್ಯವು. ಮಹಿಮೆಯನ್ನು ಕಾಣುವುದು ಮಹಾತ್ಮರಿಗೆ ಶಕ್ಯವು. ವಿಜಾಪುರ ಜಿಲ್ಲೆಯ ಆಗ್ನೇಯ ಮೂಲೆ

ಯಲ್ಲಿರುವ ಇಲಕಲ್ಲ ಮಠದ ಆಗಿನ ಶ್ರೀ ಮಹಾಂತದೇವರು ಬೆಳಗಾವಿ ಜಿಲ್ಲೆಯ ಆಗ್ನೇಯ ಮೂಲೆಯಲ್ಲಿರುವ ಸವದತ್ತಿ ಕಲ್ಮಠದ ಲಿಂ. ಶ್ರೀ ಮ. ನಿ. ಪ್ರ. ಅಪ್ಪಯ್ಯ ಸ್ವಾಮಿಗಳ ಬಗೆಗೆ ಬರೆದ ಜೀವನ ಚರಿತೆಯಿದು."23

೧೯೩೦ ರಲ್ಲಿ ಪ್ರಥಮ ಆವೃತ್ತಿಯಾಗಿ ಪ್ರಕಟವಾದ ಈ ೬೪ ಪುಟಗಳ ಚಿಕ್ಕ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತ ಕವಿ ಎಸ್. ಡಿ. ಇಂಚಲ ಅವರು ಹೀಗೆ ಬರೆದಿದ್ದಾರೆ—"ಅಪ್ಪಯ್ಯ ಶಿವಯೋಗಿಗಳ ಸಮಗ್ರವಾದ ಜೀವನವು ಸಂಕ್ಷೇಪ ವಾಗಿ ಇಲ್ಲಿ ಚಿತ್ರಿತವಾಗಿದೆಯಾದರೂ, ಹಸಿರು ಹುಲ್ಲಿನ ಎಸೆಯುವ ಮಂಜಿನ ಹನಿಯೊಂದರಲ್ಲಿ ಚಿತ್ರಿಸಲ್ಪಟ್ಟ ವಿಶ್ವದ ಚಿತ್ರದಂತೆ ನಿಸರ್ಗ ಸಹಜವಾಗಿದೆ; ಪರಿ ಪೂರ್ಣವಾಗಿದೆ. ಹನಿಯು ಸಣ್ಣದಾಗಿದ್ದರೂ ಅಲ್ಲಿ ತೋರುವ ಚಿತ್ರ ವಿಶ್ವದ ವಿರಾಟ ಚಿತ್ರ. ಹಾಗೆಯೇ, ಈ ಚಿಕ್ಕ ಹೊತ್ತಿಗೆಯಲ್ಲಿ ಶಿವಯೋಗಿಗಳ ಭವ್ಯ ಜೀವನದ ದಿವ್ಯವಾದ ಪ್ರತಿಬಿಂಬವಿದೆ."24

ಸರಳ, ಸುಭಗ, ಸೌಮ್ಯ ಶೈಲಿಯಿಂದ ಈ ಪುಸ್ತಕ ಪಂಡಿತ ಪಾಮರರಿಗೂ ಹಿಡಿಸಬಲ್ಲುದಾಗಿದೆ. ಸರಳತೆ ಇಲ್ಲಿಯ ಮುಖ್ಯ ಗುಣ. ದೇಶೀ ಕನ್ನಡದ ಹದ-ಹೊಗರು-ಹಗುರು ಇಲ್ಲಿ ಎದ್ದುಕಾಣುತ್ತವೆ. ಅಲ್ಲಲ್ಲಿ ಔಚಿತ್ಯಪೂರ್ಣವಾಗಿ ಸಂಸ್ಕೃತ ಪದಗಳು ಸಾಮರಸ್ಯ ಪಡೆದಿವೆ. ಮಾದರಿಗಾಗಿ ಕೆಲ ಸಾಲುಗಳನ್ನು ಪರಿಗಣಿಸಬಹುದು–

"....ಪಕ್ಷಿಗಳೆಲ್ಲವೂ ಕಿಲಕಿಲ ಧ್ವನಿಯನ್ನು ತೊರೆದು, ಮೌನವನಾಂತು ಸೂರ್ಯೋದಯವನ್ನೇ ಚಿಂತಿಸುತ್ತಿದ್ದವು. ಕನ್ನಡಾಂಬೆ ಹಸುರು ಸೀರೆಯನ್ನುಟ್ಟು ಕೊಂಡು ಶೋಭೆಯುಳ್ಳವಳಾಗಿ ಮೆರೆಯುವ ಆಶೆ ಹಿರಿದಾಗಿತ್ತು....ನಾಡಿನ ಮೂಲೆ ಮೂಲೆಯಲ್ಲಿಯೂ ಹಾಹಾಕಾರ. ಹಸಿವೆಯನ್ನು ಕಳೆದು ಸುಖಸಾಮ್ರಾಜ್ಯದಲ್ಲಿ ಕುಳ್ಳಿರಿಸುವವರನ್ನು ಜನಸಂದೋಹವು ನಿರೀಕ್ಷಿಸುತ್ತಿತ್ತು. ತ್ಯಾಗ ಯೋಗಗಳ ಶಕ್ತಿಗಳು ಅಳಿಯುತ್ತಿದ್ದವು....ಸೂರ್ಯೋದಯವಾಯ್ತು. ಹಾಹಾಕಾರದ ಹಬ್ಬುವಿಕೆ ಗಳು ನಾಶವಾಗಹತ್ತಿದವು. ರಾಜಸ ತಾಮಸ ಗುಣಗಳು ದಿಕ್ಕೆಟ್ಟು ಓಡಹತ್ತಿದವು. ಜೀವಗುಣಗಳು ಹೋಗಿ ದೇವಗುಣಗಳು ಪ್ರತಿಯೊಬ್ಬರಲ್ಲಿಯೂ ಉದ್ಭೂತ ವಾಗಲು ಪ್ರಾರಂಭಿಸಿದವು."25

---

23 ಚಿತ್ಪ್ರಭೆ: ಅಪ್ಪಯ್ಯ ಸ್ವಾಮಿಗಳ ಚರಿತೆ, ಡಾ॥ ವಸಂತ ಪಾಟೀಲ, ಪುಟ–289

24 ಶ್ರೀ ಅಪ್ಪಯ್ಯ ಸ್ವಾಮಿಗಳ ಜೀವನ ಚರಿತ್ರೆ, ಮುನ್ನುಡಿ; ಪುಟ–6, 7

25 ಶ್ರೀ ಅಪ್ಪಯ್ಯ ಸ್ವಾಮಿಗಳ ಜೀವನ ಚರಿತ್ರೆ; ಪುಟ–1, 2

ಪೂಜ್ಯ ಜಗದ್ಗುರುಗಳ ಪೀಠಾರೋಹಣದಿಂದೀಚಿನ ಭಾಷಣಗಳು, ಲೇಖನಗಳು, ಆಕಾಶವಾಣಿ ಉಪನ್ಯಾಸಗಳು, ಚಿಂತನಗಳು ಮುಂತಾಗಿ ಸತ್ವಯುತವಾಗಿ, ಬಹುಮುಖವಾಗಿ ಬೆಳೆಯುತ್ತಿರುವ ಗದ್ಯವಾಙ್ಮಯ ನಿರ್ಮಿತಿಗೆ ಪ್ರಯೋಗ ಭೂಮಿಕೆಯನ್ನು ಈ ಕೃತಿ ನೀಡಿತೆಂಬುದು ನಿರ್ವಿವಾದ.

## ಹೂದೋಟದಲ್ಲೊಂದು ಹೊಸಮಾಲೆ

ಜಗದ್ಗುರು ಪೀಠಾರೋಹಣ ಪೂರ್ವದಲ್ಲಿ ಬರೆದ "ಮೊಗ್ಗೆಯ ಮಾಲೆ", "ಪೂಮಾಲೆ"ಗಳು ಬೆಳೆಯುವ ಮನಸ್ಸಿಗೆ ತಕ್ಕಂತೆ ಹೊಂದಿಕೊಂಡು ಬಂದ ಕೃತಿಗಳು. ಹೂವು ಮತ್ತು ಹಕ್ಕಿ ಮಹಂತದೇವರ ಕವಿಮನಸ್ಸಿಗೆ ಹತ್ತಿರವಾದ ರೂಪಕಗಳು. ಅನುಭಾವದ ಸವುರು ನೋಟಕ್ಕೆ ಇದಕ್ಕಿಂತ ಮುಗ್ಧ ಕೋಮಲವಾದ ರೂಪಕಗಳು ಎಲ್ಲಿ?

"ಬನ್ನದಿ ಬಳಲುವ ಕನ್ನಡ ಕುವರರ
ಅನ್ನವನೀಯುತ ಪೊರೆದಿಯೊ ನೀ
ಎನ್ನಯ ಭಕುತಿಯ 'ಮೊಗ್ಗೆಯ ಮಾಲೆ'ಯ
ನಿನ್ನಯ ಪಾದಕೆ ಅರ್ಪಿಸುವೆ||"

ಎಂದು 'ಮೊಗ್ಗೆಯ ಮಾಲೆ'ಯನ್ನು ಮಹಂತದೇವರು ಕುಮಾರಯೋಗಿಗೆ ಸಮರ್ಪಿಸಿದ್ದಾರೆ. ಉತ್ಕಟ ಶ್ರದ್ಧೆ, ಪ್ರಜ್ಞಾಪೂರ್ಣ ಭಕ್ತಿ, ಕವಿವಾಣಿಯ ಚಲುವಿನಲ್ಲಿ ಇವರು ಜಗದ್ಗುರು ಪೀಠಾರೋಹಣ ಪೂರ್ವದಲ್ಲಿ ಬರೆದ ಸಾಹಿತ್ಯ ಕೃತಿಗಳಲ್ಲಿ ಕೊನೆಯ ಹಂತದಲ್ಲಿ ಇದೂ ಒಂದು. ಕಾವ್ಯಾತ್ಮ ಚೇತನವೇ ಗಿಳಿಯಾಗಿ, ಜೀವಾತ್ಮ ಚೇತನದ ಹೂದೋಟದಲ್ಲಿ, ಮೊಗ್ಗಿನಿಂದ ಮೊಗ್ಗೆಗೆ ಹಿಗ್ಗಿನಿಂದ ಹಾರಿದೆ ಕವಿಮನ ಇಲ್ಲಿ. ಇವರ "ಪೂಮಾಲೆ"ಗೆ ಪೂರ್ವ ರಂಗವಾಗಿ "ಮೊಗ್ಗೆಯ ಮಾಲೆ" ಮೂಡಿಬಂದಿದೆ. ಪುಟ್ಟ ಕವಿತೆಗಳ ಹೂಬುಟ್ಟಿಯ ಮೊಗ್ಗುಗಳು ಭವಿಷ್ಯದ ಭಾವ ಪ್ರಕಾಶಕ್ಕೆ ನಾಂದಿಯಾಗಿವೆ:

"ಬೆಂದ ಜನಗಳಿಗೆಲ್ಲ ಮುತ್ತಿನಂತಹ ವಚನ
ಅಂದದಿಂದಲಿ ಪೇಳ್ದ ಸತ್ಯಶರಣರ ಬೀಡು
ಚಂದ್ರಶೇಖರನನ್ನು ಬೇಗನೊಲಿಸುವ ನಾಡು
ಕಂದ "ಮಹಂತ"ನು ಬರೆದ ಭಕುತಿಯಿಂದೀ ಪಾಡು"

ಕಂದ ಮಹಂತನ ಹಾರೈಕೆ ಹಿರಿದಾಗಿದೆ. "ಬೆಂದ ಜನಗಳಿಗೆಲ್ಲ ಮುತ್ತಿನಂತಹ ವಚನ" ನೀಡಲು ಲವಲವಿಸಿದೆ:

"ನೆಲದ ಮರೆಯ ಹೇಮದಂತೆ
ಫಲದ ಮರೆಯ ರುಚಿಯಂತೆ
ತಿಲದ ಮರೆಯ ತೈಲದಂತೆ
ಜಲದ ಮರೆಯ ಅನಲದಂತೆ"

ಈ ಕಂದನ ಕವಿತಾ ಪೊಸಲು ಗುಪ್ತವಾದರೂ ಸುಪ್ತವಾಗಿಲ್ಲ; ಶೀತಲವಾದರೂ ಶೈತ್ಯವಾಗಿಲ್ಲ; ಸದಾ ಆಸ್ಫೋಟಿಸುವಿಕೆಯೇ ಮೂಲ ಲಕ್ಷಣವಾಗಿದೆ. "ಒಂದು ಗಿಳಿ", "ಶರಣರ ತೋಟ", "ಪ್ರಾರ್ಥನೆ", "ಕುಮಾರನ ಕರೆ", "ಗುರುವಂದನಂ", "ಕರುನಾಡ ಗೀತೆ", "ಕಣ್ಮರೆಯಾದ ಯತಿ ತಿಲಕ", "ಕವಿರತ್ನ", "ಆಶೀರ್ವದಿಸು", "ಮೊಗ್ಗೆಯ ಬೇಡಿಕೆ" ಮುಂತಾದ ಗೀತೆಗಳಲ್ಲಿ ಈ ಮಗುಭಾವ, ಶಿವಾನುಭವದ ಶೈಶವ ದಾಹ ಉನ್ಮೀಲಿತವಾಗಿವೆ. "ಮೊಗ್ಗೆಯ ಮಾಲೆಯಲ್ಲಿ ಹಳಗನ್ನಡ ಶೈಲಿಯಿದೆ, ನವೀನ ಛಂದವಿದೆ, ಶಿಥಿಲವಲ್ಲದ ಬಂಧವಿದೆ. ಪರಿಣತ ಪದಪುಂಜವಿದೆ, ಚಿತ್ರವನ್ನು ಆಕರ್ಷಿಸುವ ನಿರೂಪಣೆಯಿದೆ, ಹೃದಯಕ್ಕೆ ನಿರ್ಮಲತೆಯನ್ನು ತರುವ ಪ್ರಾಸಾದಿಕತೆ ಇದೆ. ಆ ಚಿದಾನಂದವನ್ನು ಚಿತ್ರೀಕರಿಸುವ ಚತುರತೆ ಮಾತಿಗೆ ಮೀರಿದುದಾಗಿದೆ. ಕವಿಯೇ ರಸಋಷಿಯಾಗಿ ಬಾಳುವನು; ಬದುಕುವನು ಕಾವ್ಯಮಯ ತಪವನ್ನಾಚರಿಸುತ್ತ ಎಂಬುದನ್ನು ಕಾಣಬೇಕಾದರೆ, ಕವಿಯ ಕಾವ್ಯ ಕಲ್ಪನೆಯನ್ನು ಕಂಡುಂಡು ಅನುಭವಿಸಬೇಕಾದರೆ ಈ ಕೃತಿಯನ್ನು ಓದಿ ನೋಡಿಯಾಗಬೇಕು. ಕಾವ್ಯದುದ್ದಕ್ಕೂ ಅನುಭಾವ ರಸಗಂಗೆಯಾಗಿ ಹರಿದಿದೆ....ಶಿವಯೋಗಮಂದಿರದ ಮಹಾಂತದೇವರು ಕನ್ನಡದ ಉತ್ತಮ ಸಾಹಿತಿ, ಉನ್ನತ ಕವಿ ಎನ್ನುವದಕ್ಕೆ ನಿದರ್ಶನ ಈ ಕೃತಿ."26

## "Yogiraj of Karnatak"

ಕಾಶಿಯಲ್ಲಿ ಮಹಾಂತದೇವರ ಸಂಸ್ಕೃತ ವ್ಯಾಸಂಗ ಮಾರ್ಗದಲ್ಲಿ ಇಂಗ್ಲೀಷ ಅಧ್ಯಯನ ಜಿಜ್ಞಾಸೆ ನಿಲ್ಲಲಿಲ್ಲ. ಇದ್ದಬಿದ್ದ ಶಕ್ತಿಯನ್ನೆಲ್ಲ ಸಂಗ್ರಹಿಸಿ ಇಂಟರ್ ಮೀಡಿಯೇಟ್‌ವರೆಗೆ ಓದಿದರು. ಅಷ್ಟರಲ್ಲಿ ಹುಬ್ಬಳ್ಳಿ ಜಗದ್ಗುರು ಪೀಠದ ಕರೆ ಬಂದುದರಿಂದ ಡಿಗ್ರಿಯ ಮರ್ಜಿಗಾಗಿ ಕಾಯದೆ ಕನ್ನಡ ನಾಡಿಗೆ ಬಂದರು. ಡಿಗ್ರಿ ದೊರೆಯದಿದ್ದರೂ ಅಧ್ಯಯನ ನಿಲ್ಲಲಿಲ್ಲ. ಕಾಶಿಯ ವಿದ್ಯಾರ್ಥಿ ದೆಶೆಯ ಕೊನೆಯ ಸಾಹಸ ಈ ಇಂಗ್ಲೀಷ ಚರಿತ್ರಲೇಖನ ಪುಸ್ತಕದ ರೂಪದಲ್ಲಿ ಮೂಡಿಬಂತು. ಇಂಗ್ಲೀಷಿನಲ್ಲಿ "ನಾನೂ ಬರೆಯುತ್ತೇನೆ" ಎಂಬ ಅವರ ಮನೀಷೆ ಮೂರ್ತಗೊಂಡಿತು. ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲೀಷ ಭಾಷೆಗಳಲ್ಲಿ ಲಘುಲೇಖನ–

---

26 ಚಿತ್ಪ್ರಭೆ: "ಮೊಗ್ಗೆಯ ಮಾಲೆ"; ಎ. ಎಸ್. ಹೂಗಾರ; ಪುಟ–275, 276

ಕವನ–ಕಿರುನಾಟಕಗಳನ್ನು ಬರೆದರು. ಅವುಗಳಲ್ಲಿ ಬಹುಪಾಲು ನಾಶವಾದವು. ಅಳಿದುಳಿದುಕೊಂಡು ಬಂದ "Yogiraj of Karnatak" ಎಂಬ ತೃಟಿತ ಮುದ್ರಿತ ಕಿರುಹೊತ್ತಿಗೆ ದೊರೆತಿದೆ. ಇದು ಚರಿತ್ರಾತ್ಮಕ ಲೇಖನವಾಗಿದ್ದು ಪುಸ್ತಿಕೆಯ ರೂಪ ಪಡೆದಿದೆ. ಹಾನಗಲ್ಲ ಕುಮಾರಸ್ವಾಮಿಗಳ ಜೀವನ ದರ್ಶನ ವನ್ನು ಹೊರನಾಡಿನ; ಮುಖ್ಯವಾಗಿ ಉತ್ತರ ಭಾರತದ ಆಂಗ್ಲ ಅಭ್ಯಾಸಿಗಳಿಗೆ ತಿಳಿಯ ಹೇಳುವ ತಿಳಿ ಭಾವನೆಯ ಯತ್ನದಲ್ಲಿ ಈ ಲೇಖನ ಬಂದಿದೆ. ಈ ಇಂಗ್ಲೀಷ ಗದ್ಯ ಲೇಖನದ ಗುಣ ವಿಮರ್ಶೆಯನ್ನಿಲ್ಲಿ ಕಾಣಬಹುದು:

□

# ಪೀಠಾರೋಹಣದಿಂದ ದ್ವಾದಶ ಪೀಠಾರೋಹಣಕ್ಕೆ

## ಪ್ರಯೋಗರಂಗವಾಗಿರುವ ಪೂರ್ವರಂಗ

"ವಿಜಯಮಹಾಂತ ಲಾವಣಿ", "ಮರುಳಸಿದ್ಧೇಶ್ವರ ನಾಮಾವಳಿ", "ಶಿವಬಸವೇಶ್ವರ ನಾಮಾವಳಿ", "ಪೂಮಾಲೆ", "ಪಥಿಕ", "ಅಪ್ಪಯ್ಯ ಸ್ವಾಮಿಗಳ ಚರಿತೆ", "ಮೊಗ್ಗೆಯ ಮಾಲೆ", "ಯೋಗಿರಾಜ ಆಫ್ ಕರ್ನಾಟಕ" (Yogiraj of Karnatak) ಇಷ್ಟಕ್ಕೆ "ಶ್ರೀ ಮೂಜಗಂ" ಸಾಹಿತ್ಯಾಧ್ಯಯನ ವೇದಿಕೆಯ ಪೂರ್ವರಂಗ ಪರಿಸಮಾಪ್ತಿಯಾದಂತೆ! ಈ ಪೂರ್ವರಂಗವು ಅವರ ಮುಂದಿನ ವಿಶಾಲ ಸಾಹಿತ್ಯ ರಚನೆಗಳಿಗೆ ಪ್ರಯೋಗರಂಗವಾಯಿತು. ಇಲ್ಲಿಯೇ ಅವರ ಕಾವ್ಯಾಸ್ತ್ರಗಳು ಹರಿತ ನುರಿತಗೊಂಡವು. ಗದ್ಯ-ಪದ್ಯಗಳ ಓಘಗಳು ನಿರ್ಮಿತ ವಾದವು. ಈ ಪೂರ್ವರಂಗವು ಮುಂದಿನ ಸಾಹಿತ್ಯಕ್ಕೆ ಕೇವಲ ಪ್ರಯೋಗರಂಗ ವಾಗದೇ; ತನ್ನತನದ ಪ್ರತ್ಯೇಕ ವೈಶಿಷ್ಟ್ಯತೆಯನ್ನೂ ಕಾಯ್ದುಕೊಂಡಿದೆ. ಈ ಮೊದಲ ಘಟ್ಟದ ಬೆಟ್ಟದಲ್ಲಿ ಬಾಲ ಕವಿಚೇತನ ಸ್ವತಂತ್ರ ಕೋಗಿಲೆಯಾಗಿ ಹಾರಿದೆ, ಹಾಡಿದೆ. ಇಲ್ಲಿ ದುಗುಡವಿಲ್ಲ, ದುಮ್ಮಾನವಿಲ್ಲ, ಆಧುನಿಕ ಜಗತ್ತಿನ ಸುಗ್ಗಾನೆಗ್ಗುಗಳು (Stress and Strain) ಇಲ್ಲ. ಇಲ್ಲಿ ಶಾಂತಿ ಸಹಜವಾಗಿದೆ; ಅಲ್ಲಿ ಶಾಂತಿ ಕಸರತ್ತಾಗಿದೆ. ಯಾವ ಜವಾಬ್ದಾರಿಗಳೂ ಇಲ್ಲದ ಈ ಮುಗ್ಧ ವಿದ್ಯಾರ್ಥಿ ಜೀವನದ ಹರಹು ಹಸನಾಗಿದೆ. ಭವಿಷ್ಯ ಜೀವನದ ಭಾರಿ ಜವಾ ಬ್ದಾರಿಗಳ ಸಾವಿರ-ಲಕ್ಷ ಚಿಂತೆಗಳ ಸಂತೆ ಇಲ್ಲಿಲ್ಲ. ಈ ದೃಷ್ಟಿಯಿಂದ ಪೂಜ್ಯ ಜಗದ್ಗುರುಗಳ ಸಾಹಿತ್ಯ ರಸವಾಹಿನಿಯ ಈ ಪೂರ್ವರಂಗವೂ ಪ್ರಯೋಗರಂಗ ವಾಗಿರುವದು ನಿಜವಾದರೂ; ಇದಕ್ಕೆ ತನ್ನತನದ ಧ್ವನಿಯಿದೆ, ತನ್ನತನದ ಹೊನಲಿದೆ.

## ತಾರು ಬಂತು!

ಜೀವನವೆಂದರೆ ಅನೇಕ ರಹಸ್ಯಗಳ ಕೂಟವಲ್ಲವೆ? ಕಾಲಗರ್ಭದಲ್ಲಿ ಯಾವ ಕಾಲಕ್ಕೆ ಏನು ಘಟಿಸುತ್ತದೆಯೋ ಆ ಕಾಲಪುರುಷನಿಗೇ ಗೊತ್ತು! ವಿಜಯಮಹಾಂತ ದೇವರು ಚಿತ್ತರಗಿ ಪೀಠದ ಮರಿದೇವರಾಗಿ ಕಾಶಿಯಲ್ಲಿ ಅಧ್ಯಯನ ಪೂರೈಸಿದರು. ಇತ್ತ ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠದ ಗುರುಸಿದ್ಧ ರಾಜ ಯೋಗೀಂದ್ರ ಮಹಾಸ್ವಾಮಿಗಳು ಅನೇಕ ವರ್ಷಗಳವರೆಗೆ ಅತ್ಯಂತ ಗುಪ್ತವಾಗಿ

ಆದರೆ ಅಷ್ಟೇ ದಕ್ಷತೆಯಿಂದ ಮಹಾಂತದೇವರ ಚಟುವಟಿಕೆಗಳ ಮೇಲೆ ಕಣ್ಣಿರಿಸಿದ್ದರು. ಕಾಶಿಗೆ ಕೆಲವು ನಿಕಟವರ್ತಿಗಳನ್ನೂ ಗುಪ್ತವಾಗಿ ಕಳಿಸಿ, ಅವರಿಂದ ವಿಜಯಮಹಾಂತದೇವರ ದೈನಂದಿನ ಜೀವನದ ಪಾವಿತ್ರ್ಯವನ್ನು ಪರೀಕ್ಷಿಸಿದ್ದರು! ಮಹಾಂತದೇವರ ಜ್ಞಾನಸಂಪತ್ತು, ಸಾಹಿತ್ಯಸಮೃದ್ಧಿ, ಕಾರ್ಯಕುಶಲತೆ, ಅಮಿತೋತ್ಸಾಹಗಳು ಪೂಜ್ಯ ಗುರುಸಿದ್ಧ ರಾಜಯೋಗೀಂದ್ರ ಜಗದ್ಗುರುಗಳ ಮೇಲೆ ಆಳವಾದ ಪ್ರಭಾವಮುದ್ರೆಯನ್ನು ಬೀರಿದ್ದವು. ಇಡೀ ಕರ್ನಾಟಕದ ತಳಬುಡ ಸೋಸಿ ನೋಡಿ ಕೊನೆಗೆ ವಿಜಯಮಹಾಂತದೇವರೇ ಯೋಗ್ಯ ವಟುಗಳೆಂಬ ನಿರ್ಣಯಕ್ಕೆ ಬಂದರು. ಆಗಲೇ ಅವರಿಗೆ ವೃದ್ಧಾಪ್ಯ, ದೇಹಾಲಸ್ಯ, ತಮ್ಮ ಅಂತ್ಯಯಾತ್ರೆಯ ಪೂರ್ವ ಸೂಚನೆ ಅವರಿಗೆ ತಿಳಿಯಿತೆಂದು ಕಾಣುತ್ತದೆ. ಇನ್ನು ತಮಗೆ ಸಮರ್ಥನಾದ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವದು ಅವರ ಮುಖ್ಯ ಕರ್ತವ್ಯವೇ ಆಯಿತು. ತಾವಿದ್ದಾಗಲೇ ಈ ಕಾರ್ಯ ಕೈಗೂಡತಕ್ಕದ್ದೆಂದು ನಿರ್ಣಯಿಸಿ ನೇರವಾಗಿ ಕಾಶಿಗೆ ತಾರು ಮಾಡಿದರು.

ಅತ್ತ ವಿಜಯಮಹಾಂತದೇವರು ತಾರು ಸ್ವೀಕರಿಸಿ; ಭಗವಂತನ ಮಹಾ ಸಂಕಲ್ಪದ ಗುಪ್ತ ಗೂಢ ರಹಸ್ಯಗಳನ್ನು ಪದರುಪದರಾಗಿ ಮನದ ಪದರಿನಲ್ಲಿ ಬಿಚ್ಚಿ ಬಿಡಿಸಿ ನೋಡುತ್ತ, ಹುಬ್ಬಳ್ಳಿಗೆ ಪ್ರಯಾಣಗೈದರು. ನೇರವಾಗಿ ಅಂದಿನ ಪ್ರಾಚೀನ ಮಠದ ಹಳೆಯ ಅಟ್ಟದ ಮೆಟ್ಟಿಲುಗಳನ್ನು ಸೌಮ್ಯವಾಗಿ ಶಿವನೆಂದು ಏರುತ್ತ ಪೂಜ್ಯ ಜಗದ್ಗುರುಗಳ ಕೊಠಡಿಗೆ ಬಂದರು. ಅಲ್ಲೆಲ್ಲಾ ಗಂಭೀರ ವಾತಾವರಣ, ಅಲ್ಲಿ ಆಗ ಮಹಾಂತದೇವರಿಗೂ ಗುರುಸಿದ್ಧ ರಾಜಯೋಗೀಂದ್ರ ಜಗದ್ಗುರುಗಳಿಗೂ ಏನು ಸಂಭಾಷಣೆ ನಡೆಯಿತೋ ಗೊತ್ತಿಲ್ಲ. ಆದರೆ ಆ ಸನ್ನಿವೇಶದ ಮಾತುಗಳನ್ನು ಹುನಗುಂದದ ಶ್ರೀ ಬಸವರಾಜ ತೆಗ್ಗಿನಮಠ ಅವರು ಪ್ರತ್ಯಕ್ಷ ಕಂಡಂತೆ ವರದಿ ಮಾಡಿದ್ದಾರೆ. ಅದನ್ನಿಲ್ಲಿ ನೋಡಬಹುದು:

"....ಜಗದ್ಗುರುಗಳವರು ಶಿವನ ಚಿಂತನೆಯಲ್ಲಿ ತೊಡಗಿದ್ದರು. ಈ ಜಗದ ಜಂಜಡದಿಂದ ದೂರ ಸರಿದು ಲಿಂಗಮಧ್ಯ ಲೀನವಾಗುವ ಕಾಲ ಕೂಡಿಬರುವ ನೆನಕೆಯಲ್ಲಿಯೇ ನರಳುತ್ತಿದ್ದರು. 'ಮಹಾಂತದೇವರು ಬಂದರು' ಅಂದಾಗ ಎದ್ದು ಕುಳಿತು, ತಮ್ಮ ಸಮೀಪ ಅವರನ್ನು ಕೂಡ್ರಿಸಿಕೊಂಡು ಕಣ್ತುಂಬಾ ನೋಡಿ,

'ಬಂದಿರಾ....ಮಹಾಂತದೇವರೆ?'

'ಏನಪ್ಪಣೆ?'

'ಮಹಾಂತದೇವರೆ, ನನಗೊಂದು ವಚನ ಕೊಡುವಿರಾ?'

'ಹಿರಿಯರಿಗೆ ನಾನು ಪ್ರತಿ ನುಡಿಯಬಹುದೆ?'

'ಹಾಗೇನಿಲಾ '

'ಹಾಗಾದರೆ ತಮ್ಮ ಅಪ್ಪಣೆಯಾಗಬೇಕು'

'ನೀವು ನಮ್ಮ ಜಗದ್ಗುರು ಪೀಠದ ಉತ್ತರಾಧಿಕಾರಿಗಳಾಗಬೇಕು' ಎಂದು ಜಗದ್ಗುರುಗಳು ನುಡಿದಾಗ ಮಹಾಂತದೇವರು ತಬ್ಬಿಬ್ಬಾದರು. ಆಗ ಮತ್ತೆ ಜಗದ್ಗುರುಗಳು,

'ಏಕೆ ಮಹಾಂತ ಮರಿದೇವರೆ?'

'ಪೂಜ್ಯರೆ, ನಾನು ಚಿತ್ತರಗಿಯ ಪೀಠದ ಮರಿದೇವರು....ಭಕ್ತರು ಪ್ರೀತಿ ವಿಶ್ವಾಸದಿಂದ ತಮ್ಮ ಪ್ರಾಣಕ್ಕಿಂತಲೂ ಪ್ರಿಯವಾಗಿ ಕಂಡು, ಇಂದು ನಾಳೆ ಬರುವ ರೆಂದು ಕಾಯುವಾಗ ನಾನವರಿಗೆ ಏನು ಹೇಳಬೇಕು?'

ಎಂದು ಕಣ್ಣಲ್ಲಿ ನೀರೂರಿದಾಗ, ಜಗದ್ಗುರುಗಳು

'ಇಲ್ಲಿ, ನಿಮ್ಮ ಅಗತ್ಯವಿದೆ, ಇದೂ ವೀರಶೈವರಿಗೆಲ್ಲಾ ಮಧ್ಯವರ್ತಿಯ ಜಗದ್ಗುರು ಪೀಠ, ಈ ಸಂದರ್ಭದಲ್ಲಿ ಭಾರ ಹೊರಲೇಬೇಕು.'"[1]

ಎಂದು ಹೇಳಿ; ಜಗದ್ಗುರುಗಳ ಅಪ್ಪಣೆಪಡೆದು, ಅವರ ಪಾದಕ್ಕೆ ಪ್ರಣಾಮು ಸಲ್ಲಿಸಿ ಇಲಕಲ್ಲಿನ ಗಾಡಿ ಹತ್ತಿದರು. ಇಲಕಲ್ಲ-ಹುನಗುಂದ-ಚಿತ್ತರಗಿಯ ಸಮಸ್ತ ಸದ್ಭಕ್ತರನ್ನು ಕಂಡು ನಡೆದ ಸನ್ನಿವೇಶವನ್ನು ಇದ್ದಂತೆ ತಿಳಿಸಿಬಿಟ್ಟರು....

## ಕಣ್ಣೀರ ಕಾವಲಿ: ಪೈಪೋಟಿ: ಪ್ರತಿಭಟನೆ

ಮಹಾಂತದೇವರು ಊಹಿಸಿದ್ದಕ್ಕಿಂತಲೂ ನೂರುಪಟ್ಟು ಪ್ರತಿಭಟನೆ ಬಂತು! ವಿಜಯಮಹಾಂತೇಶ್ವರ ಮಠಕ್ಕೆ ಸಸಿವಾಳದ ವಿಜಯಮಹಾಂತ ಮಹಾತಪಸ್ವಿಗಳ ವಂಶಸ್ಥರ ಮನೆಯಿಂದಲೇ ದಿವ್ಯ ತೇಜೋಮೂರ್ತಿ ವಟು ದೊರೆತನೆಂದು ಸಂತೃಪ್ತಿಯಿಂದ ಇದ್ದ ಈ ಭಾಗದ ಜನಕ್ಕೆ; ಕೈಯಲ್ಲಿಯ ಕಜ್ಜೂರ ಕಸಿದು ಕೊಂಡಂತಾಯಿತು!! ಅಲ್ಲದೆ ಮಹಾಂತದೇವರು ಕಾಶಿಯಲ್ಲಿ ಇರುವಾಗಲೇ ಈ ಸಮಸ್ತ ಭಕ್ತರೊಂದಿಗೆ ಆತ್ಮೀಯವಾಗಿ ಒಡನಾಡಿ, ಮಾತನಾಡಿ, ಶಿವಬಲ್ ದೊಡ್ಡಪ್ಪನವರು, ಮಹಾಂತಪ್ಪನವರು, ಸೂಡಿ ಚೋಳಪ್ಪನವರು, ಹಿರೇಮಠ ಮಹಾಂತಯ್ಯನವರು, ಗವಿಸಿದ್ಧಪ್ಪ ಪಟ್ಟಣಶೆಟ್ಟರು, ಕೊಡಗಲಿ ಶಿವಪ್ಪನವರು, ವೀರಪ್ಪನವರು ಗೋನಾಳ, ಕಲ್ಲಯ್ಯನಮಠ, ಕಂಪ್ಲಿ ಜಡಿಯಪ್ಪನವರು, ವೀರನಗೌಡರು, ಅಕ್ಕಿ ಶಿವಪ್ಪನವರು, ಅಕ್ಕಿ ವೀರಪ್ಪನವರು, ತಾಳಿಕೋಟಿ ಕರಬಸಪ್ಪನವರು, ಗೊಂಗಡಶೆಟ್ಟಿ ಮಹಾಂತಪ್ಪನವರು, ಕವಿಶೆಟ್ಟಿಯವರು, ವಾಲಿಯವರು, ಹರಿಹರದವರು ಮುಂತಾದ ಸಹಸ್ರಾರು ಭಕ್ತರು, ಸಕಲ ಜಾತಿಮತ ದವರು ತುಬಾ ದುಃಖಿತರಾದರು. ಸೂಡಿ ಲಿಂಗಮ್ಮನವರು ಅತ್ತುಬಿಟ್ಟರು. ಅನೇಕ

---

1 ಚಿತ್ರಭೆ: ಪುಟ–160, 161

ತಾಯಂದಿರು ಕಣ್ಣೀರ ಹೊಳೆ ಹರಿಸಿದರು. ಹುನಗುಂದದಲ್ಲೂ ಇದೇ ಗತಿ. ಚಿತ್ತರಗಿಯಲ್ಲೂ ಬಸರೆಡ್ಡಿ, ಮದ್ದಾನಿಮಠ, ಕಾಮಾ ಮುಂತಾದವರು ದುಃಖ ತಪ್ತರಾದರು. ಚಿತ್ತರಗಿ ಪಾರ್ವತೆಮ್ಮನವರು ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದರು. ಹೀಗೇ ಇಡೀ ಊರೇ ದುಃಖಸಾಗರದಲ್ಲಿ ಮುಳುಗಿಸಿತು. ಚಿತ್ತರಗಿ ಪೀಠದ ಮಠಗಳು ವಿಜಾಪುರ, ರಾಯಚೂರ ಜಿಲ್ಲೆಗಳ ೫೫ ಊರುಗಳಲ್ಲಿ ನೆಲಸಿದ್ದು; ಆ ಭಕ್ತರೆಲ್ಲರೂ ಇಲಕಲ್ಲಿಗೆ ಧಾವಿಸಿ ಬಂದರು. ಇದು ಚಿತ್ತರಗಿ ಪೀಠವಾದರೂ ಪ್ರಧಾನ ಕಛೇರಿ (ಹೆಡ್ ಆಫೀಸ) ಇರುವದು ಇಲಕಲ್ಲಿನಲ್ಲಿ. ಒಟ್ಟು ೧೪೦೦ ಎಕರೆ ಮಠದ ಜಮೀನು. ಅಸಂಖ್ಯ ಭಕ್ತರು. ಈ ಮಹಾಸ್ತೋಮದಲ್ಲಿ ದೊಡ್ಡ ಗದ್ದಲವೇ ಎದ್ದಿತು. "ಛೇ....ಛೇ....ನಮ್ಮ ಮಠದ ಸ್ವಾಮಿಗಳನ್ನು ನಾವು ಬಿಟ್ಟುಕೊಡಲು ಖಂಡಿತಾ ಸಿದ್ಧರಿಲ್ಲ. ಕಷ್ಟಪಟ್ಟು ಕಲಿಸಿದ್ದೇವೆ. ಈ ಮಠದ ಖರ್ಚು ವೆಚ್ಚದಿಂದಲೇ ಕಾಶಿಯತನಕ ವೆಚ್ಚ ನೀಡಿದ್ದೇವೆ. ಈಗ ಸಿದ್ಧವಾದ ಹಣ್ಣನ್ನು ಹರಿಯುತ್ತೇನೆಂದರೆ ನಾವೇಕೆ ಕೇಳಬೇಕು?" ಮತ್ತೆ ಕೆಲವರು ಹೀಗೂ ವಾದಿಸಿದರು–"ನಮ್ಮ ಮಠದ ಮರಿದೇವರಿಗೆ ಜಗದ್ಗುರು ಜಾಗೆಗೆ ಬಡ್ತಿ ಸಿಕ್ಕಿದೆಯೆಂದಮೇಲೆ ನಾವೇಕೆ ತ್ಯಾಗಮಾಡಬಾರದು?"

ಇವರ ನ್ಯಾಯಮಂಡಲಿ ಹುಬ್ಬಳ್ಳಿಗೂ ಹೋಯ್ತು. ಅದೊಂದು ಆತ್ಮೀಯ ಮಂಡಲಿ ಮಾತ್ರ! ಈ ಗುಂಪಿನಲ್ಲಿ ಹಿರೇಮಠ ಮಹಾಂತಯ್ಯನವರೂ ಇದ್ದರು. ಅವರು ಹುಬ್ಬಳ್ಳಿಯಲ್ಲಿ ಗುರುಸಿದ್ಧರಾಜಯೋಗೀಂದ್ರರನ್ನು ಭೆಟ್ಟಿ ಆದಾಗ ಗುರುಸಿದ್ಧರಾಜಯೋಗೀಂದ್ರರು ಮುತ್ಸದ್ದಿತನದಿಂದ ಒಂದು ಪ್ರಶ್ನೆ ಇಲಕಲ್ಲ ಭಕ್ತರಿಗೆ ಮಾಡಿದರಂತೆ:

"ಏನ್ರಪಾ....ನಿಮ್ಮ ಮಠದ ಮರಿ ಮಹಾಂತದೇವರನ್ನು ನಮ್ಮ ಮಠಕ್ಕೆ ದಾನವಾಗಿ ಕೊಡ್ತೀರಾ?"

"ಅದು ಹೇಗೆ ಸಾಧ್ಯ ಬುದ್ಧಿ....ಛೇ....ಛೇ....ನಮ್ಮ ಮಠದ ಪ್ರೀತಿಯ ಮರಿದೇವರು. ನಾವೇ ಕಲಿಸಿದ್ದೇವೆ. ನಮಗೆ ಬಿಟ್ಟುಕೊಡಲು ಮನಸ್ಸಿಲ್ಲಾ ಬುದ್ಧಿ."

ಜಗದ್ಗುರುಗಳು ಆಗ ಜಾಣತನದ ಪ್ರಶ್ನೆ ಒಗೆದರು–

"ಏನ್ರಪಾ....ನಿಮ್ಮ ಚಿತ್ತರಗಿ ಮಠಕ್ಕೆ ಎಷ್ಟು ಶಾಖಾಮಠಗಳು?"

"ಒಟ್ಟು ಐವತ್ತೈದು ಶಾಖಾಮಠಾ ಅದಾವ್ರಿ ಬುದ್ಧಿ."

"ಹಾಂಗಿದ್ರ....ನಮ್ಮ ಮೂರುಸಾವಿರಮಠವೂ ಒಂದು ನಿಮ್ಮ ಮಠ ಅಂತ ತಿಳಕೊಂಡು ಕೊಟ್ಟುಬಿಡ್ರೆಪಾ ನಿಮ್ಮ ಮರೀನ."

ಎಲ್ಲರ ಮಾತು ನಿಂತೇ ಹೋಯಿತು! ಜಗದ್ಗುರುಗಳು ಬಿಟ್ಟ ಬ್ರಹ್ಮಾಸ್ತ್ರಕ್ಕೆ ಇಲಕಲ್ಲಿನ ಮುಗ್ಧ ಹಿರಿಯರು ಕೈಮುಗಿದುಬಿಟ್ಟರು. ಮಹಾತಪಸ್ವಿ ವಿಜಯ ಮಹಾಂತೇಶ ಮಹಾಯೋಗಿ ಗುರುಸಿದ್ಧ ರಾಜಯೋಗಿಗೆ ತನ್ನ ಉಡಿಯ ಅಮೂಲ್ಯ ರತ್ನವೊಂದನ್ನು ದಾನವಾಗಿ ಕೊಟ್ಟುಬಿಟ್ಟ.

ಇಲಕಲ್ಲ–ಹುನಗುಂದ–ಚಿತ್ತರಗಿಯಲ್ಲಿ ಪ್ರೀತಿಯ ಕಂಬನಿ ಹರಿಯಿತು. ಅತ್ತ ಹುಬ್ಬಳ್ಳಿ ನಲಿನಲಿದಾಡಿತು.

ಗದಗ, ಚಿತ್ರದುರ್ಗ, ಇಲಕಲ್ಲ, ಚಿತ್ತರಗಿ, ನಾಗನೂರು, ಹಾನಗಲ್ಲ, ಹುಬ್ಬಳ್ಳಿ, ಕಲಬುರ್ಗಿ, ನವಲಗುಂದ, ನಿಡುಮಾಮಿಡಿ, ಜಡ, ಧಾರವಾಡ, ಹಾವೇರಿ, ಚಿಂಚಣಿ, ನಿಡಸೂಸಿ, ಚಿಕ್ಕೋಡಿ, ಮುರಗೋಡ, ತೆಲಸಂಗ, ಅರಭಾವಿ, ಗೊಗ್ಗಿಹಳ್ಳಿ, ಕುಷ್ಟಗಿ, ಬಾಲೇಹೊಸೂರು, ಮುಂಡರಗಿ, ಅನಂತಪುರ, ತಾಳಗುಪ್ಪಾ, ಶಿರ್ಶಿ ಮುಂತಾದ ನೂರಾರು ಪೂಜ್ಯ ಮಹಾಸ್ವಾಮಿಗಳು ಸಮ್ಮತಿಸಿ ಆನಂದಪಟ್ಟರು. ಅಲ್ಲದೆ ಹುಬ್ಬಳ್ಳಿಯ ನೀಲಿ, ವಾಲ, ಬೆಂಡಿಗೇರಿ, ಮೆಣಸಿನಕಾಯಿ, ಜಾಬಿನ, ಪಟ್ಟಣಶೆಟ್ಟಿ, ಚಿಕ್ಕವೀರಮಠ, ಚಿಕ್ಕಮಠ, ದಂಡಿನ, ಹಿರೇಪೇಟೆ ಶೆಟ್ಟರು, ಗಂಟಿಕೇರಿ, ಬಡಿಗೇರ ಓಣಿ, ವೀರಾಪುರ ಓಣಿ ಮುಖಂಡರು, ಟೆಂಗಿನಕಾಯಿ, ಮಿರ್ಜಿ, ಕರವೀರಶೆಟ್ರು, ಅಳಗುಂಡಗಿ, ಕಮಡೊಳ್ಳಿ ಶೆಟ್ಟರು, ಕೆಂಪಣ್ಣನವರು, ಬತ್ತಲಿ, ಅಳಗುಡಗಿ, ಕವಳಿ, ಭೂಸದ, ಮಾನ್ವಿ, ಲಕ್ಷ್ಮೇಶ್ವರ, ಸಿಂದಗಿ, ಹೊಂಬಳ, ಬುಳ್ಳಾ, ನರೇಂದ್ರಮಠ, ಹನ್ನೆರಡುಮಠ, ಹಂದಿಗೋಳಮಠ, ಕಮ್ಮಾರ, ಬಮ್ಮಾಪೂರ ಗೌಡ್ರು, ಪಂಚಾಂಗಮಠ, ಕುಂದನಹಳ್ಳಿ, ಬಾಳಣ್ಣವರ, ಕಿನ್ನಾಳ, ಎಮ್ಮೆಟ್ಟಿ ಹಿರೇಮಠ, ಹೂಲಿ, ಗಣೇಶಪೇಟೆ ಶೆಟ್ಟರು, ಪಿ. ಆಯ್. ಹಿರೇಮಠ ವಕೀಲರು, ಹಳೇಹುಬ್ಬಳ್ಳಿ ಪಾಟೀಲ, ಗೋಕುಲ ಹಿರೇಮಠ, ನಾರಣಜಿ ಕಾನಜಿ, ಧಾರವಾಡ ಸಿ. ಬಿ. ಪಾಟೀಲ ವಕೀಲರು, ಶಿ. ಶಿ. ಬಸವನಾಳ, ಕುಲಪತಿ ಡಾ|| ಡಿ. ಸಿ. ಪಾವಟೆ, ಅಂದಿನ ಧಾರವಾಡ ಜಿಲ್ಲೆ ಕಮಿಶನರರು ಮುಂತಾದ ಸಹಸ್ರಾರು ಭಕ್ತರು ಸಮ್ಮತಿಸಿದರು. ಇದಲ್ಲದೆ ಹಬೀಬ, ಜರತಾರಘರ, ಮೆಹರವಾಡೆ, ಸೋಳಂಕಿ, ಬದ್ದಿ, ಕಾಟವೆ, ಜಾಧವ, ಬಿ. ಎ. ದೇಸಾಯಿ, ಪವಾರ, ಪೂಜಾರ, ಮೇತ್ರಾಣಿ, ಘೋಡಕೆ, ಪೋಳ, ದೇಶಪಾಂಡೆ, ಮರಾಠಾ ಸಮಾಜದ ಮುಖಂಡರು, ಮುಸ್ಲಿಂ ಸಮಾಜದ ಪ್ರಮುಖರು, ಎಲ್ಲ ಧರ್ಮದ ಸದಸ್ಯರು ಸಹಕರಿಸಿದರು. ಇಷ್ಟೇ ಅಲ್ಲದೆ ಮೆಥಾಯಿಸ್, ಭಸ್ಮೆ, ಉಳ್ಳಾಗಡ್ಡಿಮಠ, ರಾಮಣ್ಣ ಕುಲಕರ್ಣಿ, ಪುರೋಹಿತ, ಸವಣೂರ, ಕೊರವಿ, ಮಂಟೂರ ಶೆಟ್ಟರು, ಕಬಾಡಿ ಡಾಕ್ಟರು, ತೆಗ್ಗಿನಮನಿ, ಹಳೇಮನಿ, ವಾಣೆಕಾರ,

ಬಳ್ಳೊಳ್ಳಿ, ಎಂ. ಆರ್. ಶೆಟ್ಟರು, ಮೋಹಸೀನ, ವನಹಳ್ಳಿಮಠ, ಕಲಾಲ, ಹನಸಿ, ಏಕಲಾಸಪುರ, ಸಾಲಿಮಠ, ಸಾದರಹಳ್ಳಿ, ಭೂಸನೂರು, ಲಿಗಾಡೆ, ಹರ್ತಿ, ಕುಬಸದ, ಹಳೆಹುಬ್ಬಳ್ಳಿ ಕೆಂಚನಗೌಡರು, ಉಣಕಲ್ ಚನ್ನಪ್ಪಗೌಡರು, ಕಂಬಳಿ, ವಂಗಿ, ಕೌಸಾಳಿ, ಬುಳಗಣ್ಣವರ, ಇಂಡಿ, ತಂಬದ, ಪುರಾಣಿಕಮಠ, ಕೋಟಿ, ಲೂತಿಮಠ, ಕೊಟ್ಟೂರಶೆಟ್ರು, ಬಿ. ಬಿ. ಶೆಟ್ಟರು, ಭೋಗಾನವರ, ಕೊಣ್ಣೂರ, ನಾಂದಗೇರಿಕರ, ಸಾಂಗೋಲಿ, ಪಲಟಣಕರ, ಶಿವಕ್ಕ ಉಣಕಲ್, ಆರಳಿಕಟ್ಟಿ ಗೌಡರು, ಮಾಗಡಿ, ಇರಪಣ್ಣವರ, ಬಿಳೇಅಂಗಡಿ, ಪಾವಟೆ, ಈಚಗೇರಿ, ಬೆಂಬಳಿಗಿ, ಇಜಾರಿ, ರೋಖಡೆ, ಲೇಂಗಡೆ, ಇನಾಮತಿ ಬೇವೂರ, ಕಲ್ಲಯ್ಯನಮಠ, ವಾಳದ, ಬೆಲ್ಲದ, ಬದ್ದಿ ಮುಂತಾದ ನೂರಾರು ಸುಪ್ರಸಿದ್ಧ ಅಭಿಮಾನಿ ಭಕ್ತರೂ, ಇನ್ನೂ ಅನೇಕಾನೇಕ ಮಠದ ಹಿತೈಷಿಗಳೂ ಈ ಆಯ್ಕೆಯನ್ನು ಸಮರ್ಥಿಸಿದರು.

ಹುಬ್ಬಳ್ಳಿ ಜಗದ್ಗುರು ಪೀಠಕ್ಕೆ ವಿಜಯಮಹಾಂತದೇವರನ್ನು ಆಯ್ಕೆ ಮಾಡಿದ ಬಗ್ಗೆ "ಸಂಯುಕ್ತ ಕರ್ನಾಟಕ" ಪತ್ರಿಕೆ ದಿ. ೧–೩–೧೯೩೮ರ ಸಂಚಿಕೆಯಲ್ಲಿ ಈ ರೀತಿ ಅಭಿಪ್ರಾಯ ವ್ಯಕ್ತಮಾಡಿತು:

"ಇಂಥ ಯೋಗ್ಯತಾ ಸಂಪನ್ನರು ಮಠದ ಪೀಠವನ್ನು ಅಲಂಕರಿಸುವಂತೆ, ಲಿಂಗೈಕ್ಯ ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಇವರನ್ನು ಭಾವೀ ಜಗದ್ಗುರುಗಳೆಂದು ಯೋಜನೆ ಮಾಡಿ, ಭಕ್ತರ ಮೇಲೆ ಉಪಕಾರ ಮಾಡಿರುವರು. ಲಿಂಗೈಕ್ಯ ಗುರುಗಳ ಪ್ರೀತಿ–ವಿಶ್ವಾಸಗಳನ್ನು ಗಳಿಸಿ ದಂತೆಯೇ ಭಕ್ತರ ಪ್ರೀತಿ–ವಿಶ್ವಾಸಗಳನ್ನು ಶ್ರೀಗಳು ಗಳಿಸಿರುವರು."

## ಮಹಾ ಪಟ್ಟಾಭಿಷೇಕ

ಚಿತ್ತರಗಿ ಪೀಠದ ಭಕ್ತರ ಒಲವಿನ ಒಪ್ಪಿಗೆ ದೊರೆಯಿತು. ೨–೧೧–೧೯೩೭ ರಂದು ಹುಬ್ಬಳ್ಳಿ ಮೂರುಸಾವಿರಮಠದ ಅಭಿಮಾನಿ ಭಕ್ತರ ಸಮ್ಮುಖದಲ್ಲಿ ವಿಜಯಮಹಾಂತದೇವರು ಮೂರುಸಾವಿರಮಠದ ಭಾವೀ ಜಗದ್ಗುರುಗಳಾಗಿ ನಿಯೋಜಿತರಾದರು. ಆಶ್ಚರ್ಯವೆಂದರೆ ೨–೧೧–೧೯೩೭ ರಿಂದ ಕೇವಲ ೧೦೮ ನೆಯ ದಿನಕ್ಕೆ (೩॥ ತಿಂಗಳಿಗೆ) ದಿ. ೧೭–೨–೧೯೩೮ ರಂದು ಮಹಾಶಿವರಾತ್ರಿಯ ಮಹಾಶಿವಯೋಗದ ದಿನದಂದೇ ಪೂಜ್ಯ ಗುರುಗಳಾದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರು ಶರೀರ ಬಿಟ್ಟರು! ಅವರ ಅಂತಿಮ ಶರೀರವನ್ನು ಹುಬ್ಬಳ್ಳಿ ಯಲ್ಲಿ ತೇರು ಕಟ್ಟಿ ವೈಭವದಿಂದ ಮೆರೆಸಲಾಯಿತು. ಲಕ್ಷಾಂತರ ಜನಸಮೂಹ ಹುಬ್ಬಳ್ಳಿಗೆ ಧಾವಿಸಿಬಂದರು. ಗುರುಸಿದ್ಧ ರಾಜಯೋಗೀಂದ್ರರು ತುಂಬಾ ಕುಶಾಗ್ರಮತಿಗಳಾದ ಬುದ್ಧಿವಂತರೆಂದು ಪ್ರಖ್ಯಾತರಾಗಿದ್ದರು. ಅಲ್ಲದೆ ಶಿಕ್ಷಣ

ಸಂಸ್ಥೆಗಳಿಗೆ ಇವರು ನೀಡಿದ ಬಿಚ್ಚುಮನಸ್ಸಿನ ದಾನಗಳಿಂದಲೇ ಅನೇಕ ವಿದ್ಯಾ ಸಂಸ್ಥೆಗಳು ಮೇಲೆದ್ದು ಬಂದವು. ಹುಬ್ಬಳ್ಳಿ ಬೆಳೆದು ಬೆಳಗಲು ಕಾರಣವಾಯ್ತು.

ಜ. ಗುರುಸಿದ್ಧ ರಾಜಯೋಗೀಂದ್ರರು ಲಿಂಗೈಕ್ಯರಾಗಿ ಸರಿಯಾಗಿ ೭೨ ದಿನಗಳಿಗೆ (೨॥ ತಿಂಗಳುಗಳಿಗೆ) ಪೂಜ್ಯ ಶ್ರೀ ಚಿತ್ತರಗಿ ವಿಜಯಮಹಾಂತದೇವರಿಗೆ "ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ"ರೆಂಬ ನೂತನ ನಾಮದಲ್ಲಿ ಶ್ರೀ ಜಗದ್ಗುರು ಮೂರುಸಾವಿರಮಠಕ್ಕೆ ಸಮಸ್ತ ಭಕ್ತರ ಸರ್ವಾನುಮತದ ಒಪ್ಪಿಗೆಯ ಮೇರೆಗೆ; ವಿಲಂಬ ಸಂವತ್ಸರ ಶಾಲಿವಾಹನ ಶಕೆ ೧೮೮೦ ವೈಶಾಖ ಶುದ್ಧ ೧೩ ಗುರುವಾರ; ಅಂದರೆ ಕ್ರಿಸ್ತಶಕ ೧೯೫೮ ಮೇ ೧ ರಂದು ನಿರಾಭಾರ ಜಗದ್ಗುರು ಪಟ್ಟಾಭಿಷೇಕೋತ್ಸವವನ್ನು ಪ್ರಚಂಡ ವೈಭವದಲ್ಲಿ ಏರ್ಪಡಿಸಲಾಯಿತು. ಈ ಮಹಾಮಹೋತ್ಸವಕ್ಕೆ ಸಹಸ್ರಾರು ಜನ ಸ್ವಾಮಿಗಳು-ಶಾಸ್ತ್ರಿಗಳು–ಪಂಡಿತರು–ಕವಿ–ಗಮಕಿ–ವಾದಿ-ವಾಗ್ಮಿಗಳು–ಉಪನ್ಯಾಸಕರು–ಕೀರ್ತನ ಕಾರರು–ಅಸಂಖ್ಯಾತ ಭಕ್ತಸಂದೋಹ ಆಗಮಿಸಿತ್ತು. ಇದೊಂದು ಅವರ್ಣ ನೀಯವಾದ ಮಹಾಸಮಾರಂಭ. ಇಡೀ ಹುಬ್ಬಳ್ಳಿ ಮಹಾನಗರವೇ ತಳಿರು ತೋರಣಗಳಿಂದ ಶೃಂಗರಿತವಾಗಿತ್ತು. ಲಕ್ಷಾಂತರ ಭಕ್ತರಿಗೆ ಅನ್ನದಾಸೋಹದ ಏರ್ಪಾಟಾಗಿತ್ತು. ಪೀಠಾರೋಹಣೋತ್ಸವದ ಮರುದಿವಸ ಹುಬ್ಬಳ್ಳಿ ಮಹಾ ನಗರದಲ್ಲಿ ವೈಭವದ ಅಡ್ಡಪಲ್ಲಕ್ಕಿ ಉತ್ಸವವು ನೆರವೇರಿತು. ಆ ದಿನ ಇಡೀ ಪಟ್ಟಣದ ಪ್ರತಿಯೊಂದು ಓಣಿಯನ್ನೂ ಬಣ್ಣಬಣ್ಣದ ರಂಗೋಲಿ, ಸ್ವಾಗತ ಕಮಾನುಗಳು, ಮಾವಿನ ತಳಿರು, ಗೊನೆಸಹಿತ ಬಾಳೆಮರಗಳು, ಹೂಮಾಲೆಗಳ ಸಾರಸಂಭ್ರಮದಲ್ಲಿ ಅಲಂಕರಿಸಲಾಗಿತ್ತು. ಪೂಜ್ಯ ಜಗದ್ಗುರುಗಳು ಅಡ್ಡಪಲ್ಲಕ್ಕಿ ಏರಲು ಸರ್ವಥಾ ಒಲ್ಲೆನೆಂದು ಹಠತೊಟ್ಟರು. ಆದರೆ ಭಕ್ತರ ಒತ್ತಾಯ ಹೆಚ್ಚಾ ಯಿತು. ಅವರ ಪ್ರೀತಿಯ ಒತ್ತಾಯಕ್ಕೆ ಮನವಿಲ್ಲದೆ ಮಣಿದ ಜಗದ್ಗುರುಗಳು– "ಆಯ್ತು....ನಾವು ಅಡ್ಡಪಾಲಕಿ ಏರುವದು ಇದೊಂದೇ ಬಾರಿ. ಮುಂದೆ ಎಂದೂ ನೀವು ನಮ್ಮ ಮೇಲೆ ಈ ಒತ್ತಾಯ ತರಕೂಡದು" ಎಂದು ಕರಾರು ಹಾಕಿದರು. ನಿರಂತರ ೧೨ ತಾಸುಗಳ ಅಡ್ಡಪಾಲಕಿ ಉತ್ಸವ ನೂರಾರು ಜಾನಪದ ವಾದ್ಯ ಗಳಿಂದ, ಆಧುನಿಕ ವಾದ್ಯಗಳಿಂದ, ಹನ್ನೊಂದು ಆನೆಗಳ ಶೃಂಗಾರದಿಂದ, ೧೧ ಅಶ್ವಗಳ ಅಲಂಕಾರದಿಂದ ಹಾಗೂ ಸಾವಿರಾರು ಆರತಿಯ ಸುಮಂಗಲೆಯರಿಂದ ಕಣ್ಣುಕಟ್ಟುವಂತೆ ನೆರವೇರಿತು.2

---

2 "ಆಗ ನಾನು ಪಿಯೂಸಿ ವಿದ್ಯಾರ್ಥಿ. ಈ ಪಟ್ಟಾಭಿಷೇಕ ಮಹೋತ್ಸವದಲ್ಲಿ ನಾಲ್ವತ್ತು ಜನ ಸ್ವಯಂ ಸೇವಕರ ಮುಂದಾಳು ಆಗಿದ್ದೆ. ಮೇಲಿನ ಎಲ್ಲ ದೃಶ್ಯ ಗಳನ್ನು ಪ್ರತ್ಯಕ್ಷ ಕಂಡಿದ್ದೇನೆ." —ಲೇಖಕ.

## ಗತಯುಗದ ಪಕ್ಷಿನೋಟ: ಶಿರಸಿ ಶಿಲಾಶಾಸನ

ಮೂರುಸಾವಿರಮಠದ ಉದಯ ಎಂದು? ಈ ಮಹಾಪೀಠದ ಪೂರ್ವ ಪೀಠಾಚಾರ್ಯರಾರು? ಇದರ ಉಜ್ವಲ ಇತಿಹಾಸಯಾನದಲ್ಲಿ ಮೈಲುಗಲ್ಲುಗಳು ಯಾವವು? –ಈ ಎಲ್ಲ ಪ್ರಶ್ನೆಗಳಿಗೂ ಕಾಲಗರ್ಭವೇ ಉತ್ತರ ನೀಡಬೇಕು. ಆದರೆ ಈಗ ದೊರೆತ ಕೆಲವೊಂದು ಖಚಿತ ಆಧಾರಗಳಿಂದ ಇದರ ಪೂರ್ವಕಾಲ ವನ್ನು ಉತ್ಖನನ ಮಾಡಿ ಕೆಲಮಟ್ಟಿಗೆ ಕಂಡುಕೊಳ್ಳಬಹುದಾಗಿದೆ. ಪ್ರೊ. ವರದ ರಾಜ ಉಮರ್ಜಿಯವರು ಬೆಳಕಿಗೆ ತಂದ ಕಲಚೂರ್ಯರ ಹನ್ನೆರಡನೆಯ ಶತಮಾನದ ಶಿರಸಿ ಶಿಲಾಲೇಖದಲ್ಲಿ ಮೂರುಸಾವಿರಮಠದ ಉಲ್ಲೇಖ ಮೊದಲ ಬಾರಿಗೆ ಗೋಚರವಾಗಿದೆ. ಹನ್ನೆರಡನೆಯ ಶತಮಾನಕ್ಕಾಗಲೇ ರಾಷ್ಟ್ರಮಾನ್ಯ ಶಿಲಾಲಿಪಿಯಲ್ಲಿ ಸ್ಥಾನನಿರ್ದೇಶನವನ್ನು ಕಂಡುಕೊಳ್ಳಬೇಕಾದರೆ, ಆ ಕಾಲಕ್ಕಾಗಲೇ ಈ ಪೀಠ ಬೆಳೆಯುವ ಸ್ಥಿತಿಯಲ್ಲಿರದೇ ಪ್ರಬುದ್ಧವಾಗಿ ಬೆಳೆದ, ಪರಂಪರಾಗತವಾಗಿ ಪ್ರತಿಷ್ಠಾಪಿತವಾದ ಸ್ಥಾನವಾಗಿರಲಿಕ್ಕೆ ಸಾಕು. ೧೨ನೆಯ ಶತಮಾನದ ಅನುಭವ ಮಂಟಪದ ಮಹಾಕ್ರಾಂತಿಗೂ, ಶಿರಸಿ ಶಿಲಾಲೇಖದ ಈ ಉಲ್ಲೇಖಕ್ಕೂ ತಾಳೆ ಹಿಡಿದು ನೋಡಿದರೆ, ಅದರ ಇನ್ನೂ ಪೂರ್ವಸೂಚನೆ ಸುವ್ಯಕ್ತವಾಗುತ್ತದೆ. ಅಲ್ಲದೆ ಬಸವಾದಿಪ್ರಮಥರ ವಚನಕ್ರಾಂತಿ ಪ್ರಫುಲ್ಲಿತವಾಗಿ ಪ್ರಾಮಾಣ್ಯತೆಯನ್ನು ಹೊಂದುವದಕ್ಕಿಂತ ಪೂರ್ವದಲ್ಲಿ ವೀರಶೈವವು ಅನೇಕ ಶೈವಪಂಥಗಳಲ್ಲಿ ಹರಿದು ಹಂಚಿಹೋದುದು ನಿರ್ವಿವಾದ ಸಂಗತಿಯಾಗಿದೆ. ಆಗ ಕಾಳಾಮುಖ, ಪಾಶುಪತ, ಲಾಕುಲೀಶ ಮೊದಲಾದ ಶೈವ ಪರಂಪರೆಗಳನ್ನು ಗುರುತಿಸಬಹುದು. ಶೈವ ಮೂಲದ ತಾಯಿಬೇರಿನಿಂದ ಈ ಮಠ ಬಹು ಪುರಾತನ ಕಾಲದಿಂದ ಬೆಳೆದುಬಂದು, ಹನ್ನೆರಡನೆಯ ಶತಮಾನದ ಶಿವಶರಣರ ಪರಿಷ್ಕಾರ ಯುಗದಲ್ಲಿ ಪರಿಷ್ಕರಣ ಗೊಂಡು, ಅಲ್ಲಮ ಸಂಪ್ರದಾಯದ ಶೂನ್ಯಸಿಂಹಾಸನ ಪೀಠವಾಗಿ ಉತ್ಕ್ರಾಂತಿ ಯಾಗಿರಬೇಕೆಂದು ನಮ್ಮ ಊಹೆಯು ಕುದುರೆಯನ್ನು ಓಡಿಸಬಹುದಾಗಿದೆ.

## ಎಂಟುನೂರು ವರ್ಷಗಳ ಹಿಂದಿನ ಹುಬ್ಬಳ್ಳಿ

ಗ್ಯಾಜೆಟ್ಟಿನಲ್ಲಿ ಹುಬ್ಬಳ್ಳಿಗೆ "ಪುಬ್ಬಳ್ಳಿ"ಯೆಂಬ ನಿರ್ವಚನ ದೊರೆಯುತ್ತದೆ. ಬಹುಶಃ; ಪೂರ್ವದ+ಹಳ್ಳಿ "ಪುಬ್ಬಳ್ಳಿ"ಯಾಗಿರಬೇಕೆಂದು ಒಂದು ಅಭಿಪ್ರಾಯ. ಆದರೆ ಕಲಚೂರ್ಯರ ೧೨ನೆಯ ಶತಮಾನದ "ಶಿರಸಿ ಶಾಸನ"ದಲ್ಲಿ "ಪೂವಳ್ಳಿ" ಎಂದು ಉಲ್ಲಿಖಿತವಾಗಿದೆ. ಪೂವಳ್ಳಿಯೆಂದರೆ ಪೂರ್ವದ ಹಳ್ಳಿಯೆಂದಾಗದೆ ಹೂವಿನ ಹಳ್ಳಿಯೆಂದೇ ಆಗುವದಿಲ್ಲವೇ? ಬಹುಶಃ ಈ ನಗರ ಚಿಕ್ಕಹಳ್ಳಿಯ ಸ್ವರೂಪದಲ್ಲಿ ಒಂಬತ್ತು ಇಲ್ಲವೆ ಹತ್ತನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿ ಇದ್ದಿರ ಬಹುದಾಗಿದೆಯೆಂದು ಪ್ರೊ. ವರದರಾಜ ಉಮರ್ಜಿಯವರ ಶಿರಸಿ ಶಿಲಾಲೇಖದ

ಪ್ರಸ್ತಾಪದಿಂದ ನಾವು ಕಂಡುಕೊಳ್ಳಬಹುದಾಗಿದೆ. " 'ಎಲೆಯ ಪೂರ್ವದ ಬಳ್ಳಿ' ಎಂಬ ಹಸಿರೆಲೆಯ ಪ್ರಾಚೀನ ಗ್ರಾಮವೇ ಇಂದಿನ ಹುಬ್ಬಳ್ಳಿ... ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ರಾಷ್ಟ್ರಕೂಟರ ಕಾಲದಿಂದ ಇಂದಿನವರೆಗೂ ಪ್ರಮುಖ ಪಾತ್ರವಹಿಸುತ್ತ ಬಂದಿರುವ ಈ ಊರನ್ನು 'ಪುಬ್ಬಳ್ಳಿ' ಎಂದು ಗ್ರಹಿಸಿ, ಗ್ಯಾಜಟೀಯರದವರು ಪೂರ್ವದ+ಹಳ್ಳಿಯೆಂದು ನಿರ್ವಚನವನ್ನು ಕೊಟ್ಟು ಪೂರ್ವದ ಹಳೆಯ ಹಳ್ಳಿಯೆಂದು ಅರ್ಥ ಮಾಡಿದ್ದಾರೆ. 'ಪೂರ್ವದ ಹಳ್ಳಿ', 'ಪೂರ್ವಳ್ಳಿ', 'ಹುಪ್ಪವಳ್ಳಿ' ಎಂದು ಪ್ರಾಚೀನ ಶಾಸನಗಳಲ್ಲಿ ಕರೆಯಲಾಗಿದೆ."[3]

ಅಲ್ಲದೆ ಶಿರಸಿ ಶಾಸನದಲ್ಲಿ "ಪೂವಳ್ಳಿ"ಯೆಂಬುದು ಮೂರುಸಾವಿರಮಠದ ಸಂಬಂಧದಲ್ಲಿ ಉಕ್ತವಾದದ್ದರಿಂದ, ಅದು ೧೨ನೆಯ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಕಲ್ಲೂರ ಸಂಗಣ್ಣನವರು ತಮ್ಮ "ಹೊಂಬೆಳಗು" ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಇಲ್ಲಿ ನಮಗೆ ಹುಬ್ಬಳ್ಳಿಯ ಪುರಾತನತೆ, ಅದರ ಪರಂಪರೆ ಮುಖ್ಯವಾಗಿರದೇ ಅದಕ್ಕೆ ಹೊಂದಿಕೊಂಡು ಬಂದ ಮೂರುಸಾವಿರಮಠದ ಪ್ರಾಚೀನತೆ ಮುಖ್ಯ. ಹುಬ್ಬಳ್ಳಿ ಇಂದಿನಂತೆ ಗಡಿಬಿಡಿಯ-ಗದ್ದಲದ-ಗಲ್ಲಾಗುಲ್ಲಿಯ ರಂಭಾಟದ ನಗರವಾಗಿರದೇ ಒಂದು ಸುರಸುಂದರ ತಪೋವನದಂತೆ ಪ್ರಶಾಂತವಾಗಿದ್ದ ಹೂವಿನ ಹಳ್ಳಿಯೇ ಆಗಿರಬೇಕು. ಆ ಹಳ್ಳಿಯ ಹೊರವಲಯದ ಅರಣ್ಯದಲ್ಲಿ ನೈಸರ್ಗಿಕವಾದ ಒಂದು ದೊಡ್ಡ ಸರೋವರವೂ ಇತ್ತು. ಅದೇ ಈಗ ಗಂಗಾಧರ ಹಾಯಸ್ಕೂಲಿನ ಆಟದ ಬಯಲಾಗಿದೆ. ಈ ಸರೋವರವು ಲತಾಮಂಟಪಗಳಿಂದಲೂ, ಸುಮನೋಹರ ಸೃಷ್ಟಿಯ ಶ್ರೀಮಂತಿಕೆಯಿಂದಲೂ, ಏಕಾಂತತೆಯಿಂದಲೂ ಅರಣ್ಯಸದೃಶವಾಗಿತ್ತು. ಸಾಧಕರಿಗೆ ಅಮೃತಪ್ರಾಯವಾಗಿತ್ತು. ಇದರ ದಡದಲ್ಲೇ ಬಹು ಪುರಾತನ ಕಾಲದಿಂದ ತಪೋವನವೊಂದು ಮೈದಾಳಿರಲಿಕ್ಕೆ ಸಾಕು. ಅದೇ ತಪೋವನದ ಗವಿಯಲ್ಲಿ ಉಗ್ರ ಅನುಷ್ಠಾನಗೈದು ಲಿಂಗೈಕ್ಯರಾದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಜಾಗೃತ ಸಮಾಧಿ ಇಂದಿಗೂ ಈ ಮಠದ ಬಲಭಾಗಕ್ಕೆ ಇದೆ. ಈ ಸಮಾಧಿಗೆ ಬಹಳ ಪೂರ್ವಕಾಲದಿಂದಲೂ "ಹುಚ್ಚನ ಗದ್ದಿಗೆ" ಎಂದೇ ಭಕ್ತರು ಕರೆಯುತ್ತಾರೆ. "ಮೂರುಸಾವಿರಮಠದ ಹುಚ್ಚನೆಂದರೆ ಬೆಂಕಿಯ ಕೆಂಡ. ಅವನ ಅಂಗಾರ ಹಿಡಿದು ಆಣೆ ಮಾಡಿದರೆ ಮುಗಿಯಿತು" ಎಂದು ಇಂದಿಗೂ ಜನ ನಂಬಿದ್ದಾರೆ. ಈ ಕಾರಣದಿಂದ ಇದಕ್ಕೆ ಹುಚ್ಚನಮಠವೆಂದೂ ಕರೆಯುತ್ತಾರೆ. "ಗುರುಸಿದ್ಧಪ್ಪನಮಠ", "ಆನೆಮಠ", "ದೊಡ್ಡಮಠ" ಎಂತಲೂ

3 ಪರಂಜ್ಯೋತಿ; ಸಂಪುಟ 4, ಸಂಚಿಕೆ 9, ಏಪ್ರಿಲ್ 1972; ಜಗದ್ಗುರು ಮೂರುಸಾವಿರಮಠದ ಶ್ರೀ ಸನ್ನಿಧಿ; ಎ. ಎಸ್ ಹೂಗಾರ, ಪುಟ–329

ಕರೆಯುವದುಂಟು. ಇಂದಿನ ಓರ್ವ ಅರಣ್ಯ ಕಟ್ಟಿಗೆಯ ತಜ್ಞರ ಅಂದಾಜಿನ ಮೇರೆಗೆ ಇಂದಿನ ಬೆಲೆಗೆ ಈ ಮಠದ ಕಟ್ಟಿಗೆಯ ಬೆಲೆ ಮೂರುಕೋಟಿ ರೂಪಾಯಿ ಆಗುತ್ತದಂತೆ. ಕಿತ್ತೂರ ಚೆನ್ನಮ್ಮನ ಅರಮನೆಗಾಗಿ ಸಂಯೋಜಿಸಿದ ಕಟ್ಟಿಗೆಯನ್ನೇ ಆ ಸಂಸ್ಥಾನದ ಅವಸಾನದ ನಂತರ ಈ ಮಠಕ್ಕೆ ರವಾನಿಸಲಾಯಿತೆಂದೂ ಒಂದು ಐತಿಹ್ಯ ಉಂಟು. ಇವೆಲ್ಲ ಕಾರಣದಿಂದ ಇದು "ದೊಡ್ಡಮಠ"ವೇ ಸೈ!

## ಓಲೆಮಠ

ಈ ಮಠದ ಪೂರ್ವಸ್ಥಾನವು ಇಂದಿನ "ಓಲೆಮಠ"ದಲ್ಲಿ ಇತ್ತೆಂದು ಹಿರಿಯರಿಂದ ಮುಖೋದ್ಗತವಾಗಿ ತಿಳಿದುಬಂದ ಸಂಗತಿಯಾಗಿದೆ. ಅದು ಅಂದು "ಓಲೆಮಠ"ವಾಗಿರದೇ ಪೂರ್ವದ ಮೂರುಸಾವಿರಮಠವಾಗಿತ್ತು. ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರು ಸರೋವರದ ದಂಡೆಯ ಮೇಲೆ ಅನುಷ್ಠಾನ ಮಾಡಿ ಲಿಂಗೈಕ್ಯರಾದ ಮೇಲೆ ಅಲ್ಲೊಂದು ಸ್ಮಾರಕ ಮಂದಿರ ಸ್ಥಾಪಿಸಲಾಯಿತೆಂದೂ, ಆಗ ಮೂರುಸಾವಿರಮಠವು ಅಲ್ಲಿಗೆ ಸ್ಥಳಾಂತರಿತವಾಯಿತೆಂದೂ ಮತ್ತು ತನ್ನ ಪೂರ್ವದ ಮಠವನ್ನು ತಾಳೆಯೋಲೆ ಗ್ರಂಥಗಳನ್ನು ಸಂಗ್ರಹಿಸಿ ಇಡುವ ಓಲೆಮಠವಾಗಿ ಉಪಯೋಗಿಸಿತೆಂದೂ ಜನಜನಿತವಾಗಿ ವದಂತಿ ಇದೆ. ಸದ್ಯದಲ್ಲಿ ಅರಮನೆಯಂತೆ ವಿರಾಜಮಾನವಾದ ಮೂರುಸಾವಿರಮಠದ ಪರಂಪರೆ ಅಪೂರ್ವವಾಗಿದೆ, ಉಜ್ವಲವಾಗಿದೆ; ಅದಕ್ಕೆ ಸಾಧಾರ ಪ್ರಮಾಣಗಳನ್ನು ಕಾಲಪುರುಷನೇ ಒದಗಿಸಬೇಕು.

## "ಮೂರುಸಾವಿರ" ಹೆಸರಿನ ಮೂಲವೆಲ್ಲಿ?

ಅಲ್ಲಮಪ್ರಭುದೇವರ ಶೂನ್ಯಪೀಠದ ಪರಂಪರೆಯಲ್ಲಿ ಅನೇಕ ಜಗದ್ಗುರು ಪೀಠಗಳೂ, ನಿರಂಜನ ಪೀಠಗಳೂ ಕನ್ನಡ ನಾಡಿನಲ್ಲಿ ಮೈದಾಳಿದವು. ಕೊನೆಗೆ ಕಲ್ಯಾಣದ ರಕ್ತಕ್ರಾಂತಿಯಾಯಿತು. ಆಗ ಅಲ್ಲಿಯ ಮೂರುಸಾವಿರ ಜನ ಭಕ್ತ ಮಾಹೇಶ್ವರರು ಆಶ್ರಯಕ್ಕೆಂದು "ಪೂವಳ್ಳಿ"ಗೆ ಬಂದು, ಇಲ್ಲಿಯ ಪುರಾತನ ಧರ್ಮಪೀಠದಲ್ಲಿ ತಂಗಿದರು. ಈ ಐತಿಹಾಸಿಕ ಘಟನೆಯ ಪರಿಣಾಮವಾಗಿ ಇದು ಮೂರುಸಾವಿರಮಠವಾಯಿತೆಂದು ಹಲವರ ಅಭಿಪ್ರಾಯ. ಪರಂಜ್ಯೋತಿಯಲ್ಲಿ ಪ್ರಕಟವಾದ ಲೇಖನದಲ್ಲಿ ಬಂದ ವಿಚಾರ ಹೀಗಿದೆ—

"ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠವು ಇದೊಂದು ಜಾಗೃತಪೀಠ, ಕುಮಾರ ಸಮಯದ ಮೂಲಪೀಠ. ಆಧ್ಯಾತ್ಮ ಸಾಧಕರ ಜೀವನವನ್ನು ಬೆಳಗುವ ನಂದಾದೀಪ. ವಿಶ್ವಕಲ್ಯಾಣಕ್ಕೆ ತನ್ನ ಬಾಳನ್ನು ಮೀಸಲಾಗಿರಿಸಿ, ಶೈಕ್ಷಣಿಕ ಕ್ಷೇತ್ರಗಳಲ್ಲಿಯೂ ಅಸಾಧಾರಣವಾದ ಕಾರ್ಯವನ್ನೆಸಗಿ, ಆಧ್ಯಾತ್ಮಸಿದ್ಧಿ ಪಡೆದು, ಧರ್ಮದ ಬಾವುಟವನ್ನು ಎತ್ತಿಹಿಡಿದ ಆದರ್ಶ ಮಹಾಮಠ. ಈ ಪೀಠದ ಕರ್ತೃ

ಜಗದ್ಗುರುಗಳು ಸರ್ವಜನರ ಭಕ್ತಿಗೆ ಆಗರವಾಗಿರುವರಲ್ಲದೆ ಅವರ ಸಮಾಧಿಯು ಜಾಗೃತ ಸ್ಥಾನವಾಗಿರುವದು. ಮೂಲಕರ್ತೃವಾದ ಐತಿಹಾಸಿಕ ಹಿನ್ನೆಲೆ ಬಹು ಪ್ರಾಚೀನವಾದುದು. ಶ್ರೀ ಜಗದ್ಗುರು ಮೂರುಸಾವಿರಮಠದ ಪ್ರಾಚೀನತೆಯನ್ನು ಶಿರಸಿ ಶಾಸನದ ಆಧಾರದಿಂದ ಹಾಗೂ ತಾಡೋಲೆಯ ಪ್ರತಿಯಲ್ಲಿ ಉಲ್ಲೇಖಿತವಾದ ವಿಷಯದಿಂದ ಕಂಡುಹಿಡಿಯಬಹುದು. ಮೂರುಸಾವಿರಮಠದ ಪೀಠವನ್ನೇರಿದವರು ಹೆಚ್ಚಾಗಿ ಮಠದ ಪ್ರಾಚೀನತೆಯ ಬಗ್ಗೆ ಬರೆಯದಿರುವದು ನಮಗೆ ಸ್ವಲ್ಪ ಕೊರತೆ ಕಂಡರೂ, ಭಕ್ತರ ಮನೋಭೂಮಿಕೆಯ ಮೇಲೆ ಉಳಿದಿರುವ ಹಾಗೂ ಪರಂಪರಾಗತವಾಗಿ ಭಕ್ತಿ–ವಿಶ್ವಾಸದಿಂದ ನಡೆದುಕೊಂಡು ಬಂದಿರುವ ವೃದ್ಧರ ಮಾತಿನಿಂದ ಮೂರುಸಾವಿರಮಠದ ಕರ್ತೃ ಜಗದ್ಗುರುಗಳ ಮಹಾವ್ಯಕ್ತಿತ್ವವನ್ನು ಕಂಡುಕೊಳ್ಳಬಹುದು. ಆದರೂ ಸಹ ಮೂಲಕರ್ತೃಗಳು ಜನಿಸಿದರೆಲ್ಲಿ? ಬೆಳೆದರೆಲ್ಲಿ? ಎಲ್ಲಿಂದ ಹುಬ್ಬಳ್ಳಿಗೆ ಆಗಮಿಸಿದರು? ಪೂರ್ಣ ತಿಳಿಯದಂತಾಗಿದೆ.

೧೨ನೆಯ ಶತಮಾನದಲ್ಲಿ ಮೂರುಸಾವಿರಮಠವು ಧಾರ್ಮಿಕ ಕೇಂದ್ರವಾಗಿದ್ದ ವಿಷಯವು ಪ್ರೊ. ವರದರಾಜ ಉಮರ್ಜಿ ಎಂ.ಎ. ಅವರು ದಿ. ೧೩-೧೦-೧೯೫೭ರ ಕರ್ಮವೀರ ವಾರ ಪತ್ರಿಕೆಯಲ್ಲಿ ಪ್ರಕಟಿಸಿದ 'ಊರು ಹೆಸರುಗಳು ಹೇಗೆ ತಲೆ ಎತ್ತಿದವು?' ಎಂಬ ಲೇಖನ ಆಧಾರವಿಡಿದು ಬರೆಯುವದಾದರೆ ಅದು ಇಂತಿದೆ.

ಹುಬ್ಬಳ್ಳಿ....ಈ ಪಟ್ಟಣದಲ್ಲಿ ಹಳೇಹುಬ್ಬಳ್ಳಿ-ಹೊಸಹುಬ್ಬಳ್ಳಿ ಎಂದು ಎರಡು ಭಾಗಗಳಿವೆ....ಹುಬ್ಬಳ್ಳಿ ಎಂಬುದನ್ನು ಮೂಲರೂಪವೆಂದು ಗ್ರಹಿಸಿ ಗ್ಯಾಜಟೀಯರದವರು "ಪುಬ್" ಪೂರ್ವದ+ಹಳ್ಳಿ –ಎಂದು ನಿರ್ವಚನವನ್ನು ಕೊಟ್ಟು ಪೂರ್ವದ ಹಳೇಹಳ್ಳಿ ಎಂದು ಅರ್ಥ ಮಾಡಿದ್ದಾರೆ. ಆದರೆ ಪ್ರಾಚೀನ ಹೆಸರು "ಪೂವಳ್ಳಿ" ಎಂದು ಕಲಚೂರ್ಯರ ೧೨ನೆಯ ಶತಮಾನದ "ಶಿರಸಿ ಶಾಸನ"ದಲ್ಲಿ ಉಲ್ಲಿಖಿತವಾಗಿದೆ. ಪೂ-ಹು-ವಳ್ಳಿ-ಪಳ್ಳಿ-ಹಳ್ಳಿ-ಹೂವಿನಹಳ್ಳಿ ಎಂದು ಅರ್ಥ. ಪೂವಳ್ಳಿಯು ೧೨ನೇ ಶತಮಾನದ ಪೂರ್ವದಲ್ಲಿ ೯ ಇಲ್ಲವೆ ೧೦ನೇ ಶತಮಾನದಲ್ಲಿ ಅಸ್ತಿತ್ವದಲ್ಲಿ ಇರಬಹುದು. ಹಳೇಹುಬ್ಬಳ್ಳಿ, ರಾಯರಹುಬ್ಬಳ್ಳಿ ಎನ್ನುವದು ವಿಜಯನಗರದ ಸಂಬಂಧ ಸೂಚಿಸುವದು. ಶಿರಸಿ ಶಾಸನದಲ್ಲಿ ಪೂವಳ್ಳಿ ಎಂಬುದು ಮೂರುಸಾವಿರಮಠದ ಸಂಬಂಧದಲ್ಲಿ ಉಕ್ತವಾದದ್ದರಿಂದ ಅದು ೧೨ನೆಯ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಸೂಚಿತವಾಗುವದಿಲ್ಲವೆ? ಪೂವಳ್ಳಿಯು ಈಗಿನಂತೆ ಹುಬ್ಬಳ್ಳಿಯಾಗಿರದೆ ಸೃಷ್ಟಿ ಸೌಂದರ್ಯದ ನೆಲೆವೀಡಾಗಿತ್ತೆಂದು ತೋರುವದು. ಹುಬ್ಬಳ್ಳಿ ಹತ್ತಿರ ಇರುವ ಅದರಗುಂಚಿ (ಅದಿರ್ಗಂಚಿ) ಎಂಬುದು "ವಾಸಂತೀ" ಎಂಬ ಹೂಬಳ್ಳಿಯ ಹೆಸರೇ ಆಗಿದೆ. "ಹುಬ್ಬಳ್ಳಿ ಹೆಬ್ಬಳ್ಳಿ ಹಬ್ಬೀತು ರಸಬಳ್ಳಿ" ಎಂಬ ಜೋಗುಳದ ಹಾಡನ್ನು ಕೇಳುತ್ತಿದ್ದೇವೆ. ಪ್ರೊ. ಉಮರ್ಜಿಯವರ ಬರಹದಿಂದ ಮೂರುಸಾವಿರಮಠವು

ಬಹು ಪ್ರಾಚೀನದಿಂದ ಧರ್ಮಜಾಗೃತಿ ಮಾಡುತ್ತ ಬರುತ್ತಿರುವದು ಕಂಡುಬರುತ್ತದೆ. ಇದರ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ. ಹುಬ್ಬಳ್ಳಿಯು ಈಗಿನಂತೆ ಊರಾಗಿರದೆ ನಿಸರ್ಗದ ಮಡಿಲಲ್ಲಿ ಸೃಷ್ಟಿ ಸೌಂದರ್ಯದ ಒಡಲಲ್ಲಿ ಕೇವಲ ಒಂದು ಧಾರ್ಮಿಕ ಕೇಂದ್ರವಾಗಿದ್ದಿರಬೇಕು. ಕಾಲಾನುಕ್ರಮದಲ್ಲಿ ೧೫ನೇ ಶತಮಾನ ದೊಳಗೆ ಆದರ ಮಧುರಸ್ಮಾರಕವೆಂದು ಅಲ್ಲಿ ಒಂದು ಊರು ಕಟ್ಟಿಕೊಂಡಿರಬೇಕು. ಅದೇ ಹೂಬಳ್ಳಿ ಬರಬರುತ್ತ ಹುಬ್ಬಳ್ಳಿ ಆಗಿರಬಹುದು ಎಂದು ಅನೇಕರ ಅಭಿಮತ ವಾಗಿದೆ.

ಡಾ|| ಡಿ. ಎಲ್. ನರಸಿಂಹಾಚಾರ್ಯ ಅವರ "ಕನ್ನಡ ಗ್ರಂಥ ಸಂಪಾದನೆ" ಎಂಬ ಶಿರೋನಾಮದ ಸಂಶೋಧನಾತ್ಮಕ ಗ್ರಂಥವೊಂದನ್ನು ೧೯೬೪ನೇ ಇಸ್ವಿಯಲ್ಲಿ ಮೈಸೂರಿನ ಶಾರದಾ ಮಂದಿರದವರು ಪ್ರಕಟಿಸಿದ್ದಾರೆ. (ಆ ಗ್ರಂಥವು ಇದೀಗ ಎಂ. ಎ. ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿದೆ.) ಆ ಗ್ರಂಥದಲ್ಲಿ ಮೂರು ಸಾವಿರಮಠದ ಜಗದ್ಗುರುಗಳ ಹೆಸರು ಉಲ್ಲೇಖವಾಗಿದ್ದು ಪುಟ ೫೦ರಲ್ಲಿ ಅದು ಇಂತಿದೆ. ಬಸವಪುರಾಣ ಭೀಮಕವಿ. ಮೈ-ಜುಲೈ ಕಾಗದದ ಪ್ರತಿ ಶ್ರೀ ಶ್ರೀ ಮನ್ನೃಪಶಾಲಿವಾಹನ ಶತಾಬ್ದ ಪರಿಮಿತ ೧೩೫೩ ಮನ್ಮಥನಾಮ ಸಂವತ್ಸರೇ ಫಾಲ್ಗುಣ ಮಾಸೇ ಉತ್ತರಾಯಣೇ ಶಿಶಿರ ಋತೌ ಶುಕ್ಲಪಕ್ಷೇ ೧೨ ಸೋಮವಾರೇ, ಪುಷ್ಯ ನಕ್ಷತ್ರೇ ಶೋಭನ ನಾಮಯೋಗ ವೈಯಾಕರಣಕ್ಕೆ ||೦|| ಶ್ರೀ ಬಸವೇಶ್ವರ ಪುರಾಣ ಬರೆವುದು ಸಂಪೂರ್ಣವಾಯಿತು. ಈ ಪುಸ್ತಕವಂ ಬರೆಸಿದವರು ಆರು ಎಂದರೆ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶೂನ್ಯ ಸಿಂಹಾಸನಾಧೀಶ್ವರ ಭ್ರೂಪುರದ ಮೂರು ಸಹಸ್ರ ಮಠಾಧಿಕಾರಿಗಳಾದ ಗಂಗಾಧರ ಸ್ವಾಮಿಯವರ ಕರಕಮಲೋದ್ಭವರಾದ ಗುರುಸಿದ್ಧಸ್ವಾಮಿಯವರು ಬರೆಸಿದ್ದ ಸಿದ್ಧಾಂತವು, "ಶ್ರೀರಸ್ತು" ಜಿಲ್ಲಾ ಧಾರವಾಡ ಕಸಬ ಮಂಗಳವಾರ ಪೇಟ ವಿರಕ್ತ ಮಠದಲ್ಲಿ ಬರೆಸಿದ್ದು ಪ್ರಸಿದ್ಧವೂ "ಶ್ರೀ ಶ್ರೀ ಈ ಪುಸ್ತಕವ ಬರೆದವರು ಆರು ಎಂದರೆ ನಿಡುಮಾಮಿಡಿ ಕರಿಬಸವಸ್ವಾಮಿಯವರ ವಂಶಪಾರಂಪರೆಯಲ್ಲಿ ಜನಿಸಿದ ಶ್ರೀ ರೇವಣಸಿದ್ಧೇಶ್ವರರ ಸಂಪ್ರದಾಯಕರಾದ ಷಡ್ವಡೀ ಸೂತ್ರದ ಕಿತ್ತೂರು ವೀರೇಶ್ವರ ಗೋತ್ರದ ದೇಶದ ಬೈಲಹೊಂಗಲ ಮಠದ ಶಂಕರಪ್ಪನವರ ಆತ್ಮಜ ನಾದ ಷಣ್ಮುಖಯ್ಯನಿಂ ಬರೆಯಲ್ಪಟ್ಟಿತು."

ಶಕ ೧೩೫೩ ರಲ್ಲಿ ಲಿಖಿತವಾದ ಓಲೆಯ ಪ್ರತಿಯಲ್ಲಿ ಮೂರುಸಾವಿರಮಠದ ಜಗದ್ಗುರುಗಳ ಹೆಸರು ಬಂದಿರುವದರಿಂದ ಅವರೇ ಬಸವಪುರಾಣವನ್ನು ಬರೆಸಿರು ವದು ಉಲ್ಲೇಖಿತವಾಗಿರುವದರಿಂದ ಮೂರುಸಾವಿರಮಠದ ಪ್ರಾಚೀನತೆಯು ಸ್ಪಷ್ಟ ವಾಗಿ ಎದ್ದುಕಾಣುತ್ತದೆ.

## ಶಾಖಾಮಠಗಳು: ಸಮನ್ವಯಕ್ಕಾಗಿ ಹೋರಾಟ: ಸೋಲು-ಗೆಲುವು

ಗುರುವರ್ಗದ ಐದು ಪೀಠಗಳು ಕಾಶಿ, ಕೇದಾರ, ಶ್ರೀಶೈಲ, ಉಜ್ಜೈನಿ, ಬಾಳೆಹೊನ್ನೂರ. ವಿರಕ್ತ ವರ್ಗದ ಮೂರು ಪೀಠಗಳು ಹುಬ್ಬಳ್ಳಿ, ಚಿತ್ರದುರ್ಗ, ಗದಗ ಹಾಗೂ ಭಕ್ತ ವರ್ಗದ ಹಲವು ಮಠಗಳು (ಉದಾ: ಕಲಬುರ್ಗಿ) ಅಲ್ಲದೇ; ನವೋದಿತವಾದ ಹಲವು ಮಠಗಳು ವೀರಶೈವರಲ್ಲಿ ಭಾರತದಾದ್ಯಂತ ಉಂಟು. ಇವುಗಳಿಗೆ ಗುರು-ಜಂಗಮ-ಭಕ್ತ ಪರಂಪರೆಯ ಮಠಗಳೆಂದು ಹೇಳುವದುಂಟು; ಕೆಲವರು ಇವುಗಳಿಗೆ ಗುರುಸ್ಥಲ, ಜಂಗಮಸ್ಥಲ, ಶರಣಸ್ಥಲದ ಮಠಗಳೆಂದು ಸೈದ್ಧಾಂತಿಕವಾಗಿ ಕರೆಯುತ್ತಾರೆ. ಶ್ರೀ ಜಗದ್ಗುರು ಮೂರುಸಾವಿರಮಠವು ಈ ನಿಟ್ಟಿನಲ್ಲಿ ಕುಮಾರಸಮಯದ ಮೂಲಪೀಠ. ವಿರಕ್ತ ಜಗದ್ಗುರುಗಳಲ್ಲಿ ಸಾಮಾನ್ಯ ವಾಗಿ ಕುಮಾರಸಮಯ-ಮುರುಘಾಸಮಯ-ಚೀಲಾಳಸಮಯವೆಂದು ಮೂರು ಪರಂಪರೆ. ಈ ಕುಮಾರಸಮಯದ (ಮೂರುಸಾವಿರಮಠದ) ಶಾಖಾಮಠಗಳು ಕರ್ನಾಟಕ, ಆಂಧ್ರ, ತಮಿಳುನಾಡು, ಮಹರಾಷ್ಟ್ರಗಳಲ್ಲಿ ವ್ಯಾಪಿಸಿವೆ. ಮಠಗಳ ವೈವಿಧ್ಯತೆಯ ಸಂಕೀರ್ಣತೆಯೇ ವೀರಶೈವ ಧರ್ಮದ ವೈಶಿಷ್ಟ್ಯ. ತೀರಾ ಇತ್ತೀಚೆಗೆ ಕೆಲವರು- "ನಾವು ವೀರಶೈವರೇ ಅಲ್ಲ; ನಮ್ಮದು ಬಸವ ಧರ್ಮ; ನಮ್ಮ ಗುರು ವಿಶ್ವಗುರು ಬಸವಣ್ಣ" ಎಂತಲೂ ಹೇಳುವದುಂಟು. ಇಂದಿನ ಪೂಜ್ಯ ಮೂರು ಸಾವಿರಮಠದ ಜಗದ್ಗುರುಗಳು ನಿರಂತರ ಮೂವತ್ತು ವರ್ಷಗಳವರೆಗೆ ಸಮಯ ಭೇದ, ಗುರುವಿರಕ್ತ ಭೇದ, ಗುರುಭಕ್ತ ಭೇದ, ಜಂಗಮಭಕ್ತ ಭೇದ, ಉಪಜಾತಿ ಭೇದ, ಒಳಪಂಗಡ ಭೇದಗಳನ್ನು ನಿವಾರಿಸಲು ಅಹೋರಾತ್ರಿ ಹೋರಾಡಿದ್ದುಂಟು. ಅವರ ಹೋರಾಟಕ್ಕೆ ವಿಚಾರವಂತರಿಂದ ಮನ್ನಣೆ ದೊರೆತಿದ್ದರೂ ಗುರಿ ಸಾಧಿಸಿಲ್ಲ. ಎಂದಿಗೂ ರಿಪೇರಿಯಾಗದ ಸ್ಥಿತಿ ಈ ಧರ್ಮಕ್ಕೆ ಇದೆ. ಒಂದುವೇಳೆ ಇದೇ ಒಡಕು-ಕೆಡಕಿನ ಪ್ರವೃತ್ತಿ ಮುಂದುವರೆದುದಾದರೆ ವೀರಶೈವ ಧರ್ಮವು ನಿರಂತರ ಬೆಳೆಯುವ ಧರ್ಮವಾಗಿರದೆ, ಸಾಯುವ (ನಶಿಸುವ) ಧರ್ಮವಾಗಿದೆಯೆಂದೂ, ಇದರ ಸಾವು ಇದರ ಹೊಟ್ಟೆಯಲ್ಲಿಯೇ ಇದೆಯೆಂದೂ ಹೇಳುವದು ಅನಿವಾರ್ಯ. "ದೇವನೊಬ್ಬ" ಎಂಬ ಮಹಾನ್ ತತ್ತ್ವದ ಆಧಾರದಿಂದ ಬೆಳೆದ ಅಪೂರ್ವ ಧರ್ಮವೇ ವೀರಶೈವ ಧರ್ಮವಾದರೂ; ಇದರಲ್ಲಿ ಇತಿಹಾಸ ಕಾಲದಿಂದ ಇಂದಿನ ವರೆಗೂ ಬೆಳೆದು ಬಂದ ಧಾರ್ಮಿಕ ಮುಖಂಡರ-ಯೋಗಿಗಳ-ಗುರುಗಳ ಹೆಸರಿನಿಂದ ಟೊಂಗೆ-ಟಿಸಿಲುಗಳು ಸಾವಿರ ಮಡಿಯಾಗಿ ಬೆಳೆದು ಇದು ಶಿವಪ್ರಧಾನ (ಏಕ ದೇವೋಪಾಸನೆ) ಧರ್ಮವಾಗದೇ ಅನೇಕ ಗುರುಗಳ ಉಪಾಸನೆಯ (ಮನುಷ್ಯ ಪ್ರಧಾನ) ಧರ್ಮವಾಗುತ್ತಿರುವದು ದುರಂತ. ಇದನ್ನು ತಡೆದು ನಿಲ್ಲಿಸಲು ಪೂಜ್ಯ ಜಗದ್ಗುರುಗಳು ಅಹೋರಾತ್ರಿ ಹೋರಾಡುತ್ತಿದ್ದಾರೆ. ಹುಬ್ಬಳ್ಳಿಯಲ್ಲಿ ಹಿಂದೂ-ಮುಸ್ಲಿಂ ಬಾಂಧವ್ಯದಲ್ಲಿ ಶಾಂತಿಯನ್ನು ಸ್ಥಾಪಿಸಲು ಅವರು ಹೋರಾಡಿದ

ಸಾಹಸಕ್ಕೆ ಯಶಸ್ಸು ಸಿಕ್ಕಿತು. ಆದರೆ ಈ ಕುಲಮದ, ಜಾತಿಮದ, ಪಂಗಡಮದ ಹಿಡಿಸಲಾರದ ಬಂಧನವೇ? ನಾವು ಒಬ್ಬ ಪರಮಾತ್ಮನಾದ ಶಿವ ತಂದೆಯಿಂದ ದೂರ ದೂರ ಸಾಗುತ್ತಿದ್ದೇವೆಯೇ?....ಲೋಕಕ್ಕೆ ಇದು ಜಗದ್ಗುರುಗಳ ಪ್ರಶ್ನೆ!

**ಹಿಂದಿನ ಲಿಂಗೈಕ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರರು**

ದಿ. ೧೦-೨-೧೯೦೧ ರಂದು ಶ್ರೀ ಮೂರುಸಾವಿರಮಠದ ಜಗದ್ಗುರು ಪೀಠವನ್ನು ಅಲಂಕರಿಸಿದ ಈ ಮಹಿಮರು ೧೯ ವರ್ಷಕಾಲ ಆಳಿಕೆಗೈದು ಲಿಂಗೈಕ್ಯ ರಾದರು. ಇವರು ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರಿಗಿಂತಲೂ ಹಿಂದಿನವರು. ಕಾಶಿ ಹಿಂದೂ ವಿಶ್ವವಿದ್ಯಾಲಯದ ಪ್ರಕಾಂಡ ವ್ಯಾಕರಣ ಪಂಡಿತರು. ಇವರ ಸಮಗ್ರ ಬಾಳು ಸಮಾಜ ಸೇವೆಗೆ ಮೀಸಲಾಯಿತು. "ಸಮಾಜ ಸೇವೆಯೇ ಸದಾಶಿವನೊಲಿಮೆಯಯ್ಯಾ!" ಎಂದು ಘೋಷಿಸಿದರು. ಮುಂದೆ ಅಂತರಿಕ್ಷವಾಹನ ವೇಗದಿಂದ ಮುನ್ನಡೆಯಲಿರುವ ಈ ಪೀಠದ ಪ್ರಚಂಡ ಪ್ರಗತಿಗೆ ಇವರು ತೆರೆಯ ಹಿಂದಿನಿಂದ ತಳಗಲ್ಲುಗಳನ್ನು ಸರಿಪಡಿಸಿದರು. ಅಂದಿನ ನಿಷ್ಕಾಮ ಸಮಾಜಸೇವಕರಾದ ರಾ. ಬ. ಅರಟಾಳ ರುದ್ರಗೌಡರು, ಸರ್. ಕೆ. ಪಿ. ಪುಟ್ಟಣ್ಣಸೆಟ್ಟರು, ಶ್ರೀಮಂತ ಲಿಂಗರಾಜರು ಸರದೇಸಾಯಿ; ಶಿರಸಂಗಿ, ರಾ. ಬ. ಶ್ರೀಮಂತ, ವಾರದ ಮಲ್ಲಪ್ಪನವರು ಇವರಿಗೆ ಜಗದ್ಗುರುಗಳು ಅಂತಃಪ್ರೇರಣೆ ಯನ್ನು ನೀಡಿ ಅವರ ಸಮಾಜ ಸೇವೆ ವೃದ್ಧಿಯಾಗಲು ಆಶೀರ್ವದಿಸಿದರು. ತಮ್ಮ ಜೀವನಾವಧಿಯಲ್ಲಿ ಲಕ್ಷಾವಧಿ ಹಣವನ್ನು ಸಮಾಜಕ್ಕೆ, ಸಂಘ-ಸಂಸ್ಥೆಗಳಿಗೆ, ಶಿಕ್ಷಣಕ್ಕೆ ದಾನವಿತ್ತರು. ಹುಬ್ಬಳ್ಳಿಯಲ್ಲಿ "ಶ್ರೀ ಜಗದ್ಗುರು ಗಂಗಾಧರ ಜಿನಿಂಗ್ ಅ್ಯಂಡ್ ಪ್ರೆಸಿಂಗ್ ಫ್ಯಾಕ್ಟರಿ" ಸ್ಥಾಪಿಸಿದರು. ಕರ್ನಾಟಕದ ಇತಿಹಾಸದಲ್ಲೇ ಮೊಟ್ಟ ಮೊದಲಬಾರಿಗೆ "ಧರ್ಮ ತರಂಗಿಣಿ" ಎಂಬ ಮಾಸಪತ್ರಿಕೆ ಆರಂಭಿಸಿದರು; ಅದಕ್ಕೆ ಸ್ವತಂತ್ರ ಮುದ್ರಣಾಲಯವನ್ನು ಅಣಿಗೊಳಿಸಿದರು.

ಹುಬ್ಬಳ್ಳಿಯ ಜನರು ಇಂದಿಗೂ ಮಾತನಾಡುವ ಮಾತೆಂದರೆ— "ಲಿಂ. ಗಂಗಾಧರ ರಾಜಯೋಗೀಂದ್ರರು ಮಠದ ದುಡ್ಡನ್ನು ಜತನದಿಂದ ಕಾಪಾಡಿ ಸಂಗ್ರಹಿಸಿದರಂತೆ. ಅವರ ಕೈ ತುಂಬಾ ಹಿಡಿತವಿತ್ತಂತೆ." ಮಠದ ಆಸ್ತಿಯ ಸಂರಕ್ಷಣೆಯನ್ನು ಇವರು ಮಾಡಿದರು. ಸ್ವತಃ ಪ್ರಕಾಂಡ ಪಂಡಿತರೂ ಆಗಿದ್ದರು.4

---

4 "ಒಂದು ರಸನಿಮಿಷ. ನನ್ನ ಅಮ್ಮನ ಅಮ್ಮ ಶಿದ್ಲಿಂಗಮ್ಮ. ನನ್ನ ಅಮ್ಮ ಪರಮ್ಮ. ಆ ಇಬ್ಬರೂ (ಬಹುಶಃ ಕ್ರಿ. ಶ. 1903 ರಲ್ಲಿ) ಎರಡು ವರ್ಷದ ಕೂಸಾದ ನನ್ನ ತಂದೆಯನ್ನು (ಹುಚ್ಚಯ್ಯ) ಕರೆದುಕೊಂಡು ಪ್ರತಿದಿನ ಬೆಳಿಗ್ಗೆ 5 ಗಂಟೆಗೆ ಮಠದ ಕರ್ತೃ ಗದ್ದುಗೆಗೆ ತಪ್ಪದೇ ಹೋಗುತ್ತಿದ್ದರಂತೆ. ಒಂದು ಸಲ ಬೆಳ್ಳಬೆಳದಿಂಗಳು. ಬೆಳದಿಂಗಳು ಕಂಡು ಬೆಳಕಾಗಿದೆಯೆಂದು ಇಬ್ಬರೂ→

## ಶಿಕ್ಷಣ ಪ್ರೇಮಿ: ಗುರುಸಿದ್ಧ ರಾಜಯೋಗೀಂದ್ರರು

ಇಂದಿನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ವಿದ್ಯಾರ್ಥಿ ಜೀವನದ ಬೆಳಕು–ಬೆಳಸುಗಳನ್ನು ಬಹುಕಾಲ ಗುಪ್ತವಾಗಿ ನಿರೀಕ್ಷಿಸಿ ಅವರನ್ನು ಜಗದ್ಗುರು ಪೀಠಕ್ಕೆ ನಿಯೋಜಿಸಿದ ಬಹುದೊಡ್ಡ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರು ವಾಣಿಜ್ಯ ಕೇಂದ್ರವಾದ ಹುಬ್ಬಳ್ಳಿ ನಗರವನ್ನು ಶಿಕ್ಷಣ ಕೇಂದ್ರವಾಗಿಯೂ ಪರಿನಿರ್ಮಿಸುವಲ್ಲಿ ಪರಿಶ್ರಮಿಸಿದರು, ವಿಜಯ ಸಾಧಿಸಿದರು. ಮಹಾಕಾರ್ಯವೊಂದರ ಮಹಾಶಿಲ್ಪಿಯಾದರು. ಇವರು ಕೆ.ಎಲ್.ಇ. ಸೊಸೈಟಿಯ ಸಂಚಾಲಕರನ್ನು ಪ್ರೇರೇಪಿಸಿ ಹುಬ್ಬಳ್ಳಿಯಲ್ಲಿ ಶ್ರೀ ಕಾಡಸಿದ್ಧೇಶ್ವರ ಕಾಲೇಜು ಸ್ಥಾಪಿಸಲು ೮೦ ಸಾವಿರ ರೂಪಾಯಿಗಳನ್ನು ದಾನ ನೀಡಿದರು. ಅಲ್ಲದೆ; ವಾಣಿಜ್ಯ ಕೇಂದ್ರವಾದ ಹುಬ್ಬಳ್ಳಿಗೆ ವಾಣಿಜ್ಯ ವಿದ್ಯಾಲಯವೊಂದು ಅತ್ಯವಶ್ಯಕವೆಂದು ಮನದಂದು, ಶ್ರೀ ಜಗದ್ಗುರು ಗಂಗಾಧರ ಕಾಮರ್ಸ್ ಕಾಲೇಜನ್ನು ಸಂಸ್ಥಾಪಿಸಿದರು. ಅದಕ್ಕೆ ಆಂದಿನ ಸೋವಿ ಕಾಲದಲ್ಲಿ ತಮ್ಮ ಉದಾರ ಹಸ್ತದಿಂದ ಒಂದು ಲಕ್ಷ ರೂಪಾಯಿಗಳನ್ನು ಕೊಡಮಾಡಿದರು. ಈ ಎರಡು ಉಚ್ಚ ವಿದ್ಯಾಲಯಗಳಿಂದ ಹುಬ್ಬಳ್ಳಿ ಶರವೇಗದಿಂದ ಮುನ್ನಡೆಯಲು ಆರಂಭವಾಯಿತು. ಮುಂದೆ ಅನೇಕ ಕಾಲೇಜುಗಳು, ಕರ್ನಾಟಕ ಮೆಡಿಕಲ್ ಕಾಲೇಜಿನಂಥ ಹೆಮ್ಮೆಯ ಸಂಸ್ಥೆಗಳು ಮೈದಾಳಲು ಪೂರ್ವ ಪ್ರೇರಣೆಯಾಯ್ತು.

ಇದಲ್ಲದೆ; ಬೆಳಗಾವಿಯಲ್ಲಿ ಪೂಜ್ಯ ನಾಗನೂರ ರುದ್ರಾಕ್ಷಿಮಠದ ಶಿವಬಸವ ಸ್ವಾಮಿಗಳು ಆರಂಭಿಸಿದ ಜಗದ್ಗುರು ಗುರುಸಿದ್ಧೇಶ್ವರ ಪ್ರಸಾದನಿಲಯಕ್ಕೆ

---

→ಕೂಸಿನೊಂದಿಗೆ ಮಠಕ್ಕೆ ಬಂದಾಗ ಪಹರಿಯವನು ರಾತ್ರಿ ಎರಡರ ಗಂಟೆ ಬಾರಿಸಿದನಂತೆ! ಆಗಲೇ ಅಪರಿಗೆ ಗೊತ್ತು; ತಾವು ಬೆಳದಿಂಗಳಿಗೆ ಬೆಳಗಾಯಿತೆಂದು ಗ್ರಹಿಸಿ ಬಂದದ್ದು. ಆಗ ಸ್ವತಃ ಗಂಗಾಧರ ಜಗದ್ಗುರುಗಳೇ ಮಠದ ಬಾಗಿಲು ತೆರೆದರಂತೆ. ಇಷ್ಟು ಅಪರಾತ್ರಿಯಲ್ಲೇಕೆ ಬಂದಿರೆಂದು ವಿಚಾರಿಸಿ ಅವರೇ ಕರ್ತೃಗದ್ದುಗೆಯ ಬಾಗಿಲು ತೆರೆದರಂತೆ, ನೀರು ಕೊಟ್ಟರಂತೆ. ನಮ್ಮ ಮಠಕ್ಕೂ ಜಗದ್ಗುರು ಮೂರುಸಾವಿರಮಠಕ್ಕೂ ಶೀರಾ ಪರಿಚಯದ ಒಡನಾಟದ ಕಥೆ ಇದು. ನನ್ನ ಅಮ್ಮ ಪರಮ್ಮ (ತಂದೆಯ ತಾಯಿ) ಮೂರುಸಾವಿರಮಠದ ಕರ್ತೃ ಗದ್ದುಗೆಗೆ ನಡೆದುಕೊಂಡು ಹಡೆದ ಮಗನಿಗೆ ಹುಚ್ಚಯ್ಯ (ನನ್ನ ತಂದೆ) ಎಂದು ಹೆಸರಿಟ್ಟಳು. ಇವಳು ಜೀವನಪರ್ಯಂತ ಶರಣೆಯಾಗಿ ಪ್ರತಿದಿನ ಮಠಕ್ಕೆ ತಪ್ಪದೇ ಹೋಗುತ್ತಿದ್ದಳು. ಇವಳ ಮರಣಕಾಲಕ್ಕೆ ಸ್ವತಃ ಗುರುಸಿದ್ಧ ರಾಜಯೋಗೀಂದ್ರರು ನಮ್ಮ ಮನೆಗೆ ಬಂದು ಪಾದತೀರ್ಥ ಕೊಟ್ಟು ಹೋದ ಮೇಲೆ ಅಮ್ಮ ತೀರಿಕೊಂಡಳಂತೆ. ನನ್ನ ತಂದೆಯವರೂ ತಪ್ಪದೇ ಪ್ರತಿದಿನ ಮಠಕ್ಕೆ ಹೋಗುತ್ತಿದ್ದರು. ಒಂದು ದಿನವೂ ತಪ್ಪಲಿಲ್ಲ. ನಮ್ಮ ತಾಯಿ ಮಠಕ್ಕೆ ನಡೆದುಕೊಂಡು ಹುಟ್ಟಿದ ಮಗನಿಗೆ ಅದೇ ಕರ್ತೃ ಗದ್ದುಗೆಯ ಹೆಸರು 'ಗುರುಸಿದ್ಧ' ಎಂದು ಇಟ್ಟಳಂತೆ. ಅದೇ ನಾನು!" —ಲೇಖಕ

ಜಗದ್ಗುರುಗಳು ೬೦,೦೦೦ ರೂಪಾಯಿಗಳನ್ನು ದೇಣಿಗೆ ನೀಡಿದರು. ದೇಶ-ವಿದೇಶಗಳಲ್ಲಿ ಅಭ್ಯಸಿಸುವ ವಿದ್ಯಾರ್ಥಿಗಳಿಗೆ ದುಡ್ಡಿನ ನೆರವು ಸಲ್ಲಿಸಿದರು. ಶಿಕ್ಷಣಸಂಸ್ಥೆಗಳಿಗೆ ಹಾಗೂ ಶಿಕ್ಷಣ ಕಾರ್ಯಕ್ಕೆ ಅವರು ತಮ್ಮ ಜೀವನಾವಧಿಯಲ್ಲಿ ಅಂದಿನ ತೀರಾ ಅಗ್ಗದ ಕಾಲದಲ್ಲಿ ೧೫ ಲಕ್ಷಕ್ಕಿಂತಲೂ ಹೆಚ್ಚು ರೂಪಾಯಿಗಳನ್ನು ದಾನ ನೀಡಿದರು.

ಅವರು ಶ್ರೀ ಜಗದ್ಗುರು ಗಂಗಾಧರ ಶಿವಾದ್ವೈತ ಗ್ರಂಥ ಸಂಶೋಧನ ಸಂಸ್ಥೆಯನ್ನು ಆರಂಭಿಸಿದರು. ವೀರಶೈವಾನಂದ ಚಂದ್ರಿಕಾ, ರಘುವಂಶ ರಹಸ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ, ಕಾಡಸಿದ್ಧೇಶ್ವರ ವಚನ, ಸಿದ್ಧೇಶ್ವರ ವಚನ, ಹರೀಶ್ವರ ಪ್ರಶಸ್ತಿ, ಲಿಂಗಲೀಲಾವಿಲಾಸ ಚಾರಿತ್ರ, ನೀತಿ ಶತಕ ಮೊದಲಾದ ಉದ್ಗ್ರಂಥಗಳನ್ನು ಬೆಳಕಿಗೆ ತಂದರು. ಮಠದಲ್ಲಿ ಸಾವಿರಾರು ತಾಳೋಲೆ ಗ್ರಂಥಗಳನ್ನು ಕಾಪಾಡಿಕೊಂಡು ಬಂದರು. ತಮ್ಮ ಗುರುಗಳು ಸ್ಥಾಪಿಸಿದ 'ಶ್ರೀ ಜಗದ್ಗುರು ಗಂಗಾಧರ ಜಿನಿಂಗ್ ಮತ್ತು ಪ್ರೆಸಿಂಗ್ ಫ್ಯಾಕ್ಟರಿ'ಯನ್ನು ಸಮರ್ಥ ರೀತಿಯಿಂದ ನಡೆಸಿಕೊಂಡು ಬಂದರು. ಅದರ ವರ್ಷಂಪ್ರತಿ ಉತ್ಪನ್ನದಲ್ಲಿ ಕೆಲ ಭಾಗವನ್ನು ಕೆ.ಎಲ್.ಇ. ಸೊಸೈಟಿಗೆ ತಲುಪಿಸಲು ಮರೆಯಲಿಲ್ಲ. ೩೦ ಸಾವಿರ ವೆಚ್ಚದಿಂದ ವಿದ್ಯಾರ್ಥಿಗಳ ವಸತಿಗೃಹ ಸುಧಾರಿಸಿದರು. ಮಠದ ಕರ್ತೃ ಗದ್ದುಗೆಯ ಮಹಾ ಮಂಟಪವನ್ನು ಅಪಾರ ವೆಚ್ಚದಿಂದ ಸಾಲಂಕರಣಗೊಳಿಸಿದರು.

ಇವರ ಕಾರ್ಯಜೀವನದ ಪರಮೋಚ್ಚ ಸಾಧನೆಯೆಂದರೆ ಘಟಪ್ರಭೆಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಚಿಕಿತ್ಸಾಲಯದ ಸ್ಥಾಪನೆ. ಅದಕ್ಕಾಗಿ ಎರಡು ಲಕ್ಷ ರೂಪಾಯಿ ಕಾಣಿಕೆ ನೀಡಿದರು. ಈ ಆರೋಗ್ಯಧಾಮಕ್ಕೆ ಶ್ರೀ ಜಗದ್ಗುರು ಮೂರುಸಾವಿರಮಠದ ಪೀಠಾಧೀಶ್ವರರೇ ಕಾಯಂ ಅಧ್ಯಕ್ಷರಾಗಿದ್ದಾರೆ. ಮಠದಲ್ಲಿ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಲವನ್ನು ಸ್ಥಾಪನೆ ಮಾಡಿ ಅದಕ್ಕೆ ೬೦ ಸಾವಿರ ರೂಪಾಯಿಗಳನ್ನು ಮೂಸಲುಧನವೆಂದು ತೆಗೆದಿರಿಸಿದರು. ಸಂತೃಪ್ತ ಜೀವನದ ಸಕಲಾನಂದಗಳನ್ನು ಅನುಭವಿಸಿ ತಮ್ಮ ೬೦ ನೆಯ ವಯಸ್ಸಿನಲ್ಲಿ ದಿ. ೧೭–೨–೧೯೫೮ ರಂದು "ಶಿವಯೋಗ"ದ ದಿನವೇ ಶಿವಾಧೀನರಾದರು!

## ನೂತನ ಯುಗಾರಂಭ

ಕ್ರಿಸ್ತಾಬ್ದ ೧೯೫೮ ಮೇ, ಒಂದು, ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಇತಿಹಾಸದಲ್ಲಿ ನವಯುಗಾರಂಭವಾಯಿತು! ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು–'ಒಂದು ವ್ಯಕ್ತಿಯಲ್ಲ; ಶಕ್ತಿ'ಯಾಗಿದ್ದಾರೆ ಎಂಬುದನ್ನು ನಾಡು ಮನಗಂಡಿದೆ. ಜಗದ್ಗುರು ಪೀಠದಿಂದ ಅವರು ದೊಡ್ಡವರಾಗಿಲ್ಲ. ಕರ್ತೃತ್ವಶಕ್ತಿ ಪಡೆದುಕೊಂಡು ಜಗದ್ಗುರು

ಪೀಠಕ್ಕೆ ಕಳೆತಂದಿದ್ದಾರೆ. ಬೃಹತ್ ಪೀಠದ ಬೆಳಕನ್ನು ಬೆಳಗಿಸಿದ್ದಾರೆ. ಇದಕ್ಕೆ ವ್ಯಕ್ತಿಶಕ್ತಿ (Man Power) ಎನ್ನುವದು. ಇದಿಲ್ಲವಾದರೆ ಮಠಗಳು ಮಸಣ ಗಳಾಗುತ್ತವೆ, ಆಶ್ರಮಗಳು ಆಮಿಷಗಳಾಗುತ್ತವೆ, ದೇವಾಲಯಗಳು ಪ್ರೇತಾಲಯ ಗಳಾಗುತ್ತವೆ. ಪೂಜ್ಯ ಜಗದ್ಗುರುಗಳ ವ್ಯಕ್ತಿತ್ವದ ಬಹುಮುಖಗಳನ್ನು ಅಳೆದು ಹೇಳುವದು ಸಾಧ್ಯವಿಲ್ಲ. ಕಾರಣ ಅನೇಕ ಶಕ್ತಿಗಳ ಸಂಚಯ ಅವರಾಗಿದ್ದಾರೆ. ಅವರೊಬ್ಬರು ಜೀವಂತವಾದ ಮಹಾಸಂಸ್ಥೆ. ನಿರಂತರ ದುಡಿಯುತ್ತಿರುವ ಎಚ್ಚೆತ್ತ ಕಾಂಪ್ಯುಟರ್ ಯಂತ್ರ. ಬಿಡುವಿಲ್ಲದ ಕಾರಖಾನೆ. ತೆರಪಿಲ್ಲದ ಗಂಗಾಪ್ರವಾಹ. ಅವರ ವ್ಯಕ್ತಿತ್ವದ ಅನಂತತೆಯಲ್ಲಿ ಸಮಗ್ರತೆಯಿದೆ. ಸಮಗ್ರತೆಯಲ್ಲಿ ಸಮತೂಕ ವಿದೆ. ಇದುವೇ ದಿವ್ಯಜೀವನದ ಸೂತ್ರವಲ್ಲವೆ?

## ಬಯಲಲು ಬಂಗಾರ

ಪೂಜ್ಯ ಜಗದ್ಗುರುಗಳು ವ್ಯಕ್ತಿಮಾತ್ರವಾದರೂ ಅನೇಕ ಶಕ್ತಿಗಳ ಸಂಚಯ ವಾಗಿದ್ದಾರೆ. ಅವರ ಈ ಬಹುವಿಧ ಸಾಮರ್ಥ್ಯದಲ್ಲಿ ಒಂದು ಪ್ರಧಾನ ಲಕ್ಷಣ ವನ್ನು ಎಲ್ಲರೂ ಗಮನಿಸಬಹುದು. ಅದೆಂದರೆ ಅವರ ಕಾರ್ಯ ಕೌಶಲದ ಮಿಂಚಿನವೇಗ. ಯಾವುದೇ ಯೋಜನೆ, ಯಾವುದೇ ವಿಚಾರ ಅವರ ಅಂತರಂಗ ದಲ್ಲಿ ಪರಿಸ್ಫೂರ್ತಿಗೊಳ್ಳುವದೊಂದೇ ತಡ, ತಕ್ಷಣವೇ ಕಾರ್ಯರಂಗಕ್ಕೆ ಇಳಿದು ಬಿಡುತ್ತವೆ. ಆಮೆಯ ಮಂದಗಮನ ಅವರಿಗೆ ಒಗ್ಗದು. ಅವರ ಕ್ರಿಯಾ ಸಾಮರ್ಥ್ಯ ಒಂದು ಪ್ರಬಲವಾದ ಅಸ್ತ್ರವಾಗಿದೆ. ಲೋಕದ ಸಿಹಿ–ಕಹಿಗಳನ್ನು ನಗುನಗುತ್ತ ಎದುರಿಸಿ, ಪ್ರತಿರೋಧ ಶಕ್ತಿಗಳನ್ನು ತಮ್ಮ ದೈವೀಶಕ್ತಿಯಿಂದ ನಿಷ್ಫಲಗೊಳಿಸಿ, ಆಕಾಶನೌಕೆಯ ತೀಕ್ಷ್ಣವೇಗದಿಂದ ಮುನ್ನುಗ್ಗಬಲ್ಲ ವೈಜ್ಞಾನಿಕ ಲೋಕದ ರಸಋಷಿ ಅವರಾಗಿದ್ದಾರೆ. ಒಳಗೊಂದು ಹೊರಗೊಂದು ಎಂದಿಗೂ ಅವರಿಗಿಲ್ಲ. ಅವರೊಂದು ಬಯಲು ಬಂಗಾರ. ಅರಳಿದ ವಜ್ರಪುಷ್ಪ. ಬೆಳಗುವ ರತ್ನದೀಪ.

## ಜೋಗದ ಜಲಪಾತ

ಹಗಲೆನ್ನದೆ ರಾತ್ರಿಯೆನ್ನದೆ ಓತಪ್ರೋತವಾಗಿ ಅವರು ಧಾರ್ಮಿಕ–ಸಾಮಾಜಿಕ–ಸಾಂಸ್ಕೃತಿಕ–ಸಾಹಿತ್ಯಕ–ವೈಜ್ಞಾನಿಕ ರಂಗಗಳಲ್ಲಿ ನಿರ್ಮಲ ಸೇವೆ ಯನ್ನು ನೀಡುತ್ತಿದ್ದಾರೆ; ಜೋಗದ ಜಲಪಾವಾಗಿತದ್ದಾರೆ. ಏಕಕಾಲಕ್ಕೆ ನಾಲ್ಕೆಂಟು ಕಡೆಗೆ ಗಮನವಿರಿಸಿ, ಹತ್ತಾರು ಕಾಯಕಗಳಲ್ಲಿ ತತ್ಪರರಾಗಬಲ್ಲ ವಿಚಿತ್ರ ವ್ಯಕ್ತಿಕೌಶಲ ಅವರಿಗಿದೆ. ಇದು ಅವರಿಗೆ ದೇವರಿತ್ತ ವರದಾನ. ಎಂದಿಗೂ ಯಾವ ಭಕ್ತರೂ ಜಗದ್ಗುರುಗಳು ಬೇಸರಿಕೆಯಿಂದ ಬಳಲಿದ್ದನ್ನು, ಆಕಳಿಸಿದ್ದನ್ನು, ಮುಖ ಸಪ್ಪಗೆ ಮಾಡಿದ್ದನ್ನು, ಇಲ್ಲವೆ ಸಿಟ್ಟಿನಿಂದ ಕೆಂಡ ಕಿಡಿಯಾದದ್ದನ್ನೂ

ನೋಡಿಲ್ಲ. ನಿರಂತರವೂ ಜ್ಯೋತಿರ್ಮಯವಾದ ಅಮೃತ ಚಂದ್ರನಂತೆ ಅವರ ಹಸನ್ಮುಖ ಎಲ್ಲರನ್ನೂ ಅಪ್ಪಿಕೊಂಡಿದೆ. ಎಂದಿಗೂ ಅವರು ಮರೆತು ಕೂಡ ಜಾತಿಭೇದವನ್ನು ತೋರಿಲ್ಲ. ಪರಧರ್ಮದವರನ್ನು ನಿಂದಿಸಿಲ್ಲ. ಒಂದರ್ಥದಲ್ಲಿ ಅವರು ತಮ್ಮ ಜ್ಞಾನಸೌಧದ ಎಲ್ಲ ಬಾಗಿಲುಗಳನ್ನೂ ತೆರೆದಿದ್ದಾರೆ. ಸರ್ವಧರ್ಮಗಳ ಸರ್ವದೇಶಗಳ ಸಮಸ್ತ ಮಾನವರ ವಿಚಾರ ಶ್ರೀಮಂತಿಕೆಯನ್ನು ಸ್ವಾಗತಿಸಿದ್ದಾರೆ. ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ. ಹೀಗಾಗಿ ಅವರು ಅನೇಕರಂತೆ ಒಂದು ಬಾವಿಯಲ್ಲಿ ಮಾತ್ರ ಈಜಿದ ಮಂಡೂಕರಾಗದೆ ಸಾಗರದ ತೆರೆಗಳೊಂದಿಗೆ ಆಡಿದ ಹಂಸಪಕ್ಷಿಯಾಗಿದ್ದಾರೆ.

## ದುಡಿಮೆಯೇ ದೇವರ ಪೂಜೆ

ಜಗದ್ಗುರುಗಳ ಜೀವನದಲ್ಲಿ ಕರ್ಮಯೋಗವು ಪುಸ್ತಕದಲ್ಲಿ ಮಾತ್ರ ಉಳಿದುಕೊಂಡ ತತ್ತ್ವವಾಗಿಲ್ಲ. ಅವರ ರಕ್ತದ ಅರ್ಥವೇ ಕರ್ಮಯೋಗವಾಗಿದೆ. ಮೂವತ್ತು ವರ್ಷಗಳ ಹಿಂದೆ ಜಗದ್ಗುರು ಮೂರುಸಾವಿರಮಠವನ್ನು ನೋಡಿದವರು ಇಂದು ಹೊಸದಾಗಿ ನೋಡಿದರೆ ಬೆಕ್ಕಸ ಬೆರಗಾಗುವಂತಿದೆ. ಎರಡುಕೋಟಿ ರೂಪಾಯಿಗಳ ಹೊಸ ಕಟ್ಟಡಗಳು ಅಲ್ಲಿ ಅದ್ಧೂರಿಯಿಂದ ಮೇಲೆದ್ದಿವೆ. ಈ ಎಲ್ಲ ಮಹಾಮಂದಿರಗಳು ಅಲಂಕಾರಕ್ಕಾಗಿ ಮಾತ್ರ ಮೇಲೆದ್ದ ನಿರುಪಯುಕ್ತ ಆಲಯಗಳಲ್ಲ. ಶಿಕ್ಷಣ–ಸಂಸ್ಕೃತಿ–ಧರ್ಮ–ಜ್ಞಾನ–ಅನುಭವಗಳ ಪ್ರಸಾರಕ್ಕೆ ಕೇಂದ್ರಪ್ರಾಯವಾಗಿವೆ. ಇವುಗಳಲ್ಲಿ ವಿದ್ಯಾರ್ಥಿನಿಲಯ, ಪ್ರಾರ್ಥನಾಮಂದಿರ, ಪ್ರಸಾದ ಮಂದಿರ, ಕಲ್ಯಾಣಮಂಟಪ, ಅನುಭವಮಂಟಪ, ಸಂಸ್ಕೃತವಿದ್ಯಾಲಯ, ಗ್ರಂಥಾಲಯ, ಸಂಶೋಧನ ಸಂಸ್ಥೆ, ಪರಂಜ್ಯೋತಿ ಕಾರ್ಯಾಲಯ, ಮುದ್ರಣಾಲಯ, ಪ್ರಾಥಮಿಕ ಶಾಲೆಗಳು, ಬಾಲಿಕೆಯರ–ಬಾಲಕರ ಮಾಧ್ಯಮಿಕ ಶಾಲೆಗಳು, ಮಹಿಳಾ ಕಾಲೇಜ್, ಜನರಲ್ ಹಾಸ್ಟೆಲ್, ಕುಮಾರೇಶ್ವರ ಶಿವಯೋಗಿ ಸಂಘ, ವಿದ್ಯಾವರ್ಧಕ ಸಂಘ, ವೈದಿಕ ಜ್ಯೋತಿಷ್ಯ ಪಾಠಶಾಲೆ, ಗೋಶಾಲೆ, ಅತಿಥಿ ಮಂದಿರ, ಅಂಚೆ ಮನೆ, ಮಠದ ಕೇಂದ್ರ ಕಚೇರಿ, ಸ್ವಾಮಿಗಳು ದರ್ಶನವನ್ನೀಯುವ ಚೇಂಬರ್, ಮೀಟಿಂಗ್ ಹಾಲ್, ಸ್ವಾಮಿಗಳ ಪೂಜಾ ಮಂದಿರ–ಧ್ಯಾನ ಮಂದಿರ–ಅಧ್ಯಯನ ಮಂದಿರಗಳು, ಪ್ರಭುನಿಕೇತನ, ಗ್ರಂಥಭಾಂಡಾರ, ತಾಳೋಲೆಗಳ ಸಂಗ್ರಹಾಲಯ, ಸ್ಟೋರ್‌ಹೌಸ್, ಜಗದ್ಗುರು ಧರ್ಮ ಪ್ರಸಾರಕ ಮಂಡಳ, ಜಗದ್ಗುರು ಗುರುಸಿದ್ಧೇಶ್ವರ ಪ್ರಕಾಶನ ಸಂಸ್ಥೆಗಳು ನೆಲೆಸಿವೆ. ಗೋಪುರ ಗಡಿಯಾರ, ಕಮರ್ಸಿಯಲ್ ಕಾಂಪ್ಲೆಕ್ಸ್, ಹಾಯಸ್ಕೂಲ್ ಕಟ್ಟಡಗಳು, ಹಾಸ್ಟೆಲ್ ಕಟ್ಟಡ, ಆಫೀಸ್ ಕಟ್ಟಡಗಳು, ಒಳಾಂಗಣದ ಅಂಗಡಿ ಸಾಲುಗಳು ಇವೆಲ್ಲಾ ಪ್ರಚಂಡ ಪ್ರಗತಿಯ ಸಂಕೇತ. ಪ್ರತಿಯೊಂದು ಸಂಸ್ಥೆಯೂ ಜಗದ್ಗುರುಗಳ ನೇರ ಮಾರ್ಗದರ್ಶನದಲ್ಲಿ ಕಾರ್ಯನಿರತವಾಗಿರುತ್ತದೆ.

ಜಗದ್ಗುರುಗಳು ಈ ಎಲ್ಲ ಆಂತರಿಕ ಸಂಸ್ಥೆಗಳಲ್ಲದೆ ಕನ್ನಡನಾಡಿನ, ಹೊರನಾಡಿನ ನೂರಾರು ಸಂಸ್ಥೆಗಳನ್ನು ಸಮರ್ಥ ರೀತಿಯಿಂದ ನೋಡಿಕೊಂಡು ಹೋಗುತ್ತಾರೆ. ಅವುಗಳಲ್ಲಿ ಘಟಪ್ರಭೆಯ ಆರೋಗ್ಯಧಾಮ ಹಾಗೂ ಶಿವಯೋಗಮಂದಿರಗಳನ್ನು ಹೆಸರಿಸಬಹುದು. ನಾಡಿನ ಅನೇಕ ಶಿಕ್ಷಣ ಸಂಸ್ಥೆಗಳೂ, ಕಾಲೇಜುಗಳೂ, ಧಾರ್ಮಿಕ ಸಂಸ್ಥೆಗಳೂ, ಮತಮಾನ್ಯಗಳೂ, ಸಾಮಾಜಿಕ ಸಂಘಗಳೂ, ಸಾಂಪತ್ತಿಕ ನಿಯೋಜನೆಗಳೂ, ಬ್ಯಾಂಕುಗಳೂ, ಪತ್ರಿಕೆಗಳೂ ಜಗದ್ಗುರುಗಳ ದಕ್ಷ ಮಾರ್ಗ ದರ್ಶನವನ್ನೂ, ಆಶೀರ್ವಾದವನ್ನೂ ಮೇಲಿಂದಮೇಲೆ ಪಡೆಯುತ್ತವೆ. ಅಂಥವು ಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕೆ. ಎಲ್. ಇ. ಸಂಸ್ಥೆ, ಪ್ರಮುಖ ವಾಣಿಜ್ಯ ಸಂಘಗಳು, ಇಲಕಲ್ಲಿನ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ ಮೊದಲಾದವು ಗಳನ್ನು ಗಮನಿಸಬಹುದು.

## ಜ್ಞಾನವೇ ಆತ್ಮ ವಿಜ್ಞಾನದ ದಾರಿ

ಜಗದ್ಗುರುಗಳು ಮೂಲತಃ ಶಿಕ್ಷಣ ಪ್ರೇಮಿಗಳು. ಜ್ಞಾನಪ್ರಸಾರವೆಂದರೆ ಅವರ ಮೈ ಉಬ್ಬುತ್ತದೆ. ಇಮ್ಮಡಿ ಮುಮ್ಮಡಿ ಉತ್ಸಾಹ ಪುಟಿಯುತ್ತದೆ. ಇದ ಕ್ಕಾಗಿ ೬೦೦ ಪುಸ್ತಕಗಳ ಪ್ರಕಟನೆಯ ಗುರಿಯ ದಾರಿಯಲ್ಲಿ ನಡೆದು ಅಂದಾಜು ಒಂದುಕೋಟಿ ರೂಪಾಯಿ ವೆಚ್ಚದಿಂದ ಈ ಗುರಿ ತಲುಪುವಲ್ಲಿ ನಿರ್ಧರಿಸಿದರು. ಧರ್ಮ–ಸಾಹಿತ್ಯ–ಸಂಸ್ಕೃತಿ–ಕಲೆ–ಆರೋಗ್ಯಗಳ ಪ್ರಸಾರ ಕುರಿತು "ಪರಂಜ್ಯೋತಿ" ಪತ್ರಿಕೆ ಆರಂಭಿಸಿದರು. ಅನೇಕ ಶಾಲೆ-ಕಾಲೇಜುಗಳನ್ನು ಸ್ಥಾಪಿಸಿದರು. ಕಲೆ–ವಾಣಿಜ್ಯ–ವಿಜ್ಞಾನ ಮಹಾವಿದ್ಯಾಲಯಗಳನ್ನಲ್ಲದೆ ಇಲಕಲ್ಲ ಮತ್ತು ಹುಬ್ಬಳ್ಳಿಯಲ್ಲಿ ತಾಂತ್ರಿಕ ವಿದ್ಯಾಲಯಗಳನ್ನೂ ತೆರೆದರು. ಇಲಕಲ್ಲಿನಲ್ಲಿ ೨೦ ಲಕ್ಷ ವೆಚ್ಚದಿಂದ ತೆರೆದ ಜಗದ್ಗುರು ಗಂಗಾಧರ ತಾಂತ್ರಿಕ ಮಹಾವಿದ್ಯಾಲಯ ರಾಜ್ಯದಲ್ಲೇ ಉತ್ಕೃಷ್ಟ ವಾಗಿದೆ. ಹುಬ್ಬಳ್ಳಿಯಲ್ಲಿ ಮಹಿಳೆಯರಿಗಾಗಿ ಶಿಶು ವಿಹಾರ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆಗಳಲ್ಲದೆ; ೩ ಸಾವಿರ ವಿದ್ಯಾರ್ಥಿನಿಯರ ಸಂಖ್ಯೆಯಿರುವ ಬೃಹತ್ ಮಹಿಳಾ ಮಹಾವಿದ್ಯಾಲಯ ತೆರೆದರು. ಧಾರವಾಡ ಮತ್ತು ಶಿರಢ್ಯಾಣ (ಬೆಳಗಾವಿ ಜಿಲ್ಲೆ)ಗಳಲ್ಲಿ ಒಟ್ಟು ಎರಡುಕೋಟಿ ರೂಪಾಯಿ ವೆಚ್ಚದಿಂದ ವಸತಿ ಶಾಲೆಗಳನ್ನು ತೆರೆಯುವ ಮಹಾ ಯೋಜನೆಯನ್ನು ಹಮ್ಮಿಕೊಂಡಿದ್ದಾರೆ. ಜಗದ್ಗುರು ಗುರು ಸಿದ್ಧೇಶ್ವರ ಗ್ರಂಥಮಾಲೆಯಿಂದ ಅನೇಕ ಉದ್ಗ್ರಂಥಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ವಿಶೇಷಾರ್ಥ ಪ್ರಕಾಶಿಕೆ, ವೀರಶೈವಾನಂದ ಚಂದ್ರಿಕೆ, ಸ್ವತಂತ್ರ ಸಿದ್ಧ ಲಿಂಗೇಶ್ವರ ವಚನ, ಕ್ಷೇತ್ರಜ್ಞ ಸುಮನೋವಾದ, ವಿವೇಕ ಚಿಂತಾಮಣಿ, ಮಣಿ ವಚನಗಳು, ಸಂಸ್ಕೃತ ಪ್ರವೇಶ, ಸಂಸ್ಕೃತ ಪ್ರಕಾಶ್, ವ್ಯಾಕರಣ ದರ್ಪಣ, ಹೂ ಹಣ್ಣು, ಕುಮಾರ ಗೀತೆ, ಚಿದಾನಂದದ ಚಿಲುಮೆ, ವಚನಶಾಸ್ತ್ರ ರಹಸ್ಯ, ಹೊಂಬೆಳಗು, ಜೀವನ ವಿಕಾಸ, ಅಮೃತ ಬಿಂದು, ಸಂಸ್ಕೃತಿ, ಆಶೀರ್ವಾಣಿ, ನಮ್ಮ

ವಿದೇಶ ಯಾತ್ರೆ, ಪೂರ್ಣಪ್ರಜ್ಞ ವಚನಗಳು, ಇಂಗ್ಲಿಷ್–ಹಿಂದಿ–ಬಂಗಾಲಿ–ತೆಲುಗು–ತಮಿಳು–ಮರಾಠಿಯಲ್ಲಿ ಶರಣರ ಅನುವಾದಿತ ವಚನ ಪುಸ್ತಕಗಳು, ಐದು ಬೃಹತ್ ಸಂಪಾದಿತ ಸಂಪುಟಗಳು (ಅಭಿನಂದನ ಗ್ರಂಥಗಳು) ಮುಂತಾದುವನ್ನು ಗಮನಿಸ ಬಹುದು. ಅಂದಾಜು ನಾಲ್ಕುನೂರು ಗ್ರಂಥಗಳ ಪ್ರಕಟನೆಗೆ ಈಗಾಗಲೆ ೮೦ ಲಕ್ಷ ರೂಪಾಯಿ ವೆಚ್ಚವಾಗಿದ್ದು, ಸಮಗ್ರ ೬೦೦ ಗ್ರಂಥಗಳ ಪ್ರಕಟನೆಗೆ ಒಂದುಕೋಟಿ ಹಣ ವೆಚ್ಚವಾಗಲಿದೆ.

## ಮೂಡಿತು "ಪರಂಜ್ಯೋತಿ"

ಪೂಜ್ಯ ಜಗದ್ಗುರುಗಳಿಗೆ ಪತ್ರಿಕೆಗಳೆಂದರೆ ಪ್ರಾಣ. ಶಿವಯೋಗಮಂದಿರದ ಕೈಬರಹದ ಪತ್ರಿಕೆ "ಸುಕುಮಾರ"ದಿಂದ ಆರಂಭಿಸಿ ಕನ್ನಡನಾಡಿನ ಅತ್ಯಧಿಕ ಪ್ರಸಾರ ವುಳ್ಳ ಪತ್ರಿಕೆಗಳಲ್ಲೆಲ್ಲ ಇವರ ಚಿಂತನ–ಕವನ–ಉಪನ್ಯಾಸಪ್ರಕಟವಾದವು. ಜಪಾನದ ಅತ್ಯಧಿಕ ಪ್ರಸಾರವುಳ್ಳ ದಿನಪತ್ರಿಕೆಯೊಂದರ ಮುಖಪುಟದಲ್ಲಿ ಇವರ ಉಪನ್ಯಾಸದ ಫೋಟೊ ಹಾಗೂ ಕ್ಯೋಟೋದ ಅಂತರ್‌ರಾಷ್ಟ್ರೀಯ ಶಾಂತಿ ಸಮ್ಮೇಲನದ ಉಪ ನ್ಯಾಸಗಳು ಪ್ರಕಟಗೊಂಡವು. ನಮ್ಮ ಸಂಸ್ಕೃತಿ, ಸಾಹಿತ್ಯ, ಧರ್ಮ, ಸಿದ್ಧಾಂತ ವಾಙ್ಮಯಗಳ ಪ್ರಸಾರಕ್ಕೆ ಪತ್ರಿಕೆ ಪ್ರಬಲವಾದ ಮಾಧ್ಯಮವೆಂದು ಇವರು ಮನ ಗಂಡರು. "ಪರಂಜ್ಯೋತಿ" ಪತ್ರಿಕೆ ಕೇವಲ ಮೂರುಸಾವಿರಮಠದ ಮುಖವಾಣಿ ಯಾಗದೇ; ಇಲ್ಲವೆ ವೀರಶೈವ ಧರ್ಮಮಾತ್ರದ ಪತ್ರಿಕೆಯಾಗದೇ; ಅದರ ಶೀರ್ಷಿಕೆ ಯಲ್ಲಿಯೇ ಗುರುತಿಸಿದಂತೆ "ಸೌಂಸ್ಕೃತಿ ಸೌರಭ ಸೂಸುವ ಮಾಸಿಕ"ವಾಗಿ ಪ್ರೊ. ಜಿ. ಎಚ್. ಹನ್ನೆರಡುಮಠ ಅವರ ಸಂಪಾದಕತ್ವದಲ್ಲಿ ೧೯೬೮ ರಲ್ಲಿ ಮೂಡಿ ಬಂತು. ಈ ವರೆಗೆ "ಪರಂಜ್ಯೋತಿ" ೨೦ ಸಾವಿರ ಪುಟಗಳಷ್ಟು ಸಾಹಿತ್ಯ ಕನ್ನಡ ನಾಡಿಗೆ ನೀಡಿದ್ದು ಅತ್ಯಧಿಕ ಪ್ರಸಾರವುಳ್ಳ ಧಾರ್ಮಿಕ ಪತ್ರಿಕೆಯಾಗಿದೆ. "ಪರಂಜ್ಯೋತಿ" ಪತ್ರಿಕೆ ಸ್ವಂತ ಕಟ್ಟಡ ಹಾಗೂ ಸ್ವಂತ ಮುದ್ರಣಾಲಯ ಹೊಂದಿದ್ದು ಇಂದಿನವರೆಗೂ ಒಮ್ಮೆ ಕೂಡಾ ನಿಲ್ಲದೆ ಪ್ರಕಟವಾಗಿರುವದು ಪೂಜ್ಯ ಜಗದ್ಗುರುಗಳ ಕರ್ತೃತ್ವ ಶಕ್ತಿಯ ಪ್ರತಿಫಲವಾಗಿದೆ.

## ದಿಲ್ಲಿಯ ವಿಶ್ವಶಾಂತಿ ಪರಿಷತ್ತಿಗೆ ಕರೆ

ಜಗದ್ಗುರುಗಳು ಪೀಠಾರೋಹಣಗೈದು ೧೨ ವರ್ಷಗಳ ಅವಧಿಯಲ್ಲಿ ನಾಡು ಬೆಕ್ಕಸ ಬೆರಗಾಗುವಂತೆ ಕಾರ್ಯ ಮಾಡಿ ತೋರಿಸಿದರು. ಮುಖ್ಯವಾಗಿ ಸರ್ವ ಧರ್ಮ ಸಮನ್ವಯ, ಭಾರತೀಯತೆ, ಮಾನವೀಯ ಮೌಲ್ಯಗಳನ್ನು ಕುರಿತಾದ ಇವರ ಉಪನ್ಯಾಸಗಳು, ಲೇಖನಗಳು, ಚಿಂತನಗಳು, ಕವನಗಳು ಆಕಾಶವಾಣಿಯಲ್ಲಿ ಮತ್ತು ನಾನಾ ಪತ್ರಿಕೆಗಳಲ್ಲಿ ಪ್ರಕಟನೆಗೊಂಡವು. ಇವರ ವ್ಯಕ್ತಿತ್ವದಿಂದ ಪ್ರಭಾವಿತ ರಾದ ಶ್ರೀ ರಂಗನಾಥ ದಿವಾಕರ ಅವರು ದಿಲ್ಲಿಯಲ್ಲಿ ದಿ. ೧೨–೧–೧೯೬೮ ರಂದು

ನೆರವೇರಲಿರುವ ಅಂತರ್ರಾಷ್ಟ್ರೀಯ ಶಾಂತಿ ಸಮ್ಮೇಲನಕ್ಕೆ ಇವರು ಬರುವದು ಅತ್ಯವಶ್ಯವೆಂದು ಕಂಡುಕೊಂಡರು. ಆ ಮೇರೆಗೆ ಅಮೇರಿಕೆಯ ಮಹಾನ್ ವಿದ್ವಾಂಸರಾದ ಹೋಮರ್ ಎ.ಜಾಕ್ (Homer A. Jack) ಅವರಿಂದ ಇವರಿಗೆ ಆಮಂತ್ರಣ ಬಂದಿತು. ದಿಲ್ಲಿಯಲ್ಲಿ ಜರುಗಿದ ಜಾಗತಿಕ ಶಾಂತಿ ಪರಿಷತ್ತಿನಲ್ಲಿ ಕನ್ನಡನಾಡನ್ನು ಪ್ರತಿನಿಧಿಸಿ ವಿಚಾರ ಪರಿಪ್ಲುತವಾದ ಉಪನ್ಯಾಸವನ್ನು ಕರುಣಿಸಿದರು. ದಿಲ್ಲಿಯ ಈ ಸಮ್ಮೇಲನಕ್ಕೆ ಇವರೊಂದಿಗೆ ವಿಮಾನಿನಲ್ಲಿ ತೆರಳಿದ್ದ ಚಿಂಚಣಿಯ ಶ್ರೀ ನಿ. ಪ್ರ. ಸಿದ್ಧಪ್ರಭುಸ್ವಾಮಿಗಳು ಈ ಸಮ್ಮೇಲನದ ಪ್ರತ್ಯಕ್ಷದರ್ಶಿ ವಿವರವನ್ನು ಈ ರೀತಿ ನೀಡಿದ್ದಾರೆ: "....ಶ್ರೀ ಜಗದ್ಗುರುಗಳು ದಿಲ್ಲಿಯ ವಿಶ್ವ ಶಾಂತಿ ಪರಿಷತ್ತಿಗೆ ದಯಮಾಡಿಸುತ್ತಾರೆಂಬ ಶುಭವಾರ್ತೆಯು ಆಗಲೇ ಎಲ್ಲ ಕಡೆಗೂ ಹಬ್ಬಿತು. ವೃತ್ತಪತ್ರಿಕೆಗಳ ಮುಖದಿಂದಲೂ ಪ್ರಚಾರವಾಯಿತು. ಶ್ರೀ ಜಗದ್ಗುರುಗಳ ಕ್ರಾಂತಿಪದವಿನ್ಯಾಸವು ಸಕಲರಿಗೂ ಹರ್ಷಪ್ರದವಾಯಿತು.... ಲಿಂ. ಗುರುಮಹಾಂತಸ್ವಾಮಿಗಳು ಇಲಕಲ್ ಮತ್ತು ನಾವು ಸಹ ಜಗದ್ಗುರುಗಳೊಡನೆ ದಿಲ್ಲಿ ಪರಿಷತ್ತಿಗೆ ಹೋಗಬೇಕೆಂದು ನಿಶ್ಚಯಿಸಿದೆವು. ಆಗಲೇ ಎಲ್ಲ ಕಡೆಯಿಂದಲೂ ಶ್ರೀ ಜಗದ್ಗುರುಗಳಿಗೆ ಅಭಿನಂದನಪರ ಓಲೆಗಳು ಬರಹತ್ತಿದವು. ಶ್ರೀ ಜಗದ್ಗುರುಗಳು ತಮ್ಮ ಭಾಷಣದ ಸಿದ್ಧತೆಯಲ್ಲಿ ತೊಡಗಿದರು. ವೀರಶೈವ ಧರ್ಮಗ್ರಂಥಗಳಲ್ಲಿಯ ಧರ್ಮತತ್ವ ರತ್ನಗಳ ಮಣಿಮಾಲಿಕೆಯನ್ನು ಮಾಡಿಕೊಂಡರು....ಮುಂಬೈ, ದಿಲ್ಲಿ, ಕಾಶಿ, ಕಲಕತ್ತಾ, ಆಗ್ರಾ ಮುಂತಾದ ಸ್ಥಾನಗಳಿಂದ ಸರಕಾರಿ ಮತ್ತು ಸಾರ್ವಜನಿಕರಿಂದ ಹಾರ್ದಿಕ ಸ್ವಾಗತಪರ ಓಲೆಗಳು ಕೂಡಲೇ ಬಂದವು. ದಿನಾಂಕ ೧೦-೧-೬೮ ರಂದು ಶ್ರೀ ಜಗದ್ಗುರುಗಳು ಪರಿಷತ್ತಿಗೆ ಹೊರಡಲು ಅಣಿಯಾದರು. ಹುಬ್ಬಳ್ಳಿ, ಧಾರವಾಡ, ಗದಗ ಮೊದಲಾದ ಅನೇಕ ನಗರಗಳ ಸದ್ಭಕ್ತರು ಶ್ರೀ ಜಗದ್ಗುರುಗಳನ್ನು ಬೀಳ್ಕೊಡಲು ಕೂಡಿದರು. ಹೆಣ್ಣುಮಕ್ಕಳು ಗಂಡುಮಕ್ಕಳು ಸಣ್ಣಮಕ್ಕಳು ಅನಂತಾನಂತ ಸಕಲ ಜಾತಿಯ ಹಿರಿಯರು ಶ್ರೀ ಜಗದ್ಗುರುಗಳಿಗೆ ಜಯವಾಗಲೆಂದು ಜಯಜಯಕಾರ ಮಾಡಿದರು. ಮುತ್ತೈದೆಯರು ಆರತಿ ಮಾಡಿದರು. ಸದ್ಭಕ್ತರು ಮಾಲಾರ್ಪಣೆ ಮಾಡಿದರು....ನಂತರ ಕಾರಿನಿಂದ ಬೆಳಗಾಂವ ಸಾಂಬ್ರಾ ವಿಮಾನ ನಿಲ್ದಾಣಕ್ಕೆ ದಯ ಮಾಡಿಸಿದರು. ಅಲ್ಲಿಯೂ ಸಕಲ ಸದ್ಭಕ್ತ ಸಮಾಜಾಭಿಮಾನಿಗಳು ಗುರುವಿರಕ್ತ ಪಟ್ಟ ಚರಮೂರ್ತಿಗಳು ಶ್ರೀ ಜಗದ್ಗುರುಗಳನ್ನು ಬೀಳ್ಕೊಡಲು ಅತ್ಯಾನಂದದಿಂದ ಆಗಮಿಸಿದ್ದರು........ದಿ. ೧೦-೧-೬೮ ಮುಂಜಾನೆ ೭ ಗಂಟೆಗೆ ಹೊರಡುವ ವಿಮಾನವು ಸಿದ್ಧವಾಯಿತು. ಶ್ರೀ ಜಗದ್ಗುರುಗಳು ಸಕಲ ಸದ್ಭಕ್ತರಿಗೆ ಕೃಪಾದೃಷ್ಟಿಯನ್ನು ಬೀರಿ, ತಮ್ಮ ಸಂಗಡಿಗರನ್ನು ಕರೆದುಕೊಂಡು ವಿಮಾನಾರೂಢರಾದರು....ಮುಂಬಯಿಯಲ್ಲಿ ನಿಲ್ದಾಣದಲ್ಲಿ ಶ್ರೀ ಜಗದ್ಗುರುಗಳ ಆಗಮನದ

ನಿರೀಕ್ಷಣೆ ಮಾಡುತ್ತಿದ್ದ ಮುಂಬಯಿ-ಕರ್ನಾಟಕ ಸಂಘದವರು, ಮುಂಬಯಿ ಬಸವ ಸಮಿತಿಯವರು, ಹುಬ್ಬಳ್ಳಿಯ ಸಿದ್ಧೇಶ್ವರ ಕಂಪನಿಯ ಮಾಲಕರ ಬಂಧುಗಳು ಇನ್ನೂ ಅನೇಕ ಸದ್ಭಕ್ತರು ವಿಮಾನದಿಂದ ಶ್ರೀ ಜಗದ್ಗುರುಗಳು ಇಳಿಯುತ್ತಿರು ವಾಗಲೇ ಜಯಜಯಕಾರ ಮಾಡಿದರು....ಸಂಜೆಯಲ್ಲಿ ಸರದಾರ ಹೈಸ್ಕೂಲಿನಲ್ಲಿ ಶ್ರೀ ಜಗದ್ಗುರುಗಳ ಸತ್ಕಾರಪರ ಕಾರ್ಯಕ್ರಮಗಳು ಪ್ರಾರಂಭವಾದವು. ಅಗಣಿತ ಜನಸ್ತೋಮವು ಶ್ರೀ ಜಗದ್ಗುರುಗಳ ಆಶೀರ್ವಾಣಿ ಆಲಿಸಲು ಆತುರಗೊಂಡಿತ್ತು.... ಒಂದು ದಿವಸದ ವಾಸ್ತವ್ಯದ ನಂತರ ಸಕಲ ಸದ್ಭಕ್ತರಿಂದ ಬೀಳ್ಕೊಂಡು, ವಿಮಾ ನಾರೂಢರಾಗಿ ದಿಲ್ಲಿಗೆ ಸಕಲ ಭಕ್ತಜನ ಪರಿವಾರ ಸಹಿತವಾಗಿ ಹೊರಟರು. ದಿಲ್ಲಿ ವಿಮಾನ ನಿಲ್ದಾಣದಲ್ಲಿ ಗಾಂಧಿ ಸ್ಮಾರಕ ನಿಧಿಯ ಸದಸ್ಯರು, ಕೇಂದ್ರ ಸಹಕಾರಿ ಮಂತ್ರಿಗಳಾದ ಶ್ರೀಮಾನ್ ಗುರುಪಾದಸ್ವಾಮಿಯವರ ಆಪ್ತ ಕಾರ್ಯದರ್ಶಿಯವರು, ಸುಪ್ರಸಿದ್ಧ ಜವಳಿ ವಕೀಲರ ಚಿರಂಜೀವರುಗಳು, ದಿಲ್ಲಿಯ ಕೋಟ್ಯಾಧೀಶ ಶೇಟಜಿ ಯವರೇ ಮೊದಲಾದ ಅನಂತ ಸದ್ಭಕ್ತರು ಒಳ್ಳೇ ಗೌರವಯುತವಾಗಿ ಶ್ರೀ ಜಗ ದ್ಗುರುಗಳನ್ನು ಸ್ವಾಗತಿಸಿದರು. ಸದುವಿನಯ ಸದಾಚಾರ ಸಂಪನ್ನ ಮಂತ್ರಿಶ್ರೇಷ್ಠ ಶ್ರೀ ಗುರುಪಾದಸ್ವಾಮಿಗಳ ಭವ್ಯ ನಿವಾಸದಲ್ಲಿ ಶ್ರೀ ಜಗದ್ಗುರುಗಳ ವಾಸ್ತವ್ಯ ವಾಯಿತು....ದಿ. ೧೨-೧-೭೮ ರಂದು ದಿಲ್ಲಿ ವಿಶ್ವಶಾಂತಿ ಪರಿಷತ್ತು ಪ್ರಾರಂಭ ವಾಯಿತು. ಅರವತ್ತು ರಾಷ್ಟ್ರಗಳ ಪ್ರಮುಖ ಧಾರ್ಮಿಕ ಮುಖಂಡರು ಆಮಂತ್ರಿತ ರಾಗಿದ್ದರು. ಅವರಲ್ಲಿ ಸುಮಾರು ೧೮೦ ಜನರು ಆಗಮಿಸಿದ್ದರು. ಗಾಂಧಿ ಸ್ಮಾರಕ ನಿಧಿಯವರು ರಚಿಸಿದ ಸಭಾಮಂದಿರವು ಬಹು ರಮಣೀಯವಾಗಿತ್ತು. ಆಸನದ ವ್ಯವಸ್ಥೆಯೂ ಸರಿಯಾಗಿತ್ತು. ವೇಷಭೂಷಣಾದಿಗಳು ಅವರವರ ಧಾರ್ಮಿಕ ಸಂಸ್ಕೃತಿಯ ದ್ಯೋತಕಗಳಾಗಿದ್ದವು. ಬೌದ್ಧ ಸನ್ಯಾಸಿಗಳೇ ಎದ್ದು ಕಾಣುತ್ತಿದ್ದರು. ಪೋಲಂಡ್ ದೇಶದ ರಾಣಿ· ಸರಕಾರವೇ ಅಂದಿನ ಸಭಾಧ್ಯಕ್ಷತೆಯನ್ನು ವಹಿಸಿತ್ತು. ಪ್ರಾರ್ಥನೆಯ ನಂತರ ಮುಸಲ್ಮಾನ ಧರ್ಮಗುರುಗಳು ಮುಸಲ್ಮಾನ ಧರ್ಮದ ಬಗ್ಗೆ ಮಾತಾಡಿದರು. ಮತ್ತೊಬ್ಬರ ಭಾಷಣದ ನಂತರ ಶ್ರೀ ಜಗದ್ಗುರುಗಳ ಭಾಷಣದ ಸರತಿ ಬಂತು."

### ದಿಲ್ಲಿ: ವಿಶ್ವಶಾಂತಿ ಸಮ್ಮೇಲನದಲ್ಲಿ: ಉಪನ್ಯಾಸ

"ಶ್ರೀ ಜಗದ್ಗುರುಗಳು 'ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ' ಎಂಬ ವಿಷಯದ ಮೇಲೆ ಹಿಂದೀ ಭಾಷೆಯಲ್ಲಿ ಭಾಷಣ ಮಾಡಲು ಪ್ರಾರಂಭಿ ಸಿದರು. ಕಾವಿಲಾಂಛನಧಾರಿಗಳಾದ ಶ್ರೀ ಜಗದ್ಗುರುಗಳ ಕಡೆಗೆ ಸಕಲರ ದೃಷ್ಟಿ ಗಳು ಕೇಂದ್ರೀಕೃತವಾದವು. ಭವ್ಯ ಸಭಾಭವನವು ಕಿಕ್ಕಿರಿದು ತುಂಬಿತ್ತು. ಸೂಜಿ ಬಿದ್ದರೂ ಅದರ ಸಪ್ಪಳ ಕೇಳುವಂತಹ ಬಹುಶಾಂತ ರಮಣೀಯ ವಾತಾ ವರಣವು ಆವರಿಸಿತು. ಶ್ರೀ ಜಗದ್ಗುರುಗಳು ಶಾಂತ ಗಂಭೀರ ಮುಖಮುದ್ರೆ

ಯುಳ್ಳವರಾಗಿ ಪ್ರಫುಲ್ಲಿತ ದೃಷ್ಟಿಯಿಂದ ಸಭಿಕರ ಚಿತ್ತವನ್ನು ಸೆಳೆದು ಕೇಂದ್ರೀಕೃತ ಮಾಡಿಕೊಂಡು ವಿಶ್ವಶಾಂತಿಯ ಮೂಲಭೂತ ತತ್ತ್ವರತ್ನಗಳ ಖಣಿಯಾದ ವೀರಶೈವ ಧರ್ಮದ ದಾರ್ಶನಿಕ ಅನರ್ಘ್ಯ ಅಮೌಲ್ಯ ತತ್ವಗಳನ್ನೂ ಋಜುಹೃದಯ ಕವಾಟದಿಂದ ಹೊರತೆಗೆದು ವೈಖರೀವಾಣಿಯಿಂದ ಬಿತ್ತರಿಸಹತ್ತಿದರು. ಅವರ ಭಾಷಣದ ಮುಖ್ಯಾಂಶಗಳು ಹೀಗಿವೆ:

೧) ಕ್ರಿ. ಶ. ಪೂರ್ವದಲ್ಲಿ ನಮ್ಮ ಪೂರ್ವಜರು ವೇದಾಗಮೋಪನಿಷತ್ತುಗಳನ್ನು ರಚಿಸಿ ವರ್ಣಾಶ್ರಮ ಧರ್ಮಗಳನ್ನು ಮೊದಮೊದಲು ಸಮಾಜ ಸಂಘಟನೆಗಾಗಿ ಕಲ್ಪಿಸಿಕೊಂಡು ಮನುಧರ್ಮ ಶಾಸ್ತ್ರವನ್ನು ರಚಿಸಿದರು. ಇಹ-ಪರಗಳನ್ನು ಸಾಧಿಸುವ ಮಾನವ ಕಲ್ಯಾಣದ ನಾಗರಿಕತೆಯ ಮಾರ್ಗವನ್ನು ಸಾಧಿಸಿಕೊಂಡರು.

೨) ಭಾರತೀಯ ಷಡ್‌ದರ್ಶನಗಳು ಜಗತ್‌ಪ್ರಸಿದ್ಧವಾಗಿವೆ; ಅದರಲ್ಲಿ ಮೃಡದರ್ಶನವು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಅದುವೇ ಶೈವ ಧರ್ಮ. ಶೈವರು ಶಿವಲಿಂಗ ಪೂಜಕರು, ಕಾಂಬೋಡಿಯಾ, ಚಂಪಾ, ಇಂಡೋನೇಶಿಯಾ, ಚೀನ ಮತ್ತು ಜಪಾನ ಮೊದಲಾದ ಪೌರ್ವಾತ್ಯ ದೇಶಗಳಲ್ಲಿ ೫೫೦ ವರ್ಷಕ್ಕಿಂತಲೂ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿ ಇದ್ದ ಬಗ್ಗೆ ಮತ್ತು ಮಧ್ಯ ಏಶಿಯಾ ಪರ್ವತಗಳ ಸುತ್ತಮುತ್ತ ಲಿಂಗಪೂಜೆ ಸರಾಗವಾಗಿ ನಡೆದ ಬಗ್ಗೆ ತಿಳಿದು ಬರುತ್ತದೆ. ಸಪ್ತಶೈವ ಪ್ರಭೇದಗಳಲ್ಲಿ ವೀರಶೈವವು ಕೊನೆಯದು, ವರ್ಣಾಶ್ರಮಾತೀತವೆಂದು ಪರಿಷ್ಕೃತವಾಗಿದೆ.

೩) ವೀರಶೈವವು ಲಿಂಗಾಂಗ ಸಾಮರಸ್ಯ ಪ್ರಬೋಧಕವಾಗಿದೆ. ಸ್ಥಾವರ ಲಿಂಗಗಳನ್ನು ಗುಡಿಗುಂಡಾರಗಳಲ್ಲಿ ಪೂಜಿಸುವದು ಶೈವಧರ್ಮದ ಹೆಗ್ಗುರುತು. ದೇಹವನ್ನೇ ದೇಗುಲವನ್ನಾಗಿ ಮಾಡಿಕೊಂಡು ಗುರುಕರುಣ ದೃಷ್ಟಿಪೂರಿತ ಇಷ್ಟಲಿಂಗವನ್ನು ಪೂಜಿಸುವ ಆಧ್ಯಾತ್ಮ ಜೀವನದ ತಿರುಳು ಮೈದೋರಬೇಕು. ವಿಶ್ವಶಾಂತಿಗೆ ಅನುಭಾವ ಜೀವನವು ತಳಹದಿಯಾಗಬೇಕೆಂಬುದೇ ಇಷ್ಟಲಿಂಗಧಾರಣೆಯ ರಹಸ್ಯವು.

೪) ಬೇಕು ಬೇಡೆಂಬೆರಡು ಭವ ಬೀಜಗಳನ್ನು ಹುರಿದರೆ ವಿಶ್ವಶಾಂತಿಯಾಗುತ್ತದೆ....ಅಹಮಹಮಿಕೆಯ ಬಡಿದಾಟವು ಇಲ್ಲದಾಗ ಶಾಂತಿ ಸಮಾಧಾನಗಳು ನೆಲೆಗೊಳ್ಳುವವು.

೫) ವಿಶ್ವಶಾಂತಿಗೆ ವೀರಶೈವರ ಕೊಡುಗೆಯೆಂದರೆ ಪ್ರಾಮುಖ್ಯವಾಗಿ "ಕಾಯಕ" ತತ್ವ. ಕಾಯಕ ತತ್ವದಲ್ಲಿ ನಿಸ್ವಾರ್ಥಪರತೆ ಮತ್ತು ಕ್ರಿಯಾಚಾರ ಸಂಪನ್ನತೆ ಎರಡೂ ಅವಿನಾಭಾವದಿಂದ ಕೂಡಿರುತ್ತವೆ. ಪ್ರತಿಯೊಬ್ಬ ವೀರಶೈವನು

ಕಾಯಕ ಮಾಡಲೇಬೇಕು. ಅಂದರೆ ದುಡಿಯಲೇಬೇಕು. ಹಾರುವ ಮೊದಲು ಮಾಡಿ ಅಂತ್ಯಜ ಕಡೆಯಾಗಿ ದುಡಿದು ತನ್ನ ದುಡಿಮೆಯ ಫಲವನ್ನು ಲೋಕ ಕಲ್ಯಾಣಕ್ಕಾಗಿ ಉಪಯೋಗಿಸಬೇಕು. ಕಾಯಕ ಜೀವಿಗಳಲ್ಲಿ ಜಾತಿಯೇ ಇಲ್ಲ. ಜಾತ್ಯಾತೀತ ತತ್ವವು ಇಲ್ಲಿ ಅಡಕವಾಗಿದೆ. ರಾಜನಿಂದ ಕಿಂಕರನವರೆಗೂ ಕಾಯಕ ಮಾಡಿಯೇ ಸದ್ಯೋನ್ಮುಕ್ತಿ ಪಡೆಯಬೇಕು. ಆರ್ಥಿಕ ಸಂಪನ್ಮೂಲಗಳ ಕೀಲವೇ ಕಾಯಕ ತತ್ವವೆಂದು ಬೇರೆ ಹೇಳಬೇಕಿಲ್ಲ. ಕಾಯಕದಲ್ಲಿ ಸರ್ವಾರ್ಪಣ ಭಾವವು ಅಡಕವಾಗಿದೆ.

೬) ಸಂಗ್ರಹಗುಣ ಇರಬಾರದೆಂದು ಅದನ್ನು ತೆಗೆದುಹಾಕಿದ್ದಾರೆ. 'ಸೀರೆಯೊಳಗೆ ಒಂದು ಎಳೆಯು, ಅನ್ನದೊಳಗೊಂದು ಅಗುಳ ಇಂದಿಂಗೆ ನಾಳಿಂಗೆ ಎಂದು ಕುದಿವೆನಾದೊಡೆ ಎನಗದೇ ಭಂಗ'ವೆಂದು ಮಹಾತ್ಮಾ ಬಸವಣ್ಣನವರು ಎಂದೋ ಸಾರಿಹೋಗಿದ್ದಾರೆ. ಸಂಗ್ರಹ ವೃತ್ತಿಯು ಸಂಗ್ರಹಣೀ ಬೇನೆಯೆಂದು ಬಲ್ಲವರು ಹೇಳುತ್ತಾರೆ. ಇದು ಜಾಗತಿಕ ಅಶಾಂತಿಗೆ ಮೂಲಕಾರಣ ಗಳಲ್ಲೊಂದಾಗಿದೆ.

೭) 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ'ವೆಂಬುದಾಗಿ ಬಸವಣ್ಣನವರು ತಮ್ಮಲ್ಲಿ ಕೈಂಕರ್ಯ ಭಾವವನ್ನು ವ್ಯಕ್ತ ಮಾಡಿದ್ದಾರೆ........ ಹಿರಿತನವೆಂಬುದನ್ನು ಸಕಲ ಮಾನವರಿಗೆ ಕೊಟ್ಟು ಅವರಲ್ಲಿ ಸಮತಾವಾದವನ್ನು ಸಾರಿದ್ದಾರೆ....ಕಿಂಕರನಾದವನು ಶಂಕರನಾಗುವನು; ನಾಡಿನ ನಾಯಕನೂ ಆಗ ಬಲ್ಲನು. ಕಿರಿತನ-ಹಿರಿತನಗಳು ಒಂದಕ್ಕೊಂದು ಪೂರಕಗಳೇ ಹೊರತು ಮಾರಕ ಗಳಲ್ಲ. ಸಾಮ್ಯವಾದವೇ ವೀರಶೈವರಲ್ಲಿ ಮುಖ್ಯ ತತ್ವವಾಗಿದೆ. ಈ ಎಲ್ಲ ಕಾರಣಗಳಿಂದ ವೀರಶೈವ ಧರ್ಮವು ವಿಶ್ವಧರ್ಮವಾಗಿದೆ.

೮) 'ಕಾಗೆ ಒಂದು ಅಗುಳ ಕಂಡರೆ ಕರೆಯವೆ ತನ್ನ ಬಳಗವನು? ಕೋಳಿ ಒಂದು ಗುಟುಕು ಕಂಡರೆ ಕರೆಯದೆ ತನ್ನ ಬಳಗವನು?' ಎಂಬ ಬಸವಣ್ಣ ನವರ ನುಡಿಯು ವಿಶ್ವಬಾಂಧವ್ಯವನ್ನು ಎತ್ತಿ ತೋರಿಸುತ್ತದೆ. ಎಲ್ಲರೂ ಶಿವಾಂಶ ಸಂಭೂತರು, ಶಿವಸ್ವರೂಪಿಗಳು, ಸಕಲರಲ್ಲಿ ಶಿವಭಾವವು ವ್ಯಕ್ತವಾಗುವದು. ಎಲ್ಲರಲ್ಲಿರುವ ಆತ್ಮ ಒಂದೇ ಎಂಬ ಭಾವವು ನೆಲೆಗೊಂಡರೆ ವಿಶ್ವಬಾಂಧವ್ಯದ ನೆಲೆಗಟ್ಟು ಸಿದ್ಧವಾಗುವದು. ತನ್ನ ಸ್ವತ್ತು ರಾಷ್ಟ್ರದ ಸೊತ್ತು. ತಾನೇ ರಾಷ್ಟ್ರ. ರಾಷ್ಟ್ರವೇ ತಾನು ಎಂಬುದಾಗಿ ಅಭೇದಜನಕ ಸ್ಥಿತಿಯು ಪ್ರಾಪ್ತವಾಗುವದು.

೯) 'ದಯವಿಲ್ಲದ ಧರ್ಮವಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ' ಎಂಬ ಬಸವಣ್ಣನವರ ವಾಕ್ಯವು 'ದಯಾ ಧರ್ಮ ಕಾ ಮೂಲ ಹೈ'

ಎಂಬ ನಾಣ್ಣುಡಿಯನ್ನು ಬೆಂಬಲಿಸುತ್ತಿದೆ. ಜೈನ, ಬೌದ್ಧ ಧರ್ಮಗಳಂತೆ ವೀರಶೈವ ಧರ್ಮದಲ್ಲಿ ದಯೆಗೆ ಹೆಚ್ಚು ಮಹತ್ವಕೊಟ್ಟಿದ್ದಾರೆ. 'ಮಾಹಿಂಸ್ಯಾತ್ ಸರ್ವ ಭೂತಾನಿ' ಎಂಬ ತತ್ವವು ಸಹ ಹಿಂಸೆಗೆ ಆಸ್ಪದ ಕೊಡದೆ ಅಹಿಂಸೆಯನ್ನೇ ಹೇಳುತ್ತಿದೆ. 'ಅಹಿಂಸಾ ಪರಮೋ ಧರ್ಮಃ' ಅಹಿಂಸೆಯು ಶ್ರೇಷ್ಠ ಧರ್ಮವು. ಅಹಿಂಸೆಯೆಂಬುದು ದಯೆಯ ಬೀಜಾಣುವಿದ್ದಂತೆ. ಹಿಂಸಾಚಾರವು ರಾಷ್ಟ್ರವನ್ನೇ ಹಾಳು ಮಾಡುತ್ತದೆ. ದಯಾ, ಅಹಿಂಸೆಗಳು ವೀರಶೈವರ ಮಹಾಮಂತ್ರಗಳು.

೧೦) ಎಲ್ಲರೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಿದ್ಧರಾಗಬೇಕು. ಎಲ್ಲರೂ ಅಚ್ಚಳಿಯದ ಆನಂದ ಹೊಂದಬೇಕು....ಎಲ್ಲರಿಗೂ ಶಿವಸುಖ ಸಾಮ್ರಾಜ್ಯದ ಬಾಗಿಲು ತೆರೆದಿವೆ.

೧೧) ಸರ್ವಧರ್ಮಗಳ ಧಾರ್ಮಿಕ ಶಕ್ತಿಯ ಕಿರಣಗಳು ರಾಷ್ಟ್ರರಾಷ್ಟ್ರಗಳ ಮೂಲೆಮೂಲೆಗಳಿಗೂ ಹೋಗಿ ಪ್ರಜ್ವಲಿಸಬೇಕು....ಹಸಿದ ಜಗತ್ತಿಗೆ ಬೇಕಾದ ಸುಧಾರಣೆ, ಸಂರಕ್ಷಣೆ ಮಾಡಬೇಕು. ಆರ್ಥಿಕ ಯೋಜನೆ, ಸ್ತ್ರೀ ಸುಧಾರಣೆ, ಹರಿಜನೋದ್ಧರಣೆ, ಧಾರ್ಮಿಕ ಭಾವನೆಯ ಪ್ರಸರಣೆ ಮುಂತಾದವುಗಳೆಲ್ಲವು ಪ್ರಪಂಚದ ತುಂಬೆಲ್ಲ ಹಬ್ಬುವಂತೆ ಮಾಡಬೇಕು. ಇದುವೇ ಧರ್ಮಗುರುಗಳ ಕರ್ತವ್ಯ; ವೀರಪ್ರತಿಜ್ಞೆ. ನಾವೆಲ್ಲರೂ ಈ ಪ್ರತಿಜ್ಞೆಗೈಯೋಣವೆಂದು ಶ್ರೀ ಜಗದ್ಗುರುಗಳು ಸ್ಫೂರ್ತಿದಾಯಕ ಭಾಷಣ ಮಾಡಿದರು."5

## ಇಂದಿರಾ ಗಾಂಧಿಯವರೊಡನೆ ಸಂದರ್ಶನ

"ದಿ. ೧೩-೧-೬೮ರಂದು ಪ್ರಾತಃಕಾಲದ ಶಿವಾರ್ಚನೆಯ ನಂತರ ಮುಂಜಾನೆ ೮ ಗಂಟೆಗೆ ಕೇಂದ್ರ ಪ್ರಧಾನ ಮಂತ್ರಿಗಳಾದ ಶ್ರೀಮತಿ ಇಂದಿರಾ ಗಾಂಧಿಯವರನ್ನು ಭೆಟ್ಟಿಯಾದರು. ಗೌರವಾದರಗಳಿಂದ ಶ್ರೀಮತಿ ಇಂದಿರಾ ಗಾಂಧಿಯವರು ಶ್ರೀ ಜಗದ್ಗುರುಗಳನ್ನು ಬರಮಾಡಿಕೊಂಡು ಭಕ್ತಿಯಿಂದ ನಮಸ್ಕರಿಸಿ, ಕುಶಲ ಪ್ರಶ್ನೆಗಳ ನಂತರ ವಿಶ್ವಶಾಂತಿಯ ಬಗೆಗೆ ಸಂಭಾಷಣೆ ಮಾಡಿದರು. "ಯತೋ ಧರ್ಮಸ್ತತೋ ಜಯಃ" ಎಂಬ ಸೂತ್ರದಂತೆ ಧರ್ಮದಿಂದಲೇ ರಾಷ್ಟ್ರಕ್ಕೆ ಶಾಂತಿ ಸಿಗಬಲ್ಲದು, ಧರ್ಮಕ್ಕೆ ಗೆಲವು ಯಾವಾಗಲೂ ಸನ್ನಿಹಿತವಾಗಿದೆ ಎಂದು ಮುಂತಾಗಿ ಅಪ್ಪಣೆ ಕೊಡಿಸಿದ ನಂತರ ಶ್ರೀಮತಿ ಇಂದಿರಾ ಗಾಂಧಿಯವರು ಹುಬ್ಬಳ್ಳಿಗೆ ಬಂದಾಗ ತಮ್ಮ ಸನ್ನಿಧಿಗೆ ಅವಶ್ಯವಾಗಿ ಬಂದು, ತಾವು ನಡೆಸಿರುವ ಶೈಕ್ಷಣಿಕ ಚಟುವಟಿಕೆಗಳನ್ನು ನೋಡುತ್ತೇವೆ ಎಂದು ಮುಂತಾಗಿ ಹೇಳಿದರು.

5 'ದಿಲ್ಲಿಯ ವಿಶ್ವಶಾಂತಿ ಪರಿಷತ್ತಿನಲ್ಲಿ ಜಗದ್ಗುರುಗಳು': ಶ್ರೀ ನಿ. ಪ್ರ. ಸಿದ್ಧಪ್ರಭು ಸ್ವಾಮಿಗಳು, ಚಿಂಚಣಿ, "ಚಿತ್ಪ್ರಭೆ"; ಪುಟ–96 ರಿಂದ 103

ಶ್ರೀ ಜಗದ್ಗುರುಗಳು ಅವರಿಗೆ ಆಶೀರ್ವಾದವಿತ್ತು ಮರಳಿ ದಯಮಾಡಿಸಿದರು. ಆ ದಿನ ೪–೫ ಕಡೆಗೆ ಸಾರ್ವಜನಿಕ ಸಭೆಗಳಾದವು. ಶ್ರೀಮತಿ ಸರೋಜಿನಿ ಮಹಿಂಷಿಯವರ ಮುಖಂಡತ್ವದಲ್ಲಿ ದಿಲ್ಲಿ ಕರ್ನಾಟಕ ಸಂಘದವರು ಶ್ರೀ ಜಗದ್ಗುರುಗಳಿಗೆ ಸತ್ಕಾರ ಸಮಾರಂಭವನ್ನು ವೈವಿಧ್ಯಪೂರ್ಣವಾಗಿ ನೆರವೇರಿಸಿದರು."6

## ಕಾಶಿಯಲ್ಲಿ ಗುರು–ವಿರಕ್ತರ ಸಮನ್ವಯ

"ದಿ. ೧೫–೧–೬೮ ರಂದು ಶ್ರೀ ಜಗದ್ಗುರುಗಳು ದಿಲ್ಲಿಯ ಎಲ್ಲ ಕಾರ್ಯಕ್ರಮಗಳನ್ನು ಮುಗಿಸಿಕೊಂಡು, ದಿಲ್ಲಿಯಿಂದ ಕಾಶಿಗೆ ಪೂರ್ವಾಮಂತ್ರಣದ ಮೇರೆಗೆ ರೇಲ್ವೆ ಮಾರ್ಗವಾಗಿ ಪ್ರಯಾಣ ಬೆಳೆಸಿದರು. ರೇಲ್ವೆ ನಿಲ್ದಾಣದಲ್ಲಿ ಕಾಶಿ ಸುಪ್ರಸಿದ್ಧ ಜಂಗಮವಾಡಿಮಠದ ಕಾರಭಾರಿಗಳು, ಜಯದೇವ ಬೋರ್ಡಿಂಗಿನ ವಿದ್ಯಾರ್ಥಿಗಳು, ಕಾಶಿಯಲ್ಲಿದ್ದ ಶ್ರೀ ಶಿವಯೋಗಮಂದಿರದ ಶಿವಯೋಗಿ ವೃಂದವು ಮತ್ತು ಅನೇಕ ಸದ್ಭಕ್ತರು ಶ್ರೀ ಜಗದ್ಗುರುಗಳನ್ನು ಪೂಮಾಲೆಗಳಿಂದ ಸತ್ಕರಿಸಿ ಸ್ವಾಗತಿಸಿದರು. ಸುಸಜ್ಜಿತ ಮೋಟಾರಕಾರಿನಲ್ಲಿ ಶ್ರೀ ಜಗದ್ಗುರುಗಳು ಮಂಡಿಸಿದ ನಂತರ ಕಾರಭಾರಿಗಳ ಬಿನ್ನಹದ ಮೇರೆಗೆ ಜಂಗಮವಾಡಿಮಠಕ್ಕೆ ದಯಮಾಡಿಸಿದರು. ಜಂಗಮವಾಡಿಮಠದ ಶ್ರೀ ಜಗದ್ಗುರುಗಳು ತಮ್ಮ ಮಠದ ಮಹಾದ್ವಾರದವರೆಗೆ ಬಂದು ಜಗದ್ಗುರುಗಳಿಗೆ ಮಾಲಾರ್ಪಣೆ ಮಾಡಿ ಹರ್ಷನಿರ್ಭರಯರಾಗಿ ಜಗದ್ಗುರುಗಳ ಕರಪಿಡಿದು ತಮ್ಮ ಮಠದ ಕೈಲಾಸ ಮಂಟಪಕ್ಕೆ ಕರೆದೊಯ್ದರು.... ದಿನಾಲೂ ಸಂಜೆಯಲ್ಲಿ ಕೈಲಾಸ ಮಂಟಪದಲ್ಲಿ ಸಭೆಯ ಕಾರ್ಯಕ್ರಮಗಳು ಜರುಗಿದವು. ಉಭಯ ಜಗದ್ಗುರುಗಳ ಅಪೂರ್ವ ಸಮ್ಮೇಲನವು ಚಿರಸ್ಮರಣೀಯವಾಯಿತು. ಜ್ಞಾನ ಮತ್ತು ಕ್ರಿಯೆಗಳ ಸಮನ್ವಯವಾಯಿತೆಂದು ನಮಗೆನಿಸಿತು. ಉಭಯ ಜಗದ್ಗುರುಗಳು ವೀರಶೈವ ಸಮಾಜದ ಕುಂದುಕೊರತೆಗಳ ಬಗೆಗೆ ವಿಚಾರ ವಿನಿಮಯ ಮಾಡಿದರು. ಈ ಸಮಾಗಮವು ಗುರುವಿರಕ್ತರ ಭಾವೈಕ್ಯಕ್ಕೆ ನಾಂದಿಯಾಯಿತು."

"ಜಗದ್ಗುರುಗಳು ದಿನಾಂಕ ೧೬–೧–೬೮ ರಂದು ಜಂಗಮವಾಡಿಮಠದಲ್ಲಿ ಕಾಶಿ ವಿದ್ಯಾಪೀಠದ ವ್ಹಾಯಿಸ್ ಚಾನ್ಸಲರ್‌ರನ್ನು ಮತ್ತು ತಮಗೆ ಶಿಕ್ಷಣಕೊಟ್ಟ ಪಂಡಿತರನ್ನು ಇನ್ನೂ ಅನೇಕ ೮–೯ ಜನ ಘನ ವಿದ್ವಾಂಸರನ್ನು ಕರೆಯಿಸಿದರು. ಅಂದು ಪಂಡಿತರ ಸಭೆ ಜರುಗಿತು. ಆ ಸಭೆಯಲ್ಲಿ ಶ್ರೀ ಜಗದ್ಗುರುಗಳು ೧೦–೧೨ ಜನ ಪಂಡಿತರಿಗೆ ಮರ್ಯಾದಾರ್ಥವಾಗಿ ಪ್ರತಿಯೊಬ್ಬರಿಗೂ ಪುಷ್ಪಮಾಲೆಗಳ ಸಹಿತವಾಗಿ ಅನರ್ಘ್ಯಶಾಲು ಜೋಡಿಗಳನ್ನಿತ್ತು ಆಶೀರ್ವದಿಸಿದರು. ಪಂಡಿತರು

---

6 ಅದೇ ಲೇಖನ, ಚಿತ್ರಭೆ; ಪುಟ–103

ಒಳ್ಳೇ ಹರ್ಷಭರಿತರಾಗಿ ಶ್ರೀ ಜಗದ್ಗುರುಗಳ ಪಾದಕ್ಕೆ ವಂದಿಸಿ ತೆರಳಿದರು. ಮರುದಿವಸ ಶ್ರೀ ಜಗದ್ಗುರುಗಳು ಜಂಗಮವಾಡಿಮಠದ ಜಗದ್ಗುರುಗಳ ಸಹಿತ ವಾಗಿ ಮಠದ ಯಾವತ್ತೂ ಜನರಿಗೆ ಇಚ್ಛಾಭೋಜನವನ್ನು ಏರ್ಪಡಿಸಿ ಸಕಲರಿಗೂ ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ಮಹಾ ಪ್ರಸಾದವೆಂದು ತೃಪ್ತಿಪಡಿಸಿದರು. ಕಾಶೀ ವಿಶ್ವನಾಥನ ದರ್ಶನ ಮಾಡಿ ಕೊಂಡರು."7

## ಕಲಕತ್ತೆಗೆ ಪ್ರಯಾಣ

"ದಿನಾಂಕ ೧೮-೧-೬೮ ರಂದು ಕಾಶಿಯಿಂದ ಶ್ರೀ ಜಗದ್ಗುರುಗಳು ಕಲಕತ್ತೆಗೆ ರೈಲುಮಾರ್ಗವಾಗಿ ಹೊರಟರು. ರೇಲ್ವೆ ನಿಲ್ದಾಣದಲ್ಲಿ ಸೇಲ್ಸ್‌ಟ್ಯಾಕ್ಸ್ ಆಫೀಸರ್‌ರಾದ ಶ್ರೀ ಹೊಸಮನಿಯವರು ತಮ್ಮ ಪರಿವಾರದೊಂದಿಗೆ ಆಗಮಿ ಸಿದ್ದರು. ಅಸಿಸ್ಟಂಟ್ ಕಮೀಶನರ್ ಸಾಹೇಬರೂ ಮತ್ತು ಇತರ ಸದ್ಭಕ್ತರೂ ಶ್ರೀ ಜಗದ್ಗುರುಗಳನ್ನು ಪೂಮಾಲೆಗಳಿಂದ ಸ್ವಾಗತಿಸಿದರು. ಕಲಕತ್ತಾ ಸುಪ್ರಸಿದ್ಧ ಶೇಡಜೀಯವರ ಬಂಗ್ಲೆಯಲ್ಲಿ ಶ್ರೀ ಜಗದ್ಗುರುಗಳಿಗೆ ವಾಸ್ತವ್ಯಕ್ಕಾಗಿ ಏರ್ಪಾಟು ಮಾಡಿದ್ದರು. ಹೊಸಮನಿ ಮತ್ತು ಹಿರೇಮಠ ಸಾಹೇಬರ ಮನೆಯಲ್ಲಿ ಶ್ರೀ ಜಗದ್ಗುರುಗಳ ಪೂಜಾಪ್ರಸಾದ ವ್ಯವಸ್ಥೆಯು ಏರ್ಪಡಿಸಲಾಯಿತು. ಕಲಕತ್ತೆ ಯಲ್ಲಿದ್ದ ರಾಮಕೃಷ್ಣ ಪರಮಹಂಸ ಆಶ್ರಮಕ್ಕೆ ಭೆಟ್ಟಿಯಿತ್ತರು. ಬೇಲೂರು ಆಶ್ರಮಕ್ಕೆ ಸಂದರ್ಶನ ಕೊಟ್ಟರು. ಕಲಕತ್ತೆಯಿಂದ ದಿನಾಂಕ ೨೦-೧-೬೮ ರಂದು ವಿಮಾನ ಮಾರ್ಗವಾಗಿ ಶ್ರೀ ಜಗದ್ಗುರುಗಳು ಮುಂಬಯಿಗೆ ದಯಮಾಡಿಸಿ, ಅಲ್ಲಿಂದ ಬೆಳಗಾಂವ ಸಾಂಬ್ರಾ ವಿಮಾನ ನಿಲ್ದಾಣಕ್ಕೆ ಆಗಮಿಸಿದರು. ಅಲ್ಲಿಯೂ ಬೆಳಗಾಂವ, ಧಾರವಾಡ ಜಿಲ್ಲೆಯ ಸಂಘ-ಸಂಸ್ಥೆಯವರು, ಅನೇಕ ಮಹಾಸ್ವಾಮಿ ಗಳು, ಅನಂತ ಸ್ತ್ರೀ-ಪುರುಷ ಸದ್ಭಕ್ತರು ಶ್ರೀ ಜಗದ್ಗುರುಗಳ ಸತ್ಕಾರಕ್ಕಾಗಿ ಆಗಮಿಸಿ ಸ್ವಾಗತ ಸತ್ಕಾರಗೈದರು. ಅಲ್ಲಿಂದ ಹುಬ್ಬಳ್ಳಿಗೆ ಶ್ರೀ ಜಗದ್ಗುರುಗಳು ಕಾರಿನಿಂದ ದಯಮಾಡಿಸಿದರು. ಅಲ್ಲಿಯೂ ಸತ್ಕಾರದ ಸುರಿಮಳೆಯಾಯಿತು. ಒಟ್ಟಿನಲ್ಲಿ ದಿಲ್ಲಿ ವಿಶ್ವಶಾಂತಿ ಪರಿಷತ್ತಿನ ಪ್ರಯಾಣವು ಸಮಗ್ರ ಕನ್ನಡ ನಾಡಿಗೆ ಅಪೂರ್ವ ಯಶೋಭಾಗವನ್ನು ಗಳಿಸಿ ತಂದಿತು."8

## ಪೂರ್ವ ರಾಷ್ಟ್ರಗಳ ಸಂದರ್ಶನಕ್ಕೆ ಜಗದ್ಗುರುಗಳ ಪ್ರಯಾಣ

ಕ್ಯೋಟೋ, ಓಸಾಕಾ, ಟೋಕಿಯೊ, ಹಾಂಗ್‌ಕಾಂಗ್, ಸಿಂಗಾಪೂರ, ಕೌಲಾ ಲಂಪೂರ, ಥೈಲ್ಯಾಂಡ್, ಬ್ಯಾಂಕಾಕ್ ಮುಂತಾದ ಸ್ಥಳಗಳಿಗೆ ಪೂಜ್ಯ ಜಗದ್ಗುರು

7 ಅದೇ ಲೇಖನ, ಚಿತ್ಪ್ರಭೆ; ಪು–104
8 ಅದೇ ಲೇಖನ, ಚಿತ್ಪ್ರಭೆ; ಪು–105

ಗಳ ಸಂದರ್ಶನಕ್ಕೆ ಒಂದು ಅದ್ಭುತವಾದ ಚಾರಿತ್ರಿಕ ಹಿನ್ನೆಲೆಯಿದೆ. ವೀರಶೈವ ಧರ್ಮದ ಇತಿಹಾಸದಲ್ಲಿಯೇ ಮಠಾಧೀಶ್ವರರೊಬ್ಬರು ಅಂತರ್ರಾಷ್ಟ್ರೀಯ ವಿಶ್ವ ಧರ್ಮಗಳ ಶಾಂತಿ ಪರಿಷತ್ತಿಗಾಗಿ (The International Inter-religious Symposium on Peace) ಪ್ರಮಾಣಗೈದು, ಅಂತರ್ರಾಷ್ಟ್ರೀಯ ವೇದಿಕೆಯ ಮೇಲೆ ಶರಣ ಸಿದ್ಧಾಂತವನ್ನು ಸಾರಿದ್ದು ಇದು ಪ್ರಪ್ರಥಮಬಾರಿಗೆ. ಆ ಭಾಗ್ಯ ಪೂಜ್ಯ ಜಗದ್ಗುರುಗಳ ಪಾಲಿಗೆ ದೊರೆತುದು ಶ್ರೀ ಗುರುಸಿದ್ಧೇಶ್ವರನ ಮಹಾಕೃಪೆ. ಪೂಜ್ಯ ಜಗದ್ಗುರುಗಳು "ನಮ್ಮ ವಿದೇಶ ಯಾತ್ರೆ"ಯಲ್ಲಿ ಬರೆಯುತ್ತಾರೆ–"ಸಕಲ ಜೀವಾತ್ಮರಿಗೆ ಲೇಸನೆ ಬಯಸುವವನೇ ಕುಲಜ–ಎಂಬ ಸರ್ವಧರ್ಮ ಸಮಭಾವನೆ ಯುಳ್ಳ ಶರಣರ ಮಾನವೀಯ ವಿಚಾರ ಮೌಲ್ಯಗಳನ್ನು ಸಮುದ್ರದಾಚೆಗಿನ ಅನ್ಯ ದೇಶಗಳಲ್ಲಿಯೂ ಪ್ರಸಾರ ಮಾಡಬೇಕೆಂಬ ಹಿರಿದಾದ ಹಂಬಲವು ನಮ್ಮ ಅಂತರಂಗ ದಲ್ಲಿ ಅನೇಕ ವರ್ಷಗಳಿಂದ ಪುಟಿಯುತ್ತಿತ್ತು. ಆ ಆಶೆ ಹರಡಿ ಹೆಮ್ಮರವಾಗಲು ಒಂದು ದೇವನಿರ್ಮಿತ ಸದವಕಾಶ ತಾನೇ ತಾನಾಗಿ ನಮಗರಿಯದಂತೆಯೇ ನಿರ್ಮಾಣವಾಯಿತು."9 ಜಪಾನ ಯಾತ್ರೆಗೆ ಪೂರ್ವಭಾವಿಯಾಗಿ ದಿಲ್ಲಿಯ ಪ್ರಾಸ್ತಾವಿಕ ಸಭೆಯಲ್ಲಿ ನಿರ್ಣಯ ಕೈಗೊಳ್ಳಲಾಗಿತ್ತು. ಜಗದ್ಗುರುಗಳೊಂದಿಗೆ ಅವರ ಆಪ್ತ ಕಾರ್ಯದರ್ಶಿಯಾಗಿ ವಿದೇಶಕ್ಕೆ ತೆರಳಿದ್ದ ಪ್ರೊ. ಎ. ಎಲ್. ಹಿರೇಮಠ ಈ ರೀತಿಯಾಗಿ ತಿಳಿಸುತ್ತಾರೆ—"ಈ ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತನ್ನು ಕ್ಯೋಟೋ (ಜಪಾನ) ದಲ್ಲಿ ನೆರವೇರಿಸಲು ಪೂರ್ವಭಾವಿಯಾಗಿ ಇದ ಕ್ಕೊಂದು ಹಿನ್ನೆಲೆ ಇದೆ. ೧೯೬೮ ಜನವರಿ ತಿಂಗಳಲ್ಲಿ ದಿಲ್ಲಿಯಲ್ಲಿ ಒಂದು ಪ್ರಾಸ್ತಾವಿಕ ಸಭೆಯನ್ನು ಕರೆಯಲಾಯಿತು. ಆಗ ಭಾರತದ ರಾಷ್ಟ್ರಪತಿಯಾಗಿದ್ದ ಶ್ರೀ ಝಕೀರ ಹುಸೇನರು ಆ ಪರಿಷತ್ತನ್ನು ಉದ್ಘಾಟಿಸಿದರು. ಉಪಪ್ರಧಾನಿ ಯಾಗಿದ್ದ ಶ್ರೀ ಮುರಾರಜಿಭಾಯಿ ದೇಸಾಯಿ ಇವರು ಸಮಾರೋಪ ಮಾಡಿದರು. ಸುಮಾರು ೫೦ ರಾಷ್ಟ್ರಗಳ ಅನೇಕ ಪ್ರತಿನಿಧಿಗಳು ಆ ಸಭೆಯಲ್ಲಿ ಭಾಗವಹಿಸಿದ್ದರು. ಆಗ ರಚಿಸಲ್ಪಟ್ಟ ಕಾರ್ಯಕಾರಿ ಸಮಿತಿಯು ಜಾಗತಿಕ ಪರಿಷತ್ತನ್ನು ಕ್ಯೋಟೋದಲ್ಲಿ ಆಕ್ಟೋಬರ ತಿಂಗಳಲ್ಲಿ ಕರೆಯಬೇಕೆಂದು ಠರಾಯಿಸಿತು....ದಿಲ್ಲಿಯ ಆರ್ಚಬಿಶಪ್ ಏಂಜಿಲೋ ಫರ್ನಾಂಡೀಸರ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಮಂಡಳವೊಂದು ರಚಿಸಲ್ಪಟ್ಟಿತು. ಅಮೇರಿಕೆಯ ಡಾ. ಹೋಮರ್ ಜಾಕ್ ಎಂಬವರು ಈ ಮಂಡಳದ ಪ್ರಧಾನ ಕಾರ್ಯದರ್ಶಿಗಳಾಗಿದ್ದರು."10

ವಿದೇಶಕ್ಕೆ ಹೋದರೆ ತಮ್ಮ ಆಚಾರ-ವಿಚಾರ-ಆಹಾರ-ಪಾನೀಯಗಳ-ಪೂಜೆ-ಧ್ಯಾನಗಳ ಕ್ರಿಯೆ ತಪ್ಪುವದಲ್ಲಾ ಎಂಬ ಭಯ ಮೊದಲು ಜಗದ್ಗುರುಗಳಿಗೆ

9 ನಮ್ಮ ವಿದೇಶ ಯಾತ್ರೆ; ಪು–3
10 ಚಿತ್ರಭೆ, ವಿದೇಶಗಳಲ್ಲಿ ಜಗದ್ಗುರುಗಳು; ಪು–108

ಬಂದುದು ಸಹಜ. ಆದರೆ ಅವರ ಸ್ನಾನ-ಅರ್ಚನ-ಪ್ರಸಾದಾದಿ ಸಹಾಯಕ್ಕೆ ಆಪ್ತ ಕಾರ್ಯದರ್ಶಿ ಪ್ರೊ|| ಎ. ಎಲ್. ಹಿರೇಮಠರ ಅನುಕೂಲಹಸ್ತ ದೊರೆತುದರಿಂದ ಧೈರ್ಯತಾಳಿ ಒಪ್ಪಿಗೆ ನೀಡಿದರು. ಡಾ|| ರಂಗನಾಥ ದಿವಾಕರರು ಇವರ ಜಪಾನ, ಇಂಡೋನೇಶಿಯಾ, ಮಲೇಸಿಯಾ, ಹಾಂಗ್‌ಕಾಂಗ್, ಥಾಯ್‌ಲ್ಯಾಂಡ್, ಸಿಂಗಾಪೂರ ದೇಶಗಳಲ್ಲಿರುವ ಭಾರತ ರಾಯಭಾರಿ ಕಚೇರಿಗೆ ಪತ್ರವ್ಯವಹಾರ ಮಾಡಿ, ಜಗದ್ಗುರುಗಳ ಸಕಲ ವಾಸ್ತವ್ಯ ಹಾಗೂ ಕಾರ್ಯಕ್ರಮಗಳ ಯೋಜನೆ ಮಾಡಿದರು. ಹುಬ್ಬಳ್ಳಿಯಲ್ಲಿ ಹಾಗೂ ನಾನಾ ಊರುಗಳಲ್ಲಿ ಭರ್ಜರಿ ಸತ್ಕಾರ ಸಮಾರಂಭಗಳು ನೆರವೇರಿದವು.

೧೯೭೦ ಅಕ್ಟೋಬರ ೧೨, ಸೋಮವಾರ! ಮರೆಯಲಾಗದ ಮಹಾ ಸುದಿನ!! ಹತ್ತಾರುಸಾವಿರ ಸ್ತ್ರೀ-ಪುರುಷರು ಮಠದ ಮಹಾದ್ವಾರಕ್ಕೆ ಬೀಳ್ಕೊಡಲು ಬಂದರು. ಅಂದಾಜು ಒಂದು ಟ್ರಕ್ಕು ಪೂಮಾಲೆಗಳೇ ಬಂದಿರಬೇಕು. ನೂರಾರು ತಾಯಂದಿರು ಆರತಿ ಬೆಳಗಿದರು. ನೂರಾರು ಕಾರುಗಳು ಜಗದ್ಗುರುಗಳನ್ನು ಹಿಂಬಾಲಿಸಿದವು. ಸಂಜೆಯ ಶೀತಲ ವಾತಾವರಣದಲ್ಲಿ ಬೆಳಗಾವಿಯ ಸಾಂಬ್ರಾ ವಿಮಾನ ನಿಲ್ದಾಣ ಸುಶೋಭಿಸುತ್ತಿತ್ತು. ಆಗಲೇ ಎಲ್ಲ ನಗರಗಳಿಂದ ಸಹಸ್ರಾರು ಭಕ್ತರ ಹಿಗ್ಗಿನ ರಾಶಿ. ಅವರೆಲ್ಲರ ಉದ್ವೇಗ-ಹರ್ಷ-ಹಾರೈಕೆಗಳ ವಂದನೆಗಳು ಜಗದ್ಗುರುಗಳನ್ನು ಮೂಕವಿಸ್ಮಿತರನ್ನಾಗಿಸಿತು. ಜಗದ್ಗುರುಗಳ ದೊಡ್ಡ ಸಂಪತ್ತೆಂದರೆ ಪ್ರೀತಿ. ಆ ಪ್ರೀತಿಯ ಮಹಾಪೂರವೇ ವಿಮಾನ ನಿಲ್ದಾಣ ಮುಚ್ಚಿತ್ತು. ನಿಲ್ದಾಣದ ತುಂಬ ಹೂಗಳ ರಾಶಿ ರಾಶಿ ಸುರಿದವು. ಸ್ವತಃ ವಿಮಾನ ಚಾಲಕರು ದಿಗ್ಭ್ರಾಂತರಾಗಿ ಈ ದೃಶ್ಯ ನೋಡುತ್ತ ನಿಂತರು. ಎಲ್ಲರ ಜಯಜಯಕಾರ ಮುಗಿಲು ಮುಟ್ಟುತ್ತಿದ್ದಂತೆ ವಿಮಾನ ಗಗನಾಂಗಣಕ್ಕೆ ಹಾರಿತು. ಮುಂಬೈಯ "ಸಾಂತಾಕ್ರೂಝ್" ವಿಮಾನ ನಿಲ್ದಾಣದಲ್ಲಿ ಇನ್‌ಕಮ್ ಟ್ಯಾಕ್ಸ್ ಅಸಿಸ್ಟಂಟ್ ಕಮಿಶನರ್ ಶ್ರೀ ವ್ಹಿ. ಆರ್. ಹಿರೇಮಠ ಅವರು ಬಂದಿದ್ದರು. ನಂತರ ದೆಹಲಿಯಲ್ಲಿ ಸುಪ್ರೀಂ ಕೋರ್ಟ್ ಎಡ್ವೋಕೇಟ್‌ರಾದ ಶ್ರೀ ಶರಚ್ಚಂದ್ರ ಜವಳಿ ಅವರಲ್ಲಿ ಪೂಜೆ-ಪ್ರಸಾದ ತೀರಿಸಿಕೊಂಡರು. ಕಲಕತ್ತೆಯಲ್ಲಿ ಇನ್‌ಕಮ್ ಟ್ಯಾಕ್ಸ್ ಅಸಿಸ್ಟಂಟ್ ಕಮಿಶನರ್ ಶ್ರೀ ಹೊಸಮನಿಯವರ ಮನೆಯಲ್ಲಿ ಎರಡನೆಯ ಪೂಜೆ-ಪ್ರಸಾದವಾಯಿತು. ಅಲ್ಲಿ ಶ್ರೀ ರಂಗನಾಥ ದಿವಾಕರ ಅವರು ಇವರ ಸಹಪಾಂಥರಾದರು. ದಿ. ೧೪ರಂದು ಮುಂಜಾನೆ ಏಯರ್ ಇಂಡಿಯಾದ ಇಂಟರ್-ನ್ಯಾಶನಲ್ ಸರ್ವೀಸಿನ ಬೋಯಿಂಗ್ ವಿಮಾನವು ಇವರನ್ನು ಕಲಕತ್ತೆಯಿಂದ ಹಾಂಗ್‌ಕಾಂಗ್ ಮಾರ್ಗವಾಗಿ ಜಪಾನಿನ ಕ್ಯೂಟೋ ನಗರಕ್ಕೆ ಕೊಂಡೊಯ್ಯಿತು. ಮಧ್ಯದಲ್ಲಿ ಹಾಂಗ್‌ಕಾಂಗ್‌ದಲ್ಲಿ ಏಯರ್ ಇಂಡಿಯಾದವರು ವ್ಯವಸ್ಥೆ ಮಾಡಿದ ನಿವಾಸದಲ್ಲಿ ಪೂಜಾ-ಪ್ರಸಾದವಾಯಿತು. ವಿಮಾನದಲ್ಲಿ ಗಗನಸಖಿಯರು ನೀಡುವ ಆಹಾರ ಪಾನೀಯಗಳನ್ನು

ಇವರು ಸುತರಾಂ ಮುಟ್ಟಲಿಲ್ಲ. ಏಕೆಂದರೆ ಎಷ್ಟೋತ್ತಾದರೂ ಲಿಂಗಾರ್ಪಿತ ಆದ ಮೇಲೆಯೇ ಅಲ್ಲವೇ ಪ್ರಸಾದ ಸ್ವೀಕಾರ!

ದಿ. ೧೫ ಗುರುವಾರ ಮಧ್ಯಾಹ್ನ ಇವರ ವಿಮಾನವು ಹಾಂಗ್‌ಕಾಂಗ್‌ದಿಂದ ಕ್ಯೊಟೋ ಮಾರ್ಗದಲ್ಲಿ ನೀಲವರ್ಣ ಸುತ್ತುವರಿದ ಸಾಗರದ ಮೇಲೆ ಅತೀ ಎತ್ತರ ದಲ್ಲಿ ಹಾರುತ್ತಿತ್ತು. ತೀರ ಕೆಳಗೆ ನೀಲ ಸಮುದ್ರ. ಮೇಲೆ ನೀಲ ಗಗನ. ಮನದ ಅಂತರಾಳದಲ್ಲಿ ಶರಣರ ಶ್ರೇಷ್ಠ ಶಿವಸಂದೇಶವನ್ನು ವಿದೇಶದ ನೆಲನಾಡಿ ನಲ್ಲಿ ಸಾರುವ ಸಂಕಲ್ಪ. "ನಂಬಿ ಕರೆದರೆ ಓ ಎನ್ನನೇ ಶಿವನು", "ದಯವೇ ಧರ್ಮದ ಮೂಲವಯ್ಯಾ", "ಕೊಲ್ಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ", "ಅಯ್ಯಾ ಎಂದೊಡೆ ಸ್ವರ್ಗ, ಎಲವೊ ಎಂದೊಡೆ ನರಕ", "ಕಾಯಕವೇ ಕೈಲಾಸ", "ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ".... ಮುಂತಾದ ಮಹಾನ್ ಜೀವನ ಮೌಲ್ಯಗಳನ್ನು ಆ ನಾಡಿನಲ್ಲಿ ಸಾರುವ ಸಂಕಲ್ಪವೂ ಎತ್ತರೆತ್ತರ ಹಾರುತ್ತಿತ್ತು. ಮುಗಿಲು–ಕಡಲುಗಳೆರಡನ್ನೂ ಭೇದಿಸಿ ಹಾರುತ್ತಿರುವ ಇವರ ವಿಮಾನ ಮರ್ತ್ಯಲೋಕಕ್ಕೆ ಮಹೇಶ್ವರನ ಮಹಾಸಂಕಲ್ಪವನ್ನು ಸಾರಲು ನುಗ್ಗುತ್ತಿತ್ತು. ಸಂಜೆಯ ಸೂರ್ಯನು ಜಪಾನಿನ ಬೆಟ್ಟಗಳ ಮೇಲೆ ರಂಜಿಸು ತ್ತಿದ್ದಂತೆ ಓಸಾಕಾ ನಗರ ವಿಮಾನ ನಿಲ್ದಾಣದಲ್ಲಿ ಇವರ ಗಗನನೌಕೆ ಇಳಿಯಿತು. ವಿಶ್ವಧರ್ಮ ಶಾಂತಿ ಪರಿಷತ್ತಿನ ಅಧಿಕಾರಿಗಳು ಇವರನ್ನು ಕ್ಯೊಟೋ (Kyoto) ನಗರದ ಅತ್ಯಾಧುನಿಕ ಸುಸಜ್ಜಿತವಾದ ತಂಗುದಾಣಕ್ಕೆ ಕರೆದೊಯ್ದರು. ಇವರ ಅರ್ಚನಾದಿ ನಿತ್ಯ ಕರ್ಮಗಳಿಗೆ ಯಾವ ವ್ಯತ್ಯಯ ಬಾರದಂತೆ ಪರಿಷತ್ತಿನವರು ಮುಂಜಾಗ್ರತೆ ವಹಿಸಿದ್ದರಿಂದ ಎಲ್ಲವೂ ಅನುಕೂಲಕರವೂ, ಆಹ್ಲಾದಕರವೂ ಆಗಿತ್ತು. ಹವಾಮಾನದಲ್ಲಿ ಚೈತನ್ಯ ತುಂಬಿತ್ತು.

## ಕ್ಯೊಟೋದಲ್ಲಿ ವಿಶ್ವಶಾಂತಿ ಸಮ್ಮೇಲನ ಪ್ರಾರಂಭ

ಅಕ್ಟೋಬರ ದಿ. ೧೬ ಶುಕ್ರವಾರ ಮುಂಜಾನೆ ೯-೩೦ ಗಂಟೆಗೆ ಬಹಿರಂಗ ಅಧಿವೇಶನ (Plenary Session) ಪ್ರಾರಂಭವಾಯಿತು. ನಾವಿದ್ದ ವಸತಿಧಾಮ ದಿಂದ ಹತ್ತಾರು ಮೈಲು ದೂರದಲ್ಲಿರುವ "ಅಂತರ್ರಾಷ್ಟ್ರೀಯ ಸಮ್ಮೇಲನ ಮಂದಿರ"(International Conference Hall)ಕ್ಕೆ ನಮ್ಮನ್ನು ವಿಶೇಷ ವಾಹನಗಳಲ್ಲಿ ಕೊಂಡೊಯ್ದರು. ಕೋಟ್ಯಾಂತರ ಹಣ ವೆಚ್ಚಮಾಡಿ ನಿರ್ಮಿಸ ಲಾದ ಆ ಭವ್ಯ ಸಭಾಮಂದಿರ (International Conference Hall) ಅತ್ಯಾಧುನಿಕ ಸೌಕರ್ಯಗಳನ್ನು ಹೊಂದಿತ್ತು. ಸುತ್ತಲಿನ ಪರ್ವತ ಶ್ರೇಣಿಗಳ ಮಧ್ಯದಲ್ಲಿ, ನಿಸರ್ಗ ಸೌಂದರ್ಯದ ಮಡಿಲಲ್ಲಿ ಎದ್ದುಕಾಣುತ್ತಿತ್ತು. ಅದರ ವಿಶಿಷ್ಟ ವಾಸ್ತುಶಿಲ್ಪವಿನ್ಯಾಸ ನೋಡುವ ಕಣ್ಣುಗಳಿಗೆ ಬೆರಗುತುಂಬುತ್ತಿತ್ತು.

ಅಚ್ಚ ಹೊಸ ಮಾದರಿಯ ವಿದ್ಯುದಲಂಕಾರ, ಹವಾ ನಿಯಂತ್ರಣ ವ್ಯವಸ್ಥೆ, ಟೆಲಿವ್ಹಿಜನ್–ಚಲನಚಿತ್ರ–ಟೇಪರಿಕಾರ್ಡಿಂಗ್–ಪ್ಲ್ಯಾಶ್ ಚಿತ್ರಕಾರರಿಗೆ ಪ್ರತ್ಯೇಕ ಭೂಮಿಕೆ. ಜಗತ್ತಿನ ಅನೇಕ ಭಾಷೆಗಳಲ್ಲಿ ಭಾಷಾಂತರ ವ್ಯವಸ್ಥೆ. ವರ್ಣರಂಜಿತ ಸುಸಜ್ಜಿತ ಆಸನಗಳು. ಜಪಾನಿನ ಬಣ್ಣಬಣ್ಣದ ನವೀನ ನಕ್ಷೆಗಳು, ಜಪಾನೀ ಮಾದರಿಯ ಉಬ್ಬು ಚಿತ್ರಗಳು ಕಣ್ಮನ ಸೆಳೆಯುತ್ತಿದ್ದವು. ಕ್ಯೂಟೋ ನಗರ ಜಪಾನಿನ ಬೌದ್ಧಧರ್ಮೀಯರ ಕೇಂದ್ರಭೂಮಿ. ಹಿಂದೂ, ಜೈನ, ಸಿಖ್, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಹಾಯಿ, ಮುಹಮ್ಮದೀಯ, ಫಾರಸಿ, ಸಿಂಟೋ, ಕನ್‌ಫ್ಯೂಶಿಯಸ್, ಜ್ಯೂ ಮುಂತಾದ ಭಿನ್ನ ಭಿನ್ನ ಧರ್ಮದವರು; ಸರ್ವಧರ್ಮಗಳ ಸಮನ್ವಯ ಸಮದರ್ಶನಗಳ ಸಾರವೇ ಶಿವನ ಸಾಕ್ಷಾತ್ಕಾರ, ಸತ್ಯದ ಸಾಕ್ಷಾತ್ಕಾರ, ಶಾಂತಿಯ ಸಂಪಾದನೆ, ಆನಂದದ ಆರ್ಜನೆ, ವೈರಿಗಳ ಮುಕ್ತಾಯ, ದ್ವೇಷಗಳ ಅವಸಾನವೆಂದು ಅಖಂಡವಾಗಿ ನಂಬಿ ಅಲ್ಲಿ ಬಂದಿದ್ದರು. ಮಾನವ ಮಾನವರನ್ನು ಒಡೆಯುವ ಕೋಣೆಗಳು ಅಲ್ಲಿ ಜ್ಞಾನಸೂರ್ಯ ಪ್ರಭೆಯಲ್ಲಿ ಒಂದಾಗಿದ್ದವು. ಅಲ್ಲಿ ತಾರತಮ್ಯ ಭಾವಗಳಿಗೆ, ನೀಚೋಚ್ಚ ದೃಷ್ಟಿಗಳಿಗೆ, ಕೀಳರಿಮೆ-ಮೇಲರಿಮೆಗಳಿಗೆ ತಿಲಮಾತ್ರವೂ ಅವಕಾಶವಿರಲಿಲ್ಲ. ವಿಶ್ವ ಬಾಂಧವ್ಯ, ಮಾನವ ಮಮತೆಯ ಮಂದಾರ ಮಂದಿರ, ಸಹಬಾಳ್ವೆ, ಭ್ರಾತೃತ್ವ ಸ್ನೇಹ, ಅಖಂಡ ಸಾತ್ವಿಕ ಪ್ರೇಮ ಅಲ್ಲಿ ನೆಲೆಯೂರಿತ್ತು.

## ಮುಪ್ಪುರಿಯ ಮಧುರ ಶಾಂತಿ

೧) ಮಾನವೀಯ ಹಕ್ಕು ಬಾಧ್ಯತೆಗಳ ಸುರಕ್ಷಣೆಯ ಶಾಂತಿ

೨) ಆರ್ಥಿಕವಾಗಿ–ಸಾಮಾಜಿಕವಾಗಿ ಹಿಂದುಳಿದಿರುವ ರಾಷ್ಟ್ರಗಳ ಅಭಿವೃದ್ಧಿಗಾಗಿ ಶಾಂತಿ

೩) ವಿಶ್ವವಿನಾಶಕ ಶಸ್ತ್ರಾಸ್ತ್ರಗಳನ್ನು ಪರಿತ್ಯಜಿಸುವ ಶಾಂತಿ

ಈ ಮುಮ್ಮುಖವಾದ ಕ್ರಿಯಾಶೀಲ ಅಭಿವೃದ್ಧಿಯೇ ಶಾಂತಿ. 'ಶಾಂತಿ'ಯು ಒಂದು ಕಾಲ್ಪನಿಕವಾದ ಅಥವಾ ಭಾವನಾತ್ಮಕವಾದ ಅಸ್ತಿತ್ವವಲ್ಲ. ಒಳಗೂ ಶಾಂತಿ, ಹೊರಗೂ ಶಾಂತಿ ನೆಲೆನಿಲ್ಲಬೇಕು. ಬಾಹ್ಯ ವೈಜ್ಞಾನಿಕ ಪ್ರಗತಿ ಆಂತರಿಕ ಶಾಂತಿಗೆ ಮಾರಕವಾಗಿರಬಾರದು. ಆಂತರಂಗಿಕ ದ್ವೇಷ–ಅಸೂಯೆ–ಹುಸಿ–ಲಂಚ–ಸ್ಪರ್ಧೆ–ಅತ್ಯಾಶೆ–ಸ್ವಾರ್ಥಗಳು ಬಹಿರಂಗದ ಮಧುರ ಮಾನವ ಮಂದಾರ ತೋಟವನ್ನು ಹಾಳುಗೆಡಹಬಾರದು; ಇದೇ ಶಾಂತಿಯ ನಿಲವು. ಆತ್ಮಿಕ ಶಾಂತಿಯು ವಿಶ್ವಶಾಂತಿಯ ಅಡಿಗಲ್ಲು. ಆತ್ಮಿಕ ಶಾಂತಿ ಪಾವಿತ್ರ್ಯಗಳಿಲ್ಲದ ವಿಶ್ವಶಾಂತಿ ಅಶಾಂತಿ! ಈ ಉಜ್ವಲ ಆಧ್ಯಾತ್ಮಿಕ ಭಾವನೆಯ ಸ್ನೇಹಮಂಚದಲ್ಲಿ–ಎಲ್ಲ ಮಾನವ ಹಿತಚಿಂತಕರು ಒಂದಾಗಿ ಸೇರಿದ್ದ ಒಕ್ಕೂಟ ಆ ಮಹಾಪರಿಷತ್ತು ಆಗಿತ್ತು.

ಅಂದಿನ ಮೊದಲ ದಿನದ ಮಹಾಸಭೆಯಲ್ಲಿ ಪರಿಷತ್ತಿನ ಗೌರವ ಕಾರ್ಯದರ್ಶಿ ರೆ. ಕೋಶೋ ಓಥೋನಿ (Rev. Kosho Othoni), ಜಪಾನಿನ ಧರ್ಮ ಸಂಸ್ಥೆಯ ಅಂತರ್ರಾಷ್ಟ್ರೀಯ ನಿರ್ವಾಚನಾಧಿಕಾರಿ ರೆ. ನಿಕ್ಯೊ ನಿವ್ಯಾನೋ (Rev. Nikhyo Niwano), ಧಾರ್ಮಿಕ ಸ್ವಾತಂತ್ರ್ಯದ ಅಂತರ್ರಾಷ್ಟ್ರೀಯ ಸಂಘದ ಅಧ್ಯಕ್ಷ ಡಾ|| ದಾನಾ ಮ್ಯಾಕಲೀನ ಗ್ರೀಲೆ (Dr. Dana Mclean Greeley: Chairman of the World Conference as President of the International Association for Religions Freedom), ಆರ್ಚ ಬಿಶಪ್ ಆ್ಯಂಜಲೋ ಫರ್ನಾಂಡೀಸ್ (Arch Bishop Angelo Fernandes), ಪ್ರೊ. ಆರ್. ಜೆ. ವೆಬ್ಲೊಸ್ಕಿ (Prof. R. J. Weblowsky, Professor of Comparative Religion, Habrew University, Jerusalem), ಡಾ|| ಯುಗೆನೆ ಕಾರಸನ್ ಬ್ಲೇಕ್ (Dr. Eugene Carson Blake Council Societies of the World Council of Churches), ಸರ್ ಮಹಮ್ಮದ ಝಾಫ್ರುಲ್ಲಾಖಾನ (President of the International Court of Justice, Hague), ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಡಾ|| ಹೋಮರ್ ಎ. ಜಾಕ್ (Dr. Homer A. Jack), ಡಾ|| ರಂಗನಾಥ ದಿವಾಕರ ಮುಂತಾದ ಪ್ರತಿಷ್ಠಿತ ವ್ಯಕ್ತಿಗಳು ವಿಶ್ವದ ಅಂಗಳದಲ್ಲಿ ಧರ್ಮ ಮತ್ತು ಶಾಂತಿಗಳ ಮಧುರ ಪಾದಾರ್ಪಣವನ್ನೂ, ಮಾನವ ಪ್ರೇಮದ ನಿಷ್ಕಾಮ ಭಾವನೆಯನ್ನೂ ಸಂಪಾದಿಸುವ ದಾರಿಯಲ್ಲಿ ತಮ್ಮ ಚಿಂತನೆಗಳನ್ನು ವೇದಿಕೆಯಲ್ಲಿ ಮಂಡಿಸಿದರು.

### ಪ್ರಧಾನ ಅಧಿವೇಶನ: ಜಗದ್ಗುರುಗಳ ವ್ಯಾಖ್ಯಾನ

೧೯೭೦ ಅಕ್ಟೋಬರ ೧೭; ಗುರುಸಿದ್ಧೇಶ್ವರನ ಶುಭಮಂಗಳ ಬೆಳದಿಂಗಳು ಜಗದ್ಗುರುಗಳ ಬದುಕಿನಲ್ಲಿ ಪ್ರಶಾಂತವಾಗಿ ಹರಡಿದ ಮಹತ್ವದ ದಿನ! "ಅಂದಿನ ವಿಜಯಕ್ಕೆ ನಾವು ಕಾರಣರಲ್ಲ; ಆ ಅಂತರಾತ್ಮ ಮೂಲಕರ್ತೃ ಶ್ರೀ ಗುರು ಸಿದ್ಧೇಶ್ವರನು. ನಾವು ಆತನ ಇಚ್ಛಾಮಾತ್ರದಿಂದ ವರ್ತಿಸುವವರು. ಅಂತೆಯೇ ಅಂದಿನ ವಿಜಯ ಫಲ ಅವನಿಗೆ ಮೀಸಲು"11 ಎಂಬ ಸದ್ಭಾವನೆ ಶ್ರೀಗಳವರದು.

"ಅಂದು ನಸುಕು ಮುರಿಯುದ ಮುನ್ನ ಎಚ್ಚರಾಯಿತು. ಇನ್ನೂ ಕ್ಯೂಟೋ ನಗರ ಗಾಢವಾದ ನಿದ್ರೆಯಲ್ಲಿ ಆಲಿಂಗಿತವಾದಂತಿತ್ತು. ನಮ್ಮ ಸ್ನಾನ, ಪೂಜೆಗಳು ಮುಗಿಯುವಷ್ಟೊತ್ತಿಗೆ ಪೂರ್ವ ಬೆಟ್ಟದ ಓರೆಯಿಂದ ಸೂರ್ಯ ಥಳಥಳಿಸಿದ. ಓ ಇಂದು ನಮ್ಮ ಸರದಿ....ನಾವು ಕನ್ನಡಿಗರಿಂದ ಹೊತ್ತು ತಂದ ಕರ್ತವ್ಯ........ ಭಾರವನ್ನು ನೀಗಿಸಬೇಕಾದ ಸುಸಂಧಿ........ಎಂದು ನೆನೆದಾಗ ರೋಮಾಂಚನವೂ,

11 ನಮ್ಮ ವಿದೇಶ ಯಾತ್ರೆ: ಪುಟ–17

ಅಂತರಂಗದಲ್ಲಿ ಕಂಪನವೂ ಉಂಟಾದವು. ಹುಬ್ಬಳ್ಳಿಯನ್ನು ಬಿಡುವಾಗಲೇ ನಮ್ಮನ್ನು ಬೀಳ್ಕೊಡುವ ಭಕ್ತರಿಗೆ ಹೇಳಿದ್ದೆವು....ನಾವು ನಿಮ್ಮೆಲ್ಲರ ಪುತ್ರ. ನಿಮ್ಮ ಉದ್ದೇಶ ಸಾಧಿಸುವುದಕ್ಕಾಗಿಯೇ ವಿದೇಶಕ್ಕೆ ತೆರಳುವೆವು....ಎಂದು. ಆ ಬಹು ಜನರ, ಆಶೋತ್ತರಗಳ ಸಂಕಲ್ಪಸಿದ್ಧಿಯನ್ನು ಎದುರಿಸಲು ಸನ್ನದ್ಧರಾದೆವು. ಆದರೂ ಆ ಸಮಯದಲ್ಲಿ ಅನೇಕ ಬಗೆಯ ವಿಘ್ನಗಳನ್ನು ಎದುರಿಸಬೇಕಾಯ್ತು. ಭಾರತದಲ್ಲಿಯ ಮಹಾರಾಷ್ಟ್ರ, ಆಂಧ್ರ, ಉತ್ತರಪ್ರದೇಶ, ಬಿಹಾರ, ಬಂಗಾಲ ಮುಂತಾದ ರಾಜ್ಯಗಳಿಂದ ಅನೇಕ ಸಾಧು-ಸಂತರು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ತತ್ತ್ವವೇತ್ತರು, ಕುಲಪತಿಗಳು ಆಗಮಿಸಿದ್ದರು. ಅವರಲ್ಲಿಯೇ ಚರ್ಚೆ ಆರಂಭವಾಯಿತು: ಬಹಿರಂಗ ಅಧಿವೇಶನಕ್ಕೆ ಮಹಾರಾಷ್ಟ್ರದವರು ತಮ್ಮ ವ್ಯಕ್ತಿಗಳನ್ನು ಆರಿಸಬೇಕು. ಬಿಹಾರದವರು ತಮ್ಮ ವ್ಯಕ್ತಿಗಳನ್ನು ಆರಿಸ ಬೇಕೆಂದು, ಹೀಗೆ ಪ್ರತಿಯೊಂದು ರಾಜ್ಯದವರ ಪ್ರಯತ್ನ ನಡೆದದ್ದು ನೋಡಿ ಅತೀವ ಸಂಕಟಕ್ಕೀಡುಮಾಡಿತು. ಈ ಚರ್ಚೆಯಲ್ಲಿ ಕರ್ನಾಟಕಕ್ಕೆ ಅವಕಾಶ ದೊರೆಯುತ್ತದೆಯೋ ಇಲ್ಲವೋ ಎಂಬ ವಿಚಾರಗಳ ತೆರೆಗಳು ಮನಸ್ಸಿನಲ್ಲಿ ಸುಳಿಯ ಹತ್ತಿದವು. ಅಂದು ನಮಗೆ ಇಡಿಯ ದಿನವೇ ನಿದ್ದೆಯಿಲ್ಲ. ಬೆಳಗಿನವರೆಗೆ ಶ್ರೀ ಗುರುಸಿದ್ಧೇಶ್ವರನನ್ನೇ ಸ್ಮರಿಸಿದ್ದಾಯಿತು. ಬಹುದೂರ ಬಂದು ನಮ್ಮ ಕಾರ್ಯ ಸಫಲವಾಗದಿದ್ದರೆ ಹೇಗೆ? ನಾವು ಮುಖ್ಯವಾಗಿ ಬಂದದ್ದು ದೇಶ ನೋಡಲಿಕ್ಕಲ್ಲ; ಭಾರತೀಯ ಸಂಸ್ಕೃತಿಯ ತತ್ತ್ವವನ್ನು ಬಿತ್ತರಿಸಲಿಕ್ಕೆ ಎಂಬುದು ಮನಸ್ಸಿನಲ್ಲಿ ಕೊರೆಯುತ್ತಿತ್ತು. ಚಿಂತೆಯ ಸಾಗರದಲ್ಲಿ ಮುಳುಗಿದೆವು. ನಾವು ಬೆಳಗಿನ ಪೂಜೆಯನ್ನು ಪೂರೈಸಿಕೊಂಡು ಅಧ್ಯಯನ ಕೋಣೆಗೆ ಬರುವಷ್ಟರಲ್ಲಿಯೇ ನಮಗಾಗಿಯೇ ಒಂದು ಓಲೆ ಟೇಬಲ್ಲಿನ ಮೇಲೆ ಕಾಯುತ್ತಿತ್ತು. ಅದನ್ನು ಆತುರತೆ ಯಿಂದ ಒಡೆದು ನೋಡಿದಾಗ, ಆ ಓಲೆ ಸಾಮಾನ್ಯವಾಗಿರದೇ, ನಮ್ಮನ್ನು ಕರ್ತೃ ಶ್ರೀ ಗುರುಸಿದ್ಧೇಶ್ವರನೇ ಬಂದು ಕೃಪೆಮಾಡಿದಂತೆ, ಬಹಿರಂಗ ಅಧಿವೇಶನದಲ್ಲಿ ನಮ್ಮ ಉಪನ್ಯಾಸವನ್ನು ಏರ್ಪಡಿಸಿರುವ ಬಗ್ಗೆ ಆಮಂತ್ರಣ ಹೊತ್ತು ತಂದ ಪತ್ರ ವಾಗಿತ್ತು. ಓದಿ ಆನಂದಭರಿತರಾದೆವು. ಸಂಕಲ್ಪ ಈಡೇರಿದಂತಾಯ್ತೆಂದು ಭಾವಿಸಿ ಕೊಂಡೆವು."12

ಅಂದು ಭೋಜನಾನಂತರ ಬಹಿರಂಗಾಧಿವೇಶನವು ಮಧ್ಯಾಹ್ನ ೧೨ ಕ್ಕೆ ಕ್ರೈಸ್ತ ಪ್ರಾರ್ಥನಾ ಸೇವೆಯಿಂದ ಪ್ರಾರಂಭವಾಯಿತು. ಡಾ|| ಯುಗೆನೆ ಕಾರ್ಸನ್ ಬ್ಲೇಕ್ (**Dr. Eugene Carson Blake**) ಅವರು ಅನಭಿವೃದ್ಧ ರಾಷ್ಟ್ರಗಳ ಪ್ರಗತಿಯ ಬಗ್ಗೆ ಮಾತನಾಡುತ್ತ, ಜಾಗತಿಕ ಮೈತ್ರಿಯೇ ಹಿಂದುಳಿದ ದೇಶಗಳ

---

12 ನಮ್ಮ ವಿದೇಶ ಯಾತ್ರೆ: ಪುಟ–17, 18

ಪುರೋಭಿವೃದ್ಧಿಗೆ ಮೂಲ ತತ್ತ್ವವೆಂದು ಹೇಳಿ ಎಲ್ಲರ ಸಹಬಾಂಧವ್ಯ ಐಕ್ಯತೆಗಾಗಿ ಕೇಳಿಕೊಂಡರು.

ಆಮೇಲೆ ಬಂತು ಪೂಜ್ಯ ಶ್ರೀಗಳವರ ಸರದಿ. ಆಗಲೇ ವೇಳೆ ೨–೩೦. ಬಹಿರಂಗಾಧಿವೇಶನದ ಸಭಾ ಭವನ ಕಿಕ್ಕಿರಿದು ತುಂಬಿತ್ತು. ಎಲ್ಲಿ ನೋಡಿದಲ್ಲೆಲ್ಲ ಪ್ರಜ್ಞಾವಂತರಾದ ಪ್ರಬುದ್ಧ ಜನರು. ಆ ಸಮಾರಂಭದ ಪ್ರತ್ಯಕ್ಷದರ್ಶಿಗಳಾದ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠರು ಹೀಗೆ ವರದಿ ಮಾಡಿದ್ದಾರೆ: "ಪ್ರಧಾನ ಕಾರ್ಯದರ್ಶಿಗಳ ನಿರ್ದೇಶನದಂತೆ ಪೂಜ್ಯ ಗುರುಗಳನ್ನು ವ್ಯಾಸಪೀಠಕ್ಕೆ ಕರೆದುತಂದೆ. ಡಾ॥ ಹೋಮರ್ ಜಾಕರು ಸ್ವಾಗತಿಸಿ ಆಸನವನ್ನು ಅಲಂಕರಿಸಲು ಕೇಳಿಕೊಂಡರು. ಗುರುಗಳು ಪೀಠಾಸೀನರಾದ ಮೇಲೆ ಡಾ॥ ಹುಸೇನರು ಶ್ರೀಗಳ ಪರಿಚಯ ಮಾಡಿಕೊಟ್ಟರು. ಶ್ರೀಗಳ ಪ್ರಶಾಂತ ಮುದ್ರೆ, ಕಾಷಾಯ ವೇಷ, ಲಲಾಟದಲ್ಲಿ ವಿಭೂತಿಯ ತ್ರಿವಳಿ, ಕೈಯಲ್ಲಿ ಯೋಗದಂಡ ಇವುಗಳನ್ನು ನೋಡಿ ನೆರೆದ ಪ್ರಜ್ಞಾವಂತ ಜನ ಗೌರವಾನಂದಗಳನ್ನು ವ್ಯಕ್ತಪಡಿಸಿದರು. ಪೂಜ್ಯರು ಸಭಿಕರ ಕರತಾಡನ ಹರ್ಷೋದ್ಗಾರಗಳ ನಡುವೆ ತಮ್ಮ ಭಾಷಣವನ್ನು ಪ್ರಾರಂಭಿಸಿದರು. 'Fellow Seekers of Peace' ಎಂಬುದಾಗಿ ತಮ್ಮ ಭಾಷಣವನ್ನು ಪ್ರಾರಂಭಿಸಿದ ಕೂಡಲೇ ಇಡೀ ಜನಸ್ತೋಮ ಏಕಮುಖವಾಗಿ ಅಭಿನಂದನೆಯ ಆನಂದೋದ್ಗಾರಗಳನ್ನು ದೀರ್ಘವಾದ ಕರತಾಡನಗಳ ಮೂಲಕ ಪ್ರದರ್ಶಿಸಿದರು. ಚಿತ್ರಗ್ರಾಹಕರು ಫ್ಲ್ಯಾಶ್ ಗನ್ನುಗಳ ಮೂಲಕ ಪ್ರಭಾವಳಿಯನ್ನೇ ಬೆಳಗಿದರು. ಒಂದೆರಡು ನಿಮಿಷ ಎಲ್ಲೆಲ್ಲಿಯೂ ಮೌನ. ಪೂಜ್ಯ ಗುರುಗಳು ಧರ್ಮ ಮತ್ತು ಶಾಂತಿ ಸಮನ್ವಯ ವಿಚಾರವನ್ನು ಕೂಲಂಕಷವಾಗಿ ವಿಮರ್ಶಿಸಿ–'ವೀರಶೈವ ಧರ್ಮವು ವಿಶ್ವಧರ್ಮಕ್ಕೆ ಪೂರಕವಾಗಿದೆ. ವೀರಶೈವ ಶರಣರು ಸಾರಿ ಹೇಳಿದ ಕಾಯಕವೇ ಕೈಲಾಸವೆಂಬ ವಿಚಾರವು ವಿಶ್ವಗ್ರಾಹಿಯಾಗಿದೆ. ಇದೂ ಅಲ್ಲದೆ ಜಾತ್ಯಾತೀತ ಭಾವನೆ, ಮಾನವೀಯ ಮೌಲ್ಯಗಳು, ಕ್ರಿಯಾಜ್ಞಾನ ಸಮನ್ವಯ, ಬಹಿರಂತರಂಗ ಶುದ್ಧಿ, ಆಚಾರ-ವಿಚಾರದಲ್ಲಿ ಶುಚಿ ಸದ್ಭಾವನೆ, ಲೋಕ ಕಲ್ಯಾಣ, ಅವಿರತ ಸೇವೆ, ವಿಶ್ವ ಬಾಂಧವ್ಯ, ಸಹಕಾರಿ ಜೀವನದ ಆವಶ್ಯಕತೆ ಇತ್ಯಾದಿ ವಿಷಯಗಳನ್ನು ನಿರೂಪಿಸಿದರು. ಇದೂ ಅಲ್ಲದೆ ವೀರಶೈವ ಶರಣರು ವಿಚಾರಕ್ಕಿಂತಲೂ ಆಚಾರಕ್ಕೆ, ಕರ್ತವ್ಯ ಪ್ರತಿಷ್ಠೆಗಿಂತಲೂ ಕಾಯಕನಿಷ್ಠೆಗೆ ಮಹತ್ವವನ್ನು ಕೊಟ್ಟಿರುವರೆಂಬುದನ್ನು ವಿಶದಪಡಿಸಿದರು. ಈ ತತ್ವಗಳನ್ನು ಕೃತಿಯಲ್ಲಿ ತರುವದರಿಂದಲೇ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಬಹುದು. ಅದೇ ವೀರಶೈವ ಬಾಳಿನ ಉಸಿರು' ಎಂಬುದಾಗಿ ಒಳ್ಳೇ ಅಸ್ಖಲಿತವಾಗಿ ಇಂಗ್ಲಿಷಿನಲ್ಲಿ ಭಾಷಣ

ಮಾಡಿದರು. ಅನೇಕ ವಿದ್ವಾಂಸರು ಗುರುಗಳಿಗೆ ಹೃತ್ಪೂರ್ವಕ ಅಭಿನಂದನೆಗಳನ್ನರ್ಪಿಸಿದರು. ಸಭಿಕರು ಹರ್ಷನಿರ್ಭರತೆಯಿಂದ ಆಲಿಸಿದರು."13

"ಧರ್ಮದಲ್ಲಿ ರಾಜಕಾರಣ ಸೇರಬಾರದು; ರಾಜಕಾರಣದಲ್ಲಿ ಧರ್ಮ ಸೇರಬೇಕು"–ಎಂದು ಜಗದ್ಗುರುಗಳು ಉಪನ್ಯಾಸದ ಮಧ್ಯೆ ಹೇಳಿದಾಗ ಕರತಾಡನ ಮುಗಿಲುಮುಟ್ಟಿತು.14

ಮಹಾಸಭೆಯಲ್ಲಿ ಪೂಜ್ಯ ಜಗದ್ಗುರುಗಳು ಸಭೆಯ ಮುಂದೆ ಹತ್ತು ಸೂಚನೆಗಳನ್ನು ಮಂಡಿಸಿದರು. ಆ ಸೂಚನೆಗಳನ್ನು ಸರ್ವರೂ ಆಸ್ಥೆಯಿಂದ ಕೇಳಿಕೊಂಡ ರಲ್ಲದೆ, ಆಗಲೇ ಅದರಲ್ಲಿಯ ಒಂದೆರಡು ಅಂಶಗಳು ಕಾರ್ಯರೂಪದಲ್ಲಿ ಬಂದುಬಿಟ್ಟವು. ಆ ಸೂಚನೆಗಳು ಹೀಗಿವೆ:

೧) ಜಗತ್ತಿನ ಸರ್ವಧರ್ಮಗಳಿಂದ ಆಯ್ಕೆಯಾದ–ಪ್ರತಿನಿಧಿಗಳನ್ನೊಳಗೊಂಡ ಒಂದು ಕೇಂದ್ರೀಯ ವಿಶ್ವಧರ್ಮ ಶಾಸನ ಸಂಸ್ಥೆ ರೂಪಿತವಾಗಬೇಕು

೨) ಈ ಸಂಸ್ಥೆಗೆ ವಿಶ್ವದಾದ್ಯಂತ ಶಾಖೋಪಶಾಖೆಗಳು ಇರಬೇಕು.

೩) ಇದರ ಅಸ್ತಿವಾರಕ್ಕೆ ಮೂಲ ಬಂಡವಾಳ ಸಂಗ್ರಹವಾಗಬೇಕು.

೪) ಪ್ರತಿಯೊಂದು ರಾಷ್ಟ್ರೀಯ ಧರ್ಮಶಾಸನ ಸಂಸ್ಥೆಗಳ ಸದಸ್ಯರು ಪ್ರತಿ ತಿಂಗಳೂ ಒಂದೆಡೆ ಸೇರಿ, ಚರ್ಚಿಸಿ, ನಿರ್ಣಯಗಳನ್ನು ಕೈಕೊಂಡು, ವಿಶ್ವಧರ್ಮ ಶಾಸನ ಸಂಸ್ಥೆಗಳು ಕೇಂದ್ರ ಕಚೇರಿಗೆ ತಮ್ಮ ಕಾರ್ಯಕ್ರಮಗಳ ಗತಿ–ಪ್ರಗತಿಗಳನ್ನು ವರದಿಮಾಡಬೇಕು.

೫) ಬಹುಸಂಖ್ಯಾತ ಧರ್ಮಪ್ರತಿನಿಧಿಗಳ ಒಪ್ಪಿಗೆಯ ಮೇರೆಗೆ ವಿಶ್ವಧರ್ಮ ಸಂಸ್ಥೆಯು ಕೇಂದ್ರೀಯ ಕಚೇರಿಯನ್ನು ಆಯ್ಕೆಮಾಡಿಕೊಳ್ಳಬೇಕು.

೬) ವಿಶ್ವಧರ್ಮಗಳ ಶಾಸನ ಸಂಸ್ಥೆಯು ಕಾಲಕಾಲಕ್ಕೆ ತನ್ನ ನಿರ್ಣಯಗಳನ್ನು ಜಗತ್ತಿನ ಧರ್ಮಾಧಿಕಾರಿಗಳಿಗೆ ತಿಳಿಸುತ್ತಿರಬೇಕು. ಈ ಸಂಸ್ಥೆಯು ನಿರಂತರವಾಗಿ ರಾಷ್ಟ್ರೀಯ ಹಾಗೂ ಪ್ರಾಂತೀಯ ಧರ್ಮಾಧಿಕಾರಿಗಳೊಂದಿಗೆ ಸಂಪರ್ಕ ಹೊಂದಿರಬೇಕು.

೭) ವಿಶ್ವದ ಪೀಠಾಚಾರ್ಯರ ಸಂಖ್ಯಾ ಸಂಗ್ರಹಣ ಕಾರ್ಯ ನಡೆಯಬೇಕು.

---

13 ವಿದೇಶಗಳಲ್ಲಿ ಜಗದ್ಗುರುಗಳು: ಚಿತ್ರಭಿ: ಪುಟ–115, 116

14 ಜಪಾನ ಹಾಗೂ ಇತರ ಪೂರ್ವರಾಷ್ಟ್ರಗಳಲ್ಲಿ ಜಗದ್ಗುರುಗಳು ಮಾಡಿದ ಇಂಗ್ಲಿಷ ಭಾಷಣಗಳ ಮೂಲ ಪಾಠವನ್ನು ಅವರ 'ನಮ್ಮ ವಿದೇಶ ಯಾತ್ರೆ' ಪುಸ್ತಕದ ಪುಟ–170 ರಿಂದ 214 ರಲ್ಲಿ ನೋಡಿರಿ.

೮) ನೈತಿಕವಾಗಿ ಮುಗ್ಗರಿಸಿದ ದೀನ-ದಲಿತರ ಸಮಾಜಗಳನ್ನು ಶಾಂತಿ ಹಾಗೂ ಸುಜ್ಞಾನದತ್ತ ಪುನರುತ್ಥಾನಗೊಳಿಸುವದೇ, ಈ ವಿಶ್ವಸಂಸ್ಥೆಯ ಹೆಗ್ಗುರಿಯಾಗಿರಬೇಕು.

೯) ಆಯಾ ದೇಶಗಳ ಧರ್ಮಾಚಾರ್ಯರು ತಮ್ಮ ಜನರಲ್ಲಿ ಶುದ್ಧ ಧರ್ಮಾಚರಣೆಯ ಸಂಸ್ಕಾರವನ್ನು ಅರಳಿಸಿ, ಅವರ ಒಲವನ್ನು ವಿಶ್ವಮಾನವ ಸಖ್ಯದತ್ತ ಸಂಪಾದಿಸಬೇಕು.

೧೦) ವಿಶ್ವಧರ್ಮಗಳ ಶಾಸನ ಸಂಸ್ಥೆಯು ಜಗತ್ತಿನ ನಾನಾ ರಾಷ್ಟ್ರಗಳಲ್ಲಿ ಕಾಲಕಾಲಕ್ಕೆ ವಿಶ್ವಧರ್ಮ ಪರಿಷತ್ತನ್ನು ಸಂಯೋಜಿಸಬೇಕು.

ಭಾಷಣ ಮುಗಿದ ಮೇಲೆ ದೀರ್ಘ ಕರತಾಡನಗಳ ಮಧ್ಯೆ ಅನೇಕ ಜನರು ಎದ್ದು ಬಂದು ಜಗದ್ಗುರುಗಳವರಿಗೆ ಹೃದಯಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸಿದರು.

## ಅಮೇರಿಕೆಯ ಪತ್ರಿಕಾಕರ್ತರಿಗೆ ಸಂದರ್ಶನ

ಮರುದಿನ: ದಿ. ೧೮-೧೦-೭೦ರಂದು ಅಮೇರಿಕೆಯ ಪತ್ರಿಕಾ ಪ್ರತಿನಿಧಿಗಳ ಒಂದು ತಂಡ ಜಗದ್ಗುರುಗಳನ್ನು ಭೆಟ್ಟಿಯಾಗಿ ಸಂದರ್ಶನ (Interview) ಪಡೆಯಿತು. ವೀರಶೈವಧರ್ಮ ಎಂದರೇನು? ಭಸ್ಮಧಾರಣವೇಕೆ? ಕಾವಿ ಉಡುಗೊರೆಯ ಉದ್ದೇಶವೇನು? ಲಿಂಗವೆಂದರೇನು? ಅದರ ರಚನಾ ವಿಧಾನದ ತತ್ತ್ವವೇನು? ಅದರ ಅರ್ಚನ ವಿಧಾನಗಳೇನು? ಅದರಿಂದ ನಿಮಗೆ ಏನು ಫಲ? ಶಿವಯೋಗವೆಂದರೇನು? ದೃಷ್ಟಿಯೋಗದ ಹಿನ್ನಲೆ ಏಕೆ?-ಇತ್ಯಾದಿ ಅನೇಕ ಪ್ರಶ್ನೆಗಳನ್ನು ಕೇಳಿ ರೆಕಾರ್ಡ ಮಾಡಿಕೊಂಡರು. ಜಗದ್ಗುರುಗಳು ಅವರಿಗೆ ಈ ಪ್ರಶ್ನೆಗಳಿಗೆ ತಿಳಿಭಾಷೆಯಲ್ಲಿ ಸರಳಗೊಳಿಸಿ ಉತ್ತರಿಸಿದರು. ಭಸ್ಮ ಮತ್ತು ಲಿಂಗವನ್ನು ತೋರಿಸಿ ಅವುಗಳ ಪೂಜಾಪದ್ಧತಿಯನ್ನು ವಿವರಿಸಿದರು. ಅದರಲ್ಲಿ ಅನೇಕರು ಭಸ್ಮಧಾರಣೆಯನ್ನೂ ಮಾಡಿಕೊಂಡರು. ವೀರಶೈವಧರ್ಮದ ಮೂಲಭೂತವಾದ ಸಿದ್ಧಾಂತ ತ್ರಯಗಳಾದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಸೂತ್ರವನ್ನು ಅವರಿಗೆ ವಿವರಿಸಲಾಯಿತು. ಅವೆಲ್ಲವುಗಳ ಪ್ರಯೋಗ ಹಾಗೂ ಅರ್ಥವ್ಯಾಪ್ತಿಗಳನ್ನು ಟಿಪ್ಪಣಿ ಮಾಡಿಕೊಂಡರು.

ಮರುದಿನ ಸಭಾ ಭವನದ ವಿಶ್ರಾಂತಿಧಾಮದ ಒಂದು ಭಾಗದಲ್ಲಿ ಜಗದ್ಗುರುಗಳು ಆಸೀನರಾದಾಗ ಜಪಾನಿನ ಮಿ. ಇವಾಓ ಪಿ. ಹಿನೋ (Mr. Iwao P. Hino) ಎಂಬುವರು ಊಮಟೋ (Oomoto) ಎಂಬ ಧಾರ್ಮಿಕ ವೃತ್ತ ಪತ್ರಿಕೆಯ ಸಂಪಾದಕರು ವಿವರವಾದ ಸಂದರ್ಶನವನ್ನು ಪಡೆದರು. ಭಾರತೀಯ

ಧರ್ಮಗಳ ಬಗ್ಗೆ, ಮತಗಳ ಕಾರ್ಯಕ್ಷೇತ್ರಗಳ ಬಗ್ಗೆ ವಿವರವಾದ ಪ್ರಶ್ನೆಗಳನ್ನು ಕೇಳಿ ಬರೆದುಕೊಂಡರು. ಜಗದ್ಗುರುಗಳ ಸಮಗ್ರ ಭಾಷಣವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಗೊಳಿಸಿದರು.

ಜಪಾನಿನಲ್ಲಿ ಅನೇಕರು ಜಗದ್ಗುರುಗಳಿಂದ ಭಸ್ಮವನ್ನು ಸ್ವೀಕರಿಸಿ ಧಾರಣ ಮಾಡಿಕೊಂಡರು. ರುದ್ರಾಕ್ಷಿಯನ್ನು ಮುಟ್ಟಿನೋಡಿ ಕೇಳಿ ತಿಳಿದುಕೊಂಡರು. ಕೆಲವರಿಗೆ ದೃಷ್ಟಿಯೋಗ ಅನುಸಂಧಾನಕ್ಕಾಗಿ ಲಿಂಗಗಳನ್ನೂ ನೀಡಲಾಯಿತು. ಅವರೆಲ್ಲರೂ ಅವನ್ನು ತುಂಬಾ ಭಯಭಕ್ತಿಯಿಂದ ಸ್ವೀಕರಿಸಿದರು. ಲಿಂಗ-ರುದ್ರಾಕ್ಷಿ-ಭಸ್ಮಗಳ ಈ ಶುದ್ಧ ಆಚಾರ ನಿಷ್ಠೆಯಲ್ಲಿ ವೈಜ್ಞಾನಿಕ ತಿರುಳು ಅಡಗಿದೆ ಎಂಬುದು ಈಗಾಗಲೇ ಪಾಶ್ಚಿಮಾತ್ಯ ಪ್ರಪಂಚದಲ್ಲಿ ಮೆಲ್ಲನೇ ಅರಿವಾಗುತ್ತಿರುವದನ್ನು ತಿಳಿದು ಜಗದ್ಗುರುಗಳು ಸಂತೋಷಪಟ್ಟರು.

## ಬೌದ್ಧರ ಕೇಂದ್ರ: ಕ್ಯೂಟೋ: ಸಂದರ್ಶನ

ದಿ. ೧೯ರಂದು ಜಪಾನಿನ ಶಾಂತಿ ಪರಿಷತ್ತಿನ ಸಂಯೋಜಕರು ಜಗದ್ಗುರುಗಳಿಗೆ ಸುಪ್ರಸಿದ್ಧ ಧಾರ್ಮಿಕ ಹಾಗೂ ಐತಿಹಾಸಿಕ ಸ್ಥಳಗಳಾದ ಕ್ಯೂಟೋ (Kyoto), ನಾರಾ (Nara) ಹಾಗೂ ಟೇರಾ ಪಟ್ಟಣಗಳನ್ನು ತೋರಿಸುವ ವ್ಯವಸ್ಥೆ ಮಾಡಿದರು. ಕ್ಯೂಟೋ ನಗರದ ನಿಸರ್ಗ ರಮಣೀಯ ಸೊಬಗು ಕಂಡು ಪೂಜ್ಯರ ಕವಿಮನ ಸಂಪೂಜಿತವಾಯಿತು, ಸಂತೋಷಗೊಂಡಿತು. ಆ ನಗರದ ಮೂರು ದಿಕ್ಕುಗಳನ್ನು ಹಸಿರು ಪರ್ವತಶ್ರೇಣಿ ಆವರಿಸಿದ್ದರಿಂದ ತಾಯ ಮಡಿಲಲ್ಲಿ ಮಗುವು ಸೊಂಪಾಗಿ ನಿದ್ರಿಸಿದಂತೆ ಅವರಿಗೆ ಕಂಡಿತು. ಬೌದ್ಧ ಸನ್ಯಾಸಿಗಳಿಗೆ ಇದು ಪವಿತ್ರವಾದ ಭೂಮಿ. ಇದೊಂದು ಬೌದ್ಧ ದೇವಾಲಯಗಳ ನಗರ.

ಕಾಮು (Kammu) ಚಕ್ರವರ್ತಿ (ಕ್ರಿ.ಶ. ೭೯೪) ಕ್ಯೂಟೋವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅವನ ೧೧೦೦ನೆಯ ವರ್ಷದ ಸ್ಮಾರಕವಾಗಿ ಕಟ್ಟಿಸಿದ ಹೆಯಿನ್ ಮಂದಿರ (Heian Shrine) ಹಸಿರು ವೃಕ್ಷಗಳ ಲಲಿತ ಹೊಂಡಗಳ ಪ್ರಾಂಗಣದಲ್ಲಿ ಚೌಕಾಕೃತಿಯ ತಲಶಿಲೆಯ ಮೇಲೆ ಜೋಡಣೆಗೊಳಿಸಿದ ಎತ್ತರದ ಕೆಂಪು ಕಂಬಗಳ ಮೇಲೆ ಚಲುವಾಂತು ನಿಂತಿದೆ. ಮೇಲೆ ಜಪಾನೀ ಮಾದರಿಯ ತ್ರಿಕೋನಾಕೃತಿಯ ಚಲುವಿನ ಚಪ್ಪರ. ಮರಶಿಲ್ಪಗಳ ಕುಸುರು, ಹಸಿರು ತಲ್ಪಗಳ ಹೂದೋಟಗಳೊಂದಿಗೆ ಬಿನ್ನಾಣಗೊಂಡಿದೆ. ಈ ಉದ್ಯಾನವನ ಜಪಾನ ಶೈಲಿಯನ್ನು ಪ್ರತಿನಿಧಿಸಿದಂತೆ ನಮ್ಮ ಭಾರತೀಯ-ಕರ್ನಾಟಕದ ಉದ್ಯಾನಗಳು ಕಂಗೊಳಿಸಿದರೆ ಎಂಥ ಚೆನ್ನ ಅನಿಸಿತು ಜಗದ್ಗುರುಗಳಿಗೆ!

ಹೆಯಿನ್ ಮಂದಿರದ ಪ್ರಾಂಗಣದಲ್ಲಿರುವ ಬಕ್ಕೋರೋ (Bakkoro) ಮತ್ತು ಸೊರ್ಯೋ (Soryo) ಮಂದಿರಗಳನ್ನೂ, ಚೆರಿ (Cherry) ಮರಗಳನ್ನೂ

ನೋಡಿದರು. ಮಂದಿರದ ಸುತ್ತ ೩೦ ಸಾವಿರ ಚೌರಸ್ ಮೀಟರಿನ ತೋಟ (The Holy Garden) ಋಷಿ ಜೀವನಕ್ಕೆ ರಸಜೀವನವನ್ನು ತುಂಬಿತ್ತು!

ನಂತರ ಜೋಡೋ (Jodo) ಸಂಪ್ರದಾಯದ ಚಿಯಾನ್-ಇನ್ (Chion in) ಬೌದ್ಧ ಮಂದಿರವನ್ನು ಕಂಡರು. ಈ ಸಂಪ್ರದಾಯದ (Jodo) ಏಳು ಸಾವಿರಕ್ಕೂ ಹೆಚ್ಚು ದೇವಾಲಯಗಳು ಜಪಾನಿನ ತುಂಬ ಹರಡಿದ್ದು ಅವುಗಳ ಪ್ರಧಾನ ಮಠಪತಿ (Arch Bishop) ಸನ್ನಿಧಿಯವರ ಸಂದರ್ಶನ ಪಡೆದನು. ಇಲ್ಲಿಯ ಅಮೀಡಾ ಡೊ (Amida Do) ದಲ್ಲಿ ೯ ಫೂಟು ಎತ್ತರದ ಅತ್ಯಂತ ಸುಂದರವಾದ ಬುದ್ಧನ ಮೂರ್ತಿ ಜಗದ್ಗುರುಗಳನ್ನು ತುಂಬ ಆಕರ್ಷಿಸಿತು.

ನಂತರ ಸನ್ನಿಧಿಯವರನ್ನು ರೋರ್ಝೀನ್ ಕ್ಯಾನಾನ್ (Ryozen Kannon) ಬಿಳಿಯ ಕರುಣಾಳು ದೇವತೆ (Godess of Mercy) ಯ ಬಳಿಗೆ ಕರೆದೊಯ್ದರು. ಎರಡನೇ ಮಹಾಯುದ್ಧದ ಬಾಂಬ ದಾಳಿಯಲ್ಲಿ ಹಿರೋಶಿಮಾ, ನಾಗಾಸಾಕಿ ಪಟ್ಟಣಗಳ ಲಕ್ಷಾಂತರ ಜನ ಬಲಿಯಾದವರ ಆತ್ಮಕ್ಕೆ ಚಿರಶಾಂತಿ ದೊರೆಯಲೆಂದು ೧೯೫೫ ರಲ್ಲಿ ೧೫ ಫೂಟು ಎತ್ತರದ ಈ ಭವ್ಯಮೂರ್ತಿ ನಿಲ್ಲಿಸಿದ್ದಾರೆ. ಕಂಬನಿಯ ಮಾಲೆಯನ್ನು ಎದೆಯ ಬಟ್ಟಲೊಳಿಟ್ಟು ಪಡೆದ ಈ ಸಂದರ್ಶನ ಅವಿಸ್ಮರಣೀಯ.

ನಂತರ ಟೆಂಡೈ (Tendai) ಪಂಥದ ಸಾಂಜು ಸಾಂಜೆಂಡೊ (Sanju Sangendo) ದೇವಾಲಯದಲ್ಲಿ ೩-೩ ಫೂಟು ಉದ್ದದ ದೇವತಾ ವಿಗ್ರಹಗಳು, ಕಿಯೊಮಿ ಝು ದೇವಾಲಯ (Kiyomi zu Temple), ಜೋಡೋ ಶಿನ್‌ಶು (Jodo Shinshu sect) ಪಂಥದ ಹಿಗಾಶಿ ಹೊಂಗಾಜಿ (Higashi Honganji Temple) ದೇವಾಲಯ, ೧೪೫೦ ರಲ್ಲಿ ಬಿಳಿಗಲ್ಲುಗಳಿಂದ ಕಟ್ಟಿದ (Ryoanji Temple) ಮುಂತಾದವುಗಳನ್ನು ಸಂದರ್ಶಿಸಿದರು. ಭಾರತೀಯ ಮನೋಭಾವವೂ ಜಪಾನೀಯರ ಮನೋಭಾವವೂ ಕಲೆ ಮತ್ತು ಧರ್ಮದ ಆಧಾರದ ಮೇಲೆ ನಿಂತಿವೆ. ವಿಜ್ಞಾನ ಇತ್ತೀಚೆಗೆ ಪೂರಕವಾಗಿದೆ. ಇಂದು ವಿಶ್ವಕ್ಕೇ ಮಾದರಿಯಾಗಿರುವ ಜಪಾನಿಗೆ ಗುರುವಾಗಿ ಮಾರ್ಗದರ್ಶನ ಮಾಡಿದ ಬುದ್ಧ ನಮ್ಮ ಭಾರತದವನೆಂದು ನೆನೆಸಿ ಜಗದ್ಗುರುಗಳು ರೋಮಾಂಚಿತರಾದರು.15

## ಜಪಾನ ಮಹಿಳೆಯ ಭಾರತ ಪ್ರೇಮ

ಓಕ (Oak) ಮರಗಳಿಂದ ಸುತ್ತುವರಿಯಲ್ಪಟ್ಟ ನಾರಾ (Nara) ಪಟ್ಟಣ ಪ್ರವಾಸಿಗರ ನಂದನವನವಾಗಿತ್ತು! ಜಗದ್ಗುರುಗಳು ಇಲ್ಲಿಯ ತೋಡೈಜಿ(Todaiji)

15 ಜಪಾನ ಬುದ್ಧ ಧರ್ಮದ ದೇವಾಲಯಗಳ ವಿವರವಾದ ಅಧ್ಯಯನಕ್ಕೆ ಪೂಜ್ಯ ಜಗದ್ಗುರುಗಳ 'ನಮ್ಮ ವಿದೇಶ ಯಾತ್ರೆ' ಗ್ರಂಥವನ್ನು ನೋಡಿರಿ.

ದೇವಾಲಯ, ಶೋಸೋ-ಇನ್(Shoso-in) ಅರಮನೆ, ಟೆನ್ರಿಕ್ಯೋ(Tenrikyo) ಮಂದಿರಗಳನ್ನು ವೀಕ್ಷಿಸಿದರು. ಟೆನ್ರಿಕ್ಯೋ ದೇವಾಲಯದ ಅಂಗವಾಗಿ ಜಪಾನಿನ ತುಂಬ ೧೬೭೦೦ ಪ್ರಾರ್ಥನಾ ಮಂದಿರಗಳು, ೧೨೦,೦೦೦ ಧರ್ಮೋಪದೇಶಕರು; ಅಲ್ಲದೆ ೨೦ ಲಕ್ಷ ಉಪಾಸಕರೂ ಇರುವರೆಂದು ತಿಳಿದುಬಂತು! ಇದು ನಿಜಕ್ಕೂ ಬೃಹತ್ ಧರ್ಮಪೀಠ.

"ದಿ. ೨೦-೧೦-೭೦ ರಂದು ಒಂದು ಕಾರ್ಯದ ನಿಮಿತ್ತ ಸನ್ನಿಧಿಯವರು ಓಸಾಕಾ ನಗರಕ್ಕೆ ಹೋಗಬೇಕಾಯ್ತು. 'ದಿ ನ್ಯಾಶನಲ್ ಬ್ಯಾಂಕ್ ಆಫ್ ಅಮೇರಿಕಾ' ದಲ್ಲಿ ಕೆಲಸವಿತ್ತು. ಟ್ರೇನಿನಲ್ಲಿ ೫೦ ಮೈಲು ಪ್ರವಾಸ ಮಾಡಿ ಟ್ಯಾಕ್ಸಿ ಮಾಡಿ ಕೊಂಡು ಬ್ಯಾಂಕಿಗೆ ಹೋದರು. ಟ್ಯಾಕ್ಸಿ ಡ್ರಾಯವ್ಹರನ ಪ್ರಾಮಾಣಿಕತೆಯನ್ನು ನೋಡಿ ಆಶ್ಚರ್ಯವಾಯಿತು. ತನಗೆ ಕಾಯದೆ ಪ್ರಕಾರ ಸಲ್ಲುವದಕ್ಕಿಂತಲೂ ಹೆಚ್ಚಿಗೆ ಒಂದು ಪೈಸೆಯನ್ನೂ ಸಹ ತೆಗೆದುಕೊಳ್ಳಲು ಒಪ್ಪಲಿಲ್ಲ. 'ನಾವು ಸಂತೋಷ ದಿಂದ ಕೊಡುತ್ತೇವೆ ತೆಗೆದುಕೊಳ್ಳಿ' ಎಂದು ಹೇಳಿದರೆ-'ನಾನು ಹೆಚ್ಚಿಗೆ ತೆಗೆದು ಕೊಂಡರೆ ಅಪರಾಧವಾಗುವದು' (It is a crime if I accept more) ಎಂದು ನುಡಿದು ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡಿದ. ಬ್ಯಾಂಕಿನ ಒಳಗೆ ಹೋದೆವು. ಬ್ಯಾಂಕಿನ ಪರಿಚಾರಕರು ಒಳ್ಳೇ ವಿನಯದಿಂದ ಕರೆದೊಯ್ದು, ನಮಗೆ ಪೀಠವನ್ನು ಕೊಟ್ಟು ಅಭಿವಂದಿಸಿ, ಮ್ಯಾನೇಜರರಿಗೆ ನಮ್ಮ ವಿಷಯ ತಿಳಿಸಿದರು. ನಮಗೆ ಒಂದು ಚೆಕ್ಕನ್ನು ಅಮೇರಿಕೆಯಿಂದ ನಮ್ಮ ಶಿಷ್ಯರೊಬ್ಬರು ಕಳಿಸಿದ್ದರು. ಅದನ್ನು ಕ್ಯಾಶ್ ಮಾಡಿಸಬೇಕಾಗಿತ್ತು. ಬ್ಯಾಂಕಿನ ಮ್ಯಾನೇಜರ್ ಜಪಾನಿ ಮಹಿಳೆ. ನಮ್ಮ ಚೆಕ್ಕನ್ನು ಸಹಿಮಾಡಿ ಕೊಟ್ಟೆವು. 'ಚೆಕ್ಕಿನ ಬಗ್ಗೆ ಮಾಹಿತಿ (Advice) ಬಂದಿಲ್ಲ. ಚೆಕ್ ಕಳಿಸಿದವರ ಸಹಿಯ ದಾಖಲೆಯೂ (Speciman Signature) ನಮ್ಮಲ್ಲಿರುವದಿಲ್ಲ. ಅದಕ್ಕೇನು ಮಾಡುವದು?' -ಎಂದು ಬ್ಯಾಂಕ್ ಕ್ಯಾಶಿಯರನು ಕೇಳಿದನು. ಆಮೇಲೆ ಮ್ಯಾನೇಜರ್ ಮಹಿಳೆ ಅತಿ ವಿನಯದಿಂದ ನಮಗೆ ಕೈ ಮುಗಿದು ಆಸನವನ್ನು ಕೊಟ್ಟು ಕುಳ್ಳಿರಿಸಿ-'ತಾವು ಯಾವ ದೇಶದಿಂದ ಬಂದಿರುವಿರಿ, ಕಾಯಕವಾವುದು, ಹೋಗುವುದೆಲ್ಲಿಗೆ?' ಎಂಬು ದಾಗಿ ಪರಸ್ಪರ ಶೀಲಸೌಜನ್ಯಕ್ಕೆ ಭಂಗಬರದಂತೆ ನಮ್ಮನ್ನು ಕೇಳಿದಳು. ಅದಕ್ಕೆ 'ನಾವು ಭಾರತ ದೇಶದವರು, ಕರ್ನಾಟಕದಿಂದ ಬಂದವರು, ವೀರಶೈವ ಧರ್ಮದ ಪೀಠದವರು, ವಿಶ್ವಧರ್ಮ ಶಾಂತಿಪರಿಷತ್ತಿಗೆ ಬಂದ ಭಾರತದ ಪ್ರತಿನಿಧಿಗಳು....' ಎಂದೆವು. ಮ್ಯಾನೇಜರ್ ಮಹಿಳೆಯು ಬಹಳ ಸಂತೋಷಪಟ್ಟು ನಮ್ಮ ಚೆಕ್ಕನ್ನು ಕ್ಯಾಶ್ ಮಾಡಿ ನಮಗೆ ಡಾಲರ್ಸ್ ಕೊಡಲು ಹೇಳಿದಳು. ನಮಗೆ ಆಶ್ಚರ್ಯ ವಾಯಿತು. 'ಚೆಕ್ಕು ಕ್ಯಾಶ್ ಆಗಲು ಅವಶ್ಯವಾದ ಮಾಹಿತಿ ದೊರೆತಿಲ್ಲವೆಂದು

ನಿಮ್ಮ ಕ್ಯಾಶಿಯರ್ ಹೇಳಿದರು. ಅದು ಹೇಗೆ ನೀವು ನಮ್ಮ ಚೆಕ್ಕನ್ನು ಮಾನ್ಯ ಮಾಡಿದಿರಿ?' ಎಂದು ಕೇಳಿದೆವು. ಅದಕ್ಕೆ ಆ ಮಹಿಳೆ-'Yes, but you have come here from India, the holy land in which Lord Buddha was born and His Holiness is a saint, I have positive trust and reverence in you the Indians, if the cheque is not genuine, I may loose some money, but I can't loose good people like you'—'ಭಾರತ ದೇಶ ಬುದ್ಧದೇವನ ಜನ್ಮ ಭೂಮಿ, ನೀವು ಪುಣ್ಯ ರಾಷ್ಟ್ರದ ಜನ, ಮೇಲಾಗಿ ಸ್ವಾಮೀಜಿಯವರು ಯೋಗಿಗಳಾಗಿದ್ದಾರೆ, ನೀವು ಕೊಟ್ಟ ಚೆಕ್ ಮೋಸದ್ದಿದ್ದರೆ ನಾನು ಕೇವಲ ಹಣವನ್ನು ಕಳೆದುಕೊಳ್ಳಬಹುದು. ಆದರೇನಂತೆ? ನಿಮ್ಮನ್ನು ಮಾತ್ರ ಖಂಡಿತ ಕಳೆದುಕೊಳ್ಳಲಾರೆ'-ಎಂದು ಉತ್ತರಿಸಿದಳು....ಕೃತಜ್ಞತೆಯ ಭಾವದಿಂದ ನಮ್ಮ ಕಣ್ಣು ನೀರಿಟ್ಟವು. ನಮ್ಮನ್ನು ಓಸಾಕಾ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ, ತಿಕೀಟ್ ತೆಗೆಯಿಸಿ, ಸುರಕ್ಷಿತವಾಗಿ ಕ್ಯೂಟೋ ಮುಟ್ಟುವಂತೆ ವ್ಯವಸ್ಥೆ ಮಾಡಿಬರಬೇಕೆಂದು ಹೇಳಿ, ತಮ್ಮ ಸೇವಕನನ್ನು ನಮ್ಮೊಡನೆ ಕಳಿಸಿಕೊಟ್ಟಳು. ಈ ಘಟನೆ ನಮ್ಮ ಮನದಲ್ಲಿ ಚಿರಸ್ಮರಣೀಯವಾಗಿ ಉಳಿಯಿತು."16

**"ಟೋಕಿಯೋ": ಜಪಾನಿನ ಇಂದ್ರಲೋಕದತ್ತ....**

ದಿನಾಂಕ ೨೨, ಗುರುವಾರ; ಕ್ಯೂಟೋದಿಂದ ಟೋಕಿಯೋಕ್ಕೆ (Tokyo) ಜಗತ್ತಿನಲ್ಲಿಯೇ ಅತಿ ಹೆಚ್ಚು ವೇಗದ ಬುಲೆಟ್ ಟ್ರೇನ್(Bullet Train)ದಲ್ಲಿ ಪ್ರಯಾಣ ಬೆಳೆಸಿದರು. ೨||| ಗಂಟೆಯಲ್ಲಿ ೩೫೦ ಮೈಲು ರೈಲು ಓಡಿತು. ಒಳಗೆ ವಿಮಾನಿನ ಸುಖಾಸನಗಳು. ಭಾರತೀಯ ರೈಲುಗಳ ನೂಕು-ನುಗ್ಗಲು ಇಲ್ಲ. ಪರಸ್ಪರ ತಿಳಿವಳಿಕೆ, ಶಿಸ್ತು, ಅಚ್ಚುಕಟ್ಟುತನ.

ಟೋಕಿಯೋದ ಬೌದ್ಧ ಸಂಘದ ಅಧ್ಯಕ್ಷರಾದ ನಿಕ್ಕ್ಯೋ ನಿವ್ಯಾನೋ (Nikkyo Niwano) ಅವರ ಆಮಂತ್ರಣದ ಮೇರೆಗೆ ಜಗದ್ಗುರುಗಳು ಟೋಕಿಯೋ ತಲುಪಿದರು. ಪ್ರಪಂಚದಲ್ಲೇ ಸುಂದರ ಪಟ್ಟಣಗಳಲ್ಲೊಂದು. ಒಂದೂ ಕಾಲು ಕೋಟಿ ಜನಸಂಖ್ಯೆ. ೫೦-೬೦ ಅಂತಸ್ತಿನ ಕಟ್ಟಡಗಳು ಅಸಂಖ್ಯ. ದಾರಿಗಳಲ್ಲಿ ಜನರೇ ಕಾಣರು; ಬರೀ ಕಾರುಗಳು. ಇಷ್ಟೊಂದು ಬೃಹತ್ ಗಾತ್ರದ ನಗರವಾದರೂ ಎಲ್ಲವೂ ಶುಭ್ರ, ಸ್ವಚ್ಛ, ನಿರ್ಮಲ. ಇಡೀ ಜಪಾನದ ದಾರಿಗಳಲ್ಲಿ ನಿಂತು ಹರಟೆ ಹೊಡೆಯುವವರು, ಕಟ್ಟೆಯಮೇಲೆ ಕುಳಿತು ಕಾಲಹರಣಮಾಡುವವರು, ಎಲೆ-ಅಡಿಕೆ ಜಗಿದು ಪಿಚ್ಚನೇ ಉಗುಳುವವರು, ಬೀಡಿ-ಸಿಗರೇಟುಗಳನ್ನು

16 ನಮ್ಮ ವಿದೇಶ ಯಾತ್ರೆ; ಪುಟ-30, 31, 32

ಬೀಸಾಡುವವರು ಜಗದ್ಗುರುಗಳಿಗೆ ಒಬ್ಬರೂ ಕಾಣಲಿಲ್ಲ. ಸಂದರ್ಶಕ ತಂಡವೊಂದಿಗೆ ಸನ್ನಿಧಿಯವರು ಟೋಕಿಯೋ ರಾಷ್ಟ್ರೀಯ ವಸ್ತುಸಂಗ್ರಹಾಲಯ (Tokyo National Museum), ಆಧುನಿಕ ಕಲೆಯ ರಾಷ್ಟ್ರೀಯ ವಸ್ತು ಸಂಗ್ರಹಾಲಯ (The National Museum of Modern Art), ರಾಜ ಧಾನಿಯ ಕುಶಲ ಕಲೆಗಳ ಸಂಗ್ರಹಾಲಯ (The Metro Politan Fine Art Gallery), ಯೂನೊ (Uno) ಹಾಗೂ ಶೀಬಾ (Shiba) ಹೂದೋಟ ಗಳು, ಗ್ರಂಥಾಲಯ (The Veno Library), ಪ್ರಾಣಿಸಂಗ್ರಹಾಲಯ (The Veno Zoo)ಗಳನ್ನು ನೋಡಿ; ಫ್ಯುಮನ್ (Fuman) ಪ್ರಾರ್ಥನಾ ಮಂದಿರಕ್ಕೆ ಬಂದರು. ಕೋಟ್ಯಾವಧಿ ಹಣದ ವೆಚ್ಚದಿಂದ ನಿರ್ಮಿತವಾದ ಆ ಪ್ರಾರ್ಥನಾ ಮಂದಿರದಲ್ಲಿ ಜಗದ್ಗುರುಗಳ ಸತ್ಕಾರ ನಡೆಯಿತು. ಎಂಟು ಅಂತಸ್ತಿನ ಅರ್ಧ ಗೋಲಾಕೃತಿಯ ಆ ಕಟ್ಟಡ ಅತ್ಯದ್ಭುತವಾಗಿತ್ತು.

"ಅಲ್ಲಿ ಸುಸಜ್ಜಿತವಾದ ಸಾಲಂಕೃತ ಆಸನಗಳ ಮೇಲೆ ನಮ್ಮೆಲ್ಲರನ್ನು ಕುಳ್ಳಿರಿಸಿದರು. ಐದು ವರ್ಷದ ಒಂದೇ ಸಮ ಎತ್ತರದ ೧೫೦ ಬಾಲಿಕೆಯರು ನಮಗೆ ಮಾಲೆ ಅರ್ಪಿಸುವ ದೃಶ್ಯ ಕಲಾಯುತವೂ, ಮನಮೋಹಕವೂ ಆಗಿತ್ತು. ಅನಂತರ ನಮ್ಮೆಲ್ಲರನ್ನು ಬೌದ್ಧ ಸಂಘದ ಅಧ್ಯಕ್ಷರು ಸ್ವಾಗತಿಸುತ್ತ—ನಾವೆಲ್ಲರೂ ಬಂಧುಗಳಂತೆ ವರ್ತಿಸೋಣ, ಪ್ರಪಂಚಕ್ಕೆ ಶಾಂತಿ ದೊರೆಯಲು....ಹೊಂದಿಕೊಂಡು ಹೋಗೋಣ........ಎಂಬ ಭಾವನೆಯನ್ನು ವ್ಯಕ್ತಗೊಳಿಸಿದರು. ಅನಂತರ ಹಾಯಸ್ಕೂಲು-ಕಾಲೇಜಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ಕೆಲವು ನಾಟಕ ಗಳನ್ನು, ವಿವಿಧ ವಿನೋದಾವಳಿಗಳನ್ನೂ ಪ್ರದರ್ಶಿಸಿದರು. ನಮ್ಮನ್ನು ನಗೆಗಡಲಿ ನಲ್ಲಿ ತೇಲಿಸಿ ಕಣ್ಮನಗಳನ್ನು ಸಂತೃಪ್ತಪಡಿಸಿದರು. ೪ ತಾಸಿನವರೆಗೂ ನಡೆದ ಈ ಕಾರ್ಯಕ್ರಮ ನಮಗೆ ತಿಳಿಯದಂತೆ ಕೊನೆಗೊಂಡಿತು. ಅಲ್ಲಿ ನೆರೆದ ಸಹಸ್ರಾರು ಜನಮಾನ್ಯರು, ಮಹಿಳೆಯರು ತಮ್ಮ ಜಪಾನೀ ಪದ್ಧತಿಯ ವಂದನೆಗಳನ್ನರ್ಪಿಸುತ್ತ, ಮೈಯನ್ನು ತಬ್ಬಿ, ಕೈ ಕುಲುಕಿ, ತುಂಬಿದ ಹೃದಯದಿಂದ ಮಾತು ಮೌನವಾಗಿ, ಪ್ರಾಂಜಲ ಮನಸ್ಸಿನಿಂದ ನಮಗೆಲ್ಲ ಶುಭಾಶಯಗಳನ್ನು ಕೋರಿ ಬೀಳ್ಕೊಟ್ಟರು. ನಾವು ಇವೆಲ್ಲವನ್ನು ಶಾಂತ ಗಾಂಭೀರ್ಯದಿಂದ ನಿರೀಕ್ಷಿಸುತ್ತ, ಭಾವತುಂಬಿ ಮಂದಿರದ ಹೊರಗೆ ಬಂದೆವು."17

ಜಪಾನೀಯರ ಬಗೆಗೆ ಜಗದ್ಗುರುಗಳ ಅಭಿಪ್ರಾಯವನ್ನು ಗಮನಿಸಿರಿ: "ಟೋಕಿಯೋದ ನಮ್ಮೆಲ್ಲರ ಸತ್ಕಾರ ಸಭೆಗೆ ೮-೧೦ ಸಾವಿರಕ್ಕೂ ಮೇಲ್ಪಟ್ಟು ಜನರು ಆಗಮಿಸಿದ್ದರು. ಭಾರತದವರ ಮೇಲೆ ಅವರಿಗೆ ಎಲ್ಲಿಲ್ಲದ ಪ್ರೇಮ,

17 ನಮ್ಮ ವಿದೇಶ ಯಾತ್ರೆ; ಪು–36, 37

ಅಭಿಮಾನ. ಭಾರತವೆಂದರೆ ಧರ್ಮ, ಆಧ್ಯಾತ್ಮ, ಯೋಗಗಳ ಕೇಂದ್ರಭೂಮಿ ಯೆಂಬ ಗೌರವ ಅವರಲ್ಲಿ ಮನೆಮಾಡಿಕೊಂಡಿದೆ. ಅಲ್ಲಿಯ ಸಾವಿರಾರು ಸ್ತ್ರೀ-ಪುರುಷರು ತಮ್ಮ ಜಪಾನೀ ಪದ್ಧತಿಯ ನಮಸ್ಕಾರ ಮಾಡುತ್ತ, ನಮ್ಮ ಬಟ್ಟೆಯನ್ನು ಹಿಡಿದು, ಮೈಯನ್ನು ತಟ್ಟಿ, ಕೈ ಕುಲುಕಿಸುತ್ತ ವಂದಿಸುವ ದೃಶ್ಯ ತುಂಬ ಆತ್ಮೀಯವಾಗಿತ್ತು. ಜಪಾನೀ ಸ್ತ್ರೀಯರಲ್ಲಿ ನಾಚುಕೆ, ಅಂಜಿಕೊಳ್ಳುವ ಇಲ್ಲವೆ ಮುದುಡಿಕೊಳ್ಳುವ ಸ್ವಭಾವ ಎಲ್ಲಿಯೂ ಕಾಣಲಿಲ್ಲ. ಅವರು ಬಿಚ್ಚುಮನಸ್ಸಿನಿಂದ ತಾವಾಗಿ ಬಂದು, ಕೈ ಕುಲುಕಿಸಿ, ವಂದನೆ ಅರ್ಪಿಸಿ, ಧನ್ಯವಾದಗಳನ್ನು ಹೇಳುವಾಗ ಅವರ ಪರಿಶುದ್ಧ ನಿರ್ಮಲಭಾವ ತಾನೇತಾನಾಗಿ ನಮಗೆ ವ್ಯಕ್ತವಾಗುತ್ತಿತ್ತು. ಪ್ರಾಮಾಣಿಕತೆಗೆ ಜಪಾನ ದೇಶ ಮುಂದುವರೆದ ದೇಶವೆಂದು ಹಿರಿಯರು ಹೇಳಿದ ನುಡಿ ಪ್ರತ್ಯಕ್ಷ ನೋಡಿ ಮನಸ್ಸಿಗೆ ಸಮಾಧಾನವಾಯ್ತು. ಇವರಲ್ಲಿಯ ರಾಷ್ಟ್ರಾಭಿಮಾನವೂ ಅದೇ ರೀತಿಯಾಗಿ ಕಂಗೊಳಿಸುತ್ತಿತ್ತು."18

ಆ ಮಹಾನ್ ಪರಿಷತ್ತಿನ ನೂರಾರು ಉಪನ್ಯಾಸಕರಲ್ಲಿ ಮುಖ್ಯವಾಗಿ ಎಲ್ಲರನ್ನೂ ಹೆಚ್ಚಾಗಿ ಆಕರ್ಷಿಸಿದವರೆಂದರೆ ಜಗದ್ಗುರುಗಳೇ. ವಿವೇಕಾನಂದರ ಬಗ್ಗೆ ಓದಿಕೊಂಡ, ತಿಳಿದುಕೊಂಡ ಅವರಿಗೆ ಅದೇ ಕಾವಿ ವೇಷದ ಈ ಯೋಗಿ ಸ್ವಾಭಾವಿಕವಾಗಿ ಹೆಚ್ಚು ಹೆಚ್ಚು ಆಕರ್ಷಿಸಿರಲಿಕ್ಕೆ ಸಾಕು. ಜಗದ್ಗುರುಗಳ ಈ ಅನುಭವಗಳನ್ನು ಅವರ ಮಾತಿನಲ್ಲೇ ಕಂಡುಕೊಳ್ಳಬಹುದು:

"ನಮ್ಮ ವಿಶಿಷ್ಟ ವೇಷ-ಭೂಷಣಗಳಾದ ಕಾವಿಬಟ್ಟೆ, ಲಿಂಗ, ಕಾವಿಯಪೇಟಾ, ರುದ್ರಾಕ್ಷಿ, ಭಸ್ಮ, ಪಾದದ ಕಡಾವುಗೆಗಳನ್ನು ಕಂಡು ಆ ಜನ ಆಶ್ಚರ್ಯಗೊಳ್ಳುತ್ತಿದ್ದರು. ಭಸ್ಮಧಾರಣೆಯ ಬಗ್ಗೆ, ಲಿಂಗದ ವೈಶಿಷ್ಟ್ಯತೆಯ ಬಗ್ಗೆ ಅನೇಕ ಕಡೆಗೆ ಚರ್ಚೆ-ವಿಚರ್ಚೆಗಳು ನಡೆಯುತ್ತಿದ್ದವು. ಅನೇಕರು ವೇಷ-ಭೂಷಣಗಳ ಬಗ್ಗೆ ವೈಜ್ಞಾನಿಕವಾದ ಚರ್ಚೆಗೆ ಮೊದಲು ಮಾಡುತ್ತಿದ್ದರು. ಅವರಿಗೆಲ್ಲ ನಾವು ಸರಿಯಾಗಿ ಸಮಾಧಾನ ಹೇಳಿ, ಇವುಗಳ ಮಹತ್ವವನ್ನೂ ವಿವರಿಸಿದೆವು. ಶಿವಯೋಗಮಂದಿರದ ಭಸ್ಮದ ಗಟ್ಟಿಗಳನ್ನು ಕೊಟ್ಟೆವು. ಅವುಗಳನ್ನು ಅವರು ಅತ್ಯಂತ ಭಕ್ತಿಯಿಂದ ಸ್ವೀಕರಿಸಿದ್ದನ್ನು ಕಂಡು ನಮಗೆ ಸಂತೋಷವೆನಿಸಿತು."

"ನಮ್ಮ ವೇಷ-ಭೂಷಣಗಳನ್ನು ನೋಡಿ ಫೋಟೊ ತೆಗೆದುಕೊಳ್ಳುವವರ ಸಂಖ್ಯೆ ಸಾಕಷ್ಟು ಕಂಡುಬಂದಿತು. ಮಾರ್ಗದಲ್ಲಿ ನಮ್ಮನ್ನು ನಿಲ್ಲಿಸಿ, ವಿಶ್ವವಿದ್ಯಾಲಯ, ಕಾಲೇಜುಗಳ ಸ್ತ್ರೀ-ಪುರುಷರು ಫೋಟೊ ತೆಗೆದುಕೊಳ್ಳುತ್ತಿದ್ದರು. ಜಪಾನೀ

---

18 ನಮ್ಮ ವಿದೇಶ ಯಾತ್ರೆ; ಪು—37

ಭಾಷೆಯಲ್ಲಿ ವಂದನಾರ್ಪಣೆಯ ಮಾತುಗಳನ್ನು ಕೇಳುತ್ತ ನಮ್ಮ ಬಟ್ಟೆಯನ್ನು ಮುಟ್ಟಿ ಮುಟ್ಟಿ ನೋಡಿ ಕೈ ಕುಲುಕಿಸುತ್ತಿದ್ದರು."19

**ಕಡಲ ದಂಡೆಯ ಬೆಡಗು: "ಹಾಂಗ್‌ಕಾಂಗ್"**

ಟೋಕಿಯೋದಿಂದ ದಿ. ೨೪ ಶನಿವಾರ ರಾತ್ರಿ ಹಾಂಗ್‌ಕಾಂಗ್ (Hongkong) ಕ್ಕೆ ಪ್ರಯಾಣ ಹೊರಟರು. ಟೋಕಿಯೋದ ಅಂತರ್‌ರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಇವರ ಗಗನವಾಹನ ಆಗಸಕ್ಕೆ ಹಾರಿದಾಗ, ಇಡೀ ಟೋಕಿಯೋ ಪಟ್ಟಣವೇ ಒಂದು ಪ್ರಚಂಡ ಪ್ರಕಾಶದ ಕಾರಂಜಿಯಂತೆ ಗೋಚರಿಸಿ ತಂತೆ! ಮುಂದಿನ ವಿವರ ಅವರ ಮಾತಿನಲ್ಲೇ ಕೇಳಿದರೆ ಖುಶಿ:

"ಆ ದೃಶ್ಯ ನೋಡುತ್ತಿರುವಂತೆ ಕೆಲವೇ ನಿಮಿಷಗಳಲ್ಲಿ ದೂರ ಗಗನದ ಮೋಡಗಳಾಚೆ ಅನಂತ ಕತ್ತಲೆಯಲ್ಲಿ ತೇಲಿ ಹೋಯಿತು. ನಮಗೆ ವಿಮಾನ ದಲ್ಲಿಯೇ ಸ್ವಲ್ಪ ವಿಶ್ರಾಂತಿ. ವಿಮಾನ ಪರಿಚಾರಿಕೆಯರು ನಮ್ಮ ವಿಮಾನ ಪ್ರಯಾಣಗಳಲ್ಲಿ ನಮ್ಮ ಬಳಿ ಬಂದು ಉಪಹಾರ ಏನಾದರೂ ಬೇಕೇ ಎಂದು ವಿಚಾರಿಸುತ್ತಿದ್ದರು. ನಮ್ಮ ನಕಾರಾತ್ಮಕ ಉತ್ತರ ಕೇಳಿ ಇನ್ನುಳಿದವರನ್ನು ವಿಚಾರಿ ಸುತ್ತಿದ್ದರು. ಮುಂದಿನ ವಿಮಾನ ನಿಲ್ದಾಣ ಬರುವಷ್ಟರಲ್ಲಿ ಅನೇಕರು ಶಾಖಾಹಾರ, ಮಾಂಸಾಹಾರ, ಹಣ್ಣು-ಹಂಪಲ, ಪೆಪ್ಪರಮೆಂಟ, ಚಾಕಲೇಟ, ಅಡಿಕೆ ಮೊದ ಲಾದದ್ದನ್ನೆಲ್ಲ ಬೇಕಾದಷ್ಟು ಜಗಿಯುತ್ತಿದ್ದರು. ನಮಗೆ ವಿಮಾನದಲ್ಲಿ ನಿದ್ರಿಸಲು ಸ್ವಲ್ಪು ವಿಶ್ರಾಂತಿ. ನಮ್ಮ ವಿಮಾನ ನಾಲ್ಕೈದು ಗಂಟೆ ಪ್ಯಾಸಿಫಿಕ್ ಸಮುದ್ರದ ಮೇಲೆ ಕತ್ತಲೆಯನ್ನು ಕೊರೆಯುತ್ತ ಹಾರುತ್ತಿತ್ತು. ಹಾಂಗ್‌ಕಾಂಗ್‌ನ ಸಮುದ್ರ ದಂಡೆಯಲ್ಲಿರುವ ಅಂತರ್‌ರಾಷ್ಟ್ರೀಯ ವಿಮಾನ ನಿಲ್ದಾಣ ಕೈಟಿಕ್ (Kitak) ದಲ್ಲಿ ಇಳಿಯುವಾಗ ಆಗಲೇ ಬೆಳಗುಹರಿದಿತ್ತು."20

ವಿಮಾನ ನಿಲ್ದಾಣದಲ್ಲಿ ಭಾರತದ ರಾಯಭಾರಿಗಳು ಇವರನ್ನು ಸ್ವಾಗತಿಸಿ ದರು. ಪ್ರಯಾಣದಲ್ಲಿ ಶ್ರೀ ರಂಗನಾಥ ದಿವಾಕರ ಹಾಗೂ ಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠ ಇವರೊಂದಿಗಿದ್ದರು. ಶ್ರೀಮತಿ ಚಂದ್ರಿಕಾ ಗುತ್ತಲ ಅವರೂ ಇವರೊಂದಿಗೆ ಸಹಪಾಂಥರಾಗಿದ್ದರು. ಹಾಂಗ್‌ಕಾಂಗ್‌ನ ಅಲ್ಬಾ (Alba) ಭವನದಲ್ಲಿ ರಾಯಭಾರಿಗಳು ಶ್ರೀಗಳ ವಾಸ್ತವ್ಯ-ಪೂಜೆ-ಪ್ರಸಾದಗಳಿಗೆ ಅನು ಕೂಲತೆ ಮಾಡಿದ್ದರು. ಮರುದಿನ ಭಾರತದ ಹಾಯಕಮಿಶನರ ಶ್ರೀ ಸಿದ್ಧಾರ್ಥ ಚಾರಿ ಇವರನ್ನು ಅಭಿಮಾನದಿಂದ ಕಂಡು ದರ್ಶನ ಪಡೆದರು. ಮೂಲತಃ ಮೈಸೂರಿನವ

---

19 ನಮ್ಮ ವಿದೇಶ ಯಾತ್ರೆ: ಪುಟ-40, 41
20 ನಮ್ಮ ವಿದೇಶ ಯಾತ್ರೆ: ಪುಟ-43

ರಾದ ಇವರಿಗೆ ಇನ್ನೂ ಸಂತಸ. ತುಂಬಾ ನೆರವಾದರು. ಅಲ್ಲಿಂದ ಹ್ಯಾಪಿ ವ್ಹಾ ್ಯಲಿ (Happy Valey) ಎಂಬಲ್ಲಿರುವ ಹಿಂದೂ ದೇವಾಲಯಕ್ಕೆ (Hindu Temple) ಸನ್ನಿಧಿಯವರನ್ನು ಕರೆದೊಯ್ದರು. ಅಲ್ಲಿರುವ ಗಾಂಧಿ ಸ್ಮಾರಕ ಲಾಯಬ್ರರಿಯ ವ್ಯವಸ್ಥಾಪಕ ಶೀತಲ ಹಾಗೂ ಅರ್ಚಕ ಶರ್ಮಾ ಅವರು ಸನ್ನಿಧಿಯವರನ್ನು ಸ್ವಾಗತಿಸಿದರು. ಜಗತ್ತಿನಲ್ಲಿಯೇ ಅತೀ ಸುಂದರವಾದ ಹಾಂಗ್‌ಕಾಂಗ್ ಬಂದರವನ್ನು ತೋರಿಸಿದರು. ಹಾಂಗ್‌ಕಾಂಗ್ ಜಗತ್ತಿನ ಶ್ರೀಮಂತ ವ್ಯಾಪಾರಿ ಪಡಮೂಲಿ ಪಟ್ಟಣವಾದರೂ ಜಪಾನಿನ ಕ್ಯೂಟೋದಲ್ಲಿ ಕಂಡ ಧಾರ್ಮಿಕ ಶಾಂತಿ–ಸಮಾಧಾನ–ಸಂಯಮಗಳನ್ನು ಇಲ್ಲಿ ಸನ್ನಿಧಿಯವರು ಕಾಣಲಿಲ್ಲ. ಇದೊಂದು ವೈಭವೋಪೇತ ಶ್ರೀಮಂತ ನಗರ. ಜಪಾನಿನ ಬೌದ್ಧ ಮಂದಿರಗಳ ಆ ಸಮರ್ಪಣೆ, ಭಾರತೀಯ್ರ ಭಕ್ತಿ, ಸಂತೃಪ್ತಿಯ ವಾತಾವರಣಗಳನ್ನು ಮರೆಯಲೆಂತು ಸಾಧ್ಯ?

### "ಜಕಾರ್ತಾ": ಭಾರತೀಯತೆಯ ಬಾಂಧವ್ಯ

ಮೂರುದಿನಗಳ ಜಕಾರ್ತಾ ವಾಸ್ತವ್ಯ ಪ್ರೀತಿಯ ಮಾಧುರ್ಯದಿಂದ ತುಂಬಿತ್ತು. ಹಾಂಗ್‌ಕಾಂಗ್‌ದಿಂದ ದಿ. ೨೬ ರಂದು ವಿಮಾನ ಮಾರ್ಗವಾಗಿ ಹೊರಟು, ೭–೮ ತಾಸು ಪ್ರಯಾಣಮಾಡಿ, ಇಂಡೋನೇಶಿಯಾದ ರಾಜಧಾನಿ ಜಕಾರ್ತಾ ತಲುಪಿದರು. ಭಾರತದ ರಾಯಭಾರಿ ಶ್ರೀ ಎನ್. ಬಿ. ಮೆನನ್, ಗಾಂಧಿ ಸ್ಕೂಲಿನ ಪ್ರಿನ್ಸಿಪಾಲ ರಾಮ, ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಕೆ. ಪ್ರತಾಪ ಸ್ವಾಗತಿಸಿದರು. ಸುಪ್ರಸಿದ್ಧ ಪಂಜಾಬಿ ವರ್ತಕರಾದ ಪ್ರೀತಂಸಿಂಗ್ ಅವರ ಮನೆಯಲ್ಲಿ ವಾಸ್ತವ್ಯಕ್ಕೆ ಏರ್ಪಾಟಾಗಿತ್ತು.

ಪ್ರೀತಂಸಿಂಗ್ ಇವರು ಅತ್ಯಂತ ಧಾರ್ಮಿಕರು. ಮಡದಿ–ಮಕ್ಕಳು ಅಷ್ಟೇ ಸುಶೀಲರು. ಲಕ್ಷ್ಮೀ–ಸರಸ್ವತಿಯ ಪೂಜೆ ಮಾಡಿದರು. ಶ್ರೀಗಳಿಂದ ಆಶೀರ್ವಾದ ಪಡೆದರು. ಭಾರತ ಬಿಟ್ಟು ೧೨ ದಿನಗಳಾದರೂ ಪೂಜ್ಯ ಜಗದ್ಗುರುಗಳು ಎಲ್ಲಿಯೂ ಊಟ ಮಾಡಿರಲಿಲ್ಲ. ಕೇವಲ ಹಣ್ಣು-ಹಾಲಿನ ಮೇಲೆಯೇ ಇದ್ದರು. ಇವರ ಮನೆಯಲ್ಲಿ ಸ್ವಯಂಪಾಕವಾಗಿ ಅನ್ನ ಮಾಡಿಕೊಂಡು ಉಂಡರು. ಪ್ರೊ. ಹಿರೇಮಠರಂತೂ ದಾರಿಯುದ್ದಕ್ಕೂ ಎಲ್ಲ ಕೆಲಸಗಳಲ್ಲಿ ನೆರವು ನೀಡಿದ್ದರು.

ಅಂದು ಮಧ್ಯಾಹ್ನ ಭಾರತೀಯ ಮಹಿಳಾ ಸಂಘ (Indian Women's Association) ಆಮಂತ್ರಣದ ಮೇರೆಗೆ ಅಕ್ಕಮಹಾದೇವಿ, ಬಸವೇಶ್ವರರ ಬಗ್ಗೆ ಹಿಂದಿಯಲ್ಲಿ ಒಂದು ಗಂಟೆ ಮಾತನಾಡಿದರು.

ಮರುದಿನ ರಾಯಭಾರಿ ವರ್ಗದವರು ಏರ್ಪಡಿಸಿದ ಭೋಜನದಲ್ಲಿ ಶ್ರೀಗಳು ಮೌನ ಪ್ರೇಕ್ಷಕರಾಗಿ ಕುಳಿತರು. ಇವರು ಆಹಾರ ಪಾನೀಯ ತೆಗೆದುಕೊಳ್ಳಲಿಲ್ಲ.

ಕಟ್ಟುನಿಟ್ಟಾದ ಇವರ ಪ್ರಸಾದ ಪದ್ಧತಿಯ ಬಗ್ಗೆ ಕೇಳಿಕೊಂಡು ಅವರೆಲ್ಲ ತುಂಬಾ ಪ್ರಭಾವಿತರಾದರು. ಈ ಔತಣಕೂಟಕ್ಕೆ ಮುಸಲ್ಮಾನ ಮಹಿಳೆ ಮಾಜಿ ಉಪಸಚಿವೆ ಶ್ರೀಮತಿ ಕಾತ್ಯಾಯನೀ (ಕರ್ತಿನಿ) ಎಂಬುವರು ಬಂದಿದ್ದರು. ಈ ಮಹಿಳೆ ಜಗದ್ಗುರುಗಳನ್ನು ಕಂಡು ಅವರು ತೊಟ್ಟ ಕಾಷಾಯಾಂಬರದ ಬಗ್ಗೆ, ಇಷ್ಟಲಿಂಗದ ಬಗ್ಗೆ, ರುದ್ರಾಕ್ಷಿಯ ಬಗ್ಗೆ ಹತ್ತಾರು ಪ್ರಶ್ನೆಗಳನ್ನು ಕೇಳಿ ತಿಳಿದುಕೊಂಡರು. ಶಿವಲಿಂಗವನ್ನೂ, ಭಸ್ಮದ ಗಟ್ಟಿಯನ್ನೂ ಆಶೀರ್ವಾದದಿಂದ ಪಡೆದುಕೊಂಡಳು. ಅವಳು ಇದನ್ನು ಪಡೆದುಕೊಳ್ಳುವದು ಮಾತ್ರವಲ್ಲದೆ ಪ್ರತಿದಿನ ಪೂಜಿಸುವ ವಿಧಾನಗಳನ್ನು ಜಗದ್ಗುರು ಸನ್ನಿಧಿಯಿಂದ ಕೇಳಿಕೊಂಡಳು. ಇವುಗಳ ಇನ್ನಿಷ್ಟು ಅಧ್ಯಯನಕ್ಕಾಗಿ ಭಾರತಕ್ಕೆ ಬರುವುದಾಗಿ ಹೇಳಿದಳು.

ಜಕಾರ್ತಾದ ಮೂರುದಿನಗಳ ವಾಸ್ತವ್ಯ ಭಾರತೀಯತೆಯಿಂದ ತುಂಬಿತ್ತು. ಜಗದ್ಗುರುಗಳು ಆಹಾರ ಸ್ವೀಕರಿಸದ್ದರಿಂದ ಮೊದಲು ರಾಯಭಾರಿಯವರು ಅಸಂತುಷ್ಟರಾಗಿದ್ದರು. ನಂತರ "ಪ್ರಸಾದ" ಧರ್ಮದ ಉಜ್ವಲ ಹಿನ್ನೆಲೆ ತಿಳಿದು ಸಂತೋಷಗೊಂಡರು.

## ಸಿಂಗಾಪೂರ: ಕೌಲಾಲಂಪೂರ: ಸುಂದರ ಅನುಭವ

ದಿ. ೨೯ ಗುರುವಾರ ಜಕಾರ್ತಾದಿಂದ ಸಿಂಗಾಪುರಕ್ಕೆ ವಿಮಾನ ಮಾರ್ಗವಾಗಿ ಬಂದು ಪಯಾಲೇಬರ್ (Payalaber) ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಮಧ್ಯಾಹ್ನ ಒಂದುಗಂಟೆಗೆ ಇಳಿದರು. ಭಾರತದ ರಾಯಭಾರಿ ವರ್ಗದವರು ಬರಮಾಡಿಕೊಂಡರು. ಇಲ್ಲಿಯ ಸುಂದರವಾದ ಶ್ರೀ ರಾಮಕೃಷ್ಣಾಶ್ರಮದಲ್ಲಿ ಪೂಜಾ–ಪ್ರಸಾದ–ವಾಸ್ತವ್ಯಗಳಿಗೆ ಏರ್ಪಾಟಾಗಿತ್ತು. ಆಶ್ರಮದ ಮುಖ್ಯಸ್ಥರಾದ ಸ್ವಾಮಿ ದಾಮೋದರಾನಂದಜಿ ಮತ್ತು ಸ್ವಾಮಿ ಅಜ್ಞೆಯಾನಂದಜಿ ಇವರು ಸನ್ನಿಧಿಯವರ ವಾಸ್ತವ್ಯಕ್ಕೆ ಅಮಿತೋತ್ಸಾಹದಿಂದ ಸರ್ವಸಿದ್ಧತೆ ಮಾಡಿದ್ದರು. ಇಲ್ಲಿಯ ವಾಸ್ತವ್ಯದಲ್ಲಿ ಸನ್ನಿಧಿಯವರಿಗೆ ಮೂರುಸಾವಿರಮಠದಲ್ಲೇ ಇದ್ದಂತೆ ಆತ್ಮೀಯತೆ ದೊರೆಯಿತು. ಅದೇ ಹೂವು, ಅದೇ ಪತ್ರಿ. ಮೂರು ಹೊತ್ತು ಪೂಜೆ. ಎರಡು ದಿನ ಆಶ್ರಮದ ಯೋಗ–ಪ್ರಾರ್ಥನೆ–ಸಾಧನೆ–ಚಟುವಟಿಕೆಗಳನ್ನು ಸನ್ನಿಧಿಯವರು ನಿಕಟವಾಗಿ ನೋಡಿದರು. ಅಲ್ಲಿಂದ ಹೊರಡುವಾಗ ಆಶ್ರಮದ ಅನಾಥಾಶ್ರಮಕ್ಕೆ ಕೆಲ ಹಣವನ್ನು ಜಗದ್ಗುರುಗಳು ದಾನ ಕೊಟ್ಟರು. ಮಠದ ವ್ಯವಸ್ಥಾಪಕರಿಗೆ ವಿಭೂತಿ–ಲಿಂಗ–ಕೆಲ ಪುಸ್ತಕ ಕೊಟ್ಟರು.

ಸಿಂಗಾಪುರದಿಂದ ಮಲೇಶಿಯಾ ದೇಶದ ರಾಜಧಾನಿ ಕೌಲಾಲಂಪುರಕ್ಕೆ ನವ್ಹೆಂಬರ ೧ ರಂದು ವಿಮಾನಿನಿಂದ ಬಂದಿಳಿದರು. ರಾಯಭಾರಿ ಕಚೇರಿಯ ಮುಖ್ಯಾಧಿಕಾರಿ ಶ್ರೀ ಗುಪ್ತಾ ಬರಮಾಡಿಕೊಂಡರು. ಭಾರತದ ಓವ್ಹರ–ಸಿ–

ಬ್ಯಾಂಕಿನ (Overseas Bank of India) ಮುಖ್ಯ ಅಕೌಂಟಂಟರಾದ ಶ್ರೀ ದೊರೆಸ್ವಾಮಿ ಅಯ್ಯರ ಅವರ ಬಂಗ್ಲೆಯಲ್ಲಿ ಸನ್ನಿಧಿಯವರ ವಾಸ್ತವ್ಯಕ್ಕೆ ಏರ್ಪಾಟಾಗಿತ್ತು.

ಸಾಯಂಕಾಲ ಸ್ವಾಮಿ ವಿವೇಕಾನಂದ ಭವನದಲ್ಲಿ ಜಗದ್ಗುರುಗಳು "ಹಿಂದೂ ಧರ್ಮದ ಪುನರುತ್ಥಾನ ಮತ್ತು ಜಾಗತಿಕ ಶಾಂತಿ" ಕುರಿತು ಉಪನ್ಯಾಸ ನೀಡಿದರು. ಶ್ರೀ ಸ್ವಾಮಿ ಪ್ರಣವಾನಂದಜಿ ಅವರು ಅಧ್ಯಕ್ಷತೆ ವಹಿಸಿದ್ದರು. ಮರುದಿನ ಸ್ವಾಮಿ ಶಿವಾನಂದಜಿ ಇವರಿಂದ ಸ್ಥಾಪಿಸಲ್ಪಟ್ಟ "ದೈವೀ ಜೀವನ ಸಂಸ್ಥೆ"ಗೆ (The Divine Life Society) ಭೇಟಿ ಕೊಟ್ಟರು. ೨–೩ ಗಂಟೆಯ ಆಧ್ಯಾತ್ಮದ ಚರ್ಚೆಯಲ್ಲಿ ಶ್ರೀಗಳೊಂದಿಗೆ ಶ್ರೀ ರಂಗನಾಥ ದಿವಾಕರ ಮತ್ತು ಪ್ರೊ. ಎ. ಎಲ್. ಹಿರೇಮಠ ಪಾಲ್ಗೊಂಡಿದ್ದರು.

ಕೌಲಾಲಂಪುರದಿಂದ ಏಳು ಮೈಲು ಅಂತರದಲ್ಲಿರುವ ಪರ್ವತ ಶ್ರೇಣಿಯಲ್ಲಿರುವ ಜಗತ್ಪ್ರಸಿದ್ಧ ಬಟು ಗವಿಗಳು (Batu Caves) ಜಗದ್ಗುರುಗಳಿಗೆ ಪ್ರಭಾವ ಬೀರಿದವು. ಇವುಗಳ ಪ್ರೇಕ್ಷಣೀಯ ಅನುಭವವನ್ನು ಜಗದ್ಗುರುಗಳಿಂದಲೇ ಕೇಳಬೇಕು:

"ಬಟು ಗವಿಗಳು ನೋಡಲು ರುದ್ರರಮಣೀಯವಾಗಿವೆ. ಅವುಗಳ ಒಳಗೆ ಹೋದರೆ ವಿಜಾಪುರದ ಗೋಳಗುಮ್ಮಟದಂತೆ ಅತಿದೊಡ್ಡ ಒಳಭಾಗವನ್ನು ಕಾಣಬಹುದು. ಭಾರೀ ಗಾತ್ರದ ಚೂಪಾದ ಕೊರಕಲು, ಬಂಡೆಗಳು ಎಲ್ಲಿ ಜಾರಿ ಮೈಮೇಲೆ ಬೀಳುವವೋ ಎಂಬಂತೆ ಭಯಾನಕ ದೃಶ್ಯ....ಒಂದು ಗವಿಯಲ್ಲಿ ಹಿಂದು ಧರ್ಮದ ಪರುಪರೆಯ ಒಂದು ದೊಡ್ಡ ಆಕಳು ಇದೆ; ಅದಕ್ಕೆ ಐದು ಕಾಲುಗಳಿವೆ. ಇಲ್ಲಿ ಒಂದು ಷಣ್ಮುಖಸ್ವಾಮಿಯ ದೇವಾಲಯವೂ ಇದ್ದುದು ಗಮನೀಯ. ಇದು ಹಿಂದುಗಳಿಗೆ ಪವಿತ್ರ ಯಾತ್ರಾಸ್ಥಳವಾಗಿದೆ. ಜಾತ್ರೆಗಳಲ್ಲಿ ಹಿಂದುಗಳು ಬಂದು ವ್ರತ-ನಿಯಮಗಳನ್ನು ಕೈಕೊಳ್ಳುತ್ತಾರೆ. ಆಗ ಕೆಲವರು ಉದ್ದವಾದ ತಾಮ್ರದ ಡಬ್ಬಣದಂತಹ ಆಯುಧವನ್ನು ನಾಲಿಗೆಗೆ ಚುಚ್ಚಿಕೊಳ್ಳುವ ಪರುಪರೆ ಇದೆಯಂತೆ. ಆಗ ನಮಗೆ ದ್ರಾವಿಡ ಮೂಲದ ವೀರಭದ್ರನ ಕುರುಹು ಇದಾಗಿರಬಹುದೆಂದು ಅನಿಸಿತು."21

ಮಲೇಶಿಯಾದ ಉದ್ಯೋಗ-ಸಂಪರ್ಕ ಮಂತ್ರಿಗಳಾದ (Minister of Works, Posts, Telecommunication) ವ್ಹಿ. ಜಿ. ಸಂಬಂಧನ್ ಹಾಗೂ ಅವರ ಪತ್ನಿ ಸನ್ನಿಧಿಯವರನ್ನು ಮನೆಗೆ ಆಮಂತ್ರಿಸಿ ಪಾದಪೂಜೆ ಮಾಡಿದರು.

---

21 ನಮ್ಮ ವಿದೇಶ ಯಾತ್ರೆ: ಪುಟ–53

ಶ್ರೀಮತಿ ಸಂಬಂಧನ್ ಅವರು ವೀಣಾವಾದನದೊಂದಿಗೆ ಸನ್ನಿಧಿಯವರ ಎದುರು ಲಿಂಗಾಷ್ಟಕವನ್ನು ಹಾಡಿದಾಗ ಅವರಿಗೆ ತುಸು ಆಶ್ಚರ್ಯವೂ, ಅಷ್ಟೇ ಆನಂದವೂ ಉಂಟಾಯಿತು.

## ಬೌದ್ಧ ಧರ್ಮಕ್ಷೇತ್ರ: ಥೈಲ್ಯಾಂಡಿಗೆ

ಬೌದ್ಧ ಧರ್ಮದ ನೆಲೆವೀಡು ಈ ಥೈಲ್ಯಾಂಡ್. ಇದರ ರಾಜಧಾನಿ ಬ್ಯಾಂಕಾಕ್ ನೂರಾರು ಬೌದ್ಧ ಮಂದಿರಗಳನ್ನುಳ್ಳ ಪವಿತ್ರ ಯಾತ್ರಾಸ್ಥಳ. ಆಗ್ನೇಯ ಏಶಿಯಾ ದಲ್ಲಿಯೇ ಅತಿದೊಡ್ಡ ವಿಮಾನ ನಿಲ್ದಾಣವಾದ ಬ್ಯಾಂಕಾಕಿನ ಡಾಂಗ ಮಂಗ (Dang Maung) ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ನವ್ಹೆಂಬರ ೩ರಂದು ಮಧ್ಯಾಹ್ನ ಬಂದಿಳಿದರು. ಭಾರತದಲ್ಲಿ ರಾಯಭಾರಿ ಮುಖ್ಯಸ್ಥರಾದ ಶ್ರೀ ತ್ರಿಪಾಟಿ ಯವರು ಸ್ವಾಗತಿಸಿ; ಬ್ಯಾಂಗ್‌ಕಾಕ್ ನಗರದ "ಥಾಯ್-ಭಾರತ ಮಂದಿರ" ದಲ್ಲಿ ವಾಸ್ತವ್ಯಕ್ಕೆ ಏರ್ಪಾಟು ಮಾಡಿದರು. ಥಾಯ್ ಭಾಷೆ ಬಲ್ಲ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಶರ್ಮಾ ಇವರ ನೆರವಿಗೆ ನಿಂತರು. ಶ್ರೀ ಸಚದೇವ ಎಂಬ ಹಿರಿಯ ಸದ್ಗೃಹಸ್ಥರು ಪ್ರಮುಖ ಉದ್ಯಮಪತಿಗಳು ತುಂಬ ನೆರವಾದರು.

ಪೌರ್ವಾತ್ಯ ರಾಷ್ಟ್ರಗಳಲ್ಲಿ ಥೈಲ್ಯಾಂಡ್ ಅತ್ಯಂತ ಸುಂದರವಾದುದು. ಎಲ್ಲಿ ನೋಡಿದತ್ತ ಬೌದ್ಧಮಂದಿರಗಳು. ಇದೊಂದು ಭಾರತದ ಕಾಶಿ ಪಟ್ಟಣವಿದ್ದಂತೆ! ಬೌದ್ಧರ ಧರ್ಮದ ಗುರುಗಳೇ ಥೈಲ್ಯಾಂಡಿನ ಆಡಳಿತ ಸೂತ್ರ ವಹಿಸಿಕೊಂಡಿದ್ದರು. ಅವರ ಮುಖ್ಯ ಗುರುಗಳನ್ನು (His Holiness Supreme Patriarch of Thailand) ಅವರ ಮಠದಲ್ಲಿ ಜಗದ್ಗುರುಗಳು ಭೇಟಿಯಾದರು. ದುಬಾಷಿ ಶ್ರೀ ಶರ್ಮರ ಸಹಾಯದೊಂದಿಗೆ ಮಾತನಾಡಿದರು. ಇಲ್ಲಿಯ ಬೌದ್ಧ ಸನ್ಯಾಸಿ ಗಳ ವಿಶ್ವವಿದ್ಯಾಲಯದ ಬಗ್ಗೆ ಜಗದ್ಗುರುಗಳ ವರ್ಣನೆಯಿಂದಲೇ ತಿಳಿದುಕೊಳ್ಳ ಬೇಕೆನಿಸುತ್ತದೆ.

"ನಮ್ಮ ಕುತೂಹಲವನ್ನು ಕೆರಳಿಸಿದ ಸಂಗತಿ ಎಂದರೆ ಬ್ಯಾಂಕಾಕಿನ ಬೌದ್ಧ ಸನ್ಯಾಸಿಗಳ ವಿಶ್ವವಿದ್ಯಾಲಯ(Mahachulalong Kornraja Vidyalaya) ಈ ವಿಶ್ವವಿದ್ಯಾಲಯದಲ್ಲಿ ಸಾಧು ಸನ್ಯಾಸಿಗಳ ಹೊರತು ಪ್ರಾಪಂಚಿಕರಾರೂ ಇಲ್ಲ. ಎರಡು ಸಾವಿರಕ್ಕೂ ಮೇಲ್ಪಟ್ಟ ಸನ್ಯಾಸಿಗಳು, ಬ್ರಹ್ಮಚಾರಿಗಳು, ಸ್ವಾಮಿಗಳು, ವಟುಗಳು ಇದ್ದರು. ಇವರ ಹೊರತು ಬೇರೆ ಯಾರೂ ಅಭ್ಯಾಸ ಮಾಡುವಂತಿಲ್ಲ. ಅಲ್ಲಿಯ ಪ್ರೊಫೆಸರರೂ ಸನ್ಯಾಸಿಗಳೇ, ಪ್ರಿನ್ಸಿಪಾಲರೂ ಸನ್ಯಾಸಿಗಳೇ, ಆಡಳಿತ ವರ್ಗದವರೂ ಸನ್ಯಾಸಿಗಳೇ, ವಿದ್ಯಾರ್ಥಿಗಳೂ ಸನ್ಯಾಸಿಗಳೇ. ಈ ಸಂಸ್ಥೆಯನ್ನು ನೋಡಿದಾಕ್ಷಣ ನಮಗೆ ಹೇಳತೀರದಷ್ಟು ಮನಸ್ಸಿಗೆ ಆನಂದವಾಯಿತು. ನಮ್ಮ ಮಠದ ಸ್ವಾಮಿಗಳ ತರಬೇತಿಗಾಗಿ ನಾವು ಸ್ಥಾಪಿಸಿರುವ ವಟುಗಳ ಸಂಸ್ಕೃತ ವಿದ್ಯಾ

ಲಯವನ್ನು ಇದೇ ಮಾದರಿಯಲ್ಲಿ ಮುಂದುವರಿಸಬೇಕೆಂಬ ಬಯಕೆ ನಮಗಾಯಿತು. ಇದರ ಅಧ್ಯಕ್ಷರಾದ ಬುದ್ಧಾಚಾರ್ಯ (Somdech Phra Buddacharya was Arunrajavarama) ರೊಂದಿಗೆ ಅತ್ಯಂತ ಉತ್ಸಾಹದಿಂದ ನಾಲ್ಕು ತಾಸು ಕಳೆದೆವು. ಅವರು ನಮಗೆ ಅತೀವ ಮಾನಮರ್ಯಾದೆ ಸಲ್ಲಿಸಿ, ನೆನಪಿಗಾಗಿ ಬುದ್ಧನ ಬಂಗಾರದ ಪ್ರತಿಮೆಯೊಂದನ್ನು ಹಾಗೂ ಪರಿಚಯ ಗ್ರಂಥಗಳನ್ನು ಕೊಟ್ಟರು.... ಬ್ಯಾಂಕಾಕ್ ಒಂದರಲ್ಲಿಯೇ ಅರವತ್ತುಸಾವಿರಕ್ಕಿಂತ ಹೆಚ್ಚು ಬೌದ್ಧ ಸನ್ಯಾಸಿಗಳಿರುವರಂತೆ. ಅವರು ಬುದ್ಧನೇ ದೇವರೆಂದು ಆರಾಧಿಸುತ್ತಾರೆ."22

## ಮರಳಿ ತಾಯ್ನಾಡಿಗೆ : ಮರಳಿ ಮಠಕ್ಕೆ

ತುಂಬ ಸುದೀರ್ಘ ಪಯಣ. ಅವಿಶ್ರಾಂತ ಯಾತ್ರೆ. ಸಾವಿರ ಸಾವಿರ ನೆನಪಿನ ಹೂಗಳು ಮನದ ಬುಟ್ಟಿಯಲ್ಲಿ. ಮತ್ತೆ ಮರಳಿ ಭಕ್ತರ ನೆನಪು....ಮಠದ ನೆನಪು....ಮಾತೃಭೂಮಿಯ ನೆನಪು....

ದಿ. ೫ ೧೧–೧೯೭೦ ರಂದು ಬ್ಯಾಂಕಾಕ್‌ದಿಂದ ಹೊರಟು ವಿಮಾನ ಮಾರ್ಗವಾಗಿ ಬಂಗಾಲ ಉಪಸಾಗರದ ಆಕಾಶಪಥವನ್ನು ಪ್ರವೇಶಿಸಿ ಕಲಕತ್ತೆಗೆ ಸಂಜೆ ಎಂಟು ಗಂಟೆಗೆ ತಲುಪಿದರು. ಶ್ರೀ ಗುರುಸಿದ್ಧೇಶ್ವರನ ಮಹಾಕೃಪೆ ಪ್ರತ್ಯಕ್ಷವಾದಂತೆ ಸುರಕ್ಷಿತ ಯಾತ್ರೆ. ನೂರಾರು ಭಕ್ತರು ಜಗದ್ಗುರುಗಳ ಬಗೆಗೆ ನಂದಾದೀಪ ಇರಿಸಿದ್ದರು. ದೀಪ ಬೆಳಗಿತು, ಬೆಳೆಯಿತು. ಶ್ರೀ ರಂಗನಾಥ ದಿವಾಕರರೊಂದಿಗೆ, ಆಪ್ತ ಕಾರ್ಯದರ್ಶಿ ಪ್ರೊ. ಹಿರೇಮಠರೊಂದಿಗೆ ಕಲಕತ್ತೆ ವಿಮಾನ ನಿಲ್ದಾಣ ತಲುಪಿದರು.

ಅಂದು ಕಲಕತ್ತೆಯ ಇನ್‌ಕಮ್ ಟ್ಯಾಕ್ಸ್ ಆಫೀಸರ್ ಎಮ್.ಪಿ. ಹೊಸಮನಿಯವರ ಮನೆಯಲ್ಲಿ ಪೂಜೆ, ಪ್ರಸಾದ, ವಿಶ್ರಾಂತಿ. ಪ್ರಯಾಣದ ಪ್ರಯಾಸ ಕಳೆಯಿತು. ಶ್ರೀ ರಾಮಕೃಷ್ಣರ ಬೇಲೂರ ಮಠಕ್ಕೆ ಹೋಗಿ ಅಲ್ಲಿಯ ಸ್ವಾಮಿಗಳೊಂದಿಗೆ ಸಂದರ್ಶನ. ನಂತರ ದಿ. ೭ ರಂದು ದಿಲ್ಲಿಗೆ ವಿಮಾನ ಮೂಲಕ ಪ್ರಯಾಣ.

ಆಗೊಂದು ದುಃಖದ ವಾರ್ತೆ! ಮೂರುಸಾವಿರಮಠದ ಚಿಕ್ಕ ಮರಿಯಾನೆ "ಗಣೇಶ"ನು ವಿದ್ಯುತ್ತಿನ ಆಘಾತದಿಂದ ತೀರಿಕೊಂಡ ವಾರ್ತೆ....ಇಂಡಿಯನ್ ಎಕ್ಸಪ್ರೆಸ್ ಪತ್ರಿಕೆಯಲ್ಲಿ!! ಥೈಲ್ಯಾಂಡಿನಲ್ಲಿದ್ದಾಗಲೇ ಈ ಆನೆಯ ಅಗಲಿಕೆಯ ಬಗ್ಗೆ ಜಗದ್ಗುರುಗಳಿಗೆ ಕನಸು ಬಿದ್ದಿತ್ತು. ಅದನ್ನು ಹಿರೇಮಠರಿಗೆ ಹೇಳಿಯೂ ಇದ್ದರು. ತಾಯ್ನಾಡಿಗೆ ಬಂದ ನಂತರ ಕನಸು ನನಸಾಗಿತ್ತು! ಎಂಥ ವಿಚಿತ್ರ!!

---

22 ನಮ್ಮ ವಿದೇಶ ಯಾತ್ರೆ: ಪುಟ:–57,58

ದಿ. ೧೦ ರಂದು ಮುಂಬಯಿಗೆ ವಿಮಾನದಲ್ಲಿ ಪಯಣ. ಅಸಿಸ್ಟಂಟ್ ಇನ್‌ಕಮ್‌ಟ್ಯಾಕ್ಸ್ ಕಮೀಶನರ್ ವ್ಹಿ. ಆರ್. ಹಿರೇಮಠರ ಮನೆಯಲ್ಲಿ ಆತ್ಮೀಯ ವಾಸ್ತವ್ಯ. ನಂತರ ವಿಮಾನ ಮೂಲಕ ದಿ. ೧೧ ರಂದು ಬೆಳಗಾವಿಗೆ ಬಂದು; ಅಸಂಖ್ಯಾತ ಭಕ್ತರಿಂದ ಸ್ವಾಗತಗೊಂಡು ಹುಬ್ಬಳ್ಳಿಗೆ ತಲುಪಿದರು. ಅಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಮುಗಿಬಿದ್ದ ಭಕ್ತರ ಭವ್ಯ ಸ್ವಾಗತದಲ್ಲಿ ಮಾತು ಮೌನ ವಾಯಿತು! ಪ್ರೀತಿ ಸುರಿಮಳೆಯಾಯಿತು!! ಕರ್ತೃ ಜಗದ್ಗುರು ಹುಚ್ಚೇಶ್ವರರ ಶ್ರೀ ಸಮಾಧಿ ಮಂದಿರದಲ್ಲಿ ತಲೆವಾಗಿ ನಿಂದಾಗ ಮುಗಿಲ ದೇವತೆಗಳು ಅನುಗ್ರಹ ಪುಷ್ಪಗಳನ್ನು ಸುರಿದಂತೆ ಗಂಟಾನಾದಗಳು ಮೊಳಗಿದವು.

ನಂತರ ೧೦-೧೫ ದಿನಗಳವರೆಗೆ ಹುಬ್ಬಳ್ಳಿಯ ಪ್ರಧಾನ ಪೇಟೆಗಳಲ್ಲಿ, ಧಾರವಾಡದಲ್ಲಿ, ಕನ್ನಡನಾಡಿನ ನೂರಾರು ನಗರ-ಗ್ರಾಮಗಳಲ್ಲಿ ಜಗದ್ಗುರುಗಳಿಗೆ ನೀಡಿದ ಭವ್ಯ ಸತ್ಕಾರ ಸಮಾರಂಭಕ್ಕೆ ಇನ್ನೊಂದು ಪುಸ್ತಕವೇ ಬೇಕಾಯಿತು. ಸಾವಿರಾರು ಮಾಲೆಗಳ ಸುರಿಮಳೆ, ಅಭಿಮಾನ ಭಕ್ತಿಗಳ ಮಹಾಪೂರ. ಈ ಪ್ರೀತಿಯ ಭಾಗ್ಯ ದೊರೆತುದು ಕರುಣಾಸಾಗರ ಶಿವ ತಂದೆಯ ಶ್ರೇಷ್ಠ ವರದಾನ ವಲ್ಲವೇ!

## ಸಾಹಿತ್ಯ ನಿರ್ಮಾಣ: ಸಮಾಜ ನಿರ್ಮಾಣ

ಇತಿಹಾಸ ಪ್ರಸಿದ್ಧವಾದ ಜಪಾನ ಯಾತ್ರೆಯ ನಂತರ ಜಗದ್ಗುರುಗಳ ಕಾರ್ಯಕ್ಷೇತ್ರ ಒಂದಕ್ಕೆ ನೂರುಪಟ್ಟು ಬೆಳೆಯಿತು. ಅಪಾರ ಕಾರ್ಯಕ್ಷೇತ್ರದ ಮಧ್ಯೆಯೂ ಸಾಹಿತ್ಯ ನಿರ್ಮಾಣ ನಿಲ್ಲಲಿಲ್ಲ. 'ಅಮೃತ ಬಿಂದು', 'ಹೊಂಗಿರಣ', 'ಆಶೀರ್ವಾಣಿ- ೨' ಮುಂತಾದ ಅನೇಕ ಕೃತಿಗಳು ಇದೇ ಕಾಲದಲ್ಲಿ ರೂಪಿತ ವಾದವು. ಸುಂದರ ವಚನಗಳ ಸಾರ ರಚನೆಯಾಗಿ 'ಚಿತ್ತುಮನ' ಬಂದಿತು. ಪೂಜಾ ಸಮಯದಲ್ಲಿ ಹೆಚ್ಚಾಗಿ ಬರೆದ ವಚನಗದ್ಯಗಳ ಸಂಕಲನ ಇಲ್ಲಿದೆ. ಇದರ ವಿಸ್ತೃತ ವ್ಯಾಪ್ತಿಯಾಗಿ "ವಚನ ವಾರಿಧಿ"ಯ ರಚನೆ ನಡೆಯಿತು.23

ಜೊತೆ ಜೊತೆಗೆ ಮಹಿಳಾ ವಿದ್ಯಾಪೀಠದ ಬೆಳವಣಿಗೆ, ಘಟಪ್ರಭಾ ಆರೋಗ್ಯ ಧಾಮದ ಆಧುನೀಕರಣ, ಆರಂತಸ್ತಿನ ಗಡಿಯಾರ ಗೋಪುರ ನಿರ್ಮಾಣ, ೬೦೦ ಗ್ರಂಥಗಳ ಪ್ರಕಟನೆಯ ಸಾಹಸ, ಪ್ರಾಚೀನ ಮೂರುಸಾವಿರಮಠದ ಅತಿ ಮಹತ್ವದ ರಿಪೇರಿಗಳು, ಆಧುನಿಕತೆ, ಹಿಂದೂ-ಮುಸ್ಲಿಂ ಐಕ್ಯತೆಗಾಗಿ ಯತ್ನ ಹೀಗೆ ನೂರೆಂಟು

---

23 ಜಗದ್ಗುರುಗಳ ಸಾಹಿತ್ಯ ರಚನೆಗಳ ಪ್ರಾರಂಭದ ಗ್ರಂಥಗಳ ವಿಚಾರ ವಿಮರ್ಶೆ ಈಗಾಗಲೇ ಬಂದಿದೆ. ಅವರ ಸಾಹಿತ್ಯದ ಉತ್ತರ ಭಾಗದ ರಚನೆಗಳ ಪರಾಮರ್ಶೆ ಇದೇ ಗ್ರಂಥದ ಉತ್ತರ ಭಾಗದಲ್ಲಿ ಅಡಕವಾಗಿದೆ ಗಮನಿಸಬಹುದು.

ದಾರಿಗಳಲ್ಲಿ ಜಗದ್ಗುರುಗಳವರ ನೂರಾರು ಅದ್ಭುತ ಸಾಹಸಗಳ ಸಮಗ್ರ ದರ್ಶನವೇ ಒಂದು ಉದ್ಗ್ರಂಥವಾದೀತು. ೧೨ ವರ್ಷಗಳ ಒಂದು ಘಟ್ಟದ ನಂತರ ದ್ವಾದಶ ಪೀಠಾರೋಹಣವು ಇತಿಹಾಸ ಪ್ರಸಿದ್ಧವಾಗಿ ನಿರ್ಮಿತವಾಯಿತು. ಅವರ ಜೀವನದ ಸಮಗ್ರ ಸಾಧನೆಗಳ ವಿವರವಾದ ನೋಟವನ್ನು ಇದೇ ಗ್ರಂಥದ ಮೂರನೇ ಹಾಗೂ ಕೊನೆ ಭಾಗದಲ್ಲಿ ಸಂಗ್ರಾಹ್ಯವಾಗಿ ಮಾತ್ರ ನೀಡಲಾಗುವದು. ದ್ವಾದಶ ಪೀಠಾರೋಹಣದ ಐತಿಹಾಸಿಕ ಅದ್ಭುತದತ್ತ ಈಗ ಗಮನ ನೀಡುವಾ.

### ಇತಿಹಾಸ ಪ್ರಸಿದ್ಧವಾದ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವ: ೧೯೭೨

೨-೪-೧೯೭೨ರಿಂದ ೧೦-೪-೧೯೭೨ ರ ವರೆಗೆ ಹುಬ್ಬಳ್ಳಿಯಲ್ಲಿ ಜರುಗಿದ ಈ ಮಹಾಸಮಾರಂಭ ಹತ್ತಾರು ಮಹಾಪರಿಷತ್ತುಗಳ ಸಮನ್ವಯ ರಂಗವಾಗಿದ್ದು; ಕರ್ನಾಟಕದ ಇತಿಹಾಸದಲ್ಲೇ ದಾಖಲಿಸಬೇಕಾದ ಮಹೋನ್ನತ ವ್ಯಾಪ್ತಿ-ದೀಪ್ತಿ ಸಂಪಾದಿಸಿತು. ಕನ್ನಡದ ಹೆಸರಾಂತ ಹಿರಿಯ ಕವಿ "ಕುವೆಂಪು" ಅವರು ದಿ. ೨೯-೩-೭೨ ರಲ್ಲಿ ನನಗೆ ಬರೆದ ಪತ್ರವನ್ನು ಇಲ್ಲಿ ಗಮನಿಸಬಹುದು: "ತಮ್ಮ ೨೧-೩-೭೨ ರ ಪತ್ರ ಮತ್ತು ಆಹ್ವಾನ ಪತ್ರಿಕೆಗಳು ತಲುಪಿದವು. ತಮ್ಮ ವಿಶ್ವಾಸಕ್ಕಾಗಿ ಕೃತಜ್ಞನಾಗಿದ್ದೇನೆ. ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ದ್ವಾದಶ ಪೀಠಾರೋಹಣದ ಸಂದರ್ಭದಲ್ಲಿ ನೀವು ಒಂದು ಕವಿ ಸಮ್ಮೇಳನವನ್ನು ಏರ್ಪಡಿಸಿರುವದು ತಿಳಿದು ತುಂಬ ಸಂತೋಷವಾಗಿದೆ. ನಾಡಿನ ಪ್ರಖ್ಯಾತ ಕವಿಗಳು ಭಾಗವಹಿಸುವ ಈ ಸಮ್ಮೇಲನವು ಅತ್ಯಂತ ಯಶಸ್ವಿಯಾಗುತ್ತದೆ ಎಂಬುವರಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ಧರ್ಮದ ನಂದಾದೀವಿಗೆಯು ಈ ನಾಡಿನಲ್ಲಿ ಸದಾ ಪ್ರಶಾಂತವಾಗಿ ಬೆಳಗುತ್ತಿರುವುದಕ್ಕೆ ಕವಿಗಳು ತಮ್ಮ ಕಾವ್ಯ ತಪಸ್ಸಿನ ತೈಲವನ್ನು ಅದಕ್ಕೆ ಎರೆಯುತ್ತಾ ಬಂದಿರುವುದೂ ಒಂದು ಮುಖ್ಯವಾದ ಕಾರಣವಾಗಿದೆ. ಆದುದರಿಂದ ಧರ್ಮ ಸಮ್ಮೇಲನದ ಜೊತೆಗೆ ಕವಿ ಸಮ್ಮೇಲನವನ್ನೂ ಏರ್ಪಡಿಸಿರುವುದು ಅತ್ಯಂತ ಉಚಿತವಾಗಿದೆ. ನಿಮ್ಮ ಈ ಎಲ್ಲ ಸಮ್ಮೇಲನಗಳು ಯಶಸ್ವಿಯಾಗಿ ನಡೆಯಲಿ ಎಂದು ಹಾರೈಸುತ್ತೇನೆ."

ದಿ. ೧೧-೪-೧೯೭೨ ರ "ಸಂಯುಕ್ತ ಕರ್ನಾಟಕ"ದ ಮುಖಪುಟದಲ್ಲಿ ಮುಖ್ಯವಾಗಿ ಬಂದ ಸುದ್ದಿ: "೨ ಲಕ್ಷ ಜನರಿಂದ ಮೂರುಸಾವಿರಮಠದ ಮಹಾಪ್ರಸಾದ ಸ್ವೀಕಾರ; ನಗರದಲ್ಲಿ ಅಭೂತಪೂರ್ವ ಅನ್ನದಾಸೋಹ. ಕನ್ನಡನಾಡಿನ ಎಲ್ಲ ನಿಟ್ಟುಗಳಿಂದಲೂ ನಗರಕ್ಕೆ ಬಂದು ಮೂರುಸಾವಿರಮಠದ ಜಗದ್ಗುರುಗಳವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವದಲ್ಲಿ ಪಾಲುಗೊಂಡ ಸುಮಾರು ಎರಡು ಲಕ್ಷ ಭಕ್ತ ಜನರು ನೆಹರೂ ಮೈದಾನಿನಲ್ಲಿ ತನ್ನಿಮಿತ್ತ ಏರ್ಪಡಿಸಿರುವ ಅನ್ನದಾಸೋಹದಲ್ಲಿ ಮಹಾಪ್ರಸಾದವನ್ನು ಸ್ವೀಕರಿಸಿ ಸಂತೃಪ್ತರಾದರು. ಬೆಳಿಗ್ಗೆ

೧೯–೩೦ ರ ಸುಮಾರಿಗೆ ಶ್ರೀ ಜಗದ್ಗುರುಗಳವರು ವಿಧ್ಯುಕ್ತವಾಗಿ ಮಂತ್ರ ಘೋಷ ಗಳ ಮಧ್ಯದಲ್ಲಿ ಅನ್ನಪೂರ್ಣೆಯನ್ನು ಅರ್ಚಿಸಿ ಕೆಲವರಿಗೆ ಎಲೆಯಲ್ಲಿ ಪ್ರಸಾದ ನೀಡಿದರು. ಆಗಿನಿಂದ ಆರಂಭವಾದ ಅನ್ನದಾಸೋಹವು ರಾತ್ರಿಯಲ್ಲಿ ಸಹ ನಡೆ ದಿತ್ತು. ನಗರದ ಸಾಮಾನ್ಯವಾಗಿ ಎಲ್ಲ ವರ್ತಕರು, ಉದ್ದಿಮೆದಾರರು ತಮ್ಮ ತಮ್ಮ ವ್ಯವಹಾರಗಳಿಗೆ ಬಿಡುವಿತ್ತು, ಅನ್ನದಾಸೋಹದ ಸೇವೆಗೆ ನಿಂತಿದ್ದರಿಂದ ನಗರದ ಹೆಚ್ಚಿನ ಭಾಗದಲ್ಲಿ ಇಂದು ಚಟುವಟಿಕೆ ಕಂಡುಬರಲಿಲ್ಲ. ನಗರದ ಎಲ್ಲ ಚಿಕ್ಕ ದೊಡ್ಡ ಬೀದಿಗಳು ವಿಶೇಷತಃ ಮೂರುಸಾವಿರಮಠ ರಸ್ತೆ, ದಾಜೀಬಾನ ಪೇಟೆ, ಕೊಪ್ಪೀಕರ ರೋಡ, ದುರ್ಗದಬೈಲ, ಮರಾಠಾಗಲ್ಲಿ, ಲ್ಯಾಮಿಂಗ್ಟನ್ ಸ್ಟೇಷನ್ ರೋಡ ಮೊದಲಾದ ರಸ್ತೆಗಳು ಇಂದು ಭಕ್ತರಿಂದ ತುಂಬಿಹೋಗಿದ್ದವು. ಹೊಸ ಬಟ್ಟೆ ಬಣ್ಣದ ಬಟ್ಟೆಗಳನ್ನು ಧರಿಸಿದ ಸ್ತ್ರೀ-ಪುರುಷರಿಂದ ರಸ್ತೆಗಳು ವರ್ಣಮಯ ಅಲಂಕಾರ ಹೊಂದಿದಂತೆ ಕಂಡುಬಂದವು. ಬಸ್ಸುಗಳಲ್ಲಿ ಸಹ ಜನಸಂದಣಿ ಹೆಚ್ಚಿತ್ತು."

ದಿ. ೯–೪–೧೯೭೭ ರ "ಸುಧಾ" ಪತ್ರಿಕೆ ಈ ರೀತಿ ಜಗದ್ಗುರುಗಳ ಬಗೆಗೆ ವಿಶೇಷ ಲೇಖ ಪ್ರಕಟಿಸಿದೆ—"ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿ ಗಳ ದ್ವಾದಶ ಪೀಠಾರೋಹಣ ಮಹೋತ್ಸವದ ಸಂದರ್ಭದಲ್ಲಿ ಈ ಮಹಾನ್ ವ್ಯಕ್ತಿಯ ಪ್ರಗಲ್ಭ ಪಾಂಡಿತ್ಯ, ಬಹುಮುಖ ಸೇವಾಕ್ಷೇತ್ರ, ಧಾರ್ಮಿಕ ಪ್ರಚಾರ ಕಾರ್ಯ ಮತ್ತು ಅಮಿತ ಪ್ರಭಾವಗಳು ಸ್ಮರಣಾರ್ಹ.... ಇಂದು ದ್ವಾದಶ ವರ್ಷದ ಪೀಠಾರೋಹಣಕ್ಕೆ ಅಣಿಯಾಗಿರುವ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಕೀರ್ತಿ ಭಾರತಕ್ಕೇ ಅಲ್ಲದೆ ವಿದೇಶಗಳಿಗೂ ವಿಸ್ತರಿಸಿದೆ.... ಕಿಯೋಟೋ (Kyoto) ದಲ್ಲಿ ಜರುಗಿದ ಜಾಗತಿಕ ರಾಷ್ಟ್ರಗಳ ಸರ್ವಧರ್ಮಗಳ ಶಾಂತಿ–ಪರಿಷತ್ತಿನಲ್ಲಿ (International Inter–religious Pease–Conference) ಭಾರತವನ್ನು ಪ್ರಭಾವಿಯಾಗಿ ಪ್ರತಿನಿಧಿಸಿ ಬಂದಿರುವ ಇಂದಿನ ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಬಾಳು ವೈವಿಧ್ಯ ಪೂರ್ಣ. ಇವರು ಹುಟ್ಟಿದ್ದೇ ಉಜ್ವಲ ಶಿವಯೋಗಿಗಳಾಗಿದ್ದ ಲಿಂ. ವಿಜಯ ಮಹಾಂತ ಶಿವಯೋಗಿಗಳು ಜನಿಸಿದ ಅರಸಿಕೆರೆ ತಾಲ್ಲೂಕಿನ ಸಸಿವಾಳದ ಕೊಳಗಲ್ಲ ಹಿರಿಯಮಠದಲ್ಲಿ....ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳು ಒಂದು ವ್ಯಕ್ತಿಯಲ್ಲ; ಶಕ್ತಿಯಾಗಿದ್ದಾರೆ. ಅವರು ಕರ್ತೃತ್ವಶಕ್ತಿ ಪಡೆದು ಕೊಂಡು ಜಗದ್ಗುರು ಪೀಠಕ್ಕೆ ಕಳೆ ತಂದಿದ್ದಾರೆ. ಅವರೊಬ್ಬರು ಜೀವಂತವಾದ ಮಹಾಸಂಸ್ಥೆ."

"ಸುಧಾ" ಪತ್ರಿಕೆ ಇನ್ನೂ ಮುಂದುವರೆದು ಜಪಾನಿನ ವಿಶ್ವಶಾಂತಿ ಪರಿಷತ್ತಿನ ಬಗ್ಗೆ ಹೀಗೆ ವರದಿಮಾಡಿದೆ–"ಜಗದ್ಗುರುಗಳು ಮೂರುವರ್ಷಗಳ ಹಿಂದೆ ದಿಲ್ಲಿಯಲ್ಲಿ ಜರುಗಿದ ಜಾಗತಿಕ ಶಾಂತಿ ಪರಿಷತ್ತಿನಲ್ಲಿ ಕನ್ನಡನಾಡನ್ನು ಪ್ರತಿನಿಧಿಸಿ ವಿಚಾರ

ಪರಿಪ್ಲುತವಾದ ಉಪನ್ಯಾಸವನ್ನು ಕರುಣಿಸಿದರು. ಜಗತ್ತಿನ ನಾನಾ ದೇಶಗಳ ಪ್ರತಿನಿಧಿಗಳು ಇದರ ಬಗ್ಗೆ ಮೆಚ್ಚಿಗೆ ಸೂಚಿಸಿದ್ದಾರೆ. ಡಾ. ಹೋಮರ್ ಎ. ಜಾಕ್ (Homer A. Jack) ಎಂಬ ಪಂಡಿತರು ಅಮೇರಿಕೆಯಲ್ಲಿ ತಾವು ಸಂಕಲನ ಗೊಳಿಸಿದ 'ವಿಶ್ವಧರ್ಮಗಳು ಮತ್ತು ವಿಶ್ವಶಾಂತಿ' (World Religions and World Peace) ಎಂಬ ಗ್ರಂಥದಲ್ಲಿ ಜಗದ್ಗುರುಗಳ ಈ ಉಪನ್ಯಾಸವನ್ನು ಅಚ್ಚುಹಾಕಿಸಿ ಪ್ರಸಿದ್ಧಿಸಿದರು. ಈ ಉಪನ್ಯಾಸದ ಕೆಲ ವಾಕ್ಯಗಳನ್ನು ಗಮನಿಸ ಬಹುದು—"The fear of war envelops the world today. In the face of this menacing situation, the spiritual heads of all nations, philosophers and statesmen should come together and deliberate on the best way to secure peace.... As a result of such deliberations; world tension may be eased, the war clouds may roll away and the sun of peace shine in the heavens, bringing hope to humanity. May all those who are spiritually inclined resolve that they will exert themselves in the cause of world peace and usher in the Millennium."24

ದಿ. ೧೧-೪-೧೯೭೨ ಸೋಮವಾರದ ಪತ್ರಿಕೆಯಲ್ಲಿ"ಸಂಯುಕ್ತ ಕರ್ನಾಟಕ"ವು ತನ್ನ ಮುಖಪುಟದಲ್ಲೇ ಕೊಡಮಾಡಿದ ಅಗ್ರವರದಿಯನ್ನು ಗಮನಿಸಲೇಬೇಕು— "ಮಾನವ ಕುಲದ ಭವಿಷ್ಯತ್ತನ್ನು ಉಜ್ವಲಗೊಳಿಸಬೇಕು: ಸರ್ವಧರ್ಮ ಶಾಂತಿ ಸಮ್ಮೇಲನದ ನಿವೇದನೆ: ವಿಶ್ವದಾದ್ಯಂತ ಶಾಂತಿ ಹಾಗೂ ಸದಿಚ್ಛೆಯ ವಾತಾವರಣ ವನ್ನು ನಿರ್ಮಿಸಿ, ಮಾನವ ಕುಲದ ಭವಿಷ್ಯತ್ತನ್ನು ಉಜ್ವಲಗೊಳಿಸುವದಕ್ಕಾಗಿ ಪ್ರತಿಯೊಬ್ಬರೂ ಅವಿರತ ಪರಿಶ್ರಮಿಸಬೇಕೆಂದು ಜಗತ್ತಿನ ಇತಿಹಾಸದಲ್ಲೇ ಮೊಟ್ಟ ಮೊದಲನೇ ಬಾರಿ ಮಹತ್ವದ ಜಗದ್ಗುರು ಧರ್ಮಪೀಠವೊಂದು ನಗರದ ಶ್ರೀ ಜಗದ್ಗುರು ಮೂರುಸಾವಿರಮಠದಲ್ಲಿ ಸಂಘಟಿಸಿದ ಸರ್ವಧರ್ಮಗಳ ಶಾಂತಿ ಸಮ್ಮೇಳನವು ತನ್ನ ಎರಡುದಿನಗಳ ಕಾರ್ಯಕಲಾಪಗಳ ಅಂತ್ಯದಲ್ಲಿ ಒಕ್ಕೊರಲಿ ನಿಂದ ಕಳಕಳಿಯ ಕರೆನೀಡಿತು. ಶ್ರೀ ಮೂರುಸಾವಿರ ಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವದ ಅಂಗವಾಗಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಭಾಮಂಟಪದಲ್ಲಿ ನಡೆದ ಈ ಐತಿಹಾಸಿಕ ಸಮ್ಮೇಳನವು ಎಲ್ಲ ಧರ್ಮಗಳ ಮೂಲಗುರಿಯು ಮಾನವ ಕುಲದ ಕಲ್ಯಾಣವೇ ಆಗಿದೆಂದು

---

24 ಸುಧಾ: 9–4–1972: ಪುಟ-42, 43, 44: ಲೇ. ಜಿ. ಎಚ್. ಹನ್ನೆರಡುಮಠ

ಘೋಷಿಸಿತು. ಜಗತ್ತನ್ನು ಇಡೀ ಮಾನವ ಕುಲವನ್ನು ಅಣ್ವಸ್ತ್ರ ಮೊದಲಾದ ಮಾರಕಾಸ್ತ್ರಗಳಿಂದಾಗಿ, ಬಡತನ ಮೊದಲಾದ ಸಮಸ್ಯೆಗಳಿಂದಾಗಿ ಉದ್ಭೂತವಾಗಿರುವ ಗಂಡಾಂತರದಿಂದ ಮುಕ್ತಗೊಳಿಸಲು ತೀವ್ರ ಕಾತರತೆಯನ್ನು ತೋರಿಸಿತು."

## ಸಮ್ಮೇಲನಗಳ ಸಮ್ಮೇಲನ

ದಿ. ೨-೪-೧೯೭೨ ರಿಂದ ೧೨-೪-೧೯೭೨ರ ವರೆಗೆ ಸತತ ಹತ್ತುದಿನಗಳ ನಡೆದ "ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವ"ವು ವ್ಯಕ್ತಿಪ್ರಧಾನವಾಗಿರದೇ ತತ್ತ್ವ ಪ್ರಧಾನವಾಗಿಯೂ, ಸೈದ್ಧಾಂತಿಕವಾಗಿಯೂ, ಸರ್ವಧರ್ಮದರ್ಶನಗಳ ಸಮನ್ವಯ ಸಾರ ಸ್ವರೂಪವಾಗಿಯೂ ನಡೆಯಿತೆಂಬುದನ್ನು ಕರ್ನಾಟಕದ ಖ್ಯಾತ ಪತ್ರಿಕೆಗಳಾದ ಪ್ರಜಾವಾಣಿ, ಕನ್ನಡಪ್ರಭ, ಸಂಯುಕ್ತ ಕರ್ನಾಟಕ, ಕರ್ಮವೀರ, ಸುಧಾ, ಪ್ರಜಾಮತ, ಪ್ರಪಂಚ ಮುಂತಾದವುಗಳು ಅಗ್ರಸ್ಥಾನ ನೀಡಿ ಪ್ರಕಟಿಸಿದವು. ಎರಡು ಲಕ್ಷ ಜನರಿಗೆ ಅನ್ನದಾಸೋಹದ ಏರ್ಪಾಟನ್ನು ನಿಂತು ಮಾಡಿದವರು ಮುಖ್ಯವಾಗಿ ಹುಬ್ಬಳ್ಳಿಯ ಕ್ಷತ್ರಿಯ ಸಮಾಜದ ಸೋದರ-ಸೋದರಿಯರು. ಲಿಂಗಾಯತರೇ ಅಡುಗೆ ಮಾಡಬೇಕೆಂಬ ನಿಯಮವಿರಲಿಲ್ಲ. ೫೦-೬೦ ಸಾವಿರಜನ ಸೇರಿದ ಈ ಮಹಾಸಭೆಯಲ್ಲಿ ನೂರಕ್ಕೆ ೨೨ರಷ್ಟು ಮುಸಲ್ಮಾನ ಸ್ತ್ರೀ-ಪುರುಷರು ಕುತೂಹಲದಿಂದ ಭಾಗವಹಿಸಿದರು. ಉಪನ್ಯಾಸಗಳನ್ನು ವೀರಶೈವ ಮಠಾಧೀಶರು ಮಾತ್ರವಲ್ಲದೇ ಬ್ರಾಹ್ಮಣ-ಜೈನ ಮಠಾಧೀಶ್ವರರೂ, ಮುಸಲ್ಮಾನ ಧರ್ಮಗುರುಗಳೂ, ಕ್ರಿಶ್ಚನ್ ಪಾದ್ರಿಗಳೂ, ಎಲ್ಲ ಜಾತಿ-ಮತಗಳ ಪಂಡಿತರೂ ನೀಡಿದರು. ಅಂದಿನ ಸೋವಿ ದಿನಮಾನದಲ್ಲಿ ಅಸಂಖ್ಯ ಭಕ್ತರು ಈ ಮಹಾಸಮ್ಮೇಲನಕ್ಕಾಗಿ ಹತ್ತುಲಕ್ಷ ಹಣ ಖರ್ಚು ಮಾಡಿರಬಹುದು. ಕಾಶಿ ಪಂಡಿತರೂ ಪಾಲುಗೊಂಡಿದ್ದರು. ಈ ಮಹಾಸಮಾರಂಭದ ವಿಸ್ತೃತ ವರದಿ ಮಾಡಲು ಒಂದು ಮಹಾನ್ ಗ್ರಂಥವೇ ಬೇಕಾದೀತು. ಈ ಸಮ್ಮೇಲನದಲ್ಲಿ ಭಾರತದ ಎಲ್ಲ ಭಾಗಗಳಿಂದ ಅಂದಾಜು ೨೦೦ ಜನ ಸ್ವಾಮಿಗಳು, ೩೦೦ ಜನ ಪಂಡಿತರು (ಸಾಹಿತಿಗಳು: ಪತ್ರಕರ್ತರು: ಸಂಶೋಧಕರು ಇತ್ಯಾದಿ), ೧೦೦ ಜನ ಮಹಿಳಾ ಉಪನ್ಯಾಸಕಿಯರು, ೧೦೦ ಜನ ಕಲಾವಿದರು (ಸಂಗೀತ ಇತ್ಯಾದಿ) ಭಾಗವಹಿಸಿದ್ದರು. ಪತ್ರಿಕಾವರದಿಯ ಮೇರೆಗೆ ಪಂಡಿತರಿಂದ ಪಾಮರರ ವರೆಗೆ ಸುಮಾರು ಎರಡು ಲಕ್ಷ ಜನರು ಈ ಕಾರ್ಯಕ್ರಮದ ಲಾಭ ಪಡೆದರ ಒಟ್ಟು ೧೨ ಗ್ರಂಥಗಳು (ಉದಾ- 'ಚಿತ್ರಭೆ', 'ಚಿತ್ತರಗಿ ಚಿಜ್ಯೋತಿ', 'ವಿಶ್ವಾತ್ಮನಿಗೆ', 'ಹೊಂಗಿರಣ', 'ಸಂಗಮನಾಥನ ವಚನಗಳು', 'ಚೈತ್ಯಪಕ್ಷಿ', 'ಹಾನಗಲ್ಲ ಕುಮಾರ ಶಿವಯೋಗಿಗಳ ಜೀವನ ಚರಿತ್ರೆ'-ಇಂಗ್ಲಿಷಿನಲ್ಲಿ, 'ತೋಂಟದ ಸಿದ್ಧಲಿಂಗೇಶ್ವರ ವಚನಗಳು'-ಇಂಗ್ಲಿಷಿನಲ್ಲಿ, 'ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು', 'ನೀತಿಸಂಗ್ರಹ', 'ಪರಂಜ್ಯೋತಿ ವಿಶೇಷಾಂಕ',) ಬಿಡುಗಡೆಯಾದವು.

ವಿವಿಧ ಸಮ್ಮೇಲನಗಳಲ್ಲಿ ಭಾಗವಹಿಸಿದ ಪ್ರಖ್ಯಾತರಲ್ಲಿ ಮುಖ್ಯವಾಗಿ–ಪದ್ಮಶ್ರೀ ಡಾ|| ವಿನಾಯಕ ಕೃ. ಗೋಕಾಕ, ಡಾ|| ಸಿದ್ಧಯ್ಯನವರು ಪುರಾಣಿಕ, ಶ್ರೀ ಆರ್. ಆರ್. ದಿವಾಕರ, ರಾಜ್ಯಪಾಲ ಮೋಹನಲಾಲ ಸುಖಾಡಿಯಾ, ಡಾ|| ಆರ್. ಸಿ. ಹಿರೇಮಠ, ಡಾ|| ಡಿ. ಎಸ್. ಕರ್ಕಿ, ಡಾ|| ಶಿ.ಚಿ. ನಂದೀಮಠ, ಡಾ|| ಆರ್‌ಮೆಂಡೊ ಮೆನೆರ್ಸಿಝಸ್, ಡಾ|| ಎ ಎಸ್. ಅಡಕೆ (ಕುಲಪತಿಗಳು), ಡಾ|| ಡಿ. ಜವರೇಗೌಡರು (ಕುಲಪತಿಗಳು ಮೈ. ವಿ.), ತಿ. ತಾ. ಶರ್ಮಾ, ಟಿ. ಎಸ್. ರಾಮಚಂದ್ರರಾವ (ಪ್ರಜಾವಾಣಿ ಸಂ.), ಪ್ರೊ. ನಾಡಿಗ ಕೃಷ್ಣಮೂರ್ತಿ, ಶ್ರೀ ಎಚ್. ಆರ್. ಪುರೋಹಿತ, ಶ್ರೀ ರಾಮಕೃಷ್ಣಮೂರ್ತಿ (ಕನ್ನಡಪ್ರಭ ಸಂ.), ಜಿ. ಆರ್. ಪಾಂಡೇಶ್ವರ, ಬನ್ನಂಜೆ ರಾಮಾಚಾರ (ಉದಯವಾಣಿ), ಪಾಟೀಲ ಪುಟ್ಟಪ್ಪ, ಶ್ರೀಮತಿ ಜಯದೇವಿತಾಯಿ ಲಿಗಾಡೆ, ಶ್ರೀಮತಿ ಶಾಂತಾದೇವಿ ಮಾಳವಾಡ, ಡಾ|| ಸರೋಜಿನಿ ಶಿಂತ್ರೆ, ಚನ್ನವೀರ ಕಣವಿ, ಶಾಂತರಸ, ಬಿ. ಎಚ್. ಶ್ರೀಧರ, ಪೂಜ್ಯ ಡಾ|| ಜ.ಚ.ನಿ. ಎಸ್. ಡಿ. ಇಂಚಲ, ಈಶ್ವರ ಸಣಕಲ್, ಗಂಗಪ್ಪ ವಾಲಿ, ಪಂ. ಸುಬ್ರಹ್ಮಣ್ಯ ಶಾಸ್ತ್ರಿ (ಹಿಂದೂ ವಿಶ್ವವಿದ್ಯಾಲಯ: ಬನಾರಸ), ಪಂ. ಎಂ.ಜಿ. ನಂಜುಂಡಾರಾಧ್ಯ, ಡಾ|| ಜಿ. ಮರುಳಸಿದ್ಧಯ್ಯ, ಪಂ. ಪಂಡರಿನಾಥಾಚಾರ್ಯ ಗಲಗಲಿ, ಡಾ|| ಕೆ. ಕೃಷ್ಣಮೂರ್ತಿ, ಎಸ್. ಎಸ್. ಮಾಳವಾಡ, ಪದ್ಮಶ್ರೀ ಮಲ್ಲಿಕಾರ್ಜುನ ಮನ್ಸೂರ, ಪಂ. ಪುಟ್ಟರಾಜ ಗವಾಯಿಗಳು, ಪಂ. ಬಸವರಾಜ ರಾಜಗುರು, ಪದ್ಮಭೂಷಣ ಗಂಗೂಬಾಯಿ ಹಾನಗಲ್ಲ, ಬಾಳಪ್ಪ ಹುಕ್ಕೇರಿ, ಅನುರಾಧಾ ಧಾರೇಶ್ವರ, ಡಾ|| ಟಿ. ಎಂ. ಪಿ. ಮಹಾದೇವನ್, ಪೂಜ್ಯಶ್ರೀ ಚಾರುಕೀರ್ತಿ ಪಂಡಿತಾರಾಧ್ಯ ಸ್ವಾಮಿಗಳು, ಡಾ|| ಎಚ್. ತಿಪ್ಪೇರುದ್ರ ಸ್ವಾಮಿಗಳು, ಪೂಜ್ಯ ಕುಮಾರಸ್ವಾಮಿಗಳು ಧಾರವಾಡ, ಪೂಜ್ಯ ಶರಣಬಸವಪ್ಪಾ ಅಪ್ಪಾ, ಪೂಜ್ಯ ಸ್ವಾಮಿ ಲಿಂಗಾನಂದರು, ಡಾ|| ಎಂ. ಸಿ. ಮೋದಿ, ಪದ್ಮಶ್ರೀ ಡಾ|| ಬಿ. ಶಿವಮೂರ್ತಿ ಶಾಸ್ತ್ರಿಗಳು, ಡಾ|| ಎಂ. ಎಸ್. ಸುಂಕಾಪೂರ, ಪಂ. ನಾಗಭೂಷಣ ಶಾಸ್ತ್ರಿಗಳು, ಆರ್. ವಾಯ್. ಧಾರವಾಡಕರ, ಡಾ|| ಹಿರೇಮಲ್ಲೂರ ಈಶ್ವರನ್— ಈ ಪ್ರಮುಖರ ಹೆಸರುಗಳನ್ನು ಪರಿಗಣಿಸಿದರೆ ಈ ಸಮ್ಮೇಲನಗಳ ಗುರುತ್ವ, ಮಹತ್ವ ವೇದ್ಯವಾಗುತ್ತದೆ.

ಇದರಲ್ಲಿ ಒಟ್ಟು ೧೨ ಸಮ್ಮೇಲನಗಳು ನಡೆದವು: ಅವುಗಳ ಪಕ್ಷಿನೋಟ ಕೆಳಗಿನಂತಿದೆ—

**ಪಕ್ಷಿನೋಟ**

೧. ದಿ. ೨: ಮುಂಜಾನೆ: ಲಿಂ. ಕುಮಾರ ಶಿವಯೋಗಿಗಳು: ಬಿದರಿ
ಲಿಂ. ಮುರುಘೇಂದ್ರ ಶಿವಯೋಗಿಗಳು: ಅಥಣಿ
ಲಿಂ. ಶಿವಬಸವ ಶಿವಯೋಗಿಗಳು: ಹಾವೇರಿ

| | | | | |
|---|---|---|---|---|
| | | | | ಈ ಮಹಾಮಹಿಮರ ಬಗೆಗೆ "ಸಂಸ್ಮರಣ ವಿಚಾರ ಸಂಕಿರಣ" |
| | ದಿ. | ೨: | ಸಂಜೆ: | "ಶ್ರೀ ವಿಜಯಮಹಾಂತ ಶಿವಯೋಗಿಗಳ ೬೦ ನೆಯ ಸ್ಮಾರಕೋತ್ಸವ," "ಚಿತ್ತರಗಿ ಚಿಜ್ಜ್ಯೋತಿ" ಗ್ರಂಥದ ಬಿಡುಗಡೆ: ಬಸವ ಪುರಾಣ ಮಂಗಲ |
| ೨. | ದಿ. | ೩: | ಮುಂಜಾನೆ: | "ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಪಂಚ ಶತಮಾನೋತ್ಸವ" |
| | ದಿ. | ೩: | ಸಂಜೆ: | "ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ಶತಮಾನೋತ್ಸವ" |
| ೩. | ದಿ. | ೪: | ಮುಂಜಾನೆ: | "ಅಖಿಲ ಭಾರತ ಶಿವಾನುಭವ ಸಮ್ಮೇಲನ" |
| | ದಿ. | ೪: | ಸಂಜೆ: | "ಅಖಿಲ ಭಾರತ ಅಕ್ಕನ ಬಳಗಗಳ ಸಮ್ಮೇಲನ" |
| ೪. | ದಿ. | ೫: | ಮುಂಜಾನೆ: | "ಸಂಸ್ಕೃತ ವಿದ್ವತ್ ಪರಿಷತ್ತು" ಮತ್ತು "ಒಳಗಿನ ಮಹಾದ್ವಾರ"ದ ಉದ್ಘಾಟನೆ |
| | ದಿ. | ೫: | ಸಂಜೆ: | "ನಿಜಗುಣ ಶಿವಯೋಗಿಗಳ ಸ್ಮಾರಕೋತ್ಸವ" |
| ೫. | ದಿ. | ೬: | ಮುಂಜಾನೆ: | "ಪತ್ರಿಕಾಕರ್ತರ ಸಮ್ಮೇಲನ" |
| | ದಿ. | ೬: | ಸಂಜೆ: | ಸ್ಮರಣ ಸಂಚಿಕೆ "ಚಿತ್ಪ್ರಭೆ" ಬಿಡುಗಡೆ ಹಾಗೂ "ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥ ಮಾಲೆಯ ಸುವರ್ಣ ಮಹೋತ್ಸವ", "ಕವಿ ಸಮ್ಮೇಲನ" |
| ೬. | ದಿ. | ೭: | ಮುಂಜಾನೆ: | "Symposium on Basaveswar" (ಇಂಗ್ಲಿಷಿನಲ್ಲಿ) |
| | ದಿ. | ೭: | ಸಂಜೆ: | "ಸಂಗೀತ ಸಮ್ಮೇಲನ" |
| ೭. | ದಿ. | ೮: | ಮುಂಜಾನೆ: | ಸಾಂಸ್ಕೃತಿಕ ಕಾರ್ಯಕ್ರಮಗಳು |
| | ದಿ. | ೮: | ಸಂಜೆ: | "ಸರ್ವಧರ್ಮಗಳ ಶಾಂತಿ ಸಮ್ಮೇಲನ" ಪ್ರಾರಂಭ |
| | ದಿ. | ೯: | ಮುಂಜಾನೆ: | "ಸರ್ವಧರ್ಮಗಳ ಶಾಂತಿ ಸಮ್ಮೇಲನ" |
| | ದಿ. | ೯: | ಸಂಜೆ: | "ಸರ್ವಧರ್ಮಗಳ ಶಾಂತಿ ಸಮ್ಮೇಲನ" ಮುಕ್ತಾಯ |
| | ದಿ. | ೧೦: | ಮುಂಜಾನೆ: | ನೂರೊಂದು (೧೦೧) ಮಂಟಪ ಪೂಜಾ ಮಹೋತ್ಸವ |

ದಿ. ೧೦: ಸಂಜೆ: ಪೂಜ್ಯ ಜಗದ್ಗುರು ಮಹಾಸನ್ನಿಧಿಯವರ ದ್ವಾದಶ ವರ್ಷದ ಮಹಾಸಿಂಹಾಸನಾರೋಹಣ

## ದ್ವಾದಶ ವಾರ್ಷಿಕೋತ್ಸವದ ಫಲಶ್ರುತಿ

ದಿ. ೬-೪-೧೯೭೭ರ "ಕವಿ ಸಮ್ಮೇಲನ"ದ ವೇದಿಕೆಯ ಮೇಲೆ ಡಾ॥ ಡಿ. ಜವರೇಗೌಡ, ಡಾ॥ ಸಿದ್ಧಯ್ಯ ಪುರಾಣಿಕ, ಡಾ॥ ವಿನಾಯಕ ಕೃ. ಗೋಕಾಕ, ಡಾ॥ ಡಿ. ಎಸ್. ಕರ್ಕಿ, ಪೂಜ್ಯ ಡಾ॥ ಜ. ಚ. ನಿ., ಚನ್ನವೀರ ಕಣವಿ, ಬಿ. ಎಚ್. ಶ್ರೀಧರ, ಶಾಂತರಸ, ಗಂಗಪ್ಪ ವಾಲಿ, ಭುಜೇಂದ್ರ ಮಹಿಷವಾಡಿ, ಎಸ್. ಡಿ. ಇಂಚಲ, ಎಂ. ಅಕಬರಅಲಿ, ಸಂಗಮೇಶ ಹೊಸಮನಿ, ಬಿ. ಬಿ. ಹಿಂಗಮಿರೆ, ಪಂಚಾಕ್ಷರಿ ಹಿರೇಮಠ, ಸಿಂಪಿ ಲಿಂಗಣ್ಣ, ಈಶ್ವರ ಸಣಕಲ್, ದೇವೇಂದ್ರಕುಮಾರ ಹಕಾರಿ, ಎನ್. ಕೆ. ಕುಲಕರ್ಣಿ, ಜಿ. ಎಚ್. ಹನ್ನೆರಡುಮಠ ಮುಂತಾದ ಕವಿಗಳು ಆಸೀನರಾಗಿದ್ದರು. ಜಿ. ಎಚ್. ಹನ್ನೆರಡುಮಠ ಸಂಪಾದಿತ "ಚಿತ್ರಾಭೆ", ಹನ್ನೆರಡು ಮಠರ "ಚೈತ್ರಪಕ್ಷಿ" ಮತ್ತು ಸಂಗಮೇಶ ಹೊಸಮನಿಯವರ "ಸಂಗಮನಾಥನ ವಚನಗಳು" ಬಿಡುಗಡೆಯಾದವು.

ಈ ಕವಿ ಸಮ್ಮೇಲನದಲ್ಲಿ ಪೂಜ್ಯ ಜಗದ್ಗುರುಗಳ ಆಶೀರ್ವಚನವನ್ನು ಮರೆಯುವಂತಿಲ್ಲ—

"....ಕವಿ ಒಂದು ಕಾಲಕ್ಕೆ, ಒಂದು ವಿಚಾರಕ್ಕೆ, ಒಂದು ಚೌಕಟ್ಟಿಗೆ ಸ್ಕ್ರೂ ಮಳೆಯಿಂದ ತಿರುಗಿ ಕೂಡ್ರಿಸಿದ ಚಿನ್ನದ ಚೌಕಟ್ಟಿನ ಪ್ರತಿಮೆಯಲ್ಲವೆಂಬುದು ಸ್ಪಷ್ಟ. ನಿರಂತರ ಬದಲಾವಣೆಯೇ ಕವಿಯ ಸಾರಾಯ ಸಂಪತ್ತು. ಇಂತಹ ಕವಿಗಳು ಸಾಹಿತ್ಯೇತಿಹಾಸದಲ್ಲಿ ಗಮನಾರ್ಹವಾದ ಬದಲಾವಣೆಗಳಿಗೆ ಕಾರಣರಾಗಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಪಂಪ, ಹರಿಹರ, ಕುಮಾರವ್ಯಾಸರು ಒಬ್ಬರಂತೆ ಒಬ್ಬರಾಗಿಲ್ಲ, ಅಂತೆಯೇ ಯುಗಪ್ರವರ್ತಕರಾಗಿದ್ದಾರೆ. ಕವಿಯು ಸ್ವತಂತ್ರನೂ, ಮಾನವ ಲೋಕದ ಆದರ್ಶ ಸೇವಕನೂ, ಸಂಸಾರದ ಸುಖ-ದುಃಖಗಳಿಗೆ ಆನಂದದ ಸೇತುವೆಯೂ ಆಗಿದ್ದಾನೆಂದು ನಮ್ಮ ಅಭಿಪ್ರಾಯ. ನಮ್ಮ ಈ ಅನಿಸಿಕೆಗೆ ಇಂದಿನ ಕವಿ ಸಮ್ಮೇಲನ ಪ್ರತ್ಯಕ್ಷ ನಿದರ್ಶನ....ಇಂತಹ ಕಾವ್ಯಗೋಷ್ಠಿಯೆಂದರೆ ಹೃದಯದ ದೇಗುಲಕ್ಕೆ ಪಂಚಾಮೃತದ ಅಭಿಷೇಕವೆರೆದಂತೆ."

'ನಿರಂತರ ಬದಲಾವಣೆಯೇ ಕವಿಯ ಸಾರಾಯ ಸಂಪತ್ತು' ಎಂದು ಸಾರಿದ ಜಗದ್ಗುರುಗಳ ಈ ಸಂದೇಶದಲ್ಲಿ ಆಧುನಿಕ ಪ್ರಾಜ್ಞವಿಶ್ವಕ್ಕೆ ನೀಡಿದ ಸತ್ಯದ ಎಚ್ಚರಿಕೆಯಾಗಿದೆ. ಸಾಹಿತ್ಯವಾಗಲಿ, ಧರ್ಮವಾಗಲಿ, ಸಮಾಜವಾಗಲಿ ನಿಂತ ನೀರಾಗದೇ; ನಿರಂತರ ಕ್ರಿಯಾಶೀಲವಾಗಿ ಚಲಿಸಬೇಕೆಂಬ ಸಂದೇಶ ಫಲಶ್ರುತಿಸಿದೆ.

ದಿ. ೬-೪-೭೨ ಗುರುವಾರ ನಡೆದ ಪತ್ರಿಕಾ ಸಮ್ಮೇಲನದಲ್ಲಿ ಖ್ಯಾತ ಪತ್ರಿಕಾಕರ್ತ ಶ್ರೀ ತಿ. ತಾ. ಶರ್ಮರು ಸ್ಪಷ್ಟವಾದ ಮಾತುಗಳಲ್ಲಿ ಸಾರಿದರು- "ಪವಿತ್ರ ಸೇವಾ ಸಾಧನವಾಗಿರಬೇಕಾದ ಪತ್ರಿಕಾ ಪ್ರವೃತ್ತಿಯು ಬಂಡವಾಳದಾರರ ಹಾಗೂ ಪ್ರಜಾತಂತ್ರದಲ್ಲಿ ಅಧಿಕಾರಲಾಲಸೆಯ ಉದ್ದೇಶ ಹೊಂದಿ ಬೆಳೆಯುತ್ತಿರುವ ಸ್ವಾರ್ಥಿ ರಾಜಕಾರಣಿಗಳ ಅನೀತಿ ಬಾಂಧವ್ಯದಲ್ಲಿ ಸಿಲುಕಿ ಅವರಿಗೆ ಸೂರೆಯ ಸಾಧನವಾಗಿ ಪರಿಣಮಿಸಿದೆ. ಇವರ ಕಶ್ಮಲ ಹಸ್ತಗಳಲ್ಲಿ ಪಾವಿತ್ರ್ಯ ಕಳೆದು ಕೊಳ್ಳುತ್ತಿದೆ"25 ಎಂದರು.

"ಪ್ರಜಾತಂತ್ರದ ಯಶಸ್ಸು ಬಹಳಮಟ್ಟಿಗೆ ಸ್ವತಂತ್ರ ವಿಚಾರ ಧೋರಣೆಯ ಪತ್ರಿಕೆಗಳನ್ನು ಅವಲಂಬಿಸಿದೆ. ಸಮಸ್ತ ಪ್ರಜೆಗಳ ಸುಖ-ಶಾಂತಿ-ಸಮಾಧಾನ ಹಾಗೂ ಸ್ವಾತಂತ್ರ್ಯಗಳ ರಕ್ಷಾಕವಚಗಳಾಗಿ ಪತ್ರಿಕೆಗಳಿರಬೇಕೆಂಬುದನ್ನು"26 ತಿ.ತಾ. ಶರ್ಮಾ ಪ್ರತಿಪಾದಿಸಿದರು.

ಪೂಜ್ಯ ಜಗದ್ಗುರುಗಳು ಆಶೀರ್ವಚನ ನೀಡುತ್ತಾ ಹೇಳಿದ ಮಾತು ಗಮನಾರ್ಹವಾಗಿದೆ-

"ಪತ್ರಿಕೋದ್ಯಮಿಗಳಿಗೂ, ಧರ್ಮಕ್ಕೂ ಏನು ಸಂಬಂಧ? ಪಾಶ್ಚಿಮಾತ್ಯ ಸಂಸ್ಕೃತಿಯ ದೃಷ್ಟಿಯಿಂದ ಅವಗಾಹಿಸಿದರೆ ಪತ್ರಿಕೋದ್ಯಮವು ಒಂದು ಆರ್ಥಿಕ ವ್ಯವಸಾಯ ಮಾತ್ರ. ಆದರೆ ಭಾರತೀಯರ ಮೌಲ್ಯಮಾಪನಗಳೇ ಭಿನ್ನವಾಗಿರು ತ್ತವೆ. ಅದಕ್ಕೆ ಅವರ ಜೀವನದ ಮೂಲಭೂತ ಧ್ಯೇಯ-ಧೋರಣೆಗಳೇ ಕಾರಣ. ಧರ್ಮವು ಇಲ್ಲಿ ಜೀವನದಿಂದ ಸಿಡಿದು ನಿಲ್ಲಲಾರದು; ಸಿಡಿದಿಲ್ಲ....ಇವುಗಳ ಪರಮ ಗುರಿ ಮಾತ್ರ ಮಾನವ ಪ್ರೇಮ, ಭ್ರಾತೃತ್ವತೆ, ಶಾಂತಿ ಸೌಖ್ಯಗಳಾಗಿರಬೇಕು."

ಭಾರತೀಯ ಸಾಂಸ್ಕೃತಿಕ ಮನಸ್ಸಿಗೆ ಹಿಡಿದ ಮಾನವಧರ್ಮದ ಕೈಗನ್ನಡಿ ಯಂತಿದೆ ಈ ಮಾತಿನ ಫಲಶ್ರುತಿ.

ಮಾನವ ಕುಲದ ಭವಿಷ್ಯತ್ತನ್ನು ಉಜ್ವಲಗೊಳಿಸಬೇಕೆಂದು "ಸರ್ವಧರ್ಮ ಗಳ ಶಾಂತಿ ಸಮ್ಮೇಲನ" ಅಂತಿಮವಾಗಿ ವಿಶ್ವಕ್ಕೆ ಸಾರಿ ಹೇಳಿತು. "ವಿಶ್ವದಾದ್ಯಂತ ಶಾಂತಿ ಹಾಗೂ ಸದಿಚ್ಛೆಯ ವಾತಾವರಣವನ್ನು ನಿರ್ಮಿಸಿ, ಮಾನವ ಕುಲದ ಭವಿಷ್ಯತ್ತನ್ನು ಉಜ್ವಲಗೊಳಿಸುವದಕ್ಕಾಗಿ ಪ್ರತಿಯೊಬ್ಬರೂ ಅವಿರತ ಪರಿಶ್ರಮಿಸ ಬೇಕೆಂದು ಜಗತ್ತಿನ ಇತಿಹಾಸದಲ್ಲೇ ಮೊಟ್ಟಮೊದಲನೇಬಾರಿ ಮಹತ್ವದ ಜಗದ್ಗುರು ಧರ್ಮಪೀಠವೊಂದು ನಗರದ ಶ್ರೀ ಜಗದ್ಗುರು ಮೂರುಸಾವಿರಮಠ

---

25 ಸಂಯುಕ್ತ ಕರ್ನಾಟಕ ವರದಿ; ದಿ. 7-4-1972

26 ಅದೇ

ದಲ್ಲಿ ಸಂಘಟಿಸಿದ ಸರ್ವಧರ್ಮಗಳ ಶಾಂತಿ ಸಮ್ಮೇಳನವು ತನ್ನ ಎರಡು ದಿನಗಳ ಕಾರ್ಯಕಲಾಪಗಳ ಅಂತ್ಯದಲ್ಲಿ ಒಕ್ಕೊರಲಿನಿಂದ ಕಳಕಳಿಯ ಕರೆ ನೀಡಿತು.27"

"ಶ್ರೀ ಮೂರುಸಾವಿರಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವದ ಅಂಗವಾಗಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಭಾ ಮಂಟಪದಲ್ಲಿ ನಡೆದ ಈ ಐತಿಹಾಸಿಕ ಸಮ್ಮೇಳನವು ಎಲ್ಲ ಧರ್ಮಗಳ ಮೂಲ ಗುರಿಯು ಮಾನವ ಕುಲದ ಕಲ್ಯಾಣವೇ ಆಗಿದೆಂದು ಘೋಷಿಸಿತು. ಜಗತ್ತನ್ನು ಇಡೀ ಮಾನವ ಕುಲವನ್ನು ಅಣ್ವಸ್ತ್ರ ಮೊದಲಾದ ಮಾರಕಾಸ್ತ್ರಗಳಿಂದಾಗಿ, ಬಡತನ ಮೊದಲಾದ ಸಮಸ್ಯೆಗಳಿಂದಾಗಿ ಉದ್ಭೂತವಾಗಿರುವ ಗಂಡಾಂತರದಿಂದ ಮುಕ್ತಗೊಳಿಸಲು ತೀವ್ರ ಕಾತರತೆಯನ್ನು ತೋರಿಸಿತು. ಎಲ್ಲ ಬಗೆಯ ಘರ್ಷಣೆಗಳಿಗೂ ಮೂಲ ಕಾರಣವೆನ್ನಿಸಿದ ಪೂರ್ವಗ್ರಹ ದೂಷಿತಭಾವನೆ, ಸ್ವಾರ್ಥ ಹಾಗೂ ಅಜ್ಞಾನದ ನಿವಾರಣೆಗೆ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ನ್ಯಾಯ ಲಭಿಸಲು ಅಗತ್ಯವಾದ ಜಾಗೃತಿ ವಾತಾವರಣ ನಿರ್ಮಿಸುವಂಥ ಶಿಕ್ಷಣ ಪ್ರಸಾರ ಮಾಡಲು ಸಹ ಈ ಸಮ್ಮೇಲನವು ಪ್ರಾರ್ಥಿಸಿಕೊಂಡಿತು. ಎಲ್ಲ ವ್ಯಾಖ್ಯಾತರು, ತಜ್ಞರು ಹಾಗೂ ಧರ್ಮಗುರುಗಳು ಒಮ್ಮತ ವ್ಯಕ್ತಪಡಿಸಿದ ಈ ನಿವೇದನೆಯ ವಿವರ, ಮಹತ್ವ ಹಾಗೂ ಹಿನ್ನೆಲೆಯನ್ನು ಅಧ್ಯಕ್ಷ ಡಾ|| ರಂ. ರಾ. ದಿವಾಕರರು ಸಭೆಗೆ ನೀಡಿದರು. ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಶ್ರೀ ನಾರಾಯಣಸ್ವಾಮಿಯವರು ನಂತರ ಓದಿದ ಈ ನಿವೇದನೆಯನ್ನು ಕಿಕ್ಕಿರಿದು ಲಕ್ಷಕ್ಕಿಂತಲೂ ಮಿಕ್ಕಿದ ಜನಸಾಗರವು ಹರ್ಷದಿಂದ ಸ್ವಾಗತಿಸಿ ಸಮ್ಮತಿ ವ್ಯಕ್ತಪಡಿಸಿತು."28

ಪೂಜ್ಯ ಜಗದ್ಗುರುಗಳು ಈ ಶಾಂತಿ ಪರಿಷತ್ತನ್ನು ಉದ್ದೇಶಿಸಿ ಆಶೀರ್ವಚನ ನೀಡಿದರು–"ನಾವೇ ಮೇಲು, ನಮ್ಮ ತತ್ವಪ್ರಣಾಲಿಕೆಯೇ ಶ್ರೇಷ್ಠತಮ, ಇತರರು ಕನಿಷ್ಠರು ಎಂಬ ಭಾವನೆ ಹಾಗೂ ಮೇಲಾಟ ಸಲ್ಲದು....ಎಲ್ಲೆಡೆಯಲ್ಲೂ ಭಾವೈಕ್ಯತೆ ಮೂಡಿ ಜಾತೀಯತೆಯು ಜೀವನದಿಂದ ಪೂರ್ತಿ ನಶಿಸಲಿ"29 ಎಂದು ಸಾರಿದರು. ಪೂಜ್ಯ ಜಗದ್ಗುರು ಸಾರಿದ ಈ ಮಹಾನ್ ಸಂದೇಶದಂತೆ ಜಗತ್ತಿನ ಎಲ್ಲ ದೇಶಗಳ, ಎಲ್ಲ ಜಾತಿಗಳ, ಎಲ್ಲ ಧರ್ಮಗಳ ಮುಖಂಡರು ನಡೆದುಕೊಂಡರೆ "ಸಕಲ ಜೀವಾತ್ಮರಿಗೆ ಲೇಸನೆ ಬಯಸುವ" ಶರಣರ ಮಹಾಸಂದೇಶ ವಿಶ್ವದ ವರದಾನ ವಾಗುವದಿಲ್ಲವೇ? ಶರಣರು ಸಾರಿದ ಸತ್ಯ ವಿಶ್ವದ, ಸತ್ಯ ಜೀವನದ, ಸತ್ಯಯುಗದ ಅಮರ ಸಂಗೀತ ಫಲಶ್ರುತಿಗೊಳ್ಳುವದಿಲ್ಲವೇ!

---

27 ಸಂಯುಕ್ತ ಕರ್ನಾಟಕ ವರದಿ; ದಿ. 10–4–72

28 ಅದೇ

29 ಅದೇ

## ಸಂಪಾದನೆಯ ಗ್ರಂಥಗಳ ಇತಿಹಾಸದಲ್ಲಿ ಮೈಲುಗಲ್ಲು ಎನಿಸಿದ: "ಚಿತ್ರಪ್ರಭೆ"

೭೫೦ ಪುಟಗಳ ವ್ಯಾಪ್ತಿಯುಳ್ಳ "ಚಿತ್ರಪ್ರಭೆ" ವೈಜ್ಞಾನಿಕವಾಗಿ ಸಂಪಾದಿತವಾಗಿದ್ದು; ೧೯೭೨ರ ಕಾಲದಲ್ಲಿ ಒಂದು ವಿಶಿಷ್ಟ ಕೊಡುಗೆಯಾಯ್ತು. ಆ ತರುವಾಯ ಬಂದ ಬಹುತೇಕ ಎಲ್ಲ ವೀರಶೈವ ಮಠಗಳ ಸಂಭಾವನೆ ಗ್ರಂಥಗಳು ಇದರಿಂದ ಒಂದಿಲ್ಲೊಂದು ರೀತಿಯಿಂದ ಪ್ರೇರಣೆಪಡೆದು ಮೈದಾಳಿದವೆಂದು ಹೇಳಬಹುದು. ಪೂಜ್ಯ ಜಗದ್ಗುರುಗಳ ದ್ವಾದಶ ಪೀಠಾರೋಹಣದ ಸಂಸ್ಮರಣೆಯಲ್ಲಿ ಸಮಸ್ತ ಕನ್ನಡಿಗರು ಸಮರ್ಪಿಸಿದ ಸುಂದರ ಸಂಭಾವನೆ ಗ್ರಂಥವಿದು.

"ಕನ್ನಡಪ್ರಭ" ಪತ್ರಿಕೆ ದಿ. ೨೪-೭-೧೯೭೨ ರಂದು ಈ ಗ್ರಂಥದ ಬಗ್ಗೆ ಬರೆದ "ಪುಸ್ತಕ ವಿಮರ್ಶೆ"ಯನ್ನು ಇಲ್ಲಿ ನೋಡುವದು ಅವಶ್ಯ—

"ಚಿತ್ರಪ್ರಭೆ ಎಂಬ ಹೆಸರು ಈ ಗ್ರಂಥಕ್ಕೆ ಅನ್ವರ್ಥವಾಗಿದೆ. ಸುಮಾರು ನೂರುಮಂದಿ ಗಣ್ಯ ಸಾಹಿತಿಗಳು, ಯತಿವರ್ಯರು ತಮ್ಮ ವೈದುಷ್ಯಪೂರ್ಣವಾದ ಕವನಗಳು, ಲೇಖನಗಳು, ವಿಚಾರ ದೀಪ್ತಿಗಳಿಂದ ಗ್ರಂಥವನ್ನು ಪೆಗ್ಗಳಿಸಿದ್ದಾರೆ. ಇನ್ನೂ ಮೆಚ್ಚಿಗೆಯ ಒಂದು ವಿಷಯವೆಂದರೆ ವೀರಶೈವವೇ ಅಲ್ಲದೆ ಇತರ ಧರ್ಮಗಳ ವಿಚಾರವೂ ಪರೀಕ್ಷಿಸಲ್ಪಟ್ಟಿದೆ. ವಿಶ್ವಭಾವನೆ, ಸರ್ವಸಮನ್ವಯಗಳೇ ಪ್ರಧಾನವಾಗಿಟ್ಟುಕೊಂಡು ಎಲ್ಲಾ ಧರ್ಮಗಳನ್ನೂ ಏಕೀಕರಣವಾಗಿಸಿ ಮಾನವ ಕೋಟಿಯ ಕಲ್ಯಾಣವನ್ನು ಅಂತಿಮ ಗುರಿಯಾಗಿ ಲಕ್ಷ್ಯದಲ್ಲಿಟ್ಟು ಶ್ರಮಿಸುತ್ತಿರುವ ಒಂದು ಸಂಸ್ಥೆಯ ಕಾರ್ಯಕ್ಷೇತ್ರದ ದರ್ಪಣ... ಶ್ರೀಗಳವರ ಕಾಯಕದ ವಿಶ್ವರೂಪ ದರ್ಶನ ಮಾಡಿಕೊಡುತ್ತದೆ. ಶ್ರೀಗಳವರ ಪೂರ್ಣಾನುಗ್ರಹಕ್ಕೆ ಪಾತ್ರರಾದವರಲ್ಲಿ ಇತರ ಧರ್ಮ ಪಂಥೀಯರ ಸಂಖ್ಯೆ ಅಧಿಕವಾಗಿಯೇ ಇದ್ದು, ಅವರುಗಳ ಕೊಡುಗೆಗಳನ್ನೂ ಸಂಗ್ರಹಿಸಿರುತ್ತೆಂದಮೇಲೆ ಈ ಸಂಸ್ಥೆ ಜಾತ್ಯಾತೀತ ರಾಷ್ಟ್ರ ಸಂಸ್ಥೆ ಎನ್ನಲು ಅಡ್ಡಿಯಿಲ್ಲ. ಮೂರುಸಾವಿರಮಠ ಸಂಖ್ಯೆಯಿಂದ ಅಷ್ಟಕ್ಕೆ ಸೀಮಿತವಾಗಬೇಕಾದ್ದಿಲ್ಲ. ಅದರ ಅರ್ಥ ಗಣನಾತೀತ; ಊಹಾವಲಯದಾಚೆ. ಚಿತ್ರಪ್ರಭೆಯನ್ನು ಐದು ಪ್ರಕರಣಗಳನ್ನಾಗಿ ವಿಭಾಗ ಮಾಡಿರುತ್ತೆ-ಜೀವನಪ್ರಭೆ, ಸಾಹಿತ್ಯಪ್ರಭೆ, ಕಾವ್ಯಪ್ರಭೆ, ಚಿಂತನಪ್ರಭೆ ಮತ್ತು ವಿಚಾರಪ್ರಭೆ. ಮೂರುಸಾವಿರಮಠದ ಪ್ರಾದುರ್ಭಾವ, ಮುನ್ನಡೆ, ವೈಭವಗಳನ್ನು ಕುರಿತು ವರ್ಣನೆ, ವೀರಶೈವ ದರ್ಶನ, ಷಟ್‌ಸ್ಥಲ ಸಿದ್ಧಾಂತ, ವಚನ ವಾಙ್ಮಯದ ಕೊಡುಗೆ, ಕಾವ್ಯಧಾರೆ ಇತರ ಧರ್ಮಗಳೊಂದಿಗೆ ತುಲನಾತ್ಮಕ ವಿಶ್ಲೇಷಣೆ, ಸಾಹಿತ್ಯ ಸೇವೆ ಇನ್ನೂ ಎಷ್ಟೋ ವಿಷಯಗಳನ್ನು ಜಗದ್ಗುರುಗಳ ನಿಕಟ ಸಾನ್ನಿಧ್ಯದಲ್ಲಿದ್ದುಕೊಂಡು ತಮಗುಂಟಾದ ಬೌದ್ಧಿಕ ಹಾಗೂ

ಆಧ್ಯಾತ್ಮಿಕ ಅನುಭವಗಳನ್ನು ಪಡೆದ ಅನೇಕ ಮಹನೀಯರು ತಮ್ಮ ತಮ್ಮ ಲೇಖನಗಳಲ್ಲಿ ವಿಶದಪಡಿಸಿದ್ದಾರೆ."

"ಪ್ರೊ. ಹನ್ನೆರಡುಮಠ ಏಕೈಕ ಸಂಪಾದಕರಾಗಿ ಈ ಮಠದ ವೈಭವ ಮತ್ತು ಶ್ರೀಗಳವರ ತೇಜಃಪುಂಜ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಏಳನೂರ ಐವತ್ತು ಪುಟಗಳಷ್ಟು ಇತಿಹಾಸೋಪನಿಷತ್ಸಮಾನವಾದ ಲೇಖನಗಳನ್ನು ತುಂಬಿಸಿ, ಬೃಹತ್ ನಿವೇದನ ಗ್ರಂಥದ ಹೊಣೆಗಾರಿಕೆಯನ್ನು ಪೂರ್ತಿಯಾಗಿ ವಹಿಸಿಕೊಂಡು ಉತ್ಕೃಷ್ಟವಾದ ರೀತಿಯಲ್ಲಿ ಸಂಪುಟವನ್ನು ಬೆಳಕಿಗೆ ತಂದಿದ್ದಾರೆ. ಈ ಮಹದುದ್ಯಮದಲ್ಲಿ ಅವರ ಸ್ಥಿರ ಸಂಕಲ್ಪ, ಶ್ರದ್ಧೆ, ಗುರುಭಕ್ತಿ ಇವುಗಳನ್ನು ಅಸದೃಶವೆನ್ನಬಹುದು.... ಅಪಾರವಾದ ವಿಷಯರಾಶಿ ಮಠಧರ್ಮ ಮತ್ತು ಸಮಾಜಧರ್ಮಗಳನ್ನು ಯಾವ ಪ್ರಮಾಣದಲ್ಲಿ ಔಚಿತ್ಯವರಿತು ವಿನಿಯೋಗಿಸಬೇಕು ಎಂಬ ತತ್ವವನ್ನು ಅರಿಯಲು ವಿಶೇಷ ಜ್ಞಾನಪ್ರದವಾಗಿದೆ. ಗ್ರಂಥದ ಮುದ್ರಣ ಅಂದವೂ ಶುದ್ಧವೂ ಆಗಿದೆ."30

"ಚಿತ್ಪ್ರಭೆ"ಯನ್ನು ಕುರಿತು "ಸಂಯುಕ್ತ ಕರ್ನಾಟಕ"ದಲ್ಲಿ ದಿ. ೧೭-೪-೧೯೭೨ ರಂದು ಪ್ರಕಟವಾದ ಇನ್ನೊಂದು ವಿಮರ್ಶೆಯನ್ನು ಅಧ್ಯಯನ ದೃಷ್ಟಿಯಿಂದ ಇಲ್ಲಿ ನೋಡುವದು ಅಷ್ಟೇ ಆವಶ್ಯಕವಾಗಿದೆ. ಈ ವಿಮರ್ಶೆಯ ಪ್ರತಿಯೊಂದು ಸಾಲೂ ಆಳವಾದ ಪರಿಜ್ಞಾನದಿಂದ ಬರೆದುದಾಗಿದೆ:

"ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಪೀಠಕ್ಕೆ ಬಂದು ಹನ್ನೆರಡು ವರ್ಷಗಳಾದ್ದರಿಂದ ತನ್ನಿಮಿತ್ತ ಹಮ್ಮಿಕೊಂಡ ಮಹಾಸಮಾರಂಭದ ಸವಿನೆನಹಿಗಾಗಿ ಮೂಡಿಬಂದ ಈ ಹೆಬ್ಬೊತ್ತಿಗೆ 'ಚಿತ್ಪ್ರಭೆ' ಖಂಡಿತವಾಗಿಯೂ ಸಕಲರ ಚಿತ್ತಕ್ಕೆ ಪ್ರಭೆಯನ್ನು ಬೀರುವಂಥದಾಗಿದೆ. ಚಿತ್ತ ಬೆಳಗಿದಾಗಲೇ ಅಜ್ಞಾನವೆಲ್ಲ ನಾಶವಾಗಿ ಕಲ್ಯಾಣ ಉಂಟಾಗಬಲ್ಲದು. ಆ ರೀತಿ ಮನಸ್ಸಿನ ಕತ್ತಲೆಯನ್ನು ಕಳೆಯುವ ಉತ್ತಮ ಲೇಖನಗಳಿಂದ ಈ ಸಂಪುಟ ಕೂಡಿದೆ."

"ಇದರಲ್ಲಿ ಸಂಪಾದಕರು ಜೀವನಪ್ರಭೆ, ಸಾಹಿತ್ಯಪ್ರಭೆ, ಕಾವ್ಯಪ್ರಭೆ, ಚಿಂತನಪ್ರಭೆ ಹಾಗೂ ವಿಚಾರಪ್ರಭೆ ಎಂದು ಐದು ಭಾಗಗಳನ್ನು ನೀಡಿದ್ದಾರೆ. ಜೀವನಪ್ರಭೆಯಲ್ಲಿ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಜೀವನ ದರ್ಶನ ಮಾಡಿಸುವ ಲೇಖನಗಳು, ನೆನಹುಗಳು, ಕವನಗಳು ಬಂದಿವೆ. ಈ ಗೌರವ ಕುಸುಮಗಳನ್ನು ಅರ್ಪಿಸುವ ಆರಾಧಕರ ಪಟ್ಟಿಯನ್ನು ನೋಡಿದರೆ ಶ್ರೀ ಜಗದ್ಗುರುಗಳು ಎಲ್ಲ ಜಾತಿ ಧರ್ಮದವರಿಗೂ ಅದೆಷ್ಟು ಪ್ರಿಯರಾಗಿದ್ದಾ

---

30 ಕನ್ನಡಪ್ರಭ: 24–7–1972: ಪುಟ–4

ರೆಂಬುದು ಕಂಡುಬರುತ್ತದೆ. ಶ್ರೀ ಜಗದ್ಗುರುಗಳ ವಿದೇಶ ಯಾತ್ರೆ, ಪಾಂಡೀಚೇರಿ ಯಾತ್ರೆಗಳ ಕುರಿತೂ ಈ ವಿಭಾಗದಲ್ಲಿ ಕಣ್ತುಂಬ ಆಗುತ್ತದೆ....ಸಾಹಿತ್ಯ ಪ್ರಭೆಯಲ್ಲಿ ಶ್ರೀ ಜಗದ್ಗುರುಗಳ ಹತ್ತಾರು ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಪರಿಚಯುವನ್ನು ವಿವಿಧ ಲೇಖಕರು ಮಾಡಿಕೊಟ್ಟಿದ್ದಾರೆ. ಈ ಲೇಖ ಓದಿದರೆ ಅವರ ಮೂಲ ಕೃತಿಗಳನ್ನು ಹುಡುಕಿಕೊಂಡು ಹೋಗಬೇಕೆನಿಸುತ್ತದೆ."

"ಕಾವ್ಯಪ್ರಭೆಯಲ್ಲಿ ನಾಡಿನ ಹದಿಮೂರು ಜನ ಕವಿಗಳು–ಕುವೆಂಪು, ಅಂಬಿಕಾತನಯುದತ್ತರಾದಿಯಾಗಿ ತಮ್ಮ ಸುಂದರವಾದ ಕವನ ಕುಸುಮಗಳನ್ನು ನೀಡಿದ್ದಾರೆ."

"ಚಿಂತನಪ್ರಭೆ ವಿಭಾಗವು ಈ ಹೆಬ್ಬೊತ್ತಿಗೆಯ ಜೀವಾಳವೆಂದು ಹೇಳಬೇಕು. ಈ ಭಾಗದಲ್ಲಿ ವಿಚಾರಪ್ರಚೋದಕವಾದ ಮೆದುಳಿಗೆ ಅನ್ನ ನೀಡುವಂಥ ಲೇಖನಗಳನ್ನು ಪೋಣಿಸಲಾಗಿದೆ. ಶೈವ–ವೀರಶೈವ ಸಂಬಂಧ, ವೀರಶೈವ ತತ್ವಜ್ಞಾನ, ಜೈನ–ಶೈವ ದರ್ಶನಗಳು, ಶರಣರ ಸಾಹಿತ್ಯ, ದಾಸ ಸಾಹಿತ್ಯ, ಅದ್ವೈತ-ಪಾಶ್ಚಾತ್ಯ ತತ್ವಜ್ಞಾನ, ಬಸವೇಶ್ವರ–ಕಬೀರದಾಸರಂಥ ತುಲನಾತ್ಮಕ ದೃಷ್ಟಿಯಿಂದ ಬರೆದ ವಿಚಾರಪೂರ್ಣ ಲೇಖನಗಳು ಇವೆಯಲ್ಲದೆ, 'ವಚನಗಳ ಭಾಷೆ–ವ್ಯಾಕರಣ', 'ಕೊಂಡಗುಳಿ ಕೇಶರಾಜನ ಇನ್ನೊಂದು ಶಾಸನ ಇನ್ನೊಂದು ಕೃತಿ' ಯಂಥ ಸಂಶೋಧನಾತ್ಮಕ ಲೇಖ ಕೂಡ ಸೇರಿದೆ."

"ಕೊನೆಯದಾದ ವಿಚಾರಪ್ರಭೆಯಲ್ಲಿ ಶ್ರೀ ಜಗದ್ಗುರುಗಳವರ ಅನೇಕಾನೇಕ ಕೃತಿಗಳಿಂದ ವಾಕ್ಯಗಳನ್ನುದ್ಧರಿಸಿ, ಅವರ ವಿಚಾರಧಾರೆಯ ಪರಿಚಯ ಮಾಡಿಕೊಡಲಾಗಿದೆ. ಮಹಾಪೀಠದ ಮಠಾಧಿಪತಿಗಳಾಗಿದ್ದುಕೊಂಡೂ ಅವರೆಷ್ಟು ಪ್ರಗತಿಪರ ವಿಚಾರದವರಾಗಿದ್ದಾರೆಂಬುದನ್ನು ಕಂಡುಕೊಳ್ಳಬೇಕಾದರೆ ಈ ವಿಭಾಗವನ್ನು ಅವಶ್ಯ ಮೆಲಕುಹಾಕಬೇಕು. ಜೀವನಪ್ರಭೆಯಲ್ಲಿ ಇತರರು ಶ್ರೀ ಜಗದ್ಗುರುಗಳ ಪರಿಚಯ ಮಾಡಿಕೊಡುವಲ್ಲಿ ಭಟ್ಟಂಗಿತನವಿರಬಹುದಾದರೂ ವಿಚಾರಪ್ರಭೆಯಲ್ಲಿ ಅವರದೇ ಸಂದೇಶಗಳನ್ನು ಓದುವಾಗ ಅವರ ದಿವ್ಯ–ಭವ್ಯ ಜೀವನದ ದರ್ಶನವಾಗದಿರದು."

"ಕರ್ನಾಟಕದಲ್ಲಿಯ ಖ್ಯಾತನಾಮ ಲೇಖಕರೆನಿಸಿಕೊಳ್ಳುವವರೆಲ್ಲ ಶ್ರೀ ಜಗದ್ಗುರುಗಳಿಗೆ ತಮ್ಮ ಕೃತಿಪುಷ್ಪಗಳನ್ನು ನಿವೇದಿಸಿದ್ದಾರೆ ಎಂಬುದು ಈ ಹೆಬ್ಬೊತ್ತಿಗೆಯನ್ನು ಅವಲೋಕಿಸಿದಾಗ ಕಂಡುಬರುತ್ತದೆ. ಇಂಥ ಸಂದರ್ಭದಲ್ಲಿ ಸಂಪಾದಕರ ಕಾರ್ಯ ಒಂದು ದೃಷ್ಟಿಯಿಂದ ಸುಲಭವೆನಿಸಿದರೆ, ಇನ್ನೊಂದು ದೃಷ್ಟಿಯಿಂದ ಕಠಿಣವೆನಿಸುತ್ತದೆ. ತಮ್ಮ ಸಂಪುಟಕ್ಕಾಗಿ ಉತ್ತಮ ಲೇಖಗಳ ಭರವಸೆ

ಸಂಪಾದಕರಿಗೆ ಸಿಕ್ಕಿದರೂ ಮುಂದಾಗಿ ಬಂದವರಲ್ಲಿ ಯಾರನ್ನು ಹೊರಗಿಡಬೇಕು ಎಂಬ ಚಿಂತೆ ಅವರಿಗೆ ಬಿಟ್ಟಿದ್ದಲ್ಲ. ಶ್ರೀ ಹನ್ನೆರಡುಮಠರು ತುಂಬ ಬುದ್ಧಿವಂತಿಕೆಯಿಂದ, ಜಾಣತನದಿಂದ ಈ ಹೆಬ್ಬೊತ್ತಿಗೆಯ ಸಂಪಾದನ ಕಾರ್ಯವನ್ನು ನೆರವೇರಿಸಿದ್ದಾರೆ."31

□

31 ಸಂಯುಕ್ತ ಕರ್ನಾಟಕ: ವಿಮರ್ಶಾ ವಿಭಾಗ: ದಿ. 17-4-1972: ಪುಟ-6

# ರಜತೋತ್ಸವದತ್ತ ಶ್ರೀ ವಿಜಯ ಯಾತ್ರೆ

## ಪಶ್ಚಿಮ ರಾಷ್ಟ್ರಗಳಿಗೆ ವಿಜಯ ಪ್ರಸ್ಥಾನ

ಬೆಲ್ಜಿಯಂ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಸ್ವಿಟ್ಜರ್ಲ್ಯಾಂಡ್, ಇಟಲಿ ಮುಂತಾದ ರಾಷ್ಟ್ರಗಳಿಗೆ ದಿ. ೨೨-೮-೧೯೭೪ ರಿಂದ ದಿ. ೨೩-೯-೧೯೭೪ರ ಮಧ್ಯದಲ್ಲಿ ಕೈಕೊಂಡ ಪೂಜ್ಯ ಜಗದ್ಗುರುಗಳ ಇತಿಹಾಸಪ್ರಸಿದ್ಧ ವಿದೇಶ ಯಾತ್ರೆಯ ಮೂಲ ಉದ್ದೇಶ ಲ್ಯೂವೆನ್(Leuven)ದಲ್ಲಿ ಏರ್ಪಟ್ಟ "ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತಿ"ಗೆ ಪ್ರಮುಖ ಆಮಂತ್ರಿತ ಉಪನ್ಯಾಸಕರಾಗಿ ಆಮಂತ್ರಿತರಾದುದರಿಂದ!

೧೯೭೦ರ 'ಕ್ಯೂಟೋ'(Kyoto)ದ "ಪ್ರಥಮ ವಿಶ್ವಧರ್ಮಗಳ ಶಾಂತಿ ಪರಿಷತ್ತಿ"ನಿಂದ(International Inter-Religious Peace Conference); 'ಲ್ಯೂವೆನ್'ನಿನ (Leuven) "ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತಿ"ಗೆ ಯಾತ್ರೆ! ವಿಶ್ವಶಾಂತಿಗಾಗಿ ವಿಶ್ವಧರ್ಮಗಳ ಪ್ರಾಚಾರ್ಯರೆಲ್ಲರ ಶುಭಯಾತ್ರೆ!! ೧೯೭೦ರ ಕೂಗಿಗೆ ೧೯೭೪ರ ಮಾರ್ಕೊಗು!!!

ಅಶಾಂತಿಯ ರಕ್ತರಾತ್ರಿಗಳು ಗುಳೇ ಎದ್ದುಬರುತ್ತಿರುವ ಕತ್ತಲೆಯ ಕಾಲ ಅದು. ವ್ಹಿಯೆಟ್‌ನಾಮ್ ಯುದ್ಧದಲ್ಲಿ ಪೃಥ್ವಿಯ ಶಕ್ತಿಬಣಗಳ ರಕ್ತಪ್ರವಾಹ ಹರಿಯಿತು. ಇತ್ತ ಪಾಕಿಸ್ತಾನ-ಚೀನಗಳ ಉದ್ಧಟತನ, ಅತ್ತ ಈಜಿಪ್ತ-ಇಸ್ರೇಲಗಳ ನರಬಲಿ. ಡಿಗೊಗಾರ್ಸಿಯಾದಲ್ಲಿ ಹೊತ್ತುತ್ತಿರುವ ಬೆಂಕಿಯ ಹೊಂಚು. ಅಣ್ವಸ್ತ್ರಗಳ ನಿರಂತರ ಪೈಪೋಟಿ. ಬಲವಿದ್ದವನೇ ಬಾಳುವನೆಂಬ (Survival of the fittest) ನಾಸ್ತಿಕ ವಿಜ್ಞಾನಿಗಳ ನೀಚಪ್ರಜ್ಞೆ. ಮಿಲಿಟರಿ ಶಕ್ತಿಯ ಜಮಾವಣೆಯಲ್ಲಿ ವ್ಯಕ್ತಿಶಕ್ತಿ (Man Power) ಹಾಗೂ ರಾಷ್ಟ್ರಶಕ್ತಿಗಳ ಅಪಾರ ನಷ್ಟ. ಎಲ್ಲ ವ್ಯರ್ಥಸಂಕಲ್ಪಗಳೂ (Negative Vibrations) ಜಾಗತಿಕ ಸಮಸ್ತ ಶಾಂತಿ-ಪ್ರೀತಿ-ಪವಿತ್ರತೆ-ಆನಂದಗಳನ್ನು ಉಧ್ವಸ್ತಗೊಳಿಸಲು ಕೈಚಾಚಿದ ಕಾಲ. ಈ ಸಮಯದಲ್ಲಿ, ಮಾನವೇತಿಹಾಸದ ಸಾವಿರ ವರ್ಷಗಳಲ್ಲಿ ಧರ್ಮಧ್ವಜವನ್ನು ಹಾರಿಸಿದ ಜಾಗತಿಕ ಧರ್ಮಗಳು ಹಾಗೂ ಧರ್ಮವೇತ್ತರು, ಮಠಾಧಿಪತಿಗಳು ಕೈಕಟ್ಟಿ ಕುಳ್ಳಿರಬೇಕೇನು? ಧರ್ಮಕ್ಕಾಗಿ ಕೂಗಿದವರು ಶಾಂತಿಗಾಗಿ ಶ್ರಮಿಸಬೇಡವೇ? ಈ ಗಂಡಾಂತರ ಪ್ರಶ್ನೆ ಪರಿಹಾರಕ್ಕೆ ಪಣತೊಟ್ಟಿದ್ದು ಜಪಾನಿನ ಕ್ಯೂಟೋ ವಿಶ್ವಶಾಂತಿ ಸಮ್ಮೇಲನ. ಅಲ್ಲಿ ಕೂಡಿದವರು ೩೯ ರಾಷ್ಟ್ರಗಳ ಧರ್ಮಾದ

ಮುಖಂಡರು. ಇಲ್ಲಿ ಬೆಲ್ಜಿಯಂ ದೇಶದ ಲ್ಯೂವೆನ್ನಿನಲ್ಲಿ ಸುಮಾರು ೫೦ ರಾಷ್ಟ್ರಗಳ ಪ್ರತಿನಿಧಿಗಳು ಸೇರಿದರು; ಲ್ಯೂವೆನ್ನಿನ "ಮೆರಿಯಾ ಥೆರೇಸಾ ಕಾಲೇಜಿ"ನಲ್ಲಿ (Maria Theresia College), "ಗ್ರೊಟೆ ಔಲಾದ" (Grote Aulad) ದೊಡ್ಡ ಸಭಾಂಗಣದಲ್ಲಿ. ವಿಶ್ವಧರ್ಮಗಳ ದ್ವಿತೀಯ ಶಾಂತಿ ಪರಿಷತ್ತು (Second World Conference on Religion and Peace) ೧೯೭೪ ಆಗಸ್ಟ ೨೮ ರಿಂದ ಸೆಪ್ಟಂಬರ ೩ರ ವರೆಗೆ ನೆರವೇರಿತು.

## ನಾಲ್ಕು ಪತ್ರ: ಒತ್ತಾಯ, ಒತ್ತಡ, ಒಪ್ಪಿಗೆ

ಮಠದ ಸಾವಿರಾರು ಕೆಲಸಗಳ ಕಾರ್ಯಬಾಹುಲ್ಯದಲ್ಲಿ ಪೂಜ್ಯ ಜಗದ್ಗುರುಗಳು ಲ್ಯೂವೆನ್ನಿನ ದ್ವಿತೀಯ ವಿಶ್ವಶಾಂತಿ ಪರಿಷತ್ತಿಗೆ ಬರುವದು ಆಗುವದಿಲ್ಲವೆಂದು ತಿಳಿಸಿಬಿಟ್ಟರು. ಅವರ ಇಚ್ಛೆಯೇ ಬೇರೆ! ಗುರುಸಿದ್ಧೇಶ್ವರನ ಇಚ್ಛೆಯೇ ಬೇರೆ!! ನ್ಯೂಯಾರ್ಕ್-ಹುಬ್ಬಳ್ಳಿ ಹಾಗೂ ದಿಲ್ಲಿ-ಹುಬ್ಬಳ್ಳಿಗಳ ನಡುವೆ ಪತ್ರಗಳ ಪ್ರವಾಹವೇ ಸಾಗಿತು. ಆ ವೃತ್ತಾಂತವನ್ನು ಜಗದ್ಗುರುಗಳ ಮಾತಿನಲ್ಲಿಯೇ ಕೇಳಿರಿ—"ಅಮೇರಿಕೆಯ ಡಾ|| ಹೋಮರ್ ಎ. ಜಾಕ್ (Homer A. Jack) ಅವರು WCRPಯ (World Conference on Religion and Peace) ಪ್ರಧಾನ ಕಾರ್ಯದರ್ಶಿಗಳಾಗಿದ್ದು; ನಮ್ಮನ್ನು ಪರಿಷತ್ತಿನ ಕಾರ್ಯಕಾರಿ ಮಂಡಲಿಯ ಸದಸ್ಯರನ್ನಾಗಿ ಮಾಡಿಕೊಂಡರು. ಅವರಿಂದ ಅಮೇರಿಕೆಯಲ್ಲಿ ಕಳೆದ ವರ್ಷ ಸೇರಿದ ಮೀಟಿಂಗ್‌ಗೆ ಬರಲು ನಮಗೆ ಒತ್ತಾಯದ ಕರೆ ಎರಡು ಸಲ ಬಂದರೂ ನಾವು ಹೋಗಲಿಲ್ಲ. ಅದಕ್ಕೆ ಬೆಳೆಯುತ್ತಿರುವ ನಮ್ಮ ಮಠದ ಕಾರ್ಯಭಾರವೇ ಕಾರಣ. ಒಂದುಸಲ ಬರಗಾಲದ ಬವಣೆಯಲ್ಲಿದ್ದ ಕರ್ನಾಟಕದ ಕೆಲವು ಜಿಲ್ಲೆಗಳ ಸಲುವಾಗಿ ಪಾದಯಾತ್ರೆ ಮಾಡಿ, ಧನ-ಧಾನ್ಯ-ವಸ್ತ್ರಗಳನ್ನು ಕೂಡಿಸಿ ಹಂಚುವ ಸಲುವಾಗಿ ಕಾರ್ಯನಿರತರಾಗಿದ್ದೆವು. ಇನ್ನೊಂದು ಸಲ ಹುಬ್ಬಳ್ಳಿಯಲ್ಲಿಯೇ ರಾಷ್ಟ್ರಮಟ್ಟದ "ಅಖಿಲ ಭಾರತ ಸರ್ವಧರ್ಮಗಳ ಶಾಂತಿ ಪರಿಷತ್ತ"ನ್ನು ಹಮ್ಮಿಕೊಂಡುದರಿಂದ, ಅಮೇರಿಕೆಗೆ ಹೋಗುವದು ಅಸಾಧ್ಯವಾಯಿತು. ಹುಬ್ಬಳ್ಳಿಯಲ್ಲಿ ನಾವು ಕೈಕೊಂಡ "ಸರ್ವಧರ್ಮಗಳ ಶಾಂತಿಪರಿಷತ್ತಿನ" ಪ್ರಭಾವವು ಡಾ|| ಹೋಮರ್ ಎ. ಜಾಕ್ ಅವರ ಮೇಲೆ ಹಾಗೂ ಚೇರಮನ್‌ರಾದ ಆರ್ಚ್‌ಬಿಶಪ್ ಆ್ಯಂಗ್ಲೋ ಫರ್ನಾಂಡಿಸ್‌ರ (Archbishop Angelo Fernandes) ಮೇಲೆ ದಟ್ಟವಾಗಿ ಉಂಟಾಯಿತು. ಸ್ವತಃ ಹೋಮರ್ ಎ. ಜಾಕ್ ಅವರೇ ಹುಬ್ಬಳ್ಳಿ ಕಾರ್ಯಕ್ರಮಗಳ ವಾರ್ತೆಯನ್ನು ಅಮೇರಿಕೆಯ ಪ್ರಮುಖ ದಿನಪತ್ರಿಕೆಯಾದ "ಅಮೇರಿಕನ್ ಟಾಯಿಮ್ಸ್"ದಲ್ಲಿ ಪ್ರಸಾರಿಸಿದರು. ಆದರೂ ಹುಬ್ಬಳ್ಳಿಯ ನಮ್ಮ ಮಠದ ಕಾರ್ಯಬಾಹುಲ್ಯಕ್ಕಾಗಿ ಲ್ಯೂವೆನ್ನಿನ ಪರಿಷತ್ತಿಗೆ ಪ್ರಯಾಣಿಸಲು ನಮ್ಮ ಮನಸ್ಸಿಗೆ ಬೇಡವೆನಿಸಿತು. ಒಂದೆಡೆಗೆ ಶರಣರ ಶಾಂತಿಸಂದೇಶವನ್ನು

ಐರೋಪ್ಯ ರಾಷ್ಟ್ರಗಳ ವಿಚಾರಲೋಕದಲ್ಲಿ ಪ್ರಸಾರಗೊಳಿಸಬೇಕೆಂಬ ಹಂಬಲ. ಇನ್ನೊಂದೆಡೆಗೆ ನಮ್ಮ ಮಠದ ಎಡೆಬಿಡದ ಕಾರ್ಯರಂಗ. ಕೊನೆಗೆ ನಮ್ಮ ಅಸಮ್ಮತಿಯೇ ಗೆದ್ದುಬಿಟ್ಟಿತು. ನಮಗೆ ಬರಲು ಅನುಕೂಲವಿಲ್ಲವೆಂದು ಪರಿಷತ್ತಿಗೆ ಬರೆದೂ ಆಯಿತು. ಆದರೇನು? ಡಾ|| ಹೋಮರ್ ಎ. ಜಾಕ್ ಅವರಿಂದ ದ್ವಿತೀಯ ಜಾಗತಿಕ ಧರ್ಮಗಳ ಶಾಂತಿ ಪರಿಷತ್ತಿಗೆ ಬರಲೇಬೇಕೆಂದು ಒತ್ತಾಯದ ಕರೆ ಬಂದಿತು. ನಾವು ನಮ್ಮ ಮಠದ ಭಕ್ತರೊಂದಿಗೆ ಆಲೋಚಿಸಿ ಮೌನತಾಳಿದೆವು. ಅಷ್ಟರಲ್ಲಿ ಡಾ|| ಹೋಮರ್ ಎ. ಜಾಕ್ ಅವರಿಂದ ದ್ವಿತೀಯ ಪತ್ರ ಬಂದಿತು. ಹಿಂದಿನ ಅವರ ಪತ್ರಕ್ಕೆ ಉತ್ತರ ಹೋಗದ್ದರಿಂದ ಅವರು ಒತ್ತಾಯಿಸಿ ಮರುಉತ್ತರಕ್ಕಾಗಿ ವಿನಂತಿಸಿದ್ದರು. ಒಪ್ಪಿಗೆಗೆ ಕೇಳಿಕೊಂಡಿದ್ದರು. ಇದೇ ಸಮಯದಲ್ಲಿ ಶ್ರೀ ರಂಗನಾಥ ದಿವಾಕರ ಅವರಿಂದ ಮತ್ತು ಭಾರತೀಯ ನಿಯೋಗದ ಕಾರ್ಯದರ್ಶಿಗಳಾದ ಡಾ|| ರಾಧಾಕೃಷ್ಣನ್ ಅವರಿಂದ ನಮಗೆ ಪರಿಷತ್ತಿಗೆ ಹೋಗುವುದರ ಸಲುವಾಗಿ ಒತ್ತಾಯದ ಓಲೆಗಳು ಬಂದವು. ಆದರೆ ಇದೇ ಕಾಲಕ್ಕೆ ಕೆಲವು ಮಠಗಳ ಪಟ್ಟಾಧಿಕಾರದ ಕಾರ್ಯದಲ್ಲಿ ಅಧ್ಯಯನಕ್ಕೆ ಬಿಡುವಿಲ್ಲದ್ದರಿಂದ ಉತ್ತರಿಸಲು ಸಾಧ್ಯವಾಗಲಿಲ್ಲ. ಮತ್ತೆ ಲ್ಯೂವೆನ್‌ದಿಂದ ಡಾ|| ಹೋಮರ್ ಎ. ಜಾಕ್ ಅವರ ಮೂರನೆಯ ಪತ್ರ ಬಂದು ಕೈಸೇರಿತು. ಅದರಲ್ಲಿ 'ನಿಮ್ಮಿಂದ ಒಂದು ಪತ್ರವೂ ಇಲ್ಲದ ಮೂಲಕ ನಿರಾಶೆಗೊಂಡಿದ್ದೇವೆ. ಕೊನೆಗೆ ತಮ್ಮ ಅಭಿಪ್ರಾಯವನ್ನಾದರೂ ಬರೆದು ಕಳಿಸಿರಿ ಮತ್ತು ಲ್ಯೂವೆನ್ನಿನಲ್ಲಿ ಆಗತಕ್ಕ ಕಾರ್ಯಕ್ರಮಗಳ ನಿರ್ಣಯದ ಬಗ್ಗೆ ತಮ್ಮ ಒಪ್ಪಿಗೆಯನ್ನು ನೀಡುವಲ್ಲಿ ನಮಗೆ ಅಧಿಕಾರವನ್ನು ನೀಡಬೇಕು' ಎಂದು ಬರೆದಿದ್ದರು. ನಾವು ಪರಿಷತ್ತಿನ ಕಾರ್ಯಕ್ರಮಗಳ ಬಗ್ಗೆ ನಮ್ಮ ಆಲೋಚನೆಗಳನ್ನು ಅವರಿಗೆ ತಿಳಿಸಿ, ಅವರಿಗೆ ಅಭಿಪ್ರಾಯದ ಅಧಿಕಾರ ಕೊಟ್ಟೆವು; ಅಲ್ಲದೆ ನಮಗೆ ಗದಗ ತೋಂಟದಾರ್ಯಮಠ ಹಾಗೂ ಬೇರೆ ಮತ್ತೆ ಕೆಲವು ಮಠಗಳ ಪಟ್ಟಾಭಿಷೇಕಗಳ ಹೊಣೆಗಾರಿಕೆ ಇದ್ದುದರಿಂದ ಬರಲು ಬಿಡುವಿಲ್ಲವೆಂದು ಬರೆದೆವು. ಇದೇ ಸಮಯಕ್ಕೆ ಬೆಂಗಳೂರಿಗೆ ಫೋನ ಮಾಡಿ, ದಿವಾಕರ ಅವರಿಗೆ ನಮ್ಮ ಅಭಿಪ್ರಾಯ ಅರುಹಿ ಅವರನ್ನು ನಿರುತ್ಸಾಹಗೊಳಿಸಿದ್ದಾಯಿತು. ಆದರೆ ಡಾ|| ಹೋಮರ್ ಎ. ಜಾಕ್ ಅವರು ನಮ್ಮ ಪತ್ರಕ್ಕೆ ಅತ್ಯಂತ ದುಃಖಿತರಾಗಿ (ನಾಲ್ಕನೇ ಸಲ) ಬರೆಯುತ್ತ–'ನಿಮ್ಮ ಪತ್ರ ನಮ್ಮನ್ನು ದುಃಖಸಾಗರದಲ್ಲಿ ಮುಳುಗಿಸಿತು. ದಯವಿಟ್ಟು ತಾವು ಇನ್ನೂ ವಿಚಾರಿಸಿ; ಧರ್ಮದ ದೃಷ್ಟಿಯಿಂದ ತಾವು ಒಪ್ಪಿ, ನಿಮ್ಮ ಕೆಲಸಗಳನ್ನು ಸ್ವಲ್ಪಮಟ್ಟಿಗೆ ಬದಿಗೊತ್ತಿ ಬಂದರೆ ಮನಸ್ಸಿಗೆ ಬಹಳ ಸಮಾಧಾನವಾಗುವದು. ನಿಮಗೆ ಎಲ್ಲ ತರಹದ ಪೂಜಾ ವ್ಯವಸ್ಥೆ ಮಾಡಲಾಗುವದು. ಹವೆ ಚೆನ್ನಾಗಿದೆ. ಲ್ಯೂವೆನ್ ಸುಂದರ ನಗರವಿದ್ದು ಸೃಷ್ಟಿ ಸೌಂದರ್ಯ ಚೆನ್ನಾಗಿದೆ. ಇನ್ನೊಮ್ಮೆ ವಿಚಾರಿಸಿ ನಮ್ಮ ಆಗ್ರಹದ ಕರೆಯನ್ನು

ಮನ್ನಿಸುವಿರೆಂದು ನಂಬಿರುವೆವು' ಎಂದು ಬರೆದರು. ನಮಗೂ ಮನಸ್ಸಿನಲ್ಲಿ ಕಸಿವಿಸಿಯಾಯಿತು. ಈ ಮನಸ್ಥಿತಿಯಲ್ಲಿ ಡಾ|| ರಾಧಾಕೃಷ್ಣನ್ ಅವರೂ ನಮಗೆ ಎರಡನೆಯ ಪತ್ರ ಬರೆದು; ಅದರಲ್ಲಿ–'ನಿಮ್ಮ ಹಿಂದಿನ ಪರಿಷತ್ತಿನ ಭಾಷಣ ಹಾಗೂ ಹುಬ್ಬಳ್ಳಿಯಲ್ಲಿ ನೀವು ಜರುಗಿಸಿದ ಸರ್ವಧರ್ಮದ ಸಮ್ಮೇಲನ ಎಲ್ಲರನ್ನೂ ಪ್ರಭಾವಿತರನ್ನಾಗಿ ಮಾಡಿದೆ. ನಿಮಗೆ ಒಬ್ಬರೇ ಬರಲು ಕಷ್ಟವಾದರೆ ನಿಮ್ಮೊಡನೆ ಪ್ರೊ. ಎ. ಎಲ್. ಹಿರೇಮಠ ಇರುತ್ತಾರೆ. ಅವರನ್ನು ಡೆಲಿಗೇಟ್ ಅಂತ ಮಾಡು ತ್ತೇವೆ. ನಿಮ್ಮೊಡನೆ ಕರೆದುಕೊಂಡು ಬರಬಹುದು. ಅಲ್ಲಿ ನಿಮಗೆ ಎಲ್ಲ ವ್ಯವಸ್ಥೆಯೂ ಆಗುತ್ತದೆ' ಎಂದು ಬರೆದಿದ್ದರು. ಇದು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಸಂಕಲ್ಪವೆಂದು ನಮ್ಮ ಅಂತರಾತ್ಮ ನಿರೂಪಿಸಿತು. ಪರಿಷತ್ತಿಗೆ ಹೋಗಲು ತಪ್ಪಿಸಿಕೊಳ್ಳುವ ನಮ್ಮ ಯತ್ನಗಳೆಲ್ಲ ವಿಫಲವಾದವು. ನಮ್ಮ ಶ್ರೀ ಮೂರುಸಾವಿರಮಠದ ಭಕ್ತರಿಂದಲೂ ನಮಗೆ ಒತ್ತಾಯಗಳು ಬಂದವು. ನೇರವಾಗಿ ಲ್ಯೂವೆನ್ನಿಗೆ ನಮ್ಮ ಒಪ್ಪಿಗೆ ಕಳುಹಿಸಿದೆವು. ಅವರಿಂದ ಆನಂದ ಪೂರಿತ ಮಾರುತ್ತರ ಬಂದಿತು–'It is good to hear from you and to know that you will be attending our Second World Conference. As I wrote earlier, our Conference would not be right without you.' ಅಂತೂ ನಮ್ಮ ಪರಿಷತ್ತಿನ ಸಿದ್ಧತೆ ಪ್ರಾರಂಭ ವಾಯಿತು. ಅನೇಕ ಗ್ರಂಥಗಳ ಸಮಾಲೋಚನೆ ಹಾಗೂ ವಿದ್ವಾಂಸರೊಂದಿಗೆ ಸಮಾಲೋಚನೆಯಾಯಿತು. ಈ ಅಧ್ಯಯನದ ಕಾಲದಲ್ಲಿ ಪ್ರೊ. ಮೆನೆಝಿಸ್ ಹಾಗೂ ಎಸ್. ಎಂ. ಅಂಗಡಿ ಅವರ ಸಹಕಾರವು ದೊರೆಯಿತು. ಕೊನೆಗೆ ಬಸವಣ್ಣನವರ–'ಉರಿಬರಲಿ ಸಿರಿಬರಲಿ ಬೇಕು ಬೇಡೆನ್ನೆನಯ್ಯಾ!'........'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ' ಎಂಬ ಧೀರವಾಣಿ ದಾರಿದೀಪವಾಯಿತು. ನಿರ್ಧಾರ ನಿಂತಿತು; ಸಂಕಲ್ಪ ಕೂಡಿತು.

### ಗೋವಾ: ಮುಂಬೈ: ದಿಲ್ಲಿ

ಯುರೋಪ ಖಂಡದ ಈ ಯಾತ್ರೆಯ ಸಿದ್ಧತೆ ಭರದಿಂದ ಸಾಗಿತು. ಬ್ರುಸೆಲ್ಸ್, ಲಂಡನ್, ಫ್ರಾನ್ಸ್,ಬರ್ಲಿನ್, ಜಿನೇವಾ, ರೋಮ್, ಆ್ಯಮ್‌ಸ್ಟರ್ ಡ್ಯಾಮ ಮುಂತಾದ ಕಡೆಗೆ ಸಂದರ್ಶಿಸಲು ವಿಮಾನ ಟಿಕೇಟನ್ನು WCRP ಯ ಭಾರತೀಯ ಕಾರ್ಯದರ್ಶಿಗಳಾದ ರಾಧಾಕೃಷ್ಣನ್ ಅವರು ತೆಗೆದಿರಿಸಿದ್ದರು. ಟಾಯಿಮ್ ಟೇಬಲ್ ನಿರ್ಧಾರವಾಯಿತು. ದಿನ ಸಮೀಪಿಸಿತು. ಸನ್ಮಾನ ಸಮಾರಂಭ ಗಳ ಹಾವಳಿ, ಪತ್ರಿಕಾ ಪ್ರಚಾರದಿಂದ ಗುಪ್ತ ಉಳಿದರು. ಆದರೂ ಹೇಗೆ ಹೇಗೋ ಸುದ್ದಿ ಹರಡಿಬಿಟ್ಟಿತು. ಗೋವಾ ಮೂಲಕ ವಿಮಾನ ಟಿಕೇಟ ಬಂದವು. ಹುಬ್ಬಳ್ಳಿ ಎರಡೆತ್ತಿನಮಠ, ಕಲ್ಯಾಣಮಠಗಳಲ್ಲಿ ಸತ್ಕಾರ ಸಮಾರಂಭವೂ ನಡೆದವು.

ಗುಟ್ಟಾಗಿ ಹೋಗಬೇಕೆಂದರೂ ಸಾಧ್ಯವಾಗಲಿಲ್ಲ. ಪ್ರೊ. ಎ. ಎಲ್. ಹಿರೇಮಠರೂ ಸಹಾಯಕ ಕಾರ್ಯದರ್ಶಿಗಳಾಗಿ ಸಹಪಾಂಥರಾದರು.

ಅಗಸ್ಟ ೨೨, ೧೯೭೪....ಬೆಳಗಿನ ೮-೩೦! ಶ್ರೀ ಗುರುಸಿದ್ಧೇಶ್ವರನ ಜಾಗೃತ ಶ್ರೀ ಸಮಾಧಿಗೆ ಶರಣೆಂದು ಸಾಷ್ಟಾಂಗ ಹಾಕಿ ಹೊರಬರುವಷ್ಟರಲ್ಲಿ ಗೋವೆಯ ವರೆಗೆ ಕಳಿಸಲು ನೂರಾರು ಕಾರುಗಳು ಸಿದ್ಧವಾಗಿದ್ದವು. ಮಠದ ಮಹಿಳಾ ಕಾಲೇಜ ವಿದ್ಯಾರ್ಥಿನಿಯರು, ಪ್ರಾಥಮಿಕ-ಮಾಧ್ಯಮಿಕ ಶಾಲೆಯ ಮಕ್ಕಳು, ಆಫೀಸ ವೃಂದ, ಚಿಂಚಣಿ-ಕೆಳದಿ-ಬೀಳಗಿ ಶ್ರೀಗಳು, ಸಾಧಕರು, ವಟುಗಳು, ಸಹಸ್ರಾರು ಭಕ್ತರು ನೆರೆದಿದ್ದರು. ಮಧ್ಯಾಹ್ನ ೩ ಗಂಟೆಯ 'ಕೆರೆವಲೆ' ವಿಮಾನ ಮೂಲಕ ಶ್ರೀಗಳು ಗಗನಾಂಗಣ ಯಾತ್ರಿಗಳಾದರು. ಮುಂಬೈಯಲ್ಲಿ ಎಮ್. ಪಿ. ಹೊಸಮನಿ (ಅಸಿಸ್ಟಂಟ ಇನ್‌ಕಮ್ ಟ್ಯಾಕ್ಸ ಕಮಿಾಶನರ್) ಅವರ ಧರ್ಮಪತ್ನಿ ಹಾಗೂ ವ್ಹಿ. ಆರ್. ಹಿರೇಮಠ, ಬೆಂಡಿಗೇರಿ ಪಟ್ಟದದೇವರು ಸ್ವಾಗತಿಸಿದರು. ಅದೇ ದಿನ ರಾತ್ರಿ ವಿಮಾನ ದಿಲ್ಲಿಯ ಪಾಲಂ ನಿಲ್ದಾಣ ತಲುಪಿತು. ಅಲ್ಲಿ ಶ್ರೀ ಸಿ. ಆರ್. ಹಿರೇಮಠ ಸ್ವಾಗತಿಸಿದರು. ಎರಡು ದಿನ ಅವರ ಮನೆಯಲ್ಲೇ ವಾಸ್ತವ್ಯ. ಕೆಲದಿನಗಳಿಂದ ಅಂಟಿದ್ದ ಜ್ವರದ ಬಾಧೆ ಅಲ್ಲಿ ತಂಗಿತು; ಉತ್ಸಾಹ ಇಮ್ಮಡಿಸಿತು.

## ರಾಷ್ಟ್ರಪತಿಗಳೊಂದಿಗೆ

ದಿನಾಂಕ ೨೩ ಅಗಸ್ಟ ೧೯೭೪ ನೂತನ ರಾಷ್ಟ್ರಪತಿ ಫಕುರುದ್ದೀನ ಅಲಿ ಅಹಮ್ಮದ ಅವರೊಂದಿಗೆ ಸಂದರ್ಶನವಾಯಿತು. 'ನಿಮ್ಮ ಮಾರ್ಗದರ್ಶನದಲ್ಲಿ ಭಾರತ ಸಮೃದ್ಧಿಯನ್ನು ಕಾಣಲಿ' ಎಂದು ಸನ್ನಿಧಿಯವರ ಶಾಂತಿಯಾತ್ರೆಗೆ ಶುಭ ಕೋರಿದರು. ರಾಷ್ಟ್ರಪತಿಗಳಿಗೆ ಸನ್ನಿಧಿಯವರು 'Thus Spoke Basava' ಹಾಗೂ ತಾವು ಬರೆದ 'Hearts Blossom' ಮತ್ತು ಮೂರುಸಾವಿರಮಠದ ಕೈಪಿಡಿ ನೀಡಿ ಆಶೀರ್ವದಿಸಿದರು. ಅಂದೇ ನಿಯೋಜಿತ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ ದರ್ಶನ ನೀಡಿದರು. ಜತ್ತಿಯವರು ತುಂಬ ಸಂತೋಷ ದಿಂದ ಹೇಳಿದರು-'ಹಿಂದಿನ ಸಲ ನಾವು ಗವರ್ನರ ಆಗುವದಕ್ಕಿಂತ ಮುನ್ನ ನೀವು ಆಶೀರ್ವದಿಸಿದ್ದಿರಿ. ಅನಾಯಾಸ ಈ ಸಲವೂ ಉಪರಾಷ್ಟ್ರಪತಿಯಾಗುವ ಮುನ್ನ ತಮ್ಮ ಆಶೀರ್ವಾದ ದೊರೆತುದು ದೈವ ಘಟನೆ, ದೇವರೇ ಆಶೀರ್ವಾದ ಮಾಡಲು ನಿಮ್ಮನ್ನು ಕಳಿಸಿದ್ದಾನೆ.'

## ದಿಲ್ಲಿಯಿಂದ ಲ್ಯೂವೆನ್ನಿಗೆ [Leuven]

ದಿನಾಂಕ ೨೫ ಅಗಸ್ಟ ೧೯೭೪ ಬ್ರಾಹ್ಮೀ ಮುಹೂರ್ತ! ನಸುಕಿನ ಮೂರು ಗಂಟೆ!! ಮೂರುನೂರಕ್ಕಿಂತಲೂ ಮೇಲ್ಪಟ್ಟು ಪ್ರಯಾಣಿಕರನ್ನು ಹೊತ್ತ

ಜಂಬೋಜಟ್ ವಿಮಾನ ಪೂಜ್ಯರನ್ನು ಆ್ಯಮ್ಸ್ಟರ್ ಡ್ಯಾಮಿಗೆ ಕರೆದೊಯ್ಯಿತು. ಸತತವಾಗಿ ಅನೇಕ ಗಂಟೆಗಳ ಪ್ರಯಾಣ. ವಿಮಾನದಲ್ಲಿ ಎಲ್ಲಿಯ ಪೂಜೆ? ಎಲ್ಲಿಯ ಪ್ರಸಾದ? ನಿರಂತರ ಶಿವಧ್ಯಾನ. ಅಂತರಂಗದಲ್ಲಿ ಆತ್ಮ ಪರಮಾತ್ಮರ ಅನುಸಂಧಾನ. ಇಷ್ಟಲಿಂಗವನ್ನು ಮೀರಿನಿಂದ ಸಹಜ ಲಿಂಗಪೂಜೆ. ವಿಮಾನವೇ ಧ್ಯಾನಧಾಮ. ಎಷ್ಟೊಂದು ಆನಂದ! ವಿಮಾನ ಪರಿಚಾರಿಕೆಯರು (ಗಗನಸಖಿಯರು) ತಿಂಡಿ–ತೀರ್ಥಗಳನ್ನು ಜಾಣತನದಿಂದ ಜಗದ್ಗುರುಗಳ ಸಮೀಪ ಸಹ ತರಲಿಲ್ಲ. ಶ್ರೀ ಸನ್ನಿಧಿಯವರೊಂದಿಗೆ ವಿಮಾನಿನಲ್ಲಿ ಸಹಪಾಂಥರಾಗಿ ಅವರ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠ, ಬಸವರಾಜ ಸ್ವಾಮಿಗಳು ಗುಳೇದಗುಡ್ಡ, ಸದ್ಯೋಜಾತ ಶಿವಾಚಾರ್ಯರು ದಾವಣಗೆರೆ, ಹೊಂಬುಜ ಜೈನಮಠದ ಸ್ವಾಮಿಗಳು, ಚಂದ್ರಶೇಖರದೇವರು ಹೊಸಮಠ, ಡಾ|| ಉಪಾಧ್ಯೆ ಇದ್ದರು. ಇದಲ್ಲದೆ ಭಾರತದ ಅನೇಕ ಪ್ರತಿನಿಧಿಗಳೂ ಸಂಗಡ ಇದ್ದರು. ವಿಜ್ಞಾನದ ಅದ್ಭುತ ಸಾಧನೆಯಂತಿದ್ದ ಜಂಬೋಜಟ್ ವಿಮಾನ ತಾಸಿಗೆ ೬-೭ ನೂರು ಮೈಲು ವೇಗದಿಂದ ಸಾಗಿದರೂ ಬ್ರುಸೆಲ್ಸ್ ತಲುಪಲು ಅನೇಕ ಗಂಟೆಗಳೇ ಬೇಕಾದವು. ಮಾರ್ಗದಲ್ಲಿ ಅಥೆನ್ಸದತ್ತ ನಡೆದಾಗ ವಿಮಾನ ೩೮ ಸಾವಿರ ಅಡಿ ಎತ್ತರದಲ್ಲಿ ಹಾರುತ್ತಿತ್ತು. ಕೆಳಗಡೆ ದೈತ್ಯಾಕಾರದ ಬಿಳಿಯ ಮೋಡಗಳ ದರ್ಶನೀಯ ನೋಟ. ಹೊಟ್ಟೆಯಲ್ಲಿಯ ನೀರು ಕೂಡಾ ತುಳುಕಿಸದಂತೆ ವಿಮಾನ ನಿಶ್ಚಲವಾಗಿ ಕೊಂಡೊಯ್ಯುತ್ತಿತ್ತು. ಮೆಡಿಟರೇನಿಯನ್ ಸಾಗರದ ಚಲುವು ನೀಲಿಮೆಯಿಂದ ಸರ್ವಾಂತರ್ಯಾಮಿ ಎನಿಸುತ್ತಿತ್ತು.

ಮಧ್ಯಾಹ್ನ ೧೨ ಗಂಟೆಗೆ ಗಗನ ನೌಕೆ ಆ್ಯಮ್‌ಸ್ಟರ್ ಡ್ಯಾಮಿನಲ್ಲಿಳಿಯಿತು. ಅಲ್ಲಿಂದ ಮತ್ತೊಂದು ವಿಮಾನದಲ್ಲಿ ಬ್ರುಸೆಲ್ಸ್ (Brussels) ತಲುಪಿದಾಗ ಮಧ್ಯಾಹ್ನ ೪-೩೦ ಆಗಿತ್ತು. ಅಲ್ಲಿ ಡಾ|| ಹೋಮರ್ ಎ. ಜಾಕ್ ಅವರು ಪೂಜ್ಯರನ್ನು ಸ್ವಾಗತಿಸಿ ಕಾರಿನಲ್ಲಿ ನೇರವಾಗಿ ಲ್ಯೂವೆನ್ನಿಗೆ (Leuven) ಕರೆದೊಯ್ದರು. ಲ್ಯೂವೆನ್ನಾದ ಕ್ಯಾಥೊಲಿಕ್ ವಿಶ್ವವಿದ್ಯಾಲಯದ ಅಪೂರ್ವ ಸುಂದರ ಹಾಸ್ಟೆಲಿನಲ್ಲಿ ಇವರಿಗೆ ತಂಗುವ ವ್ಯವಸ್ಥೆ ಇದ್ದಿತು. ಅಲ್ಲಿ ಸನ್ನಿಧಿಯವರ ಪೂಜೆ ಪ್ರಸಾದಕ್ಕೆ ತುಂಬಾ ಅನುಕೂಲವಿತ್ತು. ಆ ಆಹ್ಲಾದಕರವಾದ ವಾತಾವರಣದ ಆತಿಥ್ಯದಲ್ಲಿ ಸುದೀರ್ಘ ಪ್ರಯಾಣದ ಮಾರ್ಗಾಯಾಸ ಬಳಲಿಕೆ ದೂರಾಗಿ ಮನ ಹಗುರಾಯಿತು.

## ಸೌಂದರ್ಯ ರಾಣಿ "ಲ್ಯೂವೆನ್" (Leuven)

ಇಂಗ್ಲಂಡ್, ಫ್ರಾನ್ಸ್, ಸ್ವಿಟ್ಜರ್‌ಲ್ಯಾಂಡ್, ಲಕ್ಸಂಬರ್ಗ, ಜರ್ಮನಿ ಹಾಗೂ ನೆದರ್ಲ್ಯಾಂಡ್‌ಗಳಿಂದ ಸುತ್ತುವರಿದ ಪುಟ್ಟ ರಾಷ್ಟ್ರ ಬೆಲ್ಜಿಯಂ (Belgium). ಕೇವಲ ೧೧,೭೭೯ ಚದುರ ಮೈಲು ಕ್ಷೇತ್ರಫಲ. ೮೯೮ ಮೈಲು

ಸೀಮಾ ರೇಖೆ. ೪೧ ಮೈಲು ಉತ್ತರ ಸಮುದ್ರದ (North Sea) ಕಡಲ ದಂಡೆ. ಕೇವಲ ೯೬,೫೦,೯೪೪: ಅಂದರೆ ಒಂದು ಕೋಟಿಗಿಂತ ಕಡಿಮೆ (೧೯೭೦ ರಲ್ಲಿ) ಜನಸಂಖ್ಯೆ. ಆದರೂ ವಾರ್ಷಿಕ ತಲಾ ಆದಾಯ ೧,೧೬,೯೭೩ ಫ್ರಾಂಕುಗಳು (೧೯೭೦). ದಾರಿಯ ಮೇಲೆ ಅಡ್ಡಾಡುವವರೇ ಇಲ್ಲ. ಕಾರಣ ಎಲ್ಲರೂ ಕಾರಿನಲ್ಲಿ ಅಡ್ಡಾಡುವವರು! ಇಷ್ಟು ಪುಟ್ಟ ದೇಶದಲ್ಲೂ ಮೂರು ಪ್ರಧಾನ ಭಾಷೆಗಳು: ಫ್ರೆಂಚ್, ಡಚ್, ಜರ್ಮನ್. ಇಂಗ್ಲಂಡಿಗೆ ಸಾವಿರಾರು ಮೈಲು ದೂರದಲ್ಲಿದ್ದ ಭಾರತದಲ್ಲಿರುವಷ್ಟು ಇಂಗ್ಲಿಷಿನ ಹುಚ್ಚು ಭ್ರಮೆ ಕೇವಲ ಅದರ ಪಕ್ಕದಲ್ಲೇ ಇರುವ ಈ ಪುಟ್ಟ ರಾಷ್ಟ್ರದಲ್ಲಿ ಇಲ್ಲ. ಇಂಗ್ಲಿಷ್ ಬಾರದವರೇ ಅಧಿಕ. ಪ್ರತಿಶತ ೫೬% ರಷ್ಟು ಡಚ್ ಮಾತನಾಡುವವರು; ಪ್ರತಿಶತ ೩೨% ರಷ್ಟು ಫ್ರೆಂಚರು; ಉಳಿದವರು ಜರ್ಮನಿಗರು ಹಾಗೂ ಮಿಶ್ರಜನಾಂಗದವರು.1

## ಕಿರಿಯ ದೇಶ....ಹಿರಿಯ ಸಾಧನೆ

ಆಶ್ಚರ್ಯದ ಸಂಗತಿಯೆಂದರೆ ಭಾರತಕ್ಕಿರುವಂತೆ ಬೆಲ್ಜಿಯಂ ದೇಶಕ್ಕೆ ತನ್ನದೇ ಆದ ನೈಸರ್ಗಿಕ ಖನಿಜ ಸಂಪತ್ತುಗಳಿಲ್ಲ. ಆದರೂ ಅದು ವಿಶ್ವದಲ್ಲಿ ಔದ್ಯೋಗೀಕರಣದಲ್ಲಿ ಮುಂದುವರಿದ ರಾಷ್ಟ್ರ. ನಮ್ಮ ದೇಶದ ಒಂದು ಪ್ರಾಂತಕ್ಕಿಂತಲೂ ಕಿರಿದಾದ ಈ ದೇಶ; ೧೯೭೧ ರಲ್ಲಿ ೧,೨೪,೪೫,೦೦೦ ಟನ್ ಉಕ್ಕು ಉತ್ಪಾದಿಸಿತು. ಇದು ವಿಶ್ವದ ಉಕ್ಕಿನ ಉತ್ಪಾದನೆಯ ಪ್ರತಿಶತ ೨೨% ರಷ್ಟು! ಇದು ೧೯೭೧ ರಲ್ಲಿ ೨,೭೮,೬೦೦ ಮಿಲಿಯನ್, ಫ್ರಾಂಕುಗಳ ಯಂತ್ರಗಳನ್ನು ಹೊರ ಜಗತ್ತಿಗೆ ಮಾರಿತು. ಭಾರತದಂಥ ಬೃಹತ್ ರಾಷ್ಟ್ರ ಅಚ್ಚರಿಪಡುವ ಪೆಡಂಭೂತ ಸಾಧನೆ ಇದಲ್ಲವೆ?.... ಇದು ೧೯೭೧ ರಲ್ಲಿ ४,೪४,೬೦೦ ಟನ್ ಕಾಯಿಪಲ್ಲೆ, ೧೫,೦೦೦ ಟನ್ ಹೂಗಳನ್ನು ಯುರೋಪ ರಾಷ್ಟ್ರಗಳಿಗೆ ರವಾನಿಸಿತು.2

ಬೆಲ್ಜಿಯಂ (Belgium) ದ ರಾಜಧಾನಿ ಬ್ರುಸೆಲ್ಸ್ (Brussles), ಇಲ್ಲಿಂದ ಪೂರ್ವಕ್ಕೆ ಒಂದು ತಾಸಿನ ಕಾರುದಾರಿ ಲ್ಯೂವೆನ್ (Leuven). ಇಲ್ಲಿಯ ಕೆಥೋಲಿಕ್ ವಿಶ್ವವಿದ್ಯಾಲಯ (Katholieko Universiteit to Leuven); ಇದು ಜಗತ್ತಿನ ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೇ ಪ್ರಾಚೀನ ವಿಶ್ವವಿದ್ಯಾಲಯ. ಈ ವಿಶ್ವವಿದ್ಯಾಲಯದಲ್ಲಿಯೇ ಸನ್ನಿಧಿಯವರ ವಸತಿಗೆ ಏರ್ಪಾಟಾಗಿತ್ತು. ಇದು ಜಗತ್ತಿನ ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೇ ಪ್ರಾಚೀನ ವಿಶ್ವವಿದ್ಯಾಲಯ. ಕ್ರಿ. ಶ. ೧೪೨೫ ಕ್ಕೆ ಪ್ರಾರಂಭವಾಗಿ; ೫೦೦ ವರ್ಷಗಳ ಮೇಲೂ ತನ್ನ ಪೂರ್ಣ ಸೌರಭ

1 ಮಾಹಿತಿ: ನಮ್ಮ ವಿದೇಶ ಯಾತ್ರೆ: ಪುಟ–77
2 ಮಾಹಿತಿ: ನಮ್ಮ ವಿದೇಶ ಯಾತ್ರೆ: ಪುಟ–77,78

ನಿರ್ಭರವಾಗಿ ಅರಳಿ ನಿಂತಿದೆ. ಇದು ಎಲ್ಲ ವಿಧದಿಂದಲೂ ಪರಿಪೂರ್ಣ ವಿಶ್ವ ವಿದ್ಯಾಲಯ.... 'The Katholieko Universiteit to Leuven is a Complete university, encompassing almost every discipline and field of study. Its academic staff and student body profit enormously from this broad intellectual base, for it enables them to meet today's demands for specialization, departmentalization and interdisciplinary research.'[3]

ಲ್ಯೂವೆನ್ ೫೦೦ ವರ್ಷಗಳಿಗಿಂತಲೂ ಪೂರ್ವದಿಂದಲೇ ವಿಶ್ವವಿದ್ಯಾಲಯದ ನಗರವಾಗಿ ಬೆಳೆದುಬಂದಿದೆ. ಈ ನಗರವೇ ಒಂದು ಪ್ರಾಚೀನ ವಿಶ್ವವಿದ್ಯಾಲಯ. ಇದನ್ನು ಈ ನಗರದ ಪ್ರತಿದಾರಿಯಲಿಯೂ, ಸೌಧಗಳಲ್ಲೂ, ಹೂ-ಬನ-ಬಳ್ಳಿ-ಮಾಡ ಗಳಲ್ಲೂ ಕಂಡರಿಯಬಹುದು. ೧೫೧೭ ರಲ್ಲಿಯೇ ಇಲ್ಲಿ ಕಲಿತ ಎರಾಸ್‌ಮಸ್ ಪೋಪನಾಗಿ ಬೆಳಗಿದ. ಎರಡು ಮಹಾಯುದ್ಧಗಳಲ್ಲಿ ಇಲ್ಲಿಯ ಕಟ್ಟಡಗಳು ಭಸ್ಮೀಭೂತವಾದರೂ ಮತ್ತೆ ಗಟ್ಟಿಯಾಗಿ ಮೇಲೆದ್ದಿವೆ.

## ಯಾತ್ರಿಕರ ಸ್ವರ್ಗೀಯ ಸುಂದರ ಧಾಮ

"ದಣಿದು ಬಂದ ಯಾತ್ರಿಕರಿಗೆ ಬ್ರುಸೆಲ್ಸಿಗಿಂತಲೂ ಲ್ಯೂವೆನ್ಸ್ನು ವಿಶ್ರಾಂತಿ ಧಾಮ. ಆಹ್ಲಾದಕರ ಹವೆ. ನಮ್ಮ ಪಟ್ಟಣಗಳಂತೆ ಗಜಿಬಿಜಿ, ಗಡಿಬಿಡಿ, ದುರ್ಗಂಧದ ದಾರಿ, ಸ್ವಚ್ಛಂದ ಮೂತ್ರಾಲಯ, ಸಂತೆಯ ಗದ್ದಲು ಇಲ್ಲಿ ಹುಡುಕಿ ದರೂ ಕಾಣದು. ದಾರಿಯಲ್ಲಿ ಜನರ ಸುಳಿವೇ ಕಾಣದು. ಎಲ್ಲರೂ ಕಾರಿನಲ್ಲಿ ಸಾಗುತ್ತಾರೆ. ಎಲ್ಲೆಲ್ಲೂ ಸ್ವಚ್ಛತೆ. ದಾರಿಯ ಕಸಗುಡಿಸುವವರೂ ಮೋಟರಿನಲ್ಲಿ ಯಂತ್ರವಿಟ್ಟುಕೊಂಡು ಬರುತ್ತಾರೆ. ಹೆಚ್ಚಾಗಿ ಇಲ್ಲಿ ದುಡಿತವೇ ದೇವರು. ಇದು ಒಟ್ಟಾರೆ ಬೆಲ್ಜಿಯಮ್ಮಿನ ಇಲ್ಲವೇ ಯುರೋಪ ಖಂಡದ ಗುಣಧರ್ಮವೆಂದು ಹೇಳ ಬಹುದು. ಒಟ್ಟಿನಲ್ಲಿ ಭಾರತೀಯರು ಧರ್ಮವನ್ನು ಹೇಳುತ್ತಾರೆ; ಇವರು ಆಚರಿ ಸುತ್ತಾರೆ. ಕಾರಣ ನಮ್ಮಲ್ಲಿಯಂತೆ ಅಂಗಡಿ ಕಟ್ಟೆಯ ಮೇಲೆ ದಾರಿಯ ಕೂಟ ದಲ್ಲಿ ಹರಟೆಕೋರವೃತ್ತಿಯಲ್ಲಿ ಸಿಕ್ಕಾಪಟ್ಟೆ ಮಾತನಾಡುತ್ತ ನಿಲ್ಲುವ ಜನ ಇಲ್ಲಿ ಒಬ್ಬರೂ ಕಾಣುವುದಿಲ್ಲ. ಇವರಿಗೆ ದುಡಿತವೇ ದೇವರು. ಪ್ರಾಮಾಣಿಕತೆ ಇಲ್ಲಿಯ ಸಮಾಜ ಧರ್ಮ. ಯಾವ ಅಂಗಡಿಯಲ್ಲೂ ಗಿರಾಕಿಗೆ ಕೊಡುವವನಿಲ್ಲ. ತಾವೇ ಬೇಕಾದ ವಸ್ತು ಕೈ ಹಾಕಿ ಪಡೆದುಕೊಂಡು ಬಂದು, ಕೌಂಟರಿನಲ್ಲಿದ್ದ ಮಾಲೀಕನಿಗೆ ಹಣತೆತ್ತು ಸಾಗಬೇಕು. ಪ್ರಾಮಾಣಿಕತೆಗೆ ಇದೊಂದು ದೊಡ್ಡ ಕುರುಹು."[4]

---

3 ಮಾಹಿತಿ: ನಮ್ಮ ವಿದೇಶ ಯಾತ್ರೆ: ಪುಟ-78

4 ನಮ್ಮ ವಿದೇಶ ಯಾತ್ರೆ: ಪುಟ-79

## ನಾವು ಭಾರತೀಯರು! ಆದರೆ....? ಅಲ್ಲಿ!!

ನಮ್ಮ ದೇಶದ ಜನಗಳ ನಡವಳಿಕೆ ಹೇಗೆ, ಆ ದೇಶದ ಜನರ ಪರಸ್ಪರ ಒಡನಾಟ ಹೇಗೆ ಎಂಬುದಕ್ಕೆ ಜಗದ್ಗುರುಗಳಿಗೆ ಒಂದು ಪ್ರತ್ಯಕ್ಷ ನಿದರ್ಶನವೇ ದೊರೆಯಿತು. ಭಾರತೀಯರ ಕುಬ್ಜ ಮನೋಭಾವದ ನೇರ ಅನುಭವ ಉಂಟಾಯಿತು. ಈ ಅನುಭವವನ್ನು ಶ್ರೀ ಸನ್ನಿಧಿಯವರ ಪ್ರತ್ಯಕ್ಷ ಕಥನದಿಂದಲೇ ಕೇಳೋಣ: “ಅತಿಥಿ ದೇವೋಭವ– ಎಂದು ನಾವು ಹೇಳುತ್ತೇವೆ. ನಮ್ಮ ಅತಿಥಿಗಳೆಂದರೆ ಬೀಗರು ಬಿಜ್ಜರು ಮಿತ್ರರು ವ್ಯವಹಾರಸ್ಥರು. ಆದರೆ ನಾವು ಪ್ರತ್ಯಕ್ಷ ಅನುಭವಿಸಿದ ಬೆಲ್ಜಿಯಂ ದೇಶದ ಒಂದು ಘಟನೆ ತೀರಾ ವಿಚಿತ್ರ. ನಾವು ಲ್ಯೂವೆನ್ನಿನಲ್ಲಿ ನಡೆದು ಹೋಗುತ್ತಿರುವಾಗ ಅಲ್ಲಿಯ ಮೆಡಿಕಲ್ ಕಾಲೇಜಿನ ಒಬ್ಬ ವಿದ್ಯಾರ್ಥಿನಿಯ ತಾಯಿ, ತನ್ನ ಕಾರು ನಿಲ್ಲಿಸಿ: ‘ಬನ್ನಿರಿ ನಿಮ್ಮ ಸ್ಥಾನಕ್ಕೆ ಬಿಡುತ್ತೇನೆ. ಅಲ್ಲದೆ ಇಲ್ಲಿಯ ಹಳೆಯ ಕಟ್ಟಡಗಳನ್ನು ತೋರಿಸುತ್ತೇನೆ’ ಎಂದು ಅಪರಿಚಿತಳಾದ ಆ ಗೃಹಿಣಿ ನಮ್ಮನ್ನು ತನ್ನ ಕಾರಿನಲ್ಲಿ ಕರೆದುಕೊಂಡು, ಸಮಗ್ರ ಲ್ಯೂವೆನ್ ತೋರಿಸಿ, ಕೊನೆಗೆ ತನ್ನ ಮನೆಗೆ ಕರೆದುಕೊಂಡು ಹೋದಳು. ನಾವು ಪ್ರೊ. ಎ. ಎಲ್ ಹಿರೇಮಠರೊಂದಿಗೆ ಅವಳ ಸುಂದರ ತೋಟದಲ್ಲಿ ಕುಳಿತೆವು. ಅವಳು ತನ್ನ ತೋಟದ ಸೇಬು, ಬಾದಾಮಿ ಮುಂತಾದ ಹಣ್ಣುಗಳನ್ನು ಹರಿದುಕೊಟ್ಟಳು. ಅವಳ ತೋಟದಲ್ಲಿ ನಾವು, ಹೊಂಬುಜದ ಜೈನ ಸ್ವಾಮಿಗಳು ಹಾಗೂ ದಾವಣಗೆರೆಯ ಸದ್ಯೋಜಾತ ಸ್ವಾಮಿಗಳು ಸಾಕಷ್ಟು ತಿರುಗಾಡಿದೆವು. ಹಣ್ಣುಗಳನ್ನು ಹರಿದುಕೊಂಡೆವು. ಅತಿ ಪರಿಚಿತವಿದ್ದವರಿಗೂ ಇಷ್ಟು ಮಾಡಲಿಕ್ಕಿಲ್ಲ; ಹಾಗೆ ಅವರು ನಮ್ಮನ್ನು ಉಪಚರಿಸಿದರು. ನಂತರ ಆ ಗೃಹಿಣಿಯೇ ಕಾರಿನಲ್ಲಿ ನಮ್ಮನ್ನು ನಮ್ಮ ಸ್ಥಾನಕ್ಕೆ ತಂದು ಇಳಿಸಿದಳು. ಪ್ರೊ. ಎ. ಎಲ್. ಹಿರೇಮಠರು ನಮ್ಮ ಪರಿಚಯ ತಿಳಿಸಿದ ಮೇಲೆ ಅವಳು ನಮ್ಮನ್ನು ಬಲು ವಿಶ್ವಾಸ, ಪೂಜ್ಯ ಭಾವನೆಗಳಿಂದ ಸತ್ಕರಿಸಿ, ನಾವಿದ್ದ ಸ್ಥಳಕ್ಕೆ ತನ್ನ ಮಕ್ಕಳನ್ನೆಲ್ಲ ಕಾರಿನಲ್ಲಿ ಕರೆತಂದಳು. ನಾವು ಅವಳಿಗೆ ಒಂದು ಲಿಂಗು, ರುದ್ರಾಕ್ಷಿ, ಭಸ್ಮ, ಗಂಧದ ಕಟ್ಟಿಗೆಯಲ್ಲಿರುವ ನಮ್ಮ ಹೆಸರು, ಬಸವಣ್ಣನವರ ಇಂಗ್ಲಿಷ ಅನುವಾದಿತ ವಚನಗಳು, ನಾವು ಬರೆದ ‘Hearts Blossoms’ ಗ್ರಂಥ ಕೊಟ್ಟೆವು. ಅವನ್ನೆಲ್ಲ ಕಂಡು ಅವಳು ಬೆರಗಾಗಿ ‘Oh God!’ ಎಂದು ಉದ್ಗಾರ ತೆಗೆದಳು. ನಮಗೆ ಫ್ರಾನ್ಸದ ವೀಸಾ ಬೇಕಾಗಿತ್ತು. ಅದನ್ನು ಅವಳಿಗೆ ತಿಳಿಸಿದೆವು. ಅವಳ ಮಕ್ಕಳು ಸಂತೋಷದಿಂದ ಒಪ್ಪಿ, ಮರುದಿನ ನಮ್ಮನ್ನು ತಮ್ಮ ಕಾರಿನಲ್ಲಿ ಬ್ರುಸೆಲ್ಸಿಗೆ ಕರೆದುಕೊಂಡು ಹೋದರು. ಫ್ರಾನ್ಸದ ಅಂಬೆಸಿಗೆ ಹೋದಾಗ, ಇಂಡಿಯಾದ ಅಂಬೆಸಿ ಆಫೀಸಿನಿಂದ ಪರಮಿಶನ್ ಲೆಟರ್ ಬೇಕೆಂದು ಹೇಳಿದರು. ಆಗ ಇಂಡಿಯಾದ ಆಫೀಸಿಗೆ ಬಂದೆವು. ನಮಗೆ ಇಂಡಿಯಾದ ಆಫೀಸಿನ ಕಾರಕೂನನಿಂದ ಬಂದ ಉತ್ತರ ‘ಈಗ ಸಾಧ್ಯವಿಲ್ಲ.

ಇಂಡಿಯಾದಿಂದ ಎಷ್ಟು ಜನ ಬಂದಿದ್ದೀರಿ? ಎಲ್ಲರೂ ಬಂದ ಮೇಲೆ ನೋಡೋಣ.' ಇದೇ ಅಲ್ಲವೇ ಇಂಡಿಯಾದವರ ಬಗ್ಗೆ ಇಂಡಿಯಾದವರು ಹೊರಗೆ ಕೂಡ ತೋರುವ ಮಮತೆ? ವಿಶ್ವಶಾಂತಿ ಪರಿಷತ್ತಿನ ಕಾರ್ಯರಂಗದ ಬಗೆಗಾದರೂ ಅಲ್ಲಿರುವ ಭಾರತೀಯನಿಗೆ ಗೌರವ ಬೇಡವೇ? ಆ ದೇಶದವರು ನಮ್ಮ ದೇಶದವರ ಬಗ್ಗೆ ಅನಾದರ ತೋರಿದರು! ನಾವು ಅವರಿಗೆ ಇಷ್ಟು ದೂರದಿಂದ ಬಂದಿದ್ದೇವೆ. ನಾವು ಭಾರತದವರು. ಭಾರತದವರೇ ಸಹಕಾರ ನೀಡದಿದ್ದರೆ ಮತ್ತಾರು ನೀಡ ಬೇಕು? ಎಂದೆವು. ಅದಕ್ಕೆ ಆತ 'ಈಗ ಸಾಧ್ಯವಿಲ್ಲ ನಾಳೆ ಮುಂಜಾನೆ ಬನ್ನಿ' ಎಂದ. ಆದರೆ ಮರುದಿನವೇ ನಮ್ಮ ಜಾಗತಿಕ ಶಾಂತಿ ಪರಿಷತ್ತು ಇತ್ತು. ಮತ್ತೆ ಇಲ್ಲಿ ಬರುವದು ಅಸಾಧ್ಯ. ಪ್ರೊ. ಎ. ಎಲ್. ಹಿರೇಮಠರು ಅವನಿಗೆ 'ನಾಳೆ ವರ್ಲ್ಡ್ ಕಾನ್‌ಫರನ್ಸ್ ಇದೆ. ಕಾರ್ಯಕ್ರಮ ಬಿಟ್ಟು ೩೦–೪೦ ಮೈಲು ಹೇಗೆ ಬರಬೇಕು? ಇಲ್ಲಿ ಭಾಷೆಯ ಕಷ್ಟ. ಎಕ್ಸಚೇಂಜಿನಲ್ಲಿ ದೊರೆತ ಅಲ್ಪ ಹಣದಿಂದ ದುಡ್ಡಿನ ಕಷ್ಟ. ಅಪರಿಚಿತ ಸ್ಥಾನದಲ್ಲಿ ನೀವು ಸಹಕಾರ ನೀಡಬೇಕು....' ಎಂದರು. ಅದಕ್ಕೆ ಬಂದ ಉತ್ತರ 'ಸಾಧ್ಯವಿಲ್ಲ....ಹೋಗಿ'! ನಂತರ ನಾವು ಅಲ್ಲಿಯ ಮೇಲಾಧಿಕಾರಿಗೆ ಭೆಟ್ಟಿಯಾದೆವು. ಅಧಿಕಾರಿಯಿಂದ ಅವನಿಗೆ ಫೋನ ಸಂದೇಶ ಬಂತು. ಆತ ಕಣ್ಣು ಕೆಂಗಿಡಿ ಮಾಡಿಯೇ ನಮಗೆ ಪರ್ಮಿಶನ್ ಲೆಟರ್ ಕೊಟ್ಟ! ಆದರೇನು? ಆತ ನಮ್ಮ ಸಮಯ ಬಹುಪಾಲು ನಷ್ಟ ಮಾಡಿ! ಫಾರ್ಮ ತುಂಬಿದ್ದರಿಂದ ಫ್ರಾನ್ಸ್ ಎಂಬೆಸಿಯಲ್ಲಿ ಅದು ಸ್ವೀಕೃತವಾಗಲಿಲ್ಲ! ಲಂಡನ್ ಎಂಬೆಸಿ ಮುಚ್ಚಿಹೋಗಿತ್ತು!! ಮುಖ ಒಣಗಿಸಿಕೊಂಡು ಮರಳಿದೆವು....ನಾವು ಭಾರತೀಯರು!!!....ಆದರೆ? ನಮಗೆ ಕಾರಿನಲ್ಲಿ ಒಯ್ದು ಸಹಾಯ ಸಲ್ಲಿಸಿದ ಆ ಅತಿಥೆಯ ದೇಶದ ಆ ಕುಟುಂಬ ದವರ ಹೆಸರು ಇಂತಿವೆ– ೧) Ghislaike Steyaert ೨) Dominigu Elaven ೩) Thierry Lavenne"5

**ದ್ವಿತೀಯ ವಿಶ್ವಧರ್ಮಗಳ ಶಾಂತಿ ಸಮ್ಮೇಲನ:**

**ಹಾಗೂ ಜಗದ್ಗುರುಗಳ ಪ್ರಮುಖಪಾತ್ರ: ಶಿವಕೃಪೆಯ ಪ್ರತ್ಯಕ್ಷಫಲ**

ಅಗಸ್ಟ, ೨೮ ೧೯೭೪ ಬೆಳಗಿನ ೯ ಗಂಟೆಗೆ ಲ್ಯೂವನ್ನಿನ "ಮೆರಿಯಾ ಥೆರೆಸಿಆ ಕಾಲೇಜಿನ" (Maria Theresia College) ಸಭಾಂಗಣದಲ್ಲಿ ಪರಿಷತ್ತಿನ ಪ್ರಧಾನ ಸಭೆ (Plenary Session) ಪ್ರಾರಂಭವಾಯಿತು. ಇದೊಂದು ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಶ್ರೀಮಂತವೂ, ಧೀಮಂತವೂ ಆದ ಸುಂದರ ಸಭಾಂಗಣ. ಇಲ್ಲಿ ೫೦ ರಾಷ್ಟ್ರಗಳ ೧೭೭ ಪ್ರತಿನಿಧಿಗಳು ಆಸೀನರಾಗಿದ್ದರು. ತುಂಬ ಹಿತಕರವಾದ ಹವೆ, ಉಲ್ಲಾಸಕರ ಪ್ರಕೃತಿ, ಸ್ಫೂರ್ತಿದಾಯಕವಾದ ವಾತಾವರಣ. ಇಂತಹ ಪ್ರಶಾಂತ ಶೀತಲ ಲ್ಯೂವೆನ್ ಪರಿಷನ್ಮಂದಿರದಲ್ಲಿ ವಿಶ್ವದ

---

5 ನಮ್ಮ ವಿದೇಶ ಯಾತ್ರೆ; ಪುಟ–80,81,32

ಪ್ರಕ್ಷುಬ್ಧ ಯುದ್ಧಭೀತಿ, ರಕ್ತದ ಚೀರಾಟ, ಮಾನವತೆಯ ಅಸಂತೃಪ್ತಿ, ಜಿಗುಪ್ಸೆ, ವ್ಯಕ್ತಿಸ್ವಾತಂತ್ರ್ಯದ ದಬ್ಬಾಳಿಕೆ, ಶ್ರೀಮಂತಿಕೆಯ ಪೈಪೋಟಿಗಳ ಜ್ವಲಂತವಾದ ವಿಶ್ವಸಮಸ್ಯೆಗಳ ಬಗ್ಗೆ ನಿರ್ಣಯಾತ್ಮಕವಾಗಿ ಚರ್ಚಿಸಲು ಜಾಗತಿಕ ನೇತಾರರು ಉಪಸ್ಥಿತರಾಗಿದ್ದರು.

## "Workshop" ಹಾಗೂ "Plenary Session"ಗಳು

ಇಲ್ಲಿ ಭಾರತೀಯ ಸಭೆಗಳಂತೆ ಉದ್ದುದ್ದ ಭಾಷಣಗಳ ಮಲ್ಲಯುದ್ಧಕ್ಕೆ ಎಷ್ಟೂ ಅವಕಾಶವಿಲ್ಲ, ಮಾತು ಸಂಕ್ಷಿಪ್ತ. ದೀರ್ಘ ಭಾಷಣವೆಂದರೆ ಮೂರು ನಿಮಿಷಗಳು ಮಾತ್ರ! ಉದಾಹರಣೆಗೆ...."All should speak no more than three minutes during any one intervension and preferably less"....ಎಂದು ಪರಿಷತ್ತಿನ ನಿಯಮಾವಳಿಯಲ್ಲಿ (Rules Procedure B-1) ಮೊದಲೇ ಸ್ಪಷ್ಟಪಡಿಸಲಾಗಿತ್ತು. ಇಲ್ಲಿ ಪ್ರಶ್ನೋತ್ತರಗಳೇ ಹೆಚ್ಚು. ದಿಲ್ಲಿ (೧೯೬೮) ಹಾಗೂ ಕ್ಯೂಟೋ (೧೯೭೦)ಗಳ ಅನುಭವ ಇಲ್ಲಿ ಪರಿಪಕ್ವತೆ ತಲುಪಿತ್ತು. ಅಂತೆಯೇ ವಿಭಾಗೀಯ ಚರ್ಚಾಕೂಟಗಳ (Workshops) ವ್ಯವಸ್ಥೆ ಅಗ್ರಪ್ರಾಶಸ್ತ್ಯ ಪಡೆದಿತ್ತು. ಪ್ರಧಾನ ಸಭೆಗೆ ಅವಕಾಶವಿಲ್ಲ. ವಿಭಾಗೀಯ ಉಪಸಭೆಗಳಲ್ಲಿ ಜಾಗತಿಕ ಸಮಸ್ಯೆಗಳೆಲ್ಲ ಚರ್ವಿತಚರ್ವಣವಾಗಿ ಸಿದ್ಧವಾಗುತ್ತಿದ್ದವು. ಅವುಗಳ ನಿರ್ಣಯವನ್ನು ಬಹಿರಂಗ ಸಭೆ ಸ್ವೀಕರಿಸುತ್ತಿತ್ತು. ಇದೇ ಪದ್ಧತಿ ಭಾವನಾಪರ ಭಾಷಣಗಳಿಗೆ, ಗಾಳಿಯಲ್ಲಿ ತೂರುವ ಉಪನ್ಯಾಸಗಳಿಗೆ ಎಷ್ಟೂ ಸ್ಥಾನವಿಲ್ಲ. "ವೇದ ವೇದಾಂತವನ್ನೋದಿ ಜ್ಞಾನ ಸೂರೆಮಾಡುವ ಜಂಗಮ ಕ್ರಿಯಾ ಹೀನವಾದರೆ ಆಗದು ಸಮರಸ"; "ತನ್ನೊಳರಿದನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣೆಭೋ"; "ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ?; "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪದಂತೆ"....ಎಂಬ ಶರಣರ ಸತ್ಯ ಸೆಲೆ ೧೨ ನೆಯ ಶತಮಾನದ ಕೊನೆಯುಲ್ಲಿ ಬತ್ತಿ; ಮತ್ತೆ ಲ್ಯೂವೆನ್ನಿನಲ್ಲಿ ಸೆಲೆಯೊಡೆದಂತೆ ನಮಗೆ ಭಾಸವಾಯಿತು. ಕಲ್ಯಾಣದಲ್ಲಿ ಅನೇಕ ಉಪಸಭೆಗಳಲ್ಲಿ ಶರಣರು ಅಂಶತಃ ಚರ್ಚೆಮಾಡಿದ ವಿಷಯಗಳು; ಅನುಭವಮಂಟಪದಲ್ಲಿ ಪಾಸಾಗುತ್ತಿದ್ದವು. ಇದಕ್ಕೆ ಶೂನ್ಯಸಂಪಾದನೆಯು ಆಧಾರವುಂಟು. ಅದೇ ರೀತಿ ಇಲ್ಲಿಯಾದರೂ ಅನೇಕ "Workshop"ಇಲ್ಲವೆ Commissions"ಗಳಲ್ಲಿ ಚರ್ಚೆಗೊಂಡ ವಿಷಯಗಳು ಅಂತಿಮವಾಗಿ "Plenary Session"ದಲ್ಲಿ ನಿರ್ಣೀತವಾಗುತ್ತಿದ್ದವು. ಕಾಲ–ದೇಶ–ಭಾಷೆ ಬೇರಾದರೂ "ಕಾಯಕತತ್ವ"ದ ನೈಷ್ಠಿಕ ಆಚರಣೆ ಒಂದೇ! ಕ್ಯೂಟೋ ಹಾಗೂ ಲ್ಯೂವೆನ್ ವಿಶ್ವಧರ್ಮಗಳ ಶಾಂತಿ ಸಮ್ಮೇಲನದ ನಿರ್ಮಾಣ ಸಂಪೂರ್ಣ ನಿಂತುದು "Workshop"ಗಳ ಅಸ್ತಿವಾರದ

ಮೇಲೆ. ಮುಂದೆ ಬಹಿರಂಗ ಸಭೆಯಲ್ಲಿ (Plenary Session) ಈ ವಿಧ ವಿಭಾಗೀಯ ಚರ್ಚಾಕೂಟಗಳ (Workshops) ನಿರ್ಣಯಗಳು ಅಂತಿಮವಾಗಿ ನಿರ್ಧಾರಿತವಾಗುತ್ತಿದ್ದವು. ಹೀಗೆ (Workshop)ಗಳ ಉಪ ಸಮಿತಿಗಳ ಚರ್ಚೆಗಳಿಗೆ Plenary Session ಗಳ ಸರ್ವಾನುಮತದ ಮುದ್ರೆ ಬಿದ್ದಾಗಲೇ ಅದು "ವಿಶ್ವಶಾಂತಿ ಸಮ್ಮೇಳನ"ದ ಘೋಷಣೆಯಾಗುತ್ತಿತ್ತು.

## Workshop ಗೆ ಜಗದ್ಗುರುಗಳು ನೀಡಿದ ಸಲಹೆ

ಪೂಜ್ಯ ಜಗದ್ಗುರುಗಳು ೨ನೆಯ ಕ್ರಿಯಾಸಮಿತಿಯ (Workshop) ಮೆಂಬರರಾದುದರಿಂದ; ದಿನಾಂಕ ೨೮ ರಂದು ಮಧ್ಯಾಹ್ನ ಅಲ್ಲಿ "ಹಿಂದುಳಿದ ರಾಷ್ಟ್ರಗಳು ಹಾಗೂ ಶಾಂತಿ" (Underdeveloped Countries and Peace) ಬಗೆಗೆ ಮಾತನಾಡಿದರು. ಅವರ ಮಾತಿನಲ್ಲಿ ಪರಸ್ಪರ ಭಾವೈಕ್ಯ, ಸಹಕಾರ, ಬಾಂಧವ್ಯಗಳೇ ಹಿಂದುಳಿದ ರಾಷ್ಟ್ರಗಳನ್ನು ಮೇಲೆತ್ತುವ ಪೂರಕಗಳು ಎಂಬ ಅಂಶಗಳನ್ನು ಒತ್ತಿ ಹೇಳಿದರು. ಬಡವ ಹಾಗೂ ಶ್ರೀಮಂತರ ಅಂತರ ಉಂಟಾಗುವ ಕಾರಣಗಳನ್ನು ಊಹಿಸಿ ಸಲಹೆಗಳನ್ನು ನೀಡಿದರು. ಮೇಲಿನ ಅಭಿಪ್ರಾಯವುಳ್ಳ ಅವರ ಮಾತಿನ ಸಾರವಾಕ್ಯಗಳು ಹೀಗಿವೆ—

"....ನಾವು ಪರಸ್ಪರ ಸಹಾಯ-ಸಹಕಾರಗಳ ಸಿದ್ಧಾಂತಗಳನ್ನು ಮರೆತು ಬಿಟ್ಟಿದ್ದೇವೆ. ಸಮಗ್ರ ಪೃಥ್ವಿಯೇ ನಮ್ಮ ಮನೆ ಹಾಗೂ ಮಾನವಮಾತ್ರರೆಲ್ಲರೂ ಸಹೋದರ-ಸಹೋದರಿಯರು ಎಂಬ ಮೂಲತತ್ವವನ್ನೇ ನಿರ್ಲಕ್ಷಿಸಿದ್ದೇವೆ....ನೈಸರ್ಗಿಕ ಸಂಪನ್ಮೂಲಗಳಿಗೂ ಮತ್ತು ಜನಸಂಖ್ಯೆಗೂ ಮಧ್ಯಂತರದಲ್ಲಿ ಉಂಟಾದ ಅಸಮತೋಲನದ ಸ್ಥಿತಿಯು ದೇಶವನ್ನು ಬಡತನಕ್ಕಾಗಲಿ-ಸಿರಿತನಕ್ಕಾಗಲಿ ಕೊಂಡೊಯ್ಯುತ್ತಿದೆ. ಜನಸಂಖ್ಯಾ ಸ್ಫೋಟದ ಒತ್ತಡದೆದುರು ನೈಸರ್ಗಿಕ ಸಂಪನ್ಮೂಲಗಳು ಹಿಂದೇಟು ಹಾಕಿದರೆ ರಾಷ್ಟ್ರವು ದಟ್ಟದಾರಿದ್ರ್ಯದಿಂದ ಬಳಲುವದು ಖಂಡಿತ...ಜಾಗತಿಕ ಸಂಯುಕ್ತ ಸಂಸ್ಥೆಯು 'ಜಾಗತಿಕ ಸಂಯುಕ್ತ ರಾಷ್ಟ್ರ'ವಾಗಿ ಪರಿವರ್ತಿತವಾಗಬೇಕು. ಅದು ವಿಶ್ವಾದ್ಯಂತವಿರುವ ಸಂಪನ್ಮೂಲಗಳನ್ನು ಸಮಗ್ರ ವಿಶ್ವೋನ್ನತಿಗಾಗಿ ಪರಿವರ್ತಿಸುತ್ತ; ಸಮಸ್ತ ಮಾನವತೆಯ ಸಾಮಾಜಿಕ ಪುರೋಭಿವೃದ್ಧಿಗೂ ಹಾಗೂ ಜೀವನದ ಸಾಂಪತ್ತಿಕ ಸ್ವಾಸ್ಥ್ಯಕ್ಕೂ ಆದ್ಯ ಗಮನ ನೀಡಬೇಕು. ಇಷ್ಟಾದರೆ ಮಾನವೀಯ ನೆಮ್ಮದಿಯ ಫಲವು ವಿಶ್ವಶಾಂತಿಯ ಕುಸುಮದಿಂದ ಫಲಿಸುತ್ತದೆ...."

ಇಂಗ್ಲಿಷ ಭಾಷಣದ ಇದರ ಮೂಲ ಹೀಗಿದೆ—

"....We have forgotten the principles of mutual help, co-operation. We have forgotten the main principles that

the whole world is the single home and the humanity resides in it as brothers and sisters....The unequilibrium position between the natural resources and the population leads the country towards poverty or richness. If the natural resources are very few comparable to the high population pressure, that country suffers lot due to poverty. The world organisation should turn to the world federation which should aim at the promotion of social progress and better standards of life of the whole humanity, which should exploit the natural resources of the world for the development of the whole world. Then the fruit of the welfare of the humanity comes out of the flower of international peace...."

ಜಗದ್ಗುರುಗಳವರ ವಿಚಾರಗಳನ್ನು ಕೇಳಿಕೊಂಡ ನಂತರ ಅಂದು 'ಧರ್ಮ ಮತ್ತು ಜನಸಂಖ್ಯೆ' (Religion and Population) ಕಮಿಟಿಯಲ್ಲಿ ಜಗದ್ಗುರುಗಳನ್ನು ಭಾರತದ ಪರವಾಗಿ ವಿಶ್ವಸಮಿತಿಯ ಸದಸ್ಯರೆಂದು (ಮೆಂಬರ) ಆಯ್ಕೆಮಾಡಿಕೊಂಡರು.

### "ಲಾ ಲಿಬರಾ ಬೆಲ್ಜಿಕ್" ದಿನಪತ್ರಿಕೆಯಲ್ಲಿ....

ಇದು ಬೆಲ್ಜಿಯಂ ದೇಶದ ಸುಪ್ರಸಿದ್ಧ ದಿನಪತ್ರಿಕೆ. ಜಗದ್ಗುರುಗಳು ಭಾಷಣ ಮಾಡಿದ ಮರುದಿನ; ಈ ಪತ್ರಿಕೆಯ ಮುಖಪುಟದಲ್ಲಿ ಮೂರು ಕಾಲಮಿನಷ್ಟು ಉದ್ದಗಲದ ಅವರ ಫೋಟೊ ಹಾಗೂ ಅಗ್ರ ಶೀರ್ಷಿಕೆಯಲ್ಲಿ ಅವರ ಉಪನ್ಯಾಸದ ಸಂದೇಶ ಮತ್ತು ವಿವರವಾದ ವರದಿ ಬಂದಿದ್ದವು.6

ಈ ಪತ್ರಿಕೆ ಓದಿದವರೆಲ್ಲ ಆ ದಿನ ದಾರಿಯಲ್ಲಿ ಜಗದ್ಗುರುಗಳು ಎಲ್ಲಿಯೇ ಹೋಗಲಿ ಅಲ್ಲಿ ನಿಂತು ನೋಡತೊಡಗಿದರು. ಪ್ರತಿಯಾಗಿ ಸನ್ನಿಧಿಯವರು ಅವರಿಗೆ ಮಂದಹಾಸ ನೀಡಿ ಮುನ್ನಡೆದರು. ಇವರು ತೊಟ್ಟ ಕಾವಿಯ ಬಟ್ಟೆ, ರುದ್ರಾಕ್ಷಿ, ಭಸ್ಮ, ಕಾವಿ ಪೇಟ, ಕಾವಿಯ ಉಣ್ಣೆ ಶಾಲು, ಕಡಾವಿಗೆ, ಬೆತ್ತ ಇವೆಲ್ಲ ಸೂಟುಧಾರಿ ಜನರ ಮಧ್ಯದಲ್ಲಿ ಬಹುಜನಾಕರ್ಷಕವಾಗಿ ತೋರತೊಡಗಿದವು. ನೋಡಿದವರಲ್ಲಿ ಸಹಜ ಕುತೂಹಲದೊಂದಿಗೆ ಗೌರವಾದರಗಳು ಮೂಡುತ್ತಿದ್ದವು.

---

6 "ಲಾ ಲಿಬಿರಾ ಬೆಲ್ಜಿಕ್" [La Libre Belgique] ಪತ್ರಿಕೆಯ ಈ ವರದಿಯ ಫೋಟೊ ಮತ್ತು ಉಪನ್ಯಾಸ ವಿವರದ ಪ್ರತ್ಯಕ್ಷ ಫೋಟೊ ಪ್ರತಿಯನ್ನು "ನಮ್ಮ ವಿದೇಶ ಯಾತ್ರೆ"ಯ ಪುಟ 67 ರಲ್ಲಿ ಗಮನಿಸಬಹುದು.

ಅಂತೂ ಲ್ಯೂವೆನ್ನಿನ ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ ಜಗದ್ಗುರುಗಳಿಗೆ ಜಪಾನದ ಕ್ಯೂಟೋದಂತೆಯೇ ಹಾರ್ದಿಕ ಸ್ವಾಗತ ದೊರೆಯಿತು. ಮರುದಿನವೇ ಬಹಿರಂಗ ಸಭೆ, ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತ ಭಗವಂತನಿಗಾಗಿ ಪ್ರಾರ್ಥಿಸಿದರು.

## ಸುಂದರ ಲೋಕವೇ ಶಾಂತಿಯ ಫಲಶ್ರುತಿ
## ಬಹಿರಂಗ ಸಭೆಯಲ್ಲಿ ಜಗದ್ಗುರುಗಳ ಭಾಷಣ

ದಿನಾಂಕ ೩೦ ಆಗಸ್ಟ, ೧೯೭೪ ರಂದು ಸಾರ್ವತ್ರಿಕ ಶಾಂತಿಸಭೆಯನ್ನು (Plenary Session) ಉದ್ದೇಶಿಸಿ ಉಪನ್ಯಾಸಿಸುವ ವಿಶೇಷ ಅವಕಾಶ ಜಗದ್ಗುರುಗಳಿಗೆ ಲಭ್ಯವಾಯಿತು. ಅಲ್ಲಿ ನೆರೆದ ಸುಮಾರು ೫೦ ರಾಷ್ಟ್ರಗಳ ಪಂಡಿತರು ಇವರನ್ನು ಹಾರ್ದಿಕವಾಗಿ ಆಲಿಸಿದರು. ಪ್ರಶ್ನೆಗಳನ್ನು ಕೇಳಿದರು. ಇವರು ಸೂಕ್ತವಾಗಿ ಉತ್ತರ ನೀಡಿದರು. ಮುದ್ರಿತ ಭಾಷಣದ ಪ್ರತಿಗಳನ್ನು ಎಲ್ಲರಿಗೂ ಹಂಚಿದುದು ಇನ್ನೂ ಅನುಕೂಲವಾಯಿತು. ಇವರ ಭಾಷಣದ ಅಂತಿಮದಲ್ಲಿಯ "ನಮ್ಮ ಪ್ರತಿಜ್ಞೆ" (Our Pledge) ಎಲ್ಲರ ಮೇಲೆ ಪರಿಣಾಮ ಉಂಟುಮಾಡಿತು. ಆ ಉಪನ್ಯಾಸದ ಕೆಲವು ಮಹತ್ವದ ಮಾತುಗಳು ಇಂತಿವೆ—

"....ಇಂದು ಪ್ರಪಂಚದಲ್ಲಿ ಸುತ್ತೆಲ್ಲ ಯುದ್ಧ ಭೀತಿಯ ಭಯವೇ ಹೆಚ್ಚಾಗಿ ಕಾಣುತ್ತಲಿದೆ. ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರವನ್ನು ಹತ್ತಿಕ್ಕಬೇಕು, ಅವರ ಶಕ್ತಿಯನ್ನು ಹೀರಬೇಕು ಎಂಬ ಇದೇ ತಾಮಸೀಯ ಹೊಂಚಿನ ಪ್ರವೃತ್ತಿಯು ಬೆಳೆಯುತ್ತಿರುವಾಗ, ಪ್ರಪಂಚದ ಎಲ್ಲ ರಾಷ್ಟ್ರದ ಧರ್ಮಗುರುಗಳು ಹಾಗೂ ತತ್ವ ಜಿಜ್ಞಾಸುಗಳು ಆಲೋಚನೆ ಮಾಡಿ, ವಿಶ್ವಶಾಂತಿಗೆ ಈ ಪ್ರಪಂಚದಲ್ಲಿ ಹೋರಾಡುವದು ಅತ್ಯಾವಶ್ಯಕ. ಪ್ರಪಂಚದ ತತ್ತ್ವವೇತ್ತರು ಮೇಲಿಂದ ಮೇಲೆ ಹೀಗೆ ಸೇರಿ ಪ್ರಪಂಚಕ್ಕೆ ಧಾರ್ಮಿಕ ಸಂದೇಶವನ್ನು ಬೀರುತ್ತಿದ್ದರೆ, ಪ್ರಪಂಚದಲ್ಲಿ ಹಬ್ಬಿರುವ ಈರ್ಷೆ-ದ್ವೇಷಗಳ ಜ್ವಾಲೆಯು ಸ್ವಲ್ಪಾದರೂ ನಂದೀತು; ಪ್ರಪಂಚಕ್ಕೆ ಶಾಂತಿ ಸಿಕ್ಕೀತು. ಸರ್ವಧರ್ಮಗಳ ಧಾರ್ಮಿಕ ಶಕ್ತಿಯ ಕಿರಣಗಳು ರಾಷ್ಟ್ರ-ರಾಷ್ಟ್ರಗಳ ಮೂಲೆ-ಮೂಲೆಗಳಿಗೂ ಹೋಗಿ, ಪ್ರೋಜ್ವಲಗೊಳಿಸಿ, ತಾಮಸೀಯ ಪ್ರವೃತ್ತಿಯನ್ನು ನಷ್ಟಗೊಳಿಸಲು ಸಹಾಯವಾದೀತು. ಆದ್ದರಿಂದ ಇಂದಿನ ರಾಜಕಾರಣದಲ್ಲಿರುವ ಅನೇಕ ಭಿನ್ನಾಭಿಪ್ರಾಯಗಳು ನಶಿಸಿಹೋಗಬಹುದು. ಅದಕ್ಕಾಗಿ ಪ್ರಪಂಚದ ಧರ್ಮಗುರುಗಳು ಇಂದು ಹಸಿದ ಜಗತ್ತಿಗೆ ಬೇಕಾದ ಸರ್ವತೋಮುಖ ಸುಧಾರಣೆ, ಜಾಗತಿಕ ಶಾಂತಿ ರಕ್ಷಣೆ, ರಾಷ್ಟ್ರ-ರಾಷ್ಟ್ರಗಳ ಸ್ನೇಹ ಸಂವರ್ಧನೆ, ಮಾನವೀಯಮೂಲಭೂತ ಹಕ್ಕುಗಳ ಘೋಷಣೆ, ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ-ಶೈಕ್ಷಣಿಕ-ವೈದ್ಯಕೀಯ ರಂಗಗಳಲ್ಲಿ ಅಂತರ್ರಾಷ್ಟ್ರೀಯ ಸಹಕಾರ ಸಂಪಾದನೆ;

ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ಭಾವನೆ ಪ್ರಪಂಚದ ತುಂಬೆಲ್ಲಾ ಹಬ್ಬುವಂತೆ ಮಾಡಿ, ಲೋಕಕ್ಕೆಲ್ಲ ಸುಂದರವಾಗುವಂತೆ ಕಾರ್ಯರೂಪಕ್ಕೆ ತರುವದೇ ನಮ್ಮ ಕರ್ತವ್ಯ...."

ಇದರ ಇಂಗ್ಲಿಷ ಮೂಲಪಾಠ ಹೀಗಿದೆ—

"....Today the sombre spectre of a probable third world war hovers all over the world. When one nation is waiting for an opportunity to put down another and when such a british attitude prevails everywhere, it is quite essential, nay urgent, that all the religions heads and spiritual seekers of every nation should join together and strive for world peace. If leaders of thought and seekers after truth assemble (as we have done now) frequently and propagate the message of religion, the flames of hatred and rivalry, spite and jealousy which have stretched over the world, might be extinguished at least partially and to that limited extent the world will have peace, the rays of spirit might reach even nook and corner of the world illumine the drakest spot, ignorance and inertia, which might iron out the difference that persist in the political field and supply solutions to many a knotty problem confronting the political leaders of the world. Therefore, it is our primary duty as religious heads to work for an all-sided improvement in the living conditions of men, to guard world peace, to promote friendship and understanding between nations, to safeguard the fundamental rights of many to create a climate of international co-operation in the economic, social, cultural, educational and medical spheres, above all, to spread the spirit of religion the world over and make the world a healthy home for all to dwell in happily."[7]

**ಜಾಗತಿಕ ಮಂಚದ ಮೇಲೆ ಕನ್ನಡಿಗನ ಕೊಡುಗೆ:**
**"Hearts Blossoms" ಬಿಡುಗಡೆ ಹಾಗೂ ಉಡುಗೊರೆ**

ಲ್ಯೂವನ್ನಿನ ಅಂತರ್ರಾಷ್ಟ್ರೀಯ ವಿಶ್ವಶಾಂತಿ ಸಮ್ಮೇಲನದ ವೇದಿಕೆಯ ಮೇಲೆ; ದಿನಾಂಕ ೩೧–೮–೧೯೭೪ ರಂದು ಸಂಜೆ; ಪೂಜ್ಯ ಜಗದ್ಗುರುಗಳ ಗ್ರಂಥ

7 ನಮ್ಮ ವಿದೇಶ ಯಾತ್ರೆ: ಪುಟ–89, 90, 91

"Hearts Blossoms"ದ ಬಿಡುಗಡೆಯು ಸಮಾರಂಭವು ನೆರವೇರಿತು. ಸುಮಾರು ಇಪ್ಪತ್ತು ರಾಷ್ಟ್ರಗಳ ಮುಖಂಡರ ಎದುರು ಡಾ॥ ಹೋಮರ್ ಎ. ಜಾಕ್ ಅವರು ಬಿಡುಗಡೆ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು WCRPಯ ವೈಸ್ ಪ್ರೆಸಿಡೆಂಟರಾದ ಅಮೇರಿಕೆಯ ಡಾ॥ ಡಾನಾ ಮ್ಯಾಕ್ಲೀನ್ ಗ್ರೀಲೆ (Dr. Dana McLean Greeley) ಅವರು ವಹಿಸಿದ್ದರು. ಇದೊಂದು ರಂಗುರಂಗಾದ ರೋಚಕ ಸಮಾರಂಭ. ಪ್ರಾರಂಭದಲ್ಲಿ ಪ್ರೊ. ಎ. ಎಲ್. ಹಿರೇಮಠರು ಜಗದ್ಗುರುಗಳ ಪರಿಚಯವನ್ನು ಮಾಡಿದರು.

"Hearts Blossoms"ದಲ್ಲಿ ಹೆಚ್ಚಾಗಿ ಜೀವನದ ಅನುಭವಗಳೇ ಶಬ್ದ ರೂಪ ತೊಟ್ಟಿವೆ. ಸಾಧಕ ಜೀವನದಲ್ಲಿ ಆಗುವ ಕಷ್ಟ-ಸುಖಗಳ ಹೊಯ್ದಾಟ ಇಲ್ಲಿ ಕಾಣುತ್ತೇವೆ. ಜಗದ್ಗುರುಗಳು ಮೊದಲು ಶಿವಯೋಗಮಂದಿರದ ವಟುವಾಗಿದ್ದಾಗ, ನಂತರ ಕಾಶಿಯಲ್ಲಿರುವಾಗ ಬರೆದ ಸಾಹಿತ್ಯ ಸ್ನೇಹ ಮುಗ್ಧವಾಗಿದೆ; ದಗ್ಧವಾಗಿಲ್ಲ. ಪೀಠಾರೋಹಣೋತ್ತರ ಸಾಹಿತ್ಯ ಸೃಷ್ಟಿಯಲ್ಲಿ ಸಂಕೀರ್ಣ ಪ್ರಜ್ಞೆ ಕಾರ್ಯಮಾಡಿದೆ. ಇಲ್ಲಿ ಸಾಹಿತ್ಯ ಚಿಂತನ ಏಮ್ಮುಖವಾಗಿಲ್ಲ; ಸಹಸ್ರಮುಖವಾಗಿದೆ. ಜಗದ್ಗುರುವಾದ ಮೇಲೆ ಬಾಹ್ಯರಂಗದ ಕರ್ಮಯೋಗ ಕಟ್ಟಿಹಾಕಿತು. ಸಿದ್ಧರಾಮನ ಕಾಯಕ ಸಿದ್ಧರಾಮನನ್ನೂ ಮೀರಿಸಿ ಮುನ್ನಡೆಯಿತು! ಶಾಲೆ, ಕಾಲೇಜು, ಪತ್ರಿಕೆ, ದವಾಖಾನೆ, ಅನೇಕ ಧಾರ್ಮಿಕ ವಿದ್ಯಾಲಯಗಳು, ರಿಸರ್ಚ್ ಇನ್‌ಸ್ಟಿಟ್ಯೂಟ್, ಗ್ರಂಥ ಮುದ್ರಣ, ಪಟ್ಟಣದ ತಾಪತ್ರಯಗಳು, ಅನೇಕ ಅನೂಹ್ಯ ಸಮಸ್ಯೆಗಳು ಇವರನ್ನು ಮುತ್ತಿಗೆ ಹಾಕಿದವು. ಆ ನೊಂದ ಬೆಂದ ಭಾವದ ಅಂಗಳದಲ್ಲಿ "ಚಿತ್ಸುಮನ" ತೂರಿಬಂತು. ಜಗದ್ಗುರುಗಳು ಕನ್ನಡದಲ್ಲಿ ಬರೆದ 'ಚಿತ್ಸುಮನ'ದ ಇಂಗ್ಲಿಷ ಅನುವಾದವನ್ನು ಮಾಡಿದ ಪ್ರೊ. ಅರ್‌ಮೆಂಡೊ ಮೆನೆಝಿಸ್ ಹಾಗೂ ಎಸ್. ಎಮ್. ಅಂಗಡಿ ಅವರನ್ನು ಜಗದ್ಗುರುಗಳು ಸ್ಮರಿಸುತ್ತಾರೆ. ಇಲ್ಲಿಯ ಭಾಷಾಂತರ ತಿಳಿಯಾಗಿದೆ ಮತ್ತು ಸ್ಫುಟವಾಗಿದೆ. ವಿಶ್ವಶಾಂತಿ ಸಮ್ಮೇಲನದಲ್ಲಿ ಈ ಗ್ರಂಥದ ಬಿಡುಗಡೆಯ ಕಾಲದಲ್ಲಿ ಸನ್ನಿಧಿಯವರು ಎಲ್ಲರನ್ನು ಅಭಿನಂದಿಸುತ್ತ ಹೇಳಿದ ನುಡಿಗಳಿವು—

"This, a small collection of my compositions, entitled 'Heart's Blossoms' is released just now. It has given me great pleasure. This collection mostly reveals my experiences in life. You may find in it reflected pains and joys. I have undergone in my life as a seeker or an aspirant. During my student days and thereafter I was much absorbed in writing and reading literature. But recently, since I ascended the pontifical seat of Murusavir-

math, I have been compelled to take interest in the activities pertaining to the development of educational institutions, research institutes, medical centres and hospitals which naturally blocked my literary persuits. None the less, I believe, social work of the nature of the one that I have been doing all these days will be congenial to the growth of literary genius. The feelings evoked by the swet of one's brow, when they find honest expression, will blossom into literary compositions."

"It has been my long felt desire to lend English garb to my thoughts and writings and present in countries outside India. I am glad it is materialised now."[8]

ಈ ಕೃತಿಯ ಬಗ್ಗೆ ಡಾ॥ ಹೋಮರ್ ಎ. ಜಾಕ್ ಹಾಗೂ ಡಾ॥ ಡಾನಾ ಮ್ಯಾಕ್ಲೀನ್ ಗ್ರೀಲೆ ಅವರು ಹಾರ್ದಿಕವಾಗಿ ಮಾತನಾಡಿದರು ಮಾತ್ರವಲ್ಲ; ಡಾ॥ ಗ್ರೀಲೆ ಅವರು ಈ ಗ್ರಂಥದ ಬಗ್ಗೆ ಲಿಖಿತದಲ್ಲಿ ನೀಡಿದ ಅಭಿಪ್ರಾಯ ಇಂತಿದೆ.

"A very beautiful and inspiring book with real spiritual sensitivity is the new volume titled 'Hearts Blossoms' "

ಈ ಸಮಾರಂಭಕ್ಕೆ ಆಗಮಿಸಿದ ಕರಾಚಿ ವಿಶ್ವವಿದ್ಯಾಲಯದ ಉಪಕುಲಪತಿ 'ಮೊಹಮ್ಮದ ಹುಸೇನ' ಅವರು ನೀಡಿದ ಲಿಖಿತ ಅಭಿಪ್ರಾಯ ಕೆಳಗಿನಂತಿದೆ—

"In the name of Allah; I have read with great interest the collection of poems of Srimanmaharaj Niranjana Jagadguru Gangadhara Rajayogeendra Mahaswamiji of Moorusavirmath in English translation entitled 'Heart's Blossom's. I found in this beautiful book not only sweet specimen of excellent poetry but also many a word of wisdom which could only come from a person who could give deep thought to problems of life and morality"[9]

---

8 ನಮ್ಮ ವಿದೇಶ ಯಾತ್ರೆ: ಪುಟ–92, 93
9 ನಮ್ಮ ವಿದೇಶ ಯಾತ್ರೆ, ಪುಟ–93, 94

Mohamud Husain, Ph.D. Hong, D.Lit
Vice-chancellor,
University of Karachi

ಇದೇ ಸಮಾರಂಭದಲ್ಲಿ ಹುಬ್ಬಳ್ಳಿಯಿಂದ ಒಯ್ದಿದ್ದರುವ "Thus Spoke Basava" ಇಂಗ್ಲಿಷ ಪುಸ್ತಕಗಳನ್ನು ಎಲ್ಲರಿಗೂ ವಿತರಣೆ ಮಾಡಿದರು. ಅಲ್ಲಿಯ ಸದಸ್ಯರೆಲ್ಲರೂ ಅದನ್ನು ತುಂಬಾ ಉತ್ಸುಕತೆಯಿಂದ ತೆಗೆದುಕೊಂಡು ಮೆಚ್ಚುಗೆ ಸೂಚಿಸಿದರು.

## "ಕೇಂದ್ರೀಯ ಆರ್ಥಿಕ ಸಮಿತಿ"ಗೆ ಆಯ್ಕೆ

ಒಂದು ವಾರದ ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತು ದಿನಾಂಕ ೩, ಸೆಪ್ಟಂಬರ ೧೯೭೪ ರಂದು ಅಪರಾಹ್ನದ ಸಾರ್ವತ್ರಿಕ ಸಭಾಂಗಣದಲ್ಲಿ ಮಹಾ ಮಂಗಳವಾಯಿತು. ಇದರಲ್ಲಿ ಒಂದು ವಾರದ ಉಪಸಭೆಗಳ ಗೊತ್ತುವಳಿಗಳು ಸ್ವೀಕೃತವಾದವು. ಇದೇ ಸಭೆಯಲ್ಲಿ ಪೂಜ್ಯ ಜಗದ್ಗುರುಗಳನ್ನು ವಿಶ್ವಧರ್ಮಗಳ ಅಂತರ್ರಾಷ್ಟ್ರೀಯ ಶಾಂತಿ ಸಮ್ಮೇಳನದ ಸಂಸ್ಥೆಯ "ಸೆಂಟ್ರಲ್ ಫಾಯನಾನ್ಸ ಕಮಿಟಿ"ಗೆ ಮೆಂಬರ ಎಂದು ಆಯ್ಕೆಮಾಡಿಕೊಂಡರು. ಇದಕ್ಕೆ ಅಮೇರಿಕೆಯ ಡಾ|| ಗ್ರೀಲೆ ಹಾಗೂ ಭಾರತದ ರಂಗನಾಥ ದಿವಾಕರ ಅವರ ಒತ್ತಾಯವೇ ಕಾರಣ. ಅಂತೂ ಪೂಜ್ಯರು ಮನವಿಲ್ಲದೇ ಮಹಾಪರಿಷತ್ತಿಗೆ ಹೋದರೂ ಅದರ ಆರ್ಥಿಕ ಆಡಳಿತದ ಜವಾಬ್ದಾರಿ ಅವರ ಕೊರಳಿಗೇ ಬಿತ್ತು!

ಈ ಸಭೆಯಲ್ಲಿ WCRPಯ ಚೇರಮನ್ನರಾದ ಆರ್ಚಬಿಶಪ್ ಆಂಗ್ಲೋ ಫರ್ನಾಂಡೀಸ್ ಅವರು ತಮ್ಮ ಸಂದೇಶವಾಚನದಲ್ಲಿ; ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ಜರುಗಿದ ಭಾರತೀಯಮಟ್ಟದ ಶಾಂತಿ ಪರಿಷತ್ತನ್ನು ಮನಸಾರೆ ಕೊಂಡಾಡಿದರು.

ಲ್ಯೂವೆನ್ನಿನ WCRP II ದಲ್ಲಿ ಮಹಾಸನ್ನಿಧಿಯವರ ಗಮನವನ್ನು ಹೆಚ್ಚು ಆಕರ್ಷಿಸಿದ ವ್ಯಕ್ತಿಗಳೆಂದರೆ-ಡಾ. ಹೋಮರ್ ಎ. ಜಾಕ್ (ಜನರಲ್ ಸೆಕ್ರೆಟರಿ), ಆರ್ಚ ಬಿಶಪ್ ಆಂಗ್ಲೋ ಫರ್ನಾಂಡೀಸ್ (ಚೇರಮನ್), ಡಾ. ಡಾನಾ ಮ್ಯಾಕ್‌ಲೀನ್ ಗ್ರೀಲೆ (ವ್ಹಾಯಿಸ್ ಚೇರಮನ್), ಪ್ರೊ. ಮಹಮ್ಮದ ಹುಸೇನ (ವ್ಹಾಯಿಸ್ ಚಾನ್ಸಲರ್: ಕರಾಚಿ ವಿಶ್ವವಿದ್ಯಾಲಯ), ಆರ್. ಆರ್. ದಿವಾಕರ (ವ್ಹಾಯಿಸ್ ಚೇರಮನ್), ಡಾ. ಮರಿಯಾ ಎ. ಲಸ್ಕರ್ (ವ್ಹಾಯಿಸ್ ಚೇರಮನ್: ಜಪಾನ), ಪ್ರೊ. ಯೋಶಿಕಿ ಲಿಸಾಕಾ (ಚೇರಮನ್: ಪ್ರೊಗ್ರಾಮ್ ಕಮೀಟಿ: ಜಪಾನ), ಡಾ. ಎ. ಎನ್. ಉಪಾಧ್ಯಾಯ, ಡಾ. ಶ್ರೀನಿವಾಸ ಐಯ್ಯಂಗಾರ ಮುಂತಾದವರು. ಇವರೆಲ್ಲ ಜಗದ್ಗುರು ಮೂರುಸಾವಿರಮಠದ ಪೀಠದ ಘನತೆ

ಗೌರವಗಳಿಗೆ ಸರಿಯಾಗಿ ನಡೆದುಕೊಂಡರು. ಇದರಿಂದ ಜಗದ್ಗುರುಗಳು ಸಂತೋಷ ವ್ಯಕ್ತಪಡಿಸಿದ್ದಾರೆ.

## ಹಿಟ್ಲರನ ಘೋರ ಹತ್ಯಾಕಾಂಡ

ಜಗದ್ಗುರುಗಳು ಈ ಮಧ್ಯ ದಿನಾಂಕ ೨ರಂದು ಎರಡನೆಯ ಮಹಾಯುದ್ಧದಲ್ಲಿ ಹಿಟ್ಲರನ ಹತ್ಯಾಕಾಂಡ ನಡೆದ ಬ್ರಿಂಡಾಂಕ್(Breendonk) ನೋಡಿಬಂದರು. WCRPಯ ವಿಶೇಷ ವಾಹನದಲ್ಲಿ ಅವರನ್ನು ಕರೆದೊಯ್ದಿದ್ದರು. ಇದೊಂದೇ ಸ್ಥಾನದಲ್ಲಿ ಹಿಟ್ಲರ ೬೦,೦೦೦ ಜನರನ್ನು ಕೊಲ್ಲಿಸಿದನಂತೆ. ಹಿಟ್ಲರನಿಂದ ನಡೆದ ರಾಕ್ಷಸೀಪ್ರವೃತ್ತಿಯ ಮಾರಣಹಬ್ಬ ನಡೆದುದು ಇಲ್ಲಿಯೇ. ಆ ಕರಾಳ ಭೀಕರ ಹತ್ಯಾಕಾಂಡದಲ್ಲಿ ಸಿಕ್ಕು; ಅದು ಹೇಗೋ ಪಾರಾದ ೭೫ ವರ್ಷ ವಯಸ್ಸಿನ ವೃದ್ಧನೊಬ್ಬ ಇಲ್ಲಿಯ ಹತ್ಯಾಕಾಂಡದ ಕಥೆಯನ್ನು ಇವರಿಗೆ ವಿವರಿಸಿ ಕಣ್ಣೀರುಗರೆದ. ಹಿಟ್ಲರ್‌ನ ಸೇನೆ ಎರಡುಸಲ ಸಮಗ್ರ ಬೆಲ್ಜಿಯಂ ದೇಶವನ್ನು ಸುಟ್ಟು ಬೂದಿ ಮಾಡಿತು. ಪೂಜ್ಯ ಜಗದ್ಗುರುಗಳು ಅಲ್ಲಿ ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸಿ ವಿಶ್ವಶಾಂತಿಗಾಗಿ ಹಾರೈಸಿದರು. ಅಲ್ಲಿಂದ ಮರಳಿ ಬರುವಾಗ ಬೆಲ್ಜಿಯಮ್ಮಿನ ರಾಜಧಾನಿ ಬ್ರುಸೆಲ್ಸ್ (Brussels), ಹುತಾತ್ಮರ ಗೋಪುರ (Tower of the Unknown soldier), ಅರಮನೆ (The Royal Palace), ಅಂತರ್ರಾಷ್ಟ್ರೀಯ ವಾಣಿಜ್ಯ ಕೇಂದ್ರ (International Commercial Centre), ಲಾ ಬಾಸಿಲಿಕ್ (La Basilique), ಪುರಾತನ ಚರ್ಚ್, ಗ್ರ್ಯಾಂಡ್‌ಸ್ಕ್ವೆಯರ್ ಮುಂತಾದುವನ್ನು ಸಂದರ್ಶಿಸಿದರು. ಯುದ್ಧಗಳಿಂದ ಕಂಗೆಟ್ಟ ಈ ಜನಗಳ ಮುಖದಲ್ಲಿ ಚಿಂತೆಯಿಲ್ಲ. ಗುಲಾಬಿ ಹೂವಿನ ಪ್ರಸನ್ನ ನಗೆ. ಸಹಜ ಸ್ವಾಭಿಮಾನ. ನೈಜ ದೇಶಾಭಿಮಾನ. ಪ್ರತ್ಯಕ್ಷ ಪ್ರಾಮಾಣಿಕತೆ. ಜಗದ್ಗುರುಗಳು ಈ ನೆಲ–ನಾಡು–ನುಡಿ–ಸಂಸ್ಕೃತಿ–ಸ್ವಭಾವಗಳನ್ನು ತುಂಬಾ ಮೆಚ್ಚಿಕೊಂಡರು.

## ಇಂಗ್ಲೆಂಡಿನಲ್ಲಿ ಐದು ದಿನ

ಬ್ರುಸೆಲ್ಸ್‌ದಿಂದ ಲಂಡನ್ನಿಗೆ ಕೇವಲ ನಾಲ್ವತ್ತೈದು ನಿಮಿಷಗಳ ವಿಮಾನ ದಾರಿ. ಬೆಳಗಾವಿಯಿಂದ ಮುಂಬೈಗೆ ಹೋದಷ್ಟು ಹತ್ತಿರ. ಅಷ್ಟರಲ್ಲೇ ಉತ್ತರ ಸಮುದ್ರ (North Sea) ದಾಟಲಾಗುತ್ತದೆ.

ದಿ. ೪, ಸಪ್ಟಂಬರ ೧೯೭೪, ಸಂಜೆ ಡಾ. ದಿವಾಕರ ಮತ್ತು ಪ್ರೊ. ಎ.ಎಲ್. ಹಿರೇಮಠರೊಂದಿಗೆ ಲಂಡನ್ನಿನ ಹ್ಯಾಥ್ರೋ ಏರ್‌ಪೋರ್ಟಿನಲ್ಲಿಳಿದರು. ಜಗದ್ಗುರುಗಳ ಆಪ್ತಕಾರ್ಯದರ್ಶಿಗಳಾದ ಹಿರೇಮಠರ ಅಳಿಯಂದಿರಾದ ಡಾ. ಸಚ್ಚಿದಾನಂದ ಮೂರ್ತಿ ಮತ್ತು ಅವರ ಧರ್ಮಪತ್ನಿ ಸೌ.ಶೋಭಾ (ಹಿರೇಮಠರ ಹಿರಿಯ ಮಗಳು), ಡಾ. ಮುನಿಶಂಕರ, ಅವರ ಪತ್ನಿ, ಮೇಜರ್ ರಾಮಚಂದ್ರನ್ ಸ್ವಾಗತಿಸಿ

ದರು. ಲಂಡನ್ನಿನ ಕೊರೆಯುವ ಚಳಿ ಎಲ್ಲಕ್ಕಿಂತ ಮೊದಲು ಬರಮಾಡಿಕೊಂಡಿತು. ನೇರವಾಗಿ ಡಾ. ಮೂರ್ತಿ ಅವರ ಮನೆಯಲ್ಲಿ ಸ್ನಾನ–ಪೂಜೆ–ಪ್ರಸಾದವಾಯಿತು. ಆತ್ಮೀಯ ವಾತಾವರಣದಲ್ಲಿ ವಿಶ್ರಾಂತಿ ಸಿಕ್ಕಿತು. ಡಾ. ಮೂರ್ತಿಯವರು ಕರ್ನಾಟಕದ ಹಿರಿಯೂರವರು, ತಜ್ಞವೈದ್ಯರು. ಅವರಿಗೆ ಅವರ ಗುಣರೂಪಗಳಿಗೆ ತಕ್ಕ ಮಡದಿ; ಜಗದ್ಗುರುಗಳ ಆಪ್ತಕಾರ್ಯದರ್ಶಿ ಪ್ರೊ. ಎ.ಎಲ್.ಹಿರೇಮಠರ ಮಗಳು ಸೌ.ಶೋಭಾ. ಇವರ ಮನೆಗೆ ಬಂದಾಗ ಕನ್ನಡನಾಡಿನ ಭಕ್ತರ ಮನೆಗೇ ಬಂದಂತೆ ಆನಂದ. ಬ್ರುಸೆಲ್ಸಿನಲ್ಲಿ ಎಲ್ಲ ಪ್ರತಿನಿಧಿಗಳು ಕಾಫಿ ಹೌಸಿಗೆ ಹೋಗು ತ್ತಿದ್ದರು. ಅವರೆಲ್ಲರಿಗೂ ಅಲ್ಲಿ ವೆಗ್ಗಳವಾಗಿ ಭೋಜನ ಸಿಗುತ್ತಿತ್ತು. ಜಗದ್ಗುರು ಗಳು ಅಲ್ಲಿ ಕೇವಲ ಹಾಲು–ಹಣ್ಣಿನ ಮೇಲೆ ಅರ್ಪಿತ ಮುಗಿಸುತ್ತಿದ್ದರು. ಡಾ. ಮೂರ್ತಿಯವರ ಮನೆಯಲ್ಲಿ ಕರ್ನಾಟಕದ ಊಟ ದೊರೆಯಿತು. ದೇಶಕ್ಕೂ, ಮನಕ್ಕೂ ವಿಶ್ರಾಂತಿ ಸಿಕ್ಕಿತು. ಮರುದಿನ ದಿ. ೫ರಂದು ಡಾ|| ಮೂರ್ತಿಯವರು ಪೂಜ್ಯ ಜಗದ್ಗುರುಗಳನ್ನು, ರಂಗನಾಥ ದಿವಾಕರರನ್ನು, ಹಿರೇಮಠರನ್ನು ಕರೆದು ಕೊಂಡು ಲಂಡನ್ ನಗರ ತೋರಿಸಲು ಒಯ್ದರು.

"ಲಂಡನ್ ಕಣ್ಣಿಗೆ ಹಬ್ಬ. ಬಣ್ಣಮಯ ಚಲುವು. ಪಟ್ಟಣದಲ್ಲೂ ಮೋಹಕ ಪ್ರಕೃತಿ. ರಾಜಠೀವಿಯ ಸೌಂದರ್ಯ. ಎಲ್ಲೆಲ್ಲೂ ಶ್ರೀಮಂತಿಕೆ ಸಹಜವಾಗಿದೆ. ಬ್ರುಸೆಲ್ಸ್ ನೋಡಿ ಮುಂಬೈ ಮರೆತಿದ್ದೆವು. ಈಗ ಲಂಡನ್ ನೋಡಿ ಬ್ರುಸೆಲ್ಸ್ ಮರೆತೆವು. 'ಸೂರ್ಯ ಮುಳುಗದ ದೇಶ!', 'ಆಳುವದಕ್ಕಾಗಿಯೇ ಹುಟ್ಟಿ ಬಂದ ದೇಶ' ಎಂದು ಕರೆಸಿಕೊಂಡ ಈ ದೇಶದ ಕಟ್ಟಡಗಳಲ್ಲೂ ರಾಜಠೀವಿ ರಾರಾಜಿಸು ತ್ತಿದೆ....ಸದಾ ಹಸನ್ಮುಖತೆ, ಶೌರ್ಯ, ಅಪರಿಮಿತ ಆಶೋತ್ತರ, ಸಾಹಸೀ ಮನೋಭಾವ, ಸೌಂದರ್ಯ ಎಲ್ಲವೂ ಭಾರತೀಯರ ಸೂಕ್ಷ್ಮ ದೃಷ್ಟಿಯ ಕಣ್ಣು ಗಳಿಗೆ ಎದ್ದುಕಾಣುವ ಪ್ರಮುಖ ಲಕ್ಷಣಗಳು."10

ಡಾ|| ಮೂರ್ತಿಯವರ ನೆರವಿನೊಂದಿಗೆ ಅಲ್ಲಿಯ ಥೇಮ್ಸ ನದಿ (River Thames), ಸೇಂಟ ಪಾಲ್ ಕೆಥೆಡ್ರೆಲ್ (St. Paul's Kathedral), ಟ್ರ್ಯಾಫಲ್‌ಗರ್ ಸ್ಕ್ವೇರ್ (Trafalgar Square), ನೆಲ್ಸನ್ ವಿಜಯಸ್ತಂಭ (Nelson Column), ಬಕಿಂಗ್‌ಹ್ಯಾಮ್ ಅರಮನೆ (Buckingham Palace), ದಿ. ಟಾವರ್ ಆಫ್ ಲಂಡನ್ (The Tower of London), ವೆಸ್ಟ ಮಿನಿಸ್ಟರ್ ಅಬೆ (West Minister Abbey), ಹಳೆಯ ಗೋಪುರ ಗಡಿಯಾರ ಬಿಗ್ ಬೆನ್ (Big Ben), ಹೈಡ ಹೂದೋಟ (Hyde Park), ಸೇಂಟ ಜೇಮ್ಸ್ ಪಾರ್ಕ, ಕೆನ್‌ಸಿಂಗ್ಟನ್ ಗಾರ್ಡನ್, ರಿಚ್‌ಮಂಡ್ ಪಾರ್ಕ ಮುಂತಾದುವನ್ನು ಸಂದರ್ಶಿಸಿದರು. ಇವುಗಳಲ್ಲಿ ಮುಖ್ಯವಾಗಿ ಜಗದ್ಗುರುಗಳಿಗೆ

10 ನಮ್ಮ ವಿದೇಶ ಯಾತ್ರೆ: ಪುಟ–98

ಸೇಂಟ ಪಾಲ್ ಕೆಥೆಡ್ರೆಲ್ (St. Paul's Kathedral) ಇದರ ವಾಸ್ತುಶಿಲ್ಪ ಜೋಡಣೆ, ಐತಿಹಾಸಿಕ ಭಿತ್ತಿ ಚಿತ್ರಗಳು, ಬಂಗಾರ ಬಣ್ಣದ ಭವ್ಯ ಕಮಾನುಗಳು, ಗಾಜಿನ ಕಿಟಕಿಗಳ ಸ್ವರ್ಗೀಯ ಸಂಯೋಜನೆ, ಅವರ್ಣನೀಯ ಬೈಬಲ್ ಚಿತ್ರಗಳು ತುಂಬಾ ಮನಸ್ಸಿಗೆ ಬಂದವು. 'ದಿ ಲೈಟ ಆಫ್ ದಿ ವರ್ಲ್ಡ್' ಚಿತ್ರದಲ್ಲಿ ಯೇಸುವು ಕೈಯಲ್ಲಿ ದೀಪವೊಂದನ್ನು ಹಿಡಿದು, ಒಬ್ಬ ಭಕ್ತನ ಮುಚ್ಚಿದ ಬಾಗಿಲು ಬಡಿದು, ತೆರೆಯಲು ಹೇಳುತ್ತಿದ್ದಾನೆ. ಚಿತ್ರದ ಕೆಳಗೆ-"Be hold I stand at the door and knock. If any man hear my voice and open the door, I will come in to him" ಎಂಬ ವಾಕ್ಯಗಳುಂಟು. ಈ ಚಿತ್ರದಲ್ಲಿ ಯೇಸುವಿನ ದೈವೀ ಮುಖಭಾವ, ಆತ್ಮಪ್ರಭೆ, ಕಂದೀಲಿನ ಪ್ರಕಾಶ ಕಲಾವಂತಿಕೆಯಿಂದ ಕಂಗೊಳಿಸುವದನ್ನು ಕಂಡು ಜಗದ್ಗುರುಗಳು ಮೂಕವಿಸ್ಮಿತ ರಾದರು. ಅವರೂ ಶಿವಯೋಗಮಂದಿರದಲ್ಲಿ ಬಾಲ ಕಲಾವಿದರಿದ್ದುದರಿಂದ ಈ ಮಹಾನ್ ಚರ್ಚಿನ ಭಿತ್ತಿ ಚಿತ್ರಗಳನ್ನು ಮನಸಾರೆ ಮೆಚ್ಚಿಕೊಂಡರು.

ದಿನಾಂಕ ೬ ರಂದು ಸೌಥ್ ಹ್ಯಾಂಪ್ಟನ್ನಿನ "ವೈದಿಕ ಸೊಸೈಟಿ"ಯಲ್ಲಿ ಪೂಜ್ಯ ಜಗದ್ಗುರುಗಳ ಹಾಗೂ ರಂಗನಾಥ ದಿವಾಕರ ಅವರ ಉದ್ಬೋಧಕ ಉಪನ್ಯಾಸಗಳಾದವು. ಭಾರತೀಯ ವಿದ್ಯಾಭವನದ ರಜಿಸ್ಟ್ರಾರರಾದ ಮತ್ತೂರ ಕೃಷ್ಣಮೂರ್ತಿ ಸ್ವಾಗತಿಸಿದರು. ಭಾರತದ ಉಪನಿಷತ್ತುಗಳು, ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯಗಳ ಸಂರಕ್ಷಣೆ ಇಲ್ಲಿ ಸಮರ್ಪಕವಾಗಿ ನಡೆದುದು ಕಂಡುಬಂದಿತು. ವಿಶ್ವಶಾಂತಿ ಸಮ್ಮೇಲನದ ಸಂದೇಶಗಳನ್ನು ಕುರಿತಾಗಿ ಸನ್ನಿಧಿಯವರು ಉಪನ್ಯಾಸಿಸಿದರು.

ದಿ. ೮ ರಂದು ಡಾ|| ಮೂರ್ತಿಯವರು ಆಕ್ಸಫರ್ಡ (Oxford) ವಿಶ್ವ ವಿದ್ಯಾಲಯ ಹಾಗೂ ಶೇಕ್ಸಪೀಯರನ ಜನ್ಮಭೂಮಿ ಸ್ಟ್ರ್ಯಾಟ್‌ಫರ್ಡ್ ತೋರಿಸಿ ದರು. ವಿಶ್ವವಿಖ್ಯಾತ ವಿಶ್ವವಿದ್ಯಾಲಯವೊಂದು ತೀರಾ ಹಳೆಯ ಸಾದಾ ಕಟ್ಟಡ ಗಳಲ್ಲಿರುವದು ಜಗದ್ಗುರುಗಳಿಗೆ ತುಂಬ ಮೆಚ್ಚುಗೆಯಾಯಿತು. ಸ್ಟ್ರ್ಯಾಟ್‌ಫರ್ಡಿನಲ್ಲಿ ಶೇಕ್ಸಪೀಯರ ಕವಿಯ ಪರಿಸರ-ಮನೆ-ಅಂಗಡಿ-ನಾಟಕ ಥೇಟರುಗಳನ್ನು ನೋಡಿದ ಮೇಲಂತೂ ತುಂಬಾ ಭಾವಸಮಾಧಿಯನ್ನು ಅನುಭವಿಸಿದರು. ಅವರ ಮಾತಿ ನಲ್ಲಿಯೇ ಕೇಳಿರಿ:

"ಶೇಕ್ಸಪೀಯರನ ಜನ್ಮ ಸ್ಥಾನವನ್ನು ಕಂಡು ಮಂತ್ರಮುಗ್ಧರಾದೆವು. ಅದೊಂದು ಚಿಕ್ಕ ಹಳ್ಳಿ. ಬಹಳ ಸುಂದರವಾಗಿದೆ....ಶೇಕ್ಸಪೀಯರನ ಹೆಸರಿನಿಂದ ಒಂದು ಸಂಸ್ಥೆಯು ಹುಟ್ಟಿ, ಅದರ ವತಿಯಿಂದ ಶೇಕ್ಸಪೀಯರನ ಸಾಹಿತ್ಯಗಳನ್ನು ಸಂಗ್ರಹಿಸಿಟ್ಟು, ಮಹಾಕವಿಯ ಕೀರ್ತಿಯು ನಿರಂತರ ಉಳಿಯುವಂತೆ ಮಾಡಿದ್ದಾರೆ. ಆತನ ಹಾಗೂ ಆತನ ಹೆಂಡತಿಯ ಸಮಾಧಿಯೂ ಅಲ್ಲಿರುತ್ತವೆ. ಶೇಕ್ಸಪೀಯರನ

ಮಗಳ ಮನೆ, ಮಹಾಕವಿಯು ಉಪಯೋಗಿಸುವ ಮೇಜು ಮುಂತಾದ ವಸ್ತುಗಳನ್ನು ಸಂಗ್ರಹಿಸಿಟ್ಟಿದ್ದಾರೆ....ಶೇಕ್ಸಪೀಯರನ ಮನೆಯ ಅಡಿಗಲ್ಲಿನ ಕಲ್ಲುಗಳನ್ನು ಕೂಡ ಎಚ್ಚರಿಕೆಯಿಂದ ಸಂರಕ್ಷಿಸಿದ್ದಾರೆ. ರಾಷ್ಟ್ರ ಕವಿಗಳಿಗೆ ಅವರು ತೋರುವ ಮನ್ನಣೆ, ಸನ್ಮಾನ ಅಗಾಧವಾದುದು. ನಮ್ಮ ಪಂಪ, ಕುಮಾರವ್ಯಾಸ, ರನ್ನ, ಹರಿಹರ, ರಾಘವಾಂಕ, ಬಸವ, ಅಕ್ಕಮಹಾದೇವಿ, ಷಡಕ್ಷರಿ, ನಿಜಗುಣ ಶಿವಯೋಗಿಗಳಿಗಾಗಿ ನಾವೇನು ಮಾಡಿದ್ದೇವೆ? ರಾಘವಾಂಕನ ಸಮಾಧಿ ತಿಪ್ಪೆಯಲ್ಲಿದೆ. ಬಸವಣ್ಣನವರ ಮಹಾಮನೆ ಇದ್ದ ಸ್ಥಳದಲ್ಲಿ ಇಂದು ಮುಳ್ಳುಕಂಟಿ ಬೆಳೆಯುತ್ತಿವೆ. ಶೇಕ್ಸಪೀಯರನ ಜನ್ಮಸ್ಥಳ ಸ್ಟ್ರ್ಯಾಟ್‌ಫೋರ್ಡ್ ನೋಡಿದ ಮೇಲೆ ಯಾರಿಗಾದರೂ ಭಾರತೀಯರಾದವರಿಗೆ ತಮ್ಮ ತಪ್ಪುಗಳ ಪರಿಚಯವಾಗುವದು ತೀರ ಸಹಜ."11

ಡಾ|| ಮೂರ್ತಿಯವರ ಮನೆಯಲ್ಲಿ ೪–೫ ದಿನ ಸುಖವಾಗಿ ಕಳೆದರು. ತಮ್ಮ ವಿಶ್ವಶಾಂತಿ ಪರಿಷತ್ತಿನ ಬಹುಮುಖ್ಯ ಅಂಶಗಳ ಬಗ್ಗೆ ನೋಟ್ಸ ಮಾಡಿಕೊಂಡರು. ಪ್ರೊ. ಜಿ. ಎಚ್. ಹನ್ನೆರಡುಮಠ ಅವರಿಗೆ ಆ ಮಹತ್ವದ ವಿಚಾರಗಳ ಟಿಪ್ಪಣಿಗಳನ್ನು ಅಂಚೆ ಮೂಲಕ ಕಳಿಸಿದರು.

## ಪ್ಯಾರಿಸ್, ಬರ್ಲಿನ್, ಜಿನೀವಾ, ರೋಮ್ ಸಂದರ್ಶನ

ದಿ. ೧೦ ಸೆಪ್ಟಂಬರ್, ೭೪ ರಂದು ಲಂಡನ್ನಿನಿಂದ ಪ್ಯಾರಿಸ್ಸಿಗೆ ಬಂದಿಳಿದರು. ವಿಮಾನ ನಿಲ್ದಾಣದಲ್ಲಿ ಪ್ಯಾರಿಸ್ಸಿನ ಇಂಡಿಯಾ ಅಂಬೆಸಿಯವರು ಪೂಜ್ಯ ಜಗದ್ಗುರುಗಳನ್ನು ಸ್ವಾಗತಿಸಿದರು. ಇವರಿಗಾಗಿ ಮೊಸಲಾದ ಹೋಟೆಲ್ ಸೆಕ್ಯುರೇಟರಿಗೆ ಕರೆದೊಯ್ದರು. ಇಲ್ಲಿ ಅವರ ಪೂಜೆ ಪ್ರಸಾದಗಳಿಗೆ ತುಂಬ ಅನುಕೂಲಕರ ವಾತಾವರಣ ದೊರೆಯಿತು.

ಇಲ್ಲಿಯ ರಾಯಭಾರಿ ವರ್ಗದ ವಿಶೇಷ ಅಧಿಕಾರಿಗಳು ಬಂದು ಪೂಜ್ಯ ಜಗದ್ಗುರುಗಳನ್ನು ಹಾಗೂ ರಂಗನಾಥ ದಿವಾಕರ ಮತ್ತು ಹಿರೇಮಠರನ್ನು ಕರೆದುಕೊಂಡು ನಗರ ಸಂದರ್ಶನ ಮಾಡಿಸಿದರು. ಮುಖ್ಯವಾಗಿ ಇಲ್ಲಿಯ ನೋಟ್ರೇ–ಡೇಮ್ (Notre-dame) ದೇವಾಲಯ, ಲೋವ್ರೇ ಮ್ಯುಜಿಯಂ (Louvre Museum), ಐಫಿಲ್ ಗೋಪುರ (Eiffel Tower), ಲ್ಯೂರ್ ಅರಮನೆ (Louvre Palace), ವ್ಹರ್ಸಿಲ್ಲೀನ್ ಅರಮನೆ (Palace of Versailles), ಫೌಂಟೇನ್ ಬ್ಲ್ಯೂ ಅರಮನೆ(Fountain blue)ಗಳನ್ನು ನೋಡಿಬಂದರು. ಮುಖ್ಯವಾಗಿ ಜಗದ್ಗುರುಗಳಿಗೆ ನೋಟ್ರೇ-ಡೆಮ್(Notre-dame) ದೇವಾಲಯದ ಮೇಲಂಕರಣದ ಭಿತ್ತಿಯಲ್ಲಿರುವ ಕೊನೆಯ ನಿರ್ಣಯ ಚಿತ್ರ (The Last Judgement), ಪೆರಡೈಸ್ ಮತ್ತು ಹೆಲ್ (Paradise and Hell), ಸೇಂಟ್

11 ನಮ್ಮ ವಿದೇಶ ಯಾತ್ರೆ: ಪುಟ–105

ಜಾನ್ ಪ್ರನರುತ್ಥಾನ (Resurrection), ಸೇಂಟ್ ಅನೆ (St. Anne), ಸೇಂಟ್ ಮಾರ್ಸೆಲ್ (St. Marcel), ಮಡೋನಾ ಹಾಗೂ ಮಗು (Madonna and Child) ಮುಂತಾದ ತೈಲ ಚಿತ್ರಗಳು ತುಂಬಾ ಹಿಡಿಸಿದವು. ಅಂದಿನ ಆ ಪುರಾತನ ಧರ್ಮಾತ್ಮವಾದ ಪ್ಯಾರಿಸ್ಸಿಗೂ ಇಂದಿನ ಈ ಫ್ಯಾಶನ್ ಪ್ಯಾರಿಸ್ಸಿಗೂ ಮಹದಂತರ ವೆಂದು ಮನಗಂಡರು.

ದಿ. ೧೧ ರಂದು ಪ್ಯಾರೀಸಿನ "ರಾಮಕೃಷ್ಣ ವೇದಾಂತ ಸೆಂಟರಿ"ನಲ್ಲಿ ಜಗದ್ಗುರುಗಳ ಉಪನ್ಯಾಸ ನಡೆಯಿತು. ಅದೇ ದಿನ "ಭಾರತೀಯ ವಿದ್ಯಾರ್ಥಿ ಸೊಸೈಟಿ"ಯಲ್ಲಿ ಹಾಗೂ ಇಂಡಿಯಾ ಅಂಬೆಸಿಯಲ್ಲಿಯೂ ಸತ್ಕಾರ ಮತ್ತು ಉಪನ್ಯಾಸ ಸಮಾರಂಭಗಳಾದವು. ಇಂಡಿಯಾ ಅಂಬೆಸಿಯ ಎಸ್. ಎಸ್. ಚಟರ್ಜಿ ಕಟಪಲಿಯಾ, ಉಮಾರಾವ್ ಅವರು ಸನ್ನಿಧಿಯವರನ್ನು ತುಂಬ ಉಪಚರಿಸಿದರು. ದರ್ಶನೀಯ ಸ್ಥಳಗಳನ್ನು ಖುದ್ದಾಗಿ ತೋರಿಸಲು ನೆರವಾದರು.

## "ಪ್ಯಾರೀಸ್" ಬಗ್ಗೆ ಜಗದ್ಗುರುಗಳ ಅಭಿಪ್ರಾಯ

ಜಗದ್ಗುರುಗಳ ಅಭಿಪ್ರಾಯವನ್ನು ಅವರ ಮಾತಿನಲ್ಲಿಯೇ ಕೇಳುವದು ತುಂಬ ಖುಶಿಯಾಗಿರುತ್ತದೆ—

"ಯುರೋಪಿನ ಸುಂದರ ನಗರ ಪ್ಯಾರೀಸ್. ನಾವು ಯುರೋಪಖಂಡದಲ್ಲಿ ನೋಡಿದ ನಗರಗಳಲ್ಲೇ ಅತ್ಯಂತ ಸುಂದರವಾಗಿ ತೋರಿತು. ಅಲ್ಲಿಯ ಜನರು ಸುಂದರರು, ಸ್ವಾತಂತ್ರ್ಯ ಪ್ರಿಯರು, ಆದರೆ ಅಷ್ಟೇ ಸ್ವೇಚ್ಛಾಪರರು. ಇಲ್ಲಿಯ ದಾರಿಗಳು, ಗಗನ ಚುಂಬಿತ ಕಟ್ಟಡಗಳು ಎಲ್ಲವೂ ಓರಣ, ಅಚ್ಚುಕಟ್ಟು, ಒಂದೇ ಶೈಲಿ. ಇಡೀ ಪಟ್ಟಣವೇ ಒಂದು ಜಾಗರೂಕ ವೈಜ್ಞಾನಿಕ ಯೋಜನೆಯ ಮೇಲೆ ಕುಳಿತಂತಿದೆ. ಅಲ್ಲಲ್ಲಿ ಸ್ತ್ರೀ—ಪುರುಷರ ನಗ್ನ ವಿಗ್ರಹಗಳು ಬಹಳ. ವಿಲಾಸದಲ್ಲಿ ಲಂಡನ್ನಿಗಿಂತ ಪ್ಯಾರೀಸು ಮುಂದುವರಿದ ನಗರವೆಂದು ಹೇಳುವದೇ ಬೇಡ. ಭಾರತೀಯ ಸ್ವಯಂಪೂರ್ಣ ಸಂಸ್ಕೃತಿಯನ್ನು ಇಲ್ಲಿ ಕಾಣಲಾರೆವು. ಇವರಿಗೆ ತಮ್ಮದೇ ಆದ ಜೀವನ ಮೌಲ್ಯಗಳಿವೆ. ವಿಲಾಸವೇ ತತ್ವಜ್ಞಾನ. ಇಲ್ಲಿಯ ಹುಡಿಗಿಯರಿಗೆ ಯಾವತ್ತೂ ಸಿಗರೇಟು ಬೇಕು. ಗಂಡಸರಂತೆಯೇ ಪೋಷಾಕು ತೊಡುತ್ತಾರೆ. ವ್ಯಕ್ತಿಯಿಂದ ವ್ಯಕ್ತಿಗೆ ಫ್ಯಾಶನ್ನಿನ ಪ್ರಕಾರಗಳು ಭಿನ್ನಭಿನ್ನವಾಗಿ ತೋರುತ್ತವೆ. ಅಂತೆಯೇ ಇದು ಜಗತ್ತಿನ ಫ್ಯಾಶನ್ನುಗಳ ಜನ್ಮಸ್ಥಳ. ಗಾಳಿ ಬಿಟ್ಟಂತೆ ವಿಹರಿಸುವ ಇವರ ಜೀವನ ವಿಲಾಸಕ್ಕೆ ಭಾರತೀಯ ದರ್ಶನವಾಣಿ, ಶರಣರ ಅನುಭವವಾಣಿ ಕನಸಿನಲ್ಲೂ ಗೋಚರವಾಗದು. ಅವರ ಬಹಿರಂಗ ಸ್ಥಿತಿ ಕಂಡೇ ನಮಗೆ ಅಯ್ಯೋ ಅನ್ನಿಸಿತು. ಮರುಕ್ಷಣದಲ್ಲಿ; 'ಈ ಸಂಸ್ಕೃತಿ ಭವಿಷ್ಯದಲ್ಲಿ

ಭಾರತಕ್ಕೆ ಹರಿದುಬಂದರೆ ಮುಂದೇನು ಗತಿ?' ಎಂದು ಕಳವಳದ ಪ್ರಶ್ನೆ ಮೂಡಿತು. ಚಿತ್ರವಿಚಿತ್ರ ಬಣ್ಣದ ಬಟ್ಟೆಗಳು, ಅರೆನಗ್ನ ಉಡುಪುಗಳು, ನಾನಾವಿಧ ಕೇಶಾಲಂಕಾರ ಇವನ್ನು ದಾರಿಯಲ್ಲಿ ಕಂಡಾಗ; ಇಲ್ಲಿ ಭೋಗವಿಲಾಸದಲ್ಲಿ ಹೆಚ್ಚು ಮನಸ್ಸು ಹಾಕುತ್ತಿರಬಹುದೆಂದು ನಮಗನ್ನಿಸಿತು. ಸಂಯಮದ ಚಲುವು ಭಾರತೀಯರಿಗೆ ಅರ್ಥವಾದಂತೆ ಇವರಿಗೆ ಅರ್ಥವಾಗದು. ಐಂದ್ರಿಕ ಪಿಪಾಸೆಗಳನ್ನು ಬಿಡುಗಡೆ ಮಾಡುವಲ್ಲಿ ದೊರೆಯುವ ಆನಂದಕ್ಕಿಂತ, ಅವುಗಳನ್ನು ದಿಗ್ಬಂಧಿಸುವಲ್ಲಿ ಅಧಿಕ ಆನಂದ ಅಡಗಿದೆ. ಆದರೆ ಈ ಗುಟ್ಟು ಪ್ಯಾರೀಸ್‌ನವರಿಗೆ ಅರ್ಥವಾಗುವದೆಂತು?"

## ಮಹರ್ಷಿ ಮಹೇಶಯೋಗಿಗಳೊಂದಿಗೆ ಸ್ವಿಟ್ಜರ್ಲ್ಯಾಂಡಿನ ಸ್ವರ್ಣಿಮ ತಪೋವನದಲ್ಲಿ

ದಿ. ೧೨ ರಂದು ಪ್ಯಾರೀಸಿನಿಂದ ಬರ್ಲಿನ್ನಿಗೆ ವಿಮಾನಿನಲ್ಲಿ ಪಯಣಿಸಿದರು. ರಾಯಭಾರಿ ಆಫೀಸಿನವರು ಸ್ವಾಗತಿಸಿ ಶ್ರೀಮತಿ ಮೋರಿಝ (Mrs. Moretze) ಅವರ ಮನೆಯಲ್ಲಿ ವಾಸ್ತವ್ಯಗೊಳಿಸಿದರು. ಈ ಗೃಹಿಣಿ ಭಾರತವನ್ನು ಕಣ್ಣಾರೆ ಕಂಡವಳು. ಜಗದ್ಗುರುಗಳನ್ನು ತುಂಬ ಗೌರವದಿಂದ ಉಪಚರಿಸಿದಳು. ರಾಯಭಾರಿ ಎಸ್. ಎಲ್. ಕೌಲ್ ಹಾಗೂ ಅವರ ಪುತ್ರ ಅನಿಲ ತುಂಬ ನೆರವಾದರು. ಅನಿಲ ಹಾಗೂ ಅವರ ಧರ್ಮಪತ್ನಿಯರಿಗೆ ಅವರ ವಿನಂತಿಯ ಮೇಲೆ ಧ್ಯಾನಯೋಗವನ್ನು ಹೇಳಿಕೊಡಲಾಯಿತು. ಭಾರತೀಯ ಮಜಲೀಸ್ ಸಂಘದಲ್ಲಿ ಜಗದ್ಗುರುಗಳ ಉಪನ್ಯಾಸವಾಯಿತು. ಕೌಲ್ ಅವರು ಜಗದ್ಗುರುಗಳವರಿಗೆ ಪಶ್ಚಿಮ ಬರ್ಲಿನ್ ನಗರದ ಫ್ರ್ಯಾಂಕ್‌ಲಿನ್ ಕನ್‌ವ್ಹೆನ್‌ಶನ್ ಹಾಲ್, ಬೆಲ್ಲೆವ್ಯೂ ಅರಮನೆ, ಬರ್ಲಿನ್ ಗೋಡೆ, ೨ನೇ ಮಹಾಯುದ್ಧದ ಅವಶೇಷಗಳು, ವಿಲ್‌ಹೆಲ್ಮ ಮೆಮೋರಿಯಲ್ ಚರ್ಚ್, ವಿಕ್ಟೋರಿಯಾ ವಿಜಯ ಸ್ತಂಭ, ಚಾರ್ಲ್ಲಟನ್‌ಬರ್ಗ್ ಅರಮನೆ, ಓಲೆಂಪಿಕ್ ಸ್ಟೇಡಿಯಂ ಇತ್ಯಾದಿ ದರ್ಶನೀಯ ಸ್ಥಳಗಳನ್ನು ತೋರಿಸಿದರು.

ದಿ. ೧೫ ರಂದು ಬರ್ಲಿನ್‌ದಿಂದ ಜಿನೀವಾಕ್ಕೆ ವಿಮಾನಿನಿಂದ ಪಯಣಿಸಿದರು. ಜಿನೀವಾದಲ್ಲಿ ಧ್ಯಾನಯೋಗಮಂದಿರದ ಶ್ರೀಮತಿ ಫ್ಲಾರೆನ್ಸ್ ಕೈವಾನಿ ಸ್ವಾಗತಿಸಿದರು. ಮರುದಿನ ಸ್ವಿಟ್ಝರ್‌ಲ್ಯಾಂಡಿನ ಆರೋಜಾಕ್ಕೆ ಮಹರ್ಷಿ ಮಹೇಶಯೋಗಿ ಅವರ ಆಮಂತ್ರಣದ ಮೇರೆಗೆ ಪಯಣ. ದಾರಿಯಲ್ಲಿ ರೈಲಿನ ಯಾತ್ರೆಯಲ್ಲಿ ೨೦-೨೫ ಮೈಲುದ್ದ ಸರೋವರ ದೃಶ್ಯ ನಯನಮನೋಹರವಾಗಿತ್ತು. ಆರೋಜಾಕ್ಕೆ ಹೋಗುವಾಗ ಇವರ ಟ್ರೇನು ೬|| ಸಾವಿರ ಫೂಟು ಎತ್ತರದ ಪರ್ವತವೇರಿ ಸಾಗುತ್ತಿರುವ ದೃಶ್ಯ ರಮಣೀಯವೂ, ರೋಮಾಂಚನಕಾರಿಯೂ ಆಗಿತ್ತು. ಆರೋಜಾದ ನಿಸರ್ಗ ಸುಂದರ ಕಾಶ್ಮೀರ ವನಶ್ರೀ ವೈಭವದಲ್ಲಿ ಮಹರ್ಷಿ ಮಹೇಶ

ಯೋಗಿಗಳ "ಅಂತರ್ರಾಷ್ಟ್ರೀಯ ಧ್ಯಾನಯೋಗ"ದ ಆಶ್ರಮದಲ್ಲಿ ಭವ್ಯ ಸ್ವಾಗತ ಸಮಾರಂಭ ಏರ್ಪಟ್ಟಿತ್ತು. ಆಶ್ರಮದ ಸಭೆಯಲ್ಲಿ ಜಗದ್ಗುರುಗಳು "ವಿಶ್ವಧರ್ಮಕ್ಕೆ ವೀರಶೈವದ ಕೊಡುಗೆ" ಕುರಿತು ಹಿಂದಿಯಲ್ಲಿ ಉಪನ್ಯಾಸಿಸಿದರು. ಅದನ್ನು ಮಹರ್ಷಿಗಳು ಆಶ್ರಮವಾಸಿಗಳಿಗೆ ಇಂಗ್ಲಿಷಿನಲ್ಲಿ ಅನುವಾದಿಸಿ ಹೇಳಿದರು. ಡಾ|| ರಂಗನಾಥ ದಿವಾಕರ ಅವರು ಹಾಗೂ ಪ್ರೊ. ಹಿರೇಮಠರು ವಿಶ್ವಶಾಂತಿಯ ಸಮ್ಮೇಲನದ ಕುರಿತು ಮಾತನಾಡಿದರು. ಮಹರ್ಷಿ ಮಹೇಶಯೋಗಿಗಳಿಗೆ ಜಗದ್ಗುರುಗಳು ಲಿಂಗ, ಭಸ್ಮ, ರುದ್ರಾಕ್ಷಿ ಹಾಗೂ ಗ್ರಂಥಗಳನ್ನು ಕೊಟ್ಟರು.

ಮಹರ್ಷಿ ಮಹೇಶಯೋಗಿಗಳು ಸ್ಥಾಪಿಸಿದ "ಮಹರ್ಷಿ ಇಂಟರ್‌ನ್ಯಾಶನಲ್ ಯುನಿವ್ಹರ್ಸಿಟಿ"ಯ ಅಗಾಧ ಕಾರ್ಯಕ್ಷಮತೆಯನ್ನು ಜಗದ್ಗುರುಗಳು ಪ್ರತ್ಯಕ್ಷವಾಗಿ ವೀಕ್ಷಿಸಿದರು. ಅದರ ಮುಖಾಂತರ ಮಹರ್ಷಿಗಳು ಪ್ರಚುರಪಡಿಸಿದ "ಅತಿಮಾನಸ ಧ್ಯಾನಯೋಗ"ವನ್ನು ಹಾಗೂ ಅದರ ವೈಜ್ಞಾನಿಕ ಪದ್ಧತಿಗಳನ್ನು ಬಹುವಾಗಿ ಮೆಚ್ಚಿಕೊಂಡರು. ಯುರೋಪ ಖಂಡದ ಎಲ್ಲ ದೇಶಗಳಲ್ಲಿಯೂ ಭಾರತೀಯ ಯೋಗ-ದರ್ಶನ-ಚಾರಿತ್ರ್ಯಗಳನ್ನು ಬಿತ್ತರಿಸುತ್ತಿರುವ ಮಹರ್ಷಿ ಮಹೇಶಯೋಗಿಗಳ ಆಶ್ರಮಗಳು, ರಾಮಕೃಷ್ಣ ಮಿಶನ್ನುಗಳು ಹಾಗೂ ಈಶ್ವರೀಯ ವಿಶ್ವ ವಿದ್ಯಾಲಯದ ರಾಜಯೋಗ ಉಚಿತ ತರಬೇತಿ ಕೇಂದ್ರಗಳನ್ನೂ ಅವುಗಳ ಸಮರ್ಪಿತ ಸೇವೆಯನ್ನೂ ಕಂಡು ತುಂಬ ಸಂತೋಷಪಟ್ಟರು.

ಮರುದಿನ ಆಶ್ರಮದ ಕಾರ್ಯಕ್ರಮಗಳಲ್ಲಿ ತಡವಾಗಿ ಜಗದ್ಗುರುಗಳು ಹೊರಟಿದ್ದರಿಂದ ೬|| ಗಂಟೆಗೆ ಹೊರಡುವ ರೋಮ್ ವಿಮಾನ ತಪ್ಪಿತು. ಹೀಗಾಗಿ ವ್ಯಾಟಿಕನ್ ಅರಮನೆಯಲ್ಲಿ ಪೂರ್ವನಿಶ್ಚಿತವಾಗಿದ್ದ ಪೋಪ್‌ಪಾಲ್ ಅವರ ಸಂದರ್ಶನ ತಪ್ಪಿ ತುಂಬಾ ವ್ಯಥೆಪಟ್ಟರು. ರೋಮ್‌ದಲ್ಲಿ ಭಾರತೀಯ ರಾಯಭಾರಿಯಾದ ಶ್ರೀ ಎ. ಬಿ. ಪಂತ ಅವರು ಡಾ|| ರಂಗನಾಥ ದಿವಾಕರರ ನೆಚ್ಚಿನ ಗೆಳೆಯರು. ಎ. ಬಿ. ಪಂತ ಅವರೇ ವಾಸ್ತವ್ಯದ ವ್ಯವಸ್ಥೆ ಮಾಡಿದರು. ರೋಮಿನ ವಿಮಾನವನ್ನು ತಪ್ಪಿಸಿಕೊಂಡುದರಿಂದ ವ್ಯಾಟಿಕನ್ನಿನ ಪೋಪ್‌ಪಾಲ್‌ರಿಗಿತ್ತ ಭೆಟ್ಟಿಯ ಅವಧಿ ತಪ್ಪಿಹೋಗಿತ್ತು. ಆದರೂ ಇಟಲಿ ದೇಶದ ರೋಮ್ ಮತ್ತು ವ್ಯಾಟಿಕನ್ ನಗರಗಳನ್ನು ೩–೪ ದಿನ ನೋಡುವ ಸದವಕಾಶ ದೊರೆಯಿತು.

ಎರಡುಸಾವಿರ ವರ್ಷಗಳಿಗಿಂತಲೂ ಮೇಲ್ಪಟ್ಟು ಇತಿಹಾಸ ಉಳ್ಳ ರೋಮ್ ನಗರದ ಐತಿಹಾಸಿಕ ಪುಟಪುಟಗಳೂ ಯುದ್ಧಗಳಿಂದ, ವಿನಾಶಗಳಿಂದ, ಸಂಸ್ಕೃತಿಯ ಸಂಹಾರಗಳಿಂದ, ವಿಜಯಗಳಿಂದ, ದೇವತಾ ಆರಾಧನೆಗಳಿಂದ, ವಿಲಾಸ-ವೈಭವ-ಕ್ರೂರತೆ-ಕಾಮುಕತೆ-ಪಶುತ್ವಗಳಿಂದ, ಪಾಂಡಿತ್ಯದಿಂದ, ಕಲಾಜೀವನದ ಶಿಖರಗಳಿಂದ, ದೇವತ್ವ–ಮಾನವತ್ವ–ರಾಕ್ಷಸತ್ವಗಳ ಕಥೆ ಹೇಳುತ್ತವೆ. ಮುಖ್ಯವಾಗಿ

ಇಲ್ಲಿ ಜಗದ್ಗುರುಗಳು ಪ್ಲಾರ್ಝಾ ವೆನಿರ್ಝಿಅ (Plazza Venezia), ವಿಕ್ಟೋರ್ ಎಮ್ಯಾನ್ಯುಎಲ್ (Monument to Victor Emmanuel II), ಕೆಪಿಟಾಲಿನ್ ಮ್ಯುಜಿಯಂ (Capitoline Museum), ರೋಮನ್ ವರ್ತುಲ ಸೌಧ (Colosseum), ಸೇಂಟ್ ಪೀಟರ್ ಚರ್ಚ್ (Church of Sant Pietro in Vincoli), ಪೋಪ್ ಜ್ಯೂಲಿಯಸ್ ಗೋಪುರ (Tomb of Pope Julius II) ಹಾಗೂ ರೋಮನ್ ಕ್ಯಾಥೋಲಿಕ್ ಕೇಂದ್ರ, ವ್ಯಾಟಿಕನ್ನಿನ ಸಿಸ್ಟಿನಾ ಚಾಪೆಲ್ (Sistine Chapel) ಮುಂತಾದ ದರ್ಶನೀಯ ಸ್ಥಳಗಳನ್ನು ನೋಡಿದರು. ಮುಖ್ಯವಾಗಿ ಜಗದ್ಗುರುಗಳು ಜಗತ್ತಿಗೆ ರೋಮ್‌ಸಾಮ್ರಾಜ್ಯದ ಅಮೌಲ್ಯ ಕೊಡುಗೆಯಾದ ಮೈಕಲ್ ಎಂಜಿಲೋ (Michelangelo)ನ ವಾಸ್ತುಶಿಲ್ಪಿ, ಮೂರ್ತಿಶಿಲ್ಪಿ, ಭಿತ್ತಿ ವರ್ಣಚಿತ್ರಗಳನ್ನು ಬಹುವಾಗಿ ಮೆಚ್ಚಿಕೊಂಡರು. ಕೆಪಿಟಾಲಿನ್ ಮ್ಯುಜಿಯಂನ ಮೈಕಲ್ ಎಂಜಿಲೋನ ವಿಶ್ವವಿಖ್ಯಾತ ಚಿತ್ರಗಳಾದ ಹೆಣ್ಣುತೋಳ (She Wolf), ಮಾರ್ಕಸ್ ಆರೇಲಿಯಸ್ (Marcus Aurelius)ನ ಕುದುರೆ ಸವಾರಿ ದೃಶ್ಯ, ಕುರುಬ ಮ್ಯಾಟೀಶ್‌ನ (Shepherd Matius) ಚಿತ್ರ ಮುಂತಾದುವನ್ನು ನೋಡಿ ಮಗ್ನರಾದರು. ರಾಜಕೀಯ-ಧರ್ಮ-ಕಲೆಗಳ ತ್ರಿವೇಣಿಸಂಗಮವೇ ರೋಮ್‌ವೆಂದು ಅರಿತುಕೊಂಡರು.

### ಮರಳಿ ತಾಯಿ ಭಾರತಿ....ದೇವಿ ಕನ್ನಡತಿ

ದಿನಾಂಕ ೨೨ ಸಪ್ಟಂಬರ್, ೧೯೭೪ ಮಧ್ಯಾಹ್ನ ೩ ಗಂಟೆಗೆ ರೋಮ್ ನಗರದ ಲಿಯಾನಾರ್ಡೋ ಡಾ.ವಿನ್ಸಿ(Leonarado Da Vinci)ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಇವರ ವಿಮಾನ ಗಗನಾಂಗಣದಲ್ಲಿ ಉಡ್ಡಾಣಗೈದು; ದಿ. ೨೩ರ ಮಧ್ಯಾಹ್ನ ಮುಂಬೈಯಿಯ ಸಾಂತಾಕ್ರೂಜ್ ವಿಮಾನ ನಿಲ್ದಾಣದಲ್ಲಿ ಗೆಲುವಿನಿಂದ ಇಳಿಯಿತು. ಇಲ್ಲಿ ವ್ಹಿ. ಆರ್. ಹಿರೇಮಠ, ಎಮ್. ಪಿ. ಹೊಸಮನಿ ಹಾಗೂ ಬಸವರಾಜ ಮಿರ್ಜಿ ಸ್ವಾಗತಿಸಿದರು. ಅಂದು ಹೊಸಮನಿಯವರ ಮನೆಯಲ್ಲಿ ಆತ್ಮೀಯ ಆತಿಥ್ಯದೊಂದಿಗೆ ಪೂಜೆ ವಿಶ್ರಾಂತಿಗಳಾದವು. ಒಂದು ತಿಂಗಳಿನ ಪ್ರವಾಸದ ಶಾಂತಿ ಲಭಿಸಿತು. ಮರುದಿನ ವಿಮಾನದಿಂದ ಗೋವೆಗೆ ಬಂದಿಳಿದು; ಅಲ್ಲಿಂದ ಕಾರಿನಲ್ಲಿ ಹುಬ್ಬಳ್ಳಿಯ ಮೂರುಸಾವಿರಮಠ ತಲುಪಿದಾಗ; ಮತ್ತೆ ಅದೇ ಅದ್ಭುತ ಸ್ವಾಗತ, ಸಹಸ್ರಾರು ಭಕ್ತರ ಉದ್ಘೋಷ, ಗೃಹಿಣಿಯರ ಉತ್ಸಾಹಭರಿತ ಕಂಬನಿದುಂಬಿದ ವಂದನೆಗಳು, ಮುಕ್ಕುರಿದ ಪತ್ರಿಕಾ ಪ್ರತಿನಿಧಿಗಳು, ಛಾಯಾಚಿತ್ರಕಾರರಿಂದ ಸಂಭ್ರಮದ ವಾತಾವರಣ ಉಕ್ಕಲಾಡಿತು. ನೇರವಾಗಿ ಪೂಜ್ಯ ಜಗದ್ಗುರುಗಳು ಗುರುಸಿದ್ಧೇಶ್ವರ ಕರ್ತೃ ಗದ್ದುಗೆಗೆ ಪ್ರವೇಶಿಸಿ, ಪೊಡಮಟ್ಟು, ತಾವು ತಂದ ವಿಜಯದ ಮಾಲೆಯನ್ನು ಶಿವಸಮರ್ಪಿತವೆಂದು ಅರ್ಪಿಸಿದರು.

ಮಹಾಚೈತನ್ಯದಕ್ಷ ಮಹಾಸಂಕಲ್ಪವೊಂದು ಶೂನ್ಯಾಂತರಂಗದಲ್ಲಿ ಓಂಕಾರ ದುಂದುಭಿಯನ್ನು ಮೊಳಗುತ್ತಿತ್ತು!

## ಮೂರು ಘಟ್ಟಗಳಲ್ಲಿ ಸಾಹಿತ್ಯ ಬೆಟ್ಟ

ಪೂಜ್ಯ ಜಗದ್ಗುರುಗಳ ಸಮಗ್ರ ಜೀವನ ವಾಹಿನಿಯ ಪ್ರಯೋಗ-ಪರಿಷ್ಕಾರ-ಪ್ರವಾಹ-ಪ್ರಶಾಂತತೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದವರಿಗೆ ಈ ಗತಿ–ಗಮನದೊಂದಿಗೆ ಸುಳುಹು–ಹೊಳಹುಗಳನ್ನು ಕಂಡುಕೊಂಡು ಅವರ "ಸಾಹಿತ್ಯ ನಿರ್ಮಿತಿ"ಯ ಚಿತ್ತಾರ–ಬಿತ್ತಾರಗಳು ರೂಪಪಡೆದಿವೆ. ಈ ದಿಶೆಯಲ್ಲಿ ಅವರ "ಜೀವನ"ಕ್ಕೂ "ಸಾಹಿತ್ಯ"ಕ್ಕೂ ಹತ್ತಿರದ ಸಂಬಂಧ ಉಂಟು. ಜೀವನದಂತೆಯೇ ಸಾಹಿತ್ಯ; ಸಾಹಿತ್ಯದಂತೆಯೇ ಜೀವನವಾಗಿ ಸಾಮರಸ್ಯ ಪಡೆದಿರುವದು ಇವರ ವಿಶೇಷ ಎಂದು ಹೇಳಬಹುದು.

ಈ ಗ್ರಂಥ ಸಂಯೋಜನೆಯಲ್ಲಿ ಈಗಾಗಲೇ ಪೂಜ್ಯರ ಶಿವಯೋಗಮಂದಿರದ ಬದುಕು ಬರಹ, ಕಾಶಿಯ ಅಧ್ಯಯನ ಅವಲೋಕನಗಳನ್ನು ನೋಡುವದರೊಂದಿಗೆ; ಅವರ ಮಧ್ಯ ಭಾಗದ ಸಿಂಹಾಸನಾರೋಹಣ, ನೂರಾರು ಸಂಕೀರ್ಣ ಕಾರ್ಯ ಕಲಾಪಗಳು, ಸಾಮಾಜಿಕ–ಶೈಕ್ಷಣಿಕ–ಸಾಂಸ್ಕೃತಿಕ–ಧಾರ್ಮಿಕ–ಸಾಹಿತ್ಯಿಕ ಇತ್ಯಾದಿ ಕೆಲಸ ಕಾರ್ಯಗಳ ಅನಂತ ಮುಖಗಳು, ದಿಲ್ಲಿ ವಿಶ್ವಶಾಂತಿ ಸಮ್ಮೇಲನ, ಜಪಾನಿನ ಕ್ಯೊಟೋದ ಅಂತರ್ರಾಷ್ಟ್ರೀಯ ಶಾಂತಿ ಸಮ್ಮೇಲನ, ಅನಂತರ ದ್ವಾದಶ ಪೀಠಾರೋಹಣದ ಐತಿಹಾಸಿಕ ಅವಲೋಕನ, ತರುವಾಯ ಲ್ಯೂವನ್ನಿನ ದ್ವಿತೀಯ ಅಂತರ್ರಾಷ್ಟ್ರೀಯ ಶಾಂತಿ ಸಮ್ಮೇಲನ ಈ ಕೆಲಸ ಕಾರ್ಯಗಳ ಸುರಿಮಳೆಯಲ್ಲಿ ಅವರ ಸಾಹಿತ್ಯ ನಿರ್ಮಾಣ ಎಡೆಮಾಡಿಕೊಂಡು ತನ್ನ ನಿರಂತರತೆಯನ್ನು ಕಾಯ್ದುಕೊಂಡದ್ದು ಆಶ್ಚರ್ಯ!

ಈ ಹಿನ್ನೆಲೆಯಲ್ಲಿ ಪೂಜ್ಯ ಜಗದ್ಗುರುಗಳ ಸಾಹಿತ್ಯ ನಿರ್ಮಾಣವನ್ನು ಮೂರು ಹಂತಗಳಲ್ಲಿ, ಮೂರು ಘಟ್ಟಗಳಲ್ಲಿ ಪರಿಗಣಿಸಬೇಕಾದದ್ದು ಅತ್ಯವಶ್ಯ. ಅವರ ಜೀವನ ರಂಗವನ್ನು ನೋಡುತ್ತಿರುವ ನಾವು ಅವರ ಸಾಹಿತ್ಯ ರಂಗೋಲಿಯನ್ನು ನೋಡದಿದ್ದರೆ ಹೇಗೆ?

ಅವರ ಸಾಹಿತ್ಯವನ್ನು ಮೂರು ಘಟ್ಟಗಳಲ್ಲಿ ಸ್ಥೂಲವಾಗಿ ಪರಾಮರ್ಶಿಸಬಹುದೆಂದು ತೋರುತ್ತದೆ:

೧) ಮೊದಲ ಘಟ್ಟದಲ್ಲಿ ಪೂಜ್ಯ ಜಗದ್ಗುರುಗಳು ಇನ್ನೂ ಸಾಧಕ ಜೀವನದಲ್ಲಿ ಮಲಪ್ರಭಾ ತೀರದ ಶಿವಯೋಗಮಂದಿರದ ವಟುವಾಗಿಯೂ; ಅನಂತರ ಗಂಗಾ ತೀರದ ಕಾಶಿಯ ಪ್ರೌಢ ವಿದ್ಯಾರ್ಥಿಯಾಗಿಯೂ ಅಧ್ಯಯನ

ಮಾಡುವಾಗಿನ ಅನಿರ್ಬಂಧಿತ ಮುಕ್ತ ಸಾಹಿತ್ಯ ರಚನೆ ಹವಣಾಗಿದೆ. ಅವರ ಮುಂದಿನ ಸಾಹಿತ್ಯ ಪ್ರಕಾರಗಳಲ್ಲಿ ಬರುವ ದುಗುಡ, ಚಿಂತನೆ, ಹೋರಾಟ, ದ್ವಂದ್ವ, ಕಳವಳ, ಸಾಮಾಜಿಕ ಸಾಹಸಗಳ ಯಾವ ಛಾಯೆಯೂ ಇರದೇ ಇದೊಂದು ತಿಳಿ ನೀರಿನ ಮಾನಸ ಸರೋವರವಾಗಿರುವದು ಈ ಸಾಹಿತ್ಯ ಪ್ರಕಾರದ ತನ್ನತನ! ಈಗಾಗಲೇ ಈ ಹಂತದಲ್ಲಿ ಕೃತಿಸಿದ 'ಮೊಗ್ಗೆಯ ಮಾಲೆ', 'ಪೂಮಾಲೆ', 'ವಿಜಯ ಮಹಾಂತ ಲಾವಣಿ', 'ಶಿವಬಸವ ನಾಮಾವಳಿ', 'ಮರುಳಸಿದ್ಧೇಶ್ವರ ನಾಮಾವಳಿ', 'ಅಪ್ಪಯ್ಯ ಸ್ವಾಮಿಗಳ ಜೀವನ ಚರಿತ್ರೆ', 'ಯೋಗಿರಾಜ ಆಫ್ ಕರ್ನಾಟಕ' ಮುಂತಾದವುಗಳನ್ನು ಈ ಗ್ರಂಥದ ಮೊದಲ ಭಾಗದಲ್ಲಿ ಸಾರವಿಮರ್ಶೆಯೊಂದಿಗೆ ಪರಾಮರ್ಶಿಸಲಾದೆ.

೨) ಎರಡನೆಯ ಘಟ್ಟದಲ್ಲಿ ಪೂಜ್ಯರು ಹುಬ್ಬಳ್ಳಿ ಮೂರುಸಾವಿರಮಠದ ಪೀಠಾಧಿಪತಿಗಳಾದನಂತರ (೧೯೫೦) ಬಂದ; ಮೊದಲ ಘಟ್ಟಕ್ಕಿಂತ ತೀರಾ ಭಿನ್ನವಾದ; ಚಿಂತನಪ್ರಧಾನವಾದ ಇನ್ನೊಂದು ಸಾಹಿತ್ಯ ನಿರ್ಮಿತಿಯ ವಾತಾವರಣ. ಇದನ್ನು ಅವರ ಸಿಂಹಾಸನಾರೋಹಣದಿಂದ (೧೯೫೦) ಹಿಡಿದು ೨೫ನೆಯ ಪೀಠಾರೋಹಣದ (೧೯೭೭) ವರೆಗಿನ ೨೯ ವರ್ಷಗಳ ನಿಡಿದಾದ ದಾರಿಯಲ್ಲಿ ಕಂಡರಿಯಬಹುದು.12 ಇಲ್ಲೆಲ್ಲಾ ಸ್ವಾಭಾವಿಕವಾಗಿ ಅವರ ಲೋಕಾನುಭವದ, ಲೋಕ ಸಮಸ್ಯೆಗಳ, ಮಾನವ ಸಮಸ್ಯೆಗಳ ಹಾಸು-ಹೊಕ್ಕುಗಳಿಂದ ಗಟ್ಟಿ ನೇಯ್ಗೆಯ ನಿರಿಗೆಗಳಿವೆ. ಈ ಹಂತದಲ್ಲಿ ಅವರು ಬರೆದಿರುವ 'ಜೀವನ ವಿಕಾಸ', 'ಆಶೀರ್ವಾಣಿ: ಭಾಗ-೧', 'ಚಿತ್ಸುಮನ', 'ಗುರುಸಿದ್ಧೇಶ್ವರ ನಾಮಾವಳಿ', 'Hearts Blossms', 'ಅಮೃತ ಬಿಂದು', 'ಯುಗಪ್ರುರುಷ ಯೋಗಿಕುಮಾರ', 'ಮರುಳಶಂಕರದೇವರು', 'ನಮ್ಮ ವಿದೇಶ ಯಾತ್ರೆ', 'ಶಿವಯೋಗಮಂದಿರ', 'ಜೇನಹನಿ', 'ವಿವಿಧತಾಮ ಏಕತಾ', 'ಚಿತ್ಕಿರಣ', 'ಆಶೀರ್ವಾಣಿ: ಭಾಗ-೨', 'ಹೊಂಗಿರಣ', 'ಹೂಬಳ್ಳಿ' -ಈ ಗ್ರಂಥಗಳ ಸಾಮಾನ್ಯಾವಲೋಕನವನ್ನಾದರೂ ಮಾಡದಿದ್ದರೆ ಈ ವ್ಯಕ್ತಿಯ ಸಮಗ್ರಾಧ್ಯಯನವು ೪೦ ರಷ್ಟು ಕಡಿಮೆಯಾಗುತ್ತದೆ. ಆದ್ದರಿಂದ ಈ ಅತ್ಯಾವಶ್ಯಕವಾದ ಪಕ್ಷಿನೋಟವನ್ನು ಮಾತ್ರ ಮುಂದಿನ ಪುಟಗಳಲ್ಲಿ ನೀಡಲಾಗುವದು.

೩) ಇವರ ಜೀವನದ ಮೂರನೆಯ ಮಹತ್ವದ ಘಟ್ಟವೆಂದರೆ; ಇವರ ಸಾವಿರ ಅನುಭವಗಳ ಪರಾಕಾಷ್ಠೆಯ ಪಾಕಗೊಂಡ "ಪೂರ್ಣಜ್ಞ ಘಟ್ಟ"! ಇದು ಖಂಡಿತವಾಗಿಯೂ "ಸರ್ವಜ್ಞ"ನ ಅನುಕರಣೆಯಾದ "ಪೂರ್ಣಜ್ಞ" ಆಗಿರದೇ; ಈ ಪೂರ್ಣಜ್ಞತ್ವದಲ್ಲಿ ಅವರ ಪುಟಿದೇಳುತ್ತಿರುವ ಸಮಗ್ರ ಜೀವನದ ಸಾವಿರಾರು ಸಮ-ವಿಷಮ ಅನುಭವಗಳ, ದ್ವಂದ್ವಗಳ, ಹೋರಾಟಗಳ, ಸೋಲು-ಗೆಲುವುಗಳ

12 ಇವರ ೨೫ನೆಯ ಪೀಠಾರೋಹಣೋತ್ಸವವನ್ನು ಆಗಿನ ಕಾಲಮಾನ ಪರಿಸ್ಥಿತಿಗಳನ್ನು ನೋಡಿಕೊಂಡು 29 ನೇ ವರ್ಷ ಸಮಸ್ತ ಸದ್ಭಕ್ತರು ನೆರವೇರಿಸಿದರು.

ನಿರಂತರಾನ್ವೇಷಣೆಯ ಕ್ರಿಯಾಶೀಲ ಅಭಿವ್ಯಕ್ತಿಯಾಗಿದೆ. ಅವರ ಸೋಲು-ಗೆಲುವುಗಳಲ್ಲಿ ಕೊನೆಗೆ ನಿಲ್ಲುವದು ಗೆಲುವೊಂದೇ; ಸಮ-ವಿಷಮಗಳಲ್ಲಿ ಕೊನೆಗೆ ಗೆಲ್ಲುವದು ಸಮರಸವೊಂದೇ! ಇದು ಅವರ ಸಾಹಿತ್ಯ ವೈಶಿಷ್ಟ್ಯವೂ ಅಹುದು, ಜೀವನ ವೈಶಿಷ್ಟ್ಯವೂ ಅಹುದು!! ಈ ಫಲಪ್ರದ ಪರಿಪಕ್ವ ವ್ಯಕ್ತಿಮಾನಸ ವಿಕಾಸದಲ್ಲಿ ಅವರು ಸಾಹಿತ್ಯ ಪುಟಗಳನ್ನು ಕಾಸಿ ಬರೆದ "ಪೂರ್ಣಜ್ಞನ ವಚನಗಳು" ಬಗೆಗೆ ಈ ಗ್ರಂಥದ ಕೊನೆಗೆ ನಿರವಿಸಲಾಗುವದು. 13

ಇದೀಗ ಇಲ್ಲಿ ಇವರ ಎರಡನೆಯ ಜೀವನ ಘಟ್ಟದಲ್ಲಿ ನಿರ್ಮಾಣಗೊಂಡ ಗ್ರಂಥಗಳ ಸಾಮಾನ್ಯ ಸಮೀಕ್ಷೆಯನ್ನು ಕಾಣಬಹುದು.

## "ಮೂಜಗಂ" ಸಾಹಿತ್ಯಕ್ಕೆ ಹೊಸ ತಿರುವು ತಂದ:
## "ಆಶೀರ್ವಾಣಿ" [ಭಾಗ-೧]

೧೯೫೮ ರಿಂದ ೧೯೭೦ ರ ಮಧ್ಯದಲ್ಲಿ ಅಲ್ಲಲ್ಲಿ ಉಪನ್ಯಾಸ ನೀಡಿದ: ೩೯ ಭಾಷಣಗಳ ಸಂಗ್ರಹವೇ "ಆಶೀರ್ವಾಣಿ". ಮುಖ್ಯವಾಗಿ ಆಕಾಶವಾಣಿ (ಧಾರವಾಡ: ಗುಲಬರ್ಗಾ: ಬೆಂಗಳೂರ) ಮೂಲಕ ಬಿತ್ತರಿಸಿದ ಇಪ್ಪತ್ತು ಉಪನ್ಯಾಸಗಳು, ಶಿವಯೋಗಮಂದಿರದಲ್ಲಿ ನೀಡಿದ ನಾಲ್ಕು ಉಪನ್ಯಾಸಗಳು, ನಾನಾ ಕಡೆಯ ಶಿವಾನುಭವ ಸಮ್ಮೇಳನಗಳಲ್ಲಿ ಕೊಡಮಾಡಿದ ಮೂರು ವ್ಯಾಖ್ಯಾನಗಳು, ಬಸವ ಸಮಿತಿಯ ಕಾರ್ಯಕ್ರಮಗಳಲ್ಲಿ ನಿರೂಪಿಸಿದ ಎರಡು ಭಾಷಣಗಳು, ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಎರಡು ವ್ಯಾಖ್ಯಾನಗಳು, ದಿಲ್ಲಿ ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ, ಸರ್ವಧರ್ಮಗಳ ಸಮ್ಮೇಲನದಲ್ಲಿ, ಅಕ್ಕನ ಬಳಗ, ಕುಮಾರ ಶಿವಯೋಗಿ ಸಂಘ, ಮಹಿಳಾ ಕಾಲೇಜು, ಗೀತಾಜ್ಞಾನ ಯಜ್ಞದಲ್ಲಿ, ಬೌದ್ಧ ವಿಹಾರ ಮಂದಿರದಲ್ಲಿ ಒಂದೊಂದು ಉಪನ್ಯಾಸಗಳ ಸಂಗ್ರಹ ಇಲ್ಲಿದೆ. ಈ ಪುಸ್ತಕ ತುಂಬ ಜನಪ್ರಿಯತೆಯನ್ನು ಸಂಪಾದಿಸಿ ಇದರ ಮರುಮುದ್ರಣಗಳೂ ಮುಗಿದು ಹೋಗಿರುವದಕ್ಕೆ ಇದರ ಸರ್ವ ಗುಣ-ಧರ್ಮ-ವಿಚಾರಗಳ ಗುಣ ಗ್ರಾಹಿತ್ವವೇ ಮುಖ್ಯ ಕಾರಣವೆಂಬುದನ್ನು ಮರೆಯುವಂತಿಲ್ಲ.

'ಮೂಜಗಂ' ಸಾಹಿತ್ಯ ಚಿಂತನ ಗದ್ಯಾತ್ಮಕವಾಗಿ ತನ್ನ ಭಾವ-ಭಾಷೆ-ಅಭಿವ್ಯಕ್ತಿಗಳ ಸುಸ್ಪಷ್ಟ ನಿಲುವು ಪಡೆದುದು "ಆಶೀರ್ವಾಣಿ"ಯಲ್ಲಿ. ಭಾಷೆ ಪ್ರೌಢ ಮಾತ್ರವಲ್ಲ; ಸರಳವಾಗಿದೆ. ಭಾವ ಗಹನ ಮಾತ್ರವಲ್ಲ; ಸಹಜವಾಗಿದೆ.

---

13. ಪೂಜ್ಯ ಜಗದ್ಗುರುಗಳ ಸಮಗ್ರ ಸಾಹಿತ್ಯಾಧ್ಯಯನದ ಬಗೆಗೆ ತಿಳಿಯಲು ಅಪೇಕ್ಷಿಸುವವರು ಅವರ ಷಷ್ಟ್ಯಬ್ದಿ ಅಭಿನಂದನ ಗ್ರಂಥಗಳ ಎರಡನೆಯ ಸಂಪುಟವನ್ನು ಅವಲೋಕಿಸಬಹುದು. ಇದು ಅವರ ಸಾಹಿತ್ಯ ಹಾಗೂ ಕೃತಿ ವಿಮರ್ಶೆಯ ಸಮಗ್ರ ಹೊತ್ತಿಗೆಯಾಗಿದೆ.

ಸರಳತೆ, ಸುಲಲಿತತೆ, ಸಂಪ್ರೀತಿ 'ಮೂಜಗಂ' ಗದ್ಯ ಸಾಹಿತ್ಯದ ಮುಖ್ಯ ಲಕ್ಷಣ. ಈ ಗದ್ಯಕ್ಕೆ ಒಂದೆಡೆ 'ದರ್ಶನ ಪ್ರಜ್ಞೆ' ಇನ್ನೊಂದೆಡೆ 'ಸೌಂದರ್ಯ ಪ್ರಜ್ಞೆ' ಇರುವದು ಎದ್ದು ತೋರುತ್ತದೆ.

ಡಾ|| ಆರ್. ಸಿ. ಹಿರೇಮಠರು ಈ ಗ್ರಂಥವನ್ನು ಹೀಗೆ ಗುರುತಿಸುತ್ತಾರೆ: "....ಶ್ರೀಗಳ ದೃಷ್ಟಿ ವೈಯಕ್ತಿಕವಾಗಿರದೆ ಅದು ಸಾರ್ವತ್ರಿಕವಾಗಿದೆ....ರಸವಿಲ್ಲದ ಹಣ್ಣಿನಂತೆ ನಮ್ಮ ಬಾಳು ನಿಸ್ಸತ್ತ್ವವಾಗಬಾರದೆಂದು ಅವರ ಮತ. ಹೀಗೆ ಶ್ರೀಗಳವರ 'ಆಶೀರ್ವಾಣಿ'; ಧರ್ಮ, ಆಧ್ಯಾತ್ಮ, ಸಾಹಿತ್ಯ, ಕಲೆ, ಸಂಸ್ಕೃತಿ, ಸಮಾಜ ಜೀವನ ಮತ್ತು ಹಲವಾರು ಪುಣ್ಯ ಜೀವಿಗಳ ಜೀವನಾದರ್ಶ ಸಿದ್ಧಿಗಳನ್ನೆಲ್ಲ ಗರ್ಭೀಕರಿಸಿಕೊಂಡು, ತನ್ನದೇ ಆದ ವೈಶಿಷ್ಟ್ಯದಿಂದ ಮೆರೆದಿದೆ.... ಶ್ರೀಗಳ ಅಭ್ಯಾಸ, ಅನುಭವ, ಚಿಂತನ-ಮಂಥನಗಳಿಗೆ ಸಾಕ್ಷಿ ನುಡಿಯುತ್ತದೆ ಈ ಗ್ರಂಥ."14

" 'ಆಶೀರ್ವಾಣಿ' ಪೂಜ್ಯ ಜಗದ್ಗುರುಗಳ ವಾಙ್ಮಯ ತಪಸ್ಸಿದ್ಧಿಯ ಸಂಕೇತವಾಗಿದ" ಎಂದು ಶ್ರೀ ಎನ್. ಕೆ. ಕುಲಕರ್ಣಿಯವರು ಅಭಿಪ್ರಾಯ ತಾಳಿದ್ದಾರೆ.15

ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು ಈ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಮಾರ್ಮಿಕವಾಗಿ ಹೀಗೆ ಹೇಳಿದ್ದಾರೆ: "ಒಂದು ಮಾತಿನಲ್ಲಿ ಹೇಳಬಹುದಾದರೆ ಇಲ್ಲಿನ ಭಾಷಣಗಳಲ್ಲಿ ಅಧ್ಯಯನ, ಚಿಂತನ, ನಿರೂಪಣಾ ಸಾಮರ್ಥ್ಯಗಳು ಮುಪ್ಪುರಿಗೊಂಡಿವೆ. ಭಾಷೆ ಸರಳವಾಗಿದೆ, ಅರ್ಥಗರ್ಭಿತವಾಗಿದೆ, ನೇರವಾಗಿ ಮನಮುಟ್ಟುವಂತಿದೆ. ಸೂತ್ರರೂಪವಾದ ಅನೇಕ ಮಾತುಗಳು ಮತ್ತೆ ಮತ್ತೆ ಮನನ ಮಾಡುವಂತಿವೆ."16

ಆಕಾಶವಾಣಿ ಧಾರವಾಡದಿಂದ ಈ ಗ್ರಂಥ ಕುರಿತು ತಮ್ಮ ವಿಮರ್ಶನ ಲೇಖ ಮಂಡಿಸುತ್ತ ಪ್ರೊ. ಪಿ. ಕೆ. ಭಾಗೋಜಿಯವರು ಹೀಗೆ ಅಭಿಪ್ರಾಯ ತಾಳಿದ್ದಾರೆ: "ಇಲ್ಲಿ ಆಧುನಿಕ ವಿಜ್ಞಾನ ದೃಷ್ಟಿಯು ಮೆಚ್ಚುವ, ಮೆಚ್ಚಿ ಅಹುದೆನ್ನುವ ಸತ್ಯದರ್ಶನವಿದೆ. ವಿಚಾರಶೀಲತೆ ಕೇಳುಗರ ಮನದಲ್ಲಿ ಸ್ವತಂತ್ರ ವಿಚಾರಶೀಲತೆಯನ್ನು ಬೆಳೆಸುತ್ತದೆ....ಸಾಮಾಜಿಕ, ಸಾಹಿತ್ಯಿಕ, ಶೈಕ್ಷಣಿಕ, ಧಾರ್ಮಿಕ ರಂಗಗಳಲ್ಲಿ ಅದ್ಭುತ ಕಾರ್ಯಗಳನ್ನು ಮಾಡಿರುವ ಶ್ರೀ ಶ್ರೀ ಜಗದ್ಗುರುಗಳವರು ತಮ್ಮ ಅಧ್ಯಯನ, ಚಿಂತನ, ಸಮದೃಷ್ಟಿ, ವಿಶಾಲ ಮನೋಭಾವನೆಗಳಿಂದ ಇಂದಿನ

---

14 ಡಾ|| ಆರ್. ಸಿ. ಹಿರೇಮಠ: "ಆಶೀರ್ವಾಣಿ ಕುರಿತು": ಚಿತ್ರಭೆ ಪು–246

15 ಶ್ರೀ ಎನ್. ಕೆ. ಕುಲಕರ್ಣಿ: ಚಿತ್ರಭೆ; ಪು–255

16 ಡಾ|| ಎಚ್. ತಿಪ್ಪೇರುದ್ರಸ್ವಾಮಿ: ಮುನ್ನುಡಿ: ಆಶೀರ್ವಾಣಿ: ಪುಟ–3

ಸ್ಥಿತಿಗತಿಗಳನ್ನು ಗುರುತಿಸಿ, ಅದಕ್ಕನುಗುಣವಾದ ರೀತಿಯಲ್ಲಿ ವ್ಯಕ್ತಿ-ಸಮಾಜಗಳ ಜೀವನದಲ್ಲಿ ನೀತಿ-ಧರ್ಮಗಳನ್ನು ರೂಪಿಸಲು ಸಹಾಯವಾಗುವ ಸಂದೇಶಗಳನ್ನು ನೀಡಿದ್ದಾರೆ. ಅವರ ಪ್ರತಿಭಾಪೂರ್ಣ ವ್ಯಕ್ತಿತ್ವವು ಧರ್ಮಪೀಠದಲ್ಲಿ ಅರಳಿ ಈ 'ಆಶೀರ್ವಾಣಿ'ಯ ರೂಪದ ಪರಿಮಳವನ್ನು ತುಂಬೆಲ್ಲ ಹರಡಿದೆ; ರಸಜ್ಞತೆ, ದಾರ್ಶನಿಕತೆಗಳ ದಿವ್ಯಸಂಗಮವಿಲ್ಲಿದೆ."17

## ವಿಶ್ವಮಾನವತೆಯತ್ತ ಕೈಬೀಸಿ ಕರೆದ: "ಆಶೀರ್ವಾಣಿ" [ಭಾಗ-೨]

೧೯೭೧ ರಲ್ಲಿ "ಆಶೀರ್ವಾಣಿ" ಭಾಗ-೧ ಬಂದ ನಂತರ ಅದಕ್ಕೆ ಓದುಗರ ನೂಕುನುಗ್ಗಲು ದೊರೆಯಿತು. ಜಗದ್ಗುರುಗಳ ಪುಸ್ತಕಗಳಲ್ಲಿ ಹೆಚ್ಚು ಜನಪ್ರಿಯವಾದುದೆಂದು ಹೆಸರು ಗಳಿಸಿತು. ತತ್ಪರಿಣಾಮವಾಗಿ ೧೯೮೨ ರಲ್ಲಿ ಬಂದ ಈ ಎರಡನೆಯ ಭಾಗದಲ್ಲಿ; ಆರು ಆಕಾಶವಾಣಿ ಭಾಷಣಗಳು, ೩೨ ಲೇಖನಗಳು ಸಂಕಲಿತಗೊಂಡಿವೆ. ಬಾಗಿಲುಕೋಟೆಯ ಚರಂತಿಮಠ ಪ್ರಭುದೇವರು ಸಂಪಾದನೆಗೊಳಿಸಿದ್ದಾರೆ. 'ವಿಶ್ವಮಾನವನೆಡೆಗೆ', 'ವಿಶ್ವಮಾನವ ಬಾಪೂಜಿ', 'ವಿಶ್ವವಿಭೂತಿ ಬಸವಣ್ಣನವರು' ಮುಂತಾದ ಲೇಖನಗಳು ಇವರ ವಿಶಾಲಗೊಳ್ಳುತ್ತಿರುವ, ವಿಶ್ವಮಾನ್ಯವಾಗುತ್ತಿರುವ ದೃಷ್ಟಿಯ ಸಾಹಿತ್ಯದ ಲಕ್ಷಣಗಳಾಗಿವೆ. ಗದ್ಯಶೈಲಿಯಲ್ಲಿ ಇನ್ನಿಷ್ಟು ಸರಳತೆ, ಮಧುರತೆ, ಅರ್ಥವ್ಯಾಪ್ತಿ, ಚಿಂತನ ಪರಿಜ್ಞಾನಗಳು ಇಲ್ಲಿ ಹೂವರಳಿ ಹೊಮ್ಮಿವೆ. ಲಾಕ್ಷಣಿಕತೆ, ಪ್ರೌಢಿಮೆಗಳಿಂದ ಬರಹ ಮುಕ್ತವಾಗಿದೆ.

ಜಾತೀಯತೆಯನ್ನು ಮೀರಿದ ಮತಾತೀತ ಭಾವನೆ, ಒಮ್ಮುಖವಾಗಿರದ ವೈವಿಧ್ಯತೆ, ಬಂಧಿತವಾಗಿರದ ಬಹುಮುಖತೆ ಇಲ್ಲಿ ಒಡೆದು ಕಾಣುವ ವಿಶೇಷ ಗುಣ.

ಡಾ|| ಬಿ. ವ್ಹಿ. ಯಕ್ಕುಂಡಿಮಠ ಅವರು ಷಷ್ಟ್ಯಬ್ದಿ ಸಂಪುಟದಲ್ಲಿ ಗುಣಗ್ರಾಹಿಗಳಾಗಿ ಹೇಳಿದ ಈ ಮಾತು ಗಮನಿಸಬಹುದು: "ಸನಾತನ ಧರ್ಮ ವಿಚಾರಿಗಳಾದ ಶ್ರೀಗಳವರು ಆಧುನಿಕ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು, ಸಮಕಾಲೀನ ಸಮಾಜದ ಅಭ್ಯುದಯದ ಆವಶ್ಯಕತೆಗಳನ್ನು ಅರಿತು, ಅನುಭವಪೂರ್ಣ ವಿಚಾರಗಳನ್ನು ಮಂಡಿಸಿ, ಬದುಕಿಗೆ ಹೊಸ ಆಯಾಮ ಕಲ್ಪಿಸಿಕೊಟ್ಟಿರುವರು."

ಡಾ|| ಡಿ. ಎಸ್. ಕರ್ಕಿಯವರು ಈ ಹೊತ್ತಿಗೆಗೆ ಮುನ್ನುಡಿ ಬರೆಯುತ್ತ: "ಈ ಎಲ್ಲ ವಿಚಾರಾತ್ಮಕ ಲೇಖನಗಳಲ್ಲಿ ಸದ್ಭಾವ ಸದ್ಬುದ್ಧಿಗಳ ಹೃದ್ಯವಾದ ಮೇಳವನ್ನು ನಾವು ಗುರುತಿಸಬಹುದಾಗಿದೆ........ವಿಚಾರಗಳ ನಿರೂಪಣೆಗೆ ಅನುರೂಪ

17 ಪ್ರೊ. ಪಿ. ಕೆ. ಭಾಗೋಜಿ: ಆಶೀರ್ವಾಣಿ: ಚಿತ್ಪ್ರಭೆ: ಪುಟ-260

ವಾದ ಭಾಷಾಶೈಲಿ ಇಲ್ಲಿ ಒಡಗೂಡಿ ಬಂದುದು ಒಂದು ವಿಶೇಷ" ಎಂದು ಶ್ಲಾಘಿಸಿದ್ದಾರೆ.18

"ನಮ್ಮ ಸನಾತನ ಧರ್ಮದ ಶಕ್ತಿಯುತವಾದ ಶ್ರೀಮಂತ ಪರಂಪರೆಯನ್ನು ಸಕ್ರಿಯಾತ್ಮಕವಾಗಿ ಅರಗಿಸಿಕೊಂಡ ಶ್ರೀ ಜಗದ್ಗುರುಗಳವರ ಆಧುನಿಕ ದೃಷ್ಟಿ ಇಂದಿನ ವಿಚಾರವಂತರನ್ನೂ ಮುಟ್ಟಬಲ್ಲುದು. ಆದುದರಿಂದಲೇ 'ಆಶೀರ್ವಾಣಿ' ವಿಚಾರವಾಣಿಯೂ ಆಗಿ ಪರಿಣಮಿಸಿದೆ"-ಎಂದು ಡಾ|| ತಿಪ್ಪೇರುದ್ರಸ್ವಾಮಿಗಳು ಈ ಗ್ರಂಥದ ಮೊದಲ ಭಾಗಕ್ಕೆ ಬರೆದ ಮುನ್ನುಡಿಯ ಮಾತು; ಈ ಎರಡನೆಯ ಭಾಗಕ್ಕೂ ಅಷ್ಟೇ ಸಮರ್ಥವಾಗಿ ಸಾಂಗತ್ಯವಾಗುತ್ತದೆಯೆಂದು ಧೈರ್ಯದಿಂದ ಹೇಳಬಹುದಾಗಿದೆ.

**ಕಾಡುವರು ಕಾಡಲಿ ಎಂದು ಹಾಡುತಿದೆ:**
**"ಚಿತ್ಸುಮನ"**

"ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ" ಅಂಕಿತದಲ್ಲಿ ಜಗದ್ಗುರುಗಳು ಕೆಲ ವರ್ಷಗಳಿಂದ ಬರೆದ ವಚನಗಳು ೧೯೭೩ ರಲ್ಲಿ ಪ್ರಥಮ ಮುದ್ರಣ ಕಂಡು, ಆನಂತರ ೧೯೭೭ ಮತ್ತು ೧೯೮೩ ರಲ್ಲಿ ದ್ವಿತೀಯ-ತೃತೀಯ ಮುದ್ರಣಗೊಂಡಿರುವದು ಈ ಕೃತಿಯ ಜನಪ್ರಿಯತೆಗೆ ಸಾಕ್ಷಿ. ಈ ಪುಸ್ತಕದ ಪ್ರಭಾವವು ಇಂಗ್ಲಿಷಿನ "ಹೃದಯ ಪುಷ್ಪಗಳು" "Hearts Blossoms" ಮೇಲಾಗಿದೆಯೆಂದು ಹೇಳಬಹುದು.

"ವಚನ ಭಾಂಡಾರದ ಶಾಂತರಸರು ಇದೀಗ ತಮ್ಮ ಅಸಂಖ್ಯಾತ ವಚನ ಕಾರರ ಭಾಂಡಾರದಲ್ಲಿ ಶ್ರೀ ಮೂಜಗಂ ಈ ಹೆಸರನ್ನು ಸೇರಿಸಿಕೊಳ್ಳಬೇಕಾಗು ತ್ತದೆ" ಎಂದು ಡಾ|| ಆರ್. ಸಿ. ಹಿರೇಮಠರು ಮುನ್ನುಡಿ ಬರೆದಿದ್ದಾರೆ.19

೨೦ನೆಯ ಶತಮಾನದ ವಚನಕಾರರಲ್ಲಿ ಶ್ರೀ ಮೂಜಗಂ ಅವರಿಗೆ ವಿಶಿಷ್ಟ ಸ್ಥಾನವಿದೆ; ಕಾರಣ ಇವರು ತಾವು ವಚನಗಳನ್ನು ಬರೆಯುವದರೊಂದಿಗೆ ಅನೇಕರ ವಚನಗಳನ್ನು ಪ್ರಕಟಗೊಳಿಸಿದರು (ಉದಾ: ಸಂಗಮನಾಥನ ವಚನಗಳು); ಅಲ್ಲದೆ ೧೨ನೆಯ ಶತಮಾನದ ವಚನಕಾರರ ವಚನಗಳನ್ನೂ ಲಕ್ಷಾಂತರ ವೆಚ್ಚದಿಂದ ಪ್ರಕಟಿಸಿ ಪ್ರಸಾರಗೊಳಿಸಿದರು. ವಚನಕಾರರಾಗಿ ಅವರ ಸ್ಥಾನ "ಚಿತ್ಸುಮನ"ದಲ್ಲಿ ಒಳ್ಳೆಯ ಪಾತ್ರತ್ವ ಪಡೆದುಕೊಂಡಿದೆ. ೧೨ನೆಯ ಶತಮಾನದ ವಚನಗಳಿಗಿಂತ

18 ಡಾ|| ಡಿ. ಎಸ್. ಕರ್ಕಿ: ಮುನ್ನುಡಿ: ಆಶೀರ್ವಾಣಿ: ಭಾಗ-2: ಪುಟ-8
19 ಡಾ|| ಆರ್. ಸಿ. ಹಿರೇಮಠ: ಚಿತ್ಸುಮನ: ಮುನ್ನುಡಿ: ಪುಟ-1

ಇವರ ವಚನಗಳು ಭಿನ್ನವಾಗಿ; ೨೦ನೆಯ ಶತಮಾನದ ವಾತಾವರಣದೊಂದಿಗೆ ಪ್ರತಿಕ್ರಿಯೆಗೈದಿವೆಯೆಂಬುದನ್ನು ಕೆಳಗಿನ ವಿಶಿಷ್ಟ ವಚನಗಳಲ್ಲಿ ಪರಿಗಣಿಸಬಹುದು:

"ಸಮಾಜವು ಒಡೆದ ಗಡಿಗೆಯಂತಾಗಿಹುದಯ್ಯಾ
ಸಮಾಜವು ಬಲವಿಲ್ಲದ ರೋಗಿಯಂತಾಗಿಹುದಯ್ಯಾ
ಸಮಾಜವು ತಂತಿಯಿಲ್ಲದ ವೀಣೆಯಂತಾಗಿಹುದಯ್ಯಾ
ಸಮಾಜವು ಧೂಳು ಮುಸುಕಿದ ಕನ್ನಡಿಯಂತಾಗಿಹುದಯ್ಯಾ
ಇದು ಕಾರಣ,
ಒಲವು ಒಗ್ಗಟ್ಟಿಲ್ಲದ ಸಮಾಜವು
ಬರಿ ಮಾತಿಗರ ಮಾಲೆಯಾಗಿಹುದು ನೋಡಾ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ." ||೧೦೨||

ಈ ಸಮಾಜದ ಒಡಕು–ಕೆಡುಕಿಗೂ ಕಾರಣವಾದವರ ಮನೋಭೂಮಿಕೆಯ ಬಗೆಗೆ ಇಲ್ಲಿ ವಚನಿಸಲಾಗಿದೆ:

"ನಾ ಹೆಚ್ಚು, ನೀ ಹೆಚ್ಚು ಎನ್ನುವುದೆ
ಗುರುವಿರಕ್ತರ ಮಂತ್ರವಾಗಬಾರದು, ನೋಡಾ!
ಹೆಚ್ಚಿನ ಹೆಚ್ಚುಳವರಿಯದೆ
ಇಚ್ಛೆಗೆ ಬಂದಂತೆ ಮೆರೆವುದೆ
ತಂತ್ರವಾಗಬಾರದು, ನೋಡಾ!
ಆತ್ಮ ಸೌಂದರ್ಯವನು ಗಳಿಸದೆ,
ಸಮಾಜ ಹಿತಚಿಂತನೆಗೆಳಿಸದೆ,
ಬರೀ ಅಹಂಕಾರದ ಗಿರಿಯನೇರಿ ಕುಳಿತವರ
ಕಣ್ಣೆತ್ತಿ ನೋಡನಯ್ಯಾ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ." || ೬೮ ||

ಪ್ರೊ. ಎಸ್. ಕೌಜಲಗಿಯವರು ಈ ಕೃತಿಯ ವಿಮರ್ಶೆ ಮಾಡುತ್ತ ಹೇಳುವ ಮಾತುಗಳು ಗಮನಾರ್ಹವಾಗಿವೆ:

"ಚಿತ್‌ಸುಮನದ ವಚನಗಳಲ್ಲಿ ಬಸವಣ್ಣನವರ ವಚನಗಳಲ್ಲಿಯ ಸರಳತೆ, ವ್ಯವಹಾರಿಕತೆ ಇದೆ. ಮಹಾದೇವಿಯಕ್ಕನ ವಚನಗಳ ಭಾವಸೌಂದರ್ಯ ಕಲಾತ್ಮಕತೆಯಿದೆ. ಅಂಬಿಗರ ಚೌಡಯ್ಯನ ವಚನಗಳ ಖಂಡಿತವಾದಿತ್ವ, ಅಲ್ಲಮನ

ಅನುಭಾವ ಸಮ್ಮಿಳಿತವಾಗಿರುವದರಿಂದ ಹೃದಯಕ್ಕೆ ತಂಪನ್ನೀಯುವ ಗುಣ ಹೊಂದಿವೆ."

**"ಅಮೃತಬಿಂದು" ಸುರಿದ ಚಿಂತನಶ್ರೀ**

ಸಂಸ್ಕೃತದ ಸೂಕ್ತಿಗಳೇ ಇಲ್ಲಿಯ ಅಮೃತಬಿಂದುಗಳು; ಕನ್ನಡದ ಅಂಗಳದಲ್ಲಿ ಚೆಲ್ಲವರಿದಿವೆ; 'ಪರಂಜ್ಯೋತಿ'ಯ ಹೂದೋಟದಲ್ಲಿ! ಸಂಸ್ಕೃತ ವಾಙ್ಮಯದ ಆಳವಾದ ಅಧ್ಯಯನ; ಅಲ್ಲಿಯ ಅಮೃತಬಿಂದುಗಳನ್ನು ಎತ್ತಿತಂದು ಇಲ್ಲಿಯ ಜ್ಞಾನ ಮಾನಸ ಸರೋವರದಲ್ಲಿ ತೇಲಿಬಿಡುವದೇ ಇಲ್ಲಿಯ ಆಶಯ. ಶ್ರೀ ಮೂಜಗಂ ಅವರ ಅಗಾಧ ಸಂಸ್ಕೃತ ಪಾಂಡಿತ್ಯ ಒಂದೆಡೆಗೆ, ಅಪಾರ ಕನ್ನಡದ ಪ್ರೀತಿ ಇನ್ನೊಂದೆಡೆಗೆ; "ಅಮೃತಬಿಂದು"ವಿನಲ್ಲಿ ಚಿಂತನದ ಸೇತುವೆ ಕಟ್ಟಿವೆ. ಇಪ್ಪತ್ತು ಉಕ್ತಿಗಳನ್ನು ಆಯ್ಕೆಮಾಡಿ, ಇಲ್ಲಿ ಸರಳ ಸುಲಲಿತ ನುಡಿಗಟ್ಟಿನಲ್ಲಿ ವಿವರಿಸಲಾಗಿದೆ. ಉದಾ—'ತಮಸೋ ಮಾ ಜ್ಯೋತಿರ್ಗಮಯ', 'ವಸುಧೈವ ಕುಟುಂಬಕಂ', 'ಯೋಗಶ್ಚಿತ್ತ ವೃತ್ತಿ ನಿರೋಧಃ', 'ಲಿಂಗಮಧ್ಯೇ ಜಗತ್ಸರ್ವಂ', 'ಸರ್ವೇ ಜನಾಃ ಸುಖಿನೋ ಭವಂತು', 'ಧರ್ಮೋ ರಕ್ಷತಿ ರಕ್ಷಿತಃ', 'ನ ಹಿ ಜ್ಞಾನೇನ ಸದೃಶಂ', 'ಉದ್ಯೋಗಿನಂ ಪುರುಷಸಿಂಹ ಮುಪೈತಿ ಲಕ್ಷ್ಮೀ' ಇಂಥ ಅಮೃತೋಕ್ತಿಗಳು ಯಾರಿಗೆ ಬೇಡ! ಕನ್ನಡದ ಬಿಡಿನುಡಿಯಲ್ಲಿ ಹಿತಮಿತವಾಗಿ ನೀಡಿದ ವಿವರಣೆ ತುಂಬಾ ವಿಶಿಷ್ಟವಾಗಿದೆ. ಒಮ್ಮೆ ಓದಿದರೆ ಇನ್ನೊಮ್ಮೆ ಓದಬೇಕೆನ್ನಿಸುತ್ತದೆ.

ಡಾ॥ ವಸಂತ ಪಾಟೀಲರು—"ಪ್ರತಿಬಿಂದು ಅಮೃತಬಿಂದು... ಇಲ್ಲಿಯ ಅಮೃತಬಿದುಗಳು ಮಾನವ ಜೀವನದ ಸಫಲತೆಯತ್ತ ಹನಿಯುತ್ತಿರುವವು" ಎಂದು ಶ್ಲಾಘಿಸಿದ್ದಾರೆ. ಪ್ರತಿಯೊಬ್ಬ ಕನ್ನಡಿಗನೂ ಅವಶ್ಯವಾಗಿ ಓದಲೇ ಬೇಕಾದ ನುಡಿಮುತ್ತುಗಳಿವು.

**ಚೆಲುವಿನ ಗದ್ಯದಲ್ಲಿ ಚಿಮ್ಮಿ ಬಂದ:**
**"ಯುಗಪುರುಷ ಯೋಗಿಕುಮಾರ"**

ಪೂಜ್ಯ ಜಗದ್ಗುರುಗಳ ಅಂತರಾತ್ಮದ ದಲದಲಗಳನ್ನು ಬಿಡಿಸಿ ನೋಡಿದರೆ ಕಾಣಬರುವದು ಯುಗಪುರುಷ ಯೋಗಿಕುಮಾರನ ಶ್ರೀದರ್ಶನ; ಶುಭದರ್ಶನ. 'ಸಮಾಜ ಸಮಾಜ'ವೆಂದು ಪರಿತಪಿಸಿದ ಹಾನಗಲ್ಲ ಕುಮಾರ ಸ್ವಾಮಿಗಳು ವೀರಶೈವ ಧರ್ಮದ ಪುನರುದ್ಧಾರಕ್ಕಾಗಿ ೨೦ ನೆಯ ಶತಮಾನದ ಮೊದಲ ಕಾಲುಭಾಗದಲ್ಲಿ ಪ್ರಯತ್ನಿಸಿದರು. ಸತ್ಯವೇ ಶಿವದರ್ಶನ, ಶಿವದರ್ಶನವೇ ವೀರಶೈವದ ನೆಲೆಸೆಲೆ ಯೆಂದು ತಿಳಿದ ಅವರು ಮಲಾಪಹಾರಿಣಿ ತೀರದಲ್ಲಿ ಶಿವಯೋಗಮಂದಿರ ಸಂಸ್ಥೆ ಯನ್ನು ಸ್ಥಾಪಿಸಿ, ಲೋಕೋತ್ತರವಾಗಿ ಬೆಳಗಿಸಲು ಉದ್ಯುಕ್ತರಾದರು. ವ್ಯಕ್ತಿ

ಪೂಜೆಗಿಂತಲೂ ತತ್ವಪೂಜೆಯನ್ನು ನಂಬಿ, ಶಿವನ ನೆನಹಿನ ಶಿವಯೋಗಮಂದಿರದ ಯೋಗಧಾಮವನ್ನು ಬೆಳೆಸಿದರು. ಮಲಪ್ರಭೆಗೆ ತನ್ನದೇ ಆದ ಶಿವಪ್ರಭೆಯ ಶೃಂಗಾರ ತಂದರು.

ಆ ಶಿವಪ್ರಭೆಯ ಪ್ರಸನ್ನ ವಾತಾವರಣದಲ್ಲಿ ಬೆಳೆದ ಶ್ರೀ ಮೂಜಗಂ ಅವರು ಇಲ್ಲಿ ಭಾವಪೂರ್ಣವಾದ ಶಕ್ತಿಶಾಲಿ ಭಾಷೆಯಲ್ಲಿ ಯುಗಪುರುಷನ ಜೀವನವೃತ್ತಾಂತ ನೀಡಿದ್ದಾರೆ. ಪದಪದದಲ್ಲೂ ಇವರ ಅಪಾರ ಪ್ರೀತಿ, ಅಪಾರ ಅಭಿಮಾನಗಳು ಜ್ವಲಂತವಾಗಿ ಎದ್ದು ಕಾಣುತ್ತವೆ. ಉದಾಹರಣೆಗೆ ಗಮನಿಸಿರಿ....ಶ್ರೀ ಮೂಜಗಂ ಅವರ ಗದ್ಯ ಶೈಲಿಯ ನಿರರ್ಗಳವಾದ ಹಾಗೂ ಭಾವಪೂರ್ಣ ಓಟಕ್ಕೂ ಇದು ನಿದರ್ಶನ—

"೧೨ ನೆಯ ಶತಮಾನದಲ್ಲಿ ಮಹಾತ್ಮಾ ಬಸವಣ್ಣನವರು ಅನುಭವಮಂಟಪ ರಚಿಸಿದಂತೆ, ವಿಶ್ವಕವಿ ರವೀಂದ್ರನಾಥ ಠಾಕೂರರು ಶಾಂತಿಸಾಧಕರಿಗೆ ಶಾಂತಿನಿಕೇತನ ನಿರ್ಮಿಸಿದಂತೆ, ವಿವೇಕಾನಂದರು ಧರ್ಮಪ್ರಚಾರ ಮಾಡಲು ರಾಮಕೃಷ್ಣಾಶ್ರಮ ವನ್ನು ಸ್ಥಾಪಿಸಿದಂತೆ, ಮಹಾತ್ಮಾ ಗಾಂಧೀಜಿಯವರು ಭಾರತದ ಕಲ್ಯಾಣಕ್ಕಾಗಿ ಪರಿಶ್ರಮ ವಹಿಸಿದಂತೆ....ಮಾನವರನ್ನು ಮಾದೇವರನ್ನಾಗಿ ಮಾಡಲು ಶಿವಯೋಗ ಮಂದಿರವನ್ನು ಸ್ಥಾಪಿಸಿ, ಜನಾಂಗದಲ್ಲಿ ನೂತನ ಚೇತನವನ್ನು ನೀಡಿದ ಹಾನಗಲ್ಲ ಕುಮಾರ ಶಿವಯೋಗಿಗಳು ಯುಗಪುರುಷರಲ್ಲದೆ ಮತ್ತೇನು? ಯುಗಪುರುಷರೂ ಅಹುದು, ಕಾರಣಿಕ ಪುರುಷರೂ ಅಹುದು. ಅಷ್ಟೇ ಅಲ್ಲ, ಇತಿಹಾಸ ಪುರುಷರೂ ಅಹುದು"20

ಗದ್ಯದಲ್ಲಿ ಹಾನಗಲ್ಲ ಕುಮಾರ ಸ್ವಾಮಿಗಳ ಜೀವನವನ್ನು ಹಿಡಿದಿಟ್ಟ ಜಗದ್ಗುರುಗಳು ಒಂದೇ ಒಂದು ಸರಳ ವಚನದಲ್ಲಿ ಅವರ ಸಮಗ್ರ ಜೀವನವನ್ನೇ ಕನ್ನಡಿಗೊಳಿಸಿದ್ದಾರೆ. ಹಗುರವಾಗಿ ಹರಿಯುವ ಶ್ರೀ ಮೂಜಗಂ ಅವರ ವಚನ ಶೈಲಿಯ ಸುಭಗ ಸರಳ ಸುಂದರ ಕಥಾನಕ ಶೈಲಿಗೂ ಈ ವಚನ ನಿದರ್ಶನ ನೀಡುವದರಿಂದ ಆ ನೀಳ್ವಚನವನ್ನು ಇಲ್ಲಿ ಕೊಡಲಾಗಿದೆ—

"ಜೋಯಿಸರ ಹರಳಳ್ಳಿಯಲಿ ಜನಿಸಿ,
ಮಾಯಾ-ಮೋಹವ ತ್ಯಜಿಸಿ,
ಶಂಭುಲಿಂಗ ಬೆಟ್ಟದೊಳು ತಪಿಸಿ,
ಷಟ್‌ಶಾಸ್ತ್ರವನಭ್ಯಸಿಸಿ,

20 ಯುಗಪುರುಷ ಯೋಗಿಕುಮಾರ; ಪುಟ-109, 110

ಆತ್ಮಜ್ಞಾನದ ಪರಿಯನರಿದುಕೊಂಡನಯ್ಯಾ ತಾನು!
ಯೆಳೆಂದೂರು ಯತಿಗಳ ಪಡೆದು,
ಮನಮುಟ್ಟಿ ಸೇವೆಯಗೈದು,
ಭವಬೀಜಂಗಳ ಹುರಿದು,
ಷಟ್‌ಸ್ಥಲ ತತ್ತ್ವವ ತಿಳಿದು,
ಶಿವಾನುಭವದ ಸಾರವ ಸವಿದು,
ಯೋಗವಿದ್ಯೆಯೊಳು ಪರಿಪೂರ್ಣನಾದನಯ್ಯ ತಾನು!
ಬಿದರೆ ಕುಮಾರಸ್ವಾಮಿಗಳಿಂದ
ಚಿನ್ಮಯಾನುಗ್ರಹವ ಪಡೆದು,
ಹಾನುಗಲ್ಲ ವಿರಕ್ತಮಠಕ್ಕಧಿಪತಿಯಾಗಿ,
ವಿರಕ್ತರಿಗೆ ತಾ ಶಿಖಾಮಣಿಯಾಗಿ,
ಮಠದ ಪ್ರಭಾವವ ಬೆಳಗಿಸಿದನಯ್ಯ ತಾನು!
ದೇಶ ಸೇವೆಯೇ ಈಶ ಸೇವೆಯೆಂದು,
ಧರ್ಮಧುರೀಣರಿಂದನುಮತಿ ಪಡೆದು,
ಅಖಿತ ಭಾರತ ವೀರಶೈವ ನಾಮದ
ಮಹಾಸಭೆಯ ಸಂಸ್ಥಾಪಿಸಿದನಯ್ಯ ತಾನು!
ವೈರಾಗ್ಯದ ಮಲ್ಲಣಾರ್ಯರ
ಮನದಿಚ್ಛೆಯಂ ಪೂರೈಸಲು,
ಶೀಲ ಸಂಸ್ಕೃತಿಯನುಳಿಸಲು,
ಶೂಲಪಾಣಿಯ ಸ್ಮರಿಸಲು,
ಯೋಗವಿದ್ಯೆಯ ಬೆಳೆಸಲು,
ತ್ಯಾಗಬುದ್ಧಿಯ ಕಲಿಸಲು,
ಗುರು–ವಿರಕ್ತರೊಳು
ಭಾವೈಕ್ಯ ಬಲಿಸಲು,
ಚಿತ್ತರಗಿ ಚಿಜ್‌ಜ್ಯೋತಿ–
ವಿಜಯ ಮಹಾಂತೇಶನು
ತೋರಿಸಿದ ತಾಣದೊಳು
ಶಿವಯೋಗಮಂದಿರವ ಸ್ಥಾಪಿಸಿದನಯ್ಯ ತಾನು!
ವಿರಕ್ತಿಯಲ್ಲಿ ಅಲ್ಲಮಪ್ರಭುವಾಗಿ,
ಜ್ಞಾನದಲ್ಲಿ ಚೆನ್ನಬಸವಣ್ಣನಾಗಿ,
ಭಕ್ತಿಯಲ್ಲಿ ಬಸವಣ್ಣನಾಗಿ,

ಇಪ್ಪತ್ತನೆಯ ಶತಮಾನದ ಯುಗಪ್ರರುಷನಾಗಿ,
ಸಮಾಜವನುದ್ಧರಿಸಿ,
ಜನಜಾಗೃತಿಗೈದ ದಯಾಮೂರ್ತಿ ತಾನಯ್ಯ!!
ಇದುವೆ ಹಾಸುಗಲ್ ಕುಮಾರೇಶನ
ಮಹಾಮಹಿಮೆ ಕೇಳಿರಯ್ಯ!
ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ."21

ಶ್ರೀ ದ. ಲ. ಕೆರೂರ ಅವರ ಮಾತಿನಲ್ಲಿ ಶ್ರೀ ಮೂಜಗಂ ಶೈಲಿಯ ಗುಣಗಾನವನ್ನು ಕೇಳಬೇಕು—

"………ಸುಲಿದ ಬಾಳೆಯ ಹಣ್ಣಿನಂದದಿ ಲಲಿತವಹ ಕನ್ನಡದಲ್ಲಿ ಶ್ರೀ ಮೂಜಗಂರು ಶ್ರೀ ಕುಮಾರೇಶನ ಬಾಳನ್ನು ಚಿತ್ರಿಸಿದ್ದಾರೆ. ಅಂದರೆ ಜನ ಸಾಮಾನ್ಯರೂ ಸುಲಭದಲ್ಲಿ ಅರಿತು ಆನಂದಿಸುವಂತಾಗಬೇಕು ಎಂಬುದೇ ಇವರ ಉದ್ದೇಶ. ಸ್ಥಿತಿಗತಿಗಳನ್ನೂ, ಪರಿಸರ ಪ್ರಸಂಗಗಳನ್ನೂ ಕಣ್ಣೆದುರಿಗೆ ಕಟ್ಟುವಂತೆ ಯಥಾವತ್ತಾಗಿ ಚಿತ್ರಿಸುವಲ್ಲಿ ಶ್ರೀ ಮೂಜಗಂ ಎತ್ತಿದ ಕೈ. ಒಂದು ಮಾತನ್ನು ಬಿಡಿಬಿಡಿಸಿ ಹತ್ತು ಮಾತುಗಳಿಂದ ಬಿಂಬಿಸಿ ಹೇಳುವ ಕೌಶಲ ಇವರಿಗೆ ಕರಗತ…. ಇತ್ತೀಚೆಗೆ ಇವರು ಪ್ರಾರಂಭಿಸಿರುವ ಪೂರ್ಣಜ್ಞನ ವಚನಗಳು ತಮ್ಮ ವೈಶಿಷ್ಟ್ಯದಿಂದ ಗಮನಾರ್ಹವಾಗಿವೆ. ತ್ರಿಪದಿ ರಚನೆಯಲ್ಲಿ, ಗುಣ–ಗಾತ್ರಗಳೆರಡರಲ್ಲೂ ಸರ್ವಜ್ಞನನ್ನು ಮೀರಿಸುವಂತಿದೆ ಅವರು."22

**ಮೂಜಗಂ ಗದ್ಯದ ಇನ್ನೊಂದು ಹೆಜ್ಜೆ:**
**"ಶಿವಯೋಗಮಂದಿರ"**

"೭೦ ವರ್ಷಗಳ ಹಿಂದಿನ ಮಾತು….ಕೈಕಾಲು ಕಣ್ಣುಗಳಿಲ್ಲದ ಕಂದನಾಗಿತ್ತು ವೀರಶೈವ ಸಮಾಜ."23

"ಎಳೆಮಕ್ಕಳ ತಿಳಿಮನಸ್ಸಿನಲ್ಲಿ ಶಿವಯೋಗವನ್ನು ಎರಕಹೊಯ್ದು ಅವರನ್ನು ಮಂಗಳಮೂರ್ತಿಗಳನ್ನಾಗಿ, ಶಿವಯೋಗಿಗಳನ್ನಾಗಿ ಮಾಡುವ, ಆಧ್ಯಾತ್ಮಿಕಶಕ್ತಿಗೆ ಕೇಂದ್ರವಾಗುವಂತಹ ಸಂಸ್ಥೆಯ ಉದಯ ಅಂದು ಬೇಕಾಗಿತ್ತು; ಅಗತ್ಯವೂ ಇತ್ತು."24

---

21 ಯುಗಪುರುಷ ಯೋಗಿಕುಮಾರ: ಪುಟ–109, 110

22 ದ. ಲ. ಕೆರೂರ; "ಯುಗಪುರುಷ ಯೋಗಿಕುಮಾರ": ಮಹಾಭಿನಂದನ ಸಂಪ್ರುಟ; ಭಾಗ–೨

23 ಶಿವಯೋಗಮಂದಿರ; ಪುಟ–6

24 ಶಿವಯೋಗಮಂದಿರ; ಪುಟ–6, 7

ಹೀಗೆ ಹೃದಯಸ್ಪರ್ಶಿ ಗದ್ಯ ಮಾತುಗಳಿಂದ ಆರಂಭವಾಗುತ್ತದೆ ಈ ಪುಟ್ಟ ಗಾತ್ರದ ಕೈಪಿಡಿ ಕೃತಿ. "ಯುಗಪುರುಷ ಯೋಗಿಕುಮಾರ"ದ ಪ್ರತಿಧ್ವನಿ ಇಲ್ಲಿಯ ಪುಟಪುಟಗಳಲ್ಲೂ ಅನುರಣಿಸಿದೆ.

ಹಾನಗಲ್ಲ ಕುಮಾರಸ್ವಾಮಿಗಳ ಕಲ್ಪನೆಯ ಕೂಸಾದ ಶಿವಯೋಗಮಂದಿರ ಆಧ್ಯಾತ್ಮಿಕ ಸಾಧಕ ವಟುಗಳ ನಂದನವಾಗಿಯೂ ರೂಪಿತವಾಗಿದೆ. ಈ ಬೆಳುವಲದ ಚಲುವಿನಿಂದ ಹುಬ್ಬಳ್ಳಿ ಮಹಾನಗರಕ್ಕೆ ಹಾರಿಬಂದ ಕಾವ್ಯಚೇತನ ಮೂಜಗಂ ಅವರಿಗೆ ಶಿವಯೋಗಮಂದಿರವನ್ನು ಮರೆಯುವದು ಅಸಾಧ್ಯ, ಅಸಂಭವ. ಈ ಕೃತಿಯ ಪುಟಪುಟದಲ್ಲೂ ಅವರ ಪ್ರೀತಿ ರಸರೂಪತೊಟ್ಟು ನಿಂದಿದೆ. ಹುಬ್ಬಳ್ಳಿಯಲ್ಲಿದ್ದರೂ ಶಿವಯೋಗಮಂದಿರದ ಭಾವಮಾಧುರ್ಯ, ರಸರೂಪದರ್ಶನ, ಹಸಿರು-ಹೂವುಗಳ ಒಡನಾಟ ಕಾವ್ಯದಲ್ಲಿ ಮುನ್ನಡೆದಿದೆ.

೧೯೧೧ ರಷ್ಟು ಪೂರ್ವದ ಹಾನಗಲ್ಲ ಕುಮಾರಮಹಾಸ್ವಾಮಿಗಳ ಯೋಜನೆಯನ್ನು ಶ್ರೀ ಜಗದ್ಗುರುಗಳವರು ಅಕ್ಷರಶಃ ಪೂರೈಸಿರುವದಕ್ಕೆ ಸಾಕ್ಷಿ. ಪೂರ್ವರಾಷ್ಟ್ರ ಹಾಗೂ ಪಶ್ಚಿಮರಾಷ್ಟ್ರಗಳ ೧೪ ದೇಶಗಳಲ್ಲಿ ಜಗದ್ಗುರುಗಳು ವಿಶ್ವಸಂಚಾರ ಮಾಡಿರುವದು ೧೯೧೧ ರಲ್ಲಿ ಹಾನಗಲ್ಲ ಕುಮಾರಸ್ವಾಮಿಗಳ ಪುರಾತನ ಸಂಕಲ್ಪವೇ ಆಗಿತ್ತು. ಕಾರಣ; ಶಿವಯೋಗಮಂದಿರದ ಸ್ಥಾಪನೆಯ ಉದ್ದೇಶಗಳನ್ನು "ಶ್ರೀಮದ್ವೀರಶೈವ ಶಿವಯೋಗಮಂದಿರದ ಪ್ರಥಮ ರಿಪೋರ್ಟ ೧೯೧೧" ರಲ್ಲಿ ಅಚ್ಚಾದ ಕೆಳಗೆ ನಮೂದಿಸಿದ ಸಾಮಾನ್ಯ ಉದ್ದೇಶವನ್ನು ಗಮನಿಸಿರಿ:

"ಹಿಂದುಸ್ತಾನದ ಆಯಾಯ ಭಾಗಗಳಲ್ಲಿ ಮತ್ತು ಇಂಗ್ಲಂಡ, ಅಮೇರಿಕಾ, ಜರ್ಮನಿ, ಫ್ರಾನ್ಸ್ ಮುಂತಾದ ಪರರಾಷ್ಟ್ರಗಳಲ್ಲಿ ಆಗಾಗ್ಗೆ ಕೂಡುವ ಧಾರ್ಮಿಕ ಪರಿಷತ್ತುಗಳಿಗೆ ಹಾಗೂ ಅಲ್ಲಿರುವ ಧಾರ್ಮಿಕ ಸಂಸ್ಥೆಗಳಿಗೆ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ತತ್ವಗಳನ್ನು ಪ್ರಸಾರ ಮಾಡುವದಕ್ಕೋಸ್ಕರ ಈ ಸಂಸ್ಥೆಯ ವತಿಯಿಂದ ಪ್ರತಿನಿಧಿಗಳನ್ನು ಅಥವಾ ಲೇಖನಗಳನ್ನು ಕಳುಹಿಸುವದು ಮತ್ತು ಹೋಗಲಿಚ್ಛಿಸುವ ಯೋಗ್ಯ ಜನರಿಗೆ ಸಾಧ್ಯವಿದ್ದಮಟ್ಟಿಗೆ ಅನುಕೂಲವರಿತು ಅನುಕೂಲತೆಗಳನ್ನು ಒದಗಿಸಿಕೊಡುವದು."25

ಹೀಗೆ ಶಿವಯೋಗಮಂದಿರದ ಕ್ರಿಯಾಶೀಲ ಮುನ್ನಡೆಯನ್ನು ಶ್ರೀ ಮೂಜಗಂ ಜೀವನ ಸಾಹಿತ್ಯಾಧ್ಯಯನದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

**ನೂರು ಹೂವಿನ ನರುಗಂಪು ತುಂಬಿದ: "ಜೇನಹನಿ"**

ಬಿಡಿಮಾತಿನಲ್ಲಿ ಇಡಿಮಾತನ್ನು ತುಂಬುವ ವಿಶಿಷ್ಟ ಕಲೆ ಶ್ರೀ ಮೂಜಗಂ ಅವರಿಗೆ ಕರಗತವೆಂಬುದಕ್ಕೆ 'ಜೇನಹನಿ' ಸಾಕ್ಷಿ ನೀಡುತ್ತದೆ. "ಕರ್ಮವೀರ"

---

25 ಶಿವಯೋಗಮಂದಿರ: ಪುಟ–50

ವಾರಪತ್ರಿಕೆಗೆ ಬರೆದ ಕಿರುಲೇಖನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಸಂಸ್ಕೃತದ ಸುಭಾಷಿತಗಳು, ಶರಣರ ವಚನಗಳು ಹಾಗೂ ಸ್ವಾನುಭವದ ತ್ರಿವಳಿ ಇಲ್ಲಿದೆ. ಎಂದಿನಂತೆ ಪುಟ್ಟ ವಾಕ್ಯಗಳಲ್ಲಿ ಅರ್ಥವಿಸ್ತಾರ ಹೆಣೆಯುವ ಸಹಜ ಜಾಣ್ಮೆ ಇಲ್ಲಿ ಪ್ರಕಟಗೊಂಡಿದೆ. ಪ್ರೊ. ಮಲ್ಲಿಕಾರ್ಜುನ ಹಿರೇಮಠ ಅವರು ಕೆಳಗಿನ ಲೇಖನದಲ್ಲಿ 'ಜೇನಹನಿ'ಯ ಪದರು ಪದರುಗಳನ್ನು ಬಿಚ್ಚಿ ಬಿಡಿಸಿದ್ದಾರೆ:

"ವ್ಯಕ್ತಿತ್ವ ವಿಕಾಸಕ್ಕೆ ಬೇಕಾಗಿರುವ ಅಂಶಗಳು, ಬದುಕಿನಲ್ಲಿ ಅಗತ್ಯವಾಗಿರ ಬೇಕಾದ ನೀತಿ-ನಿಯಮುಗಳು ಹಾಗೂ ಆದರ್ಶಗಳನ್ನು ಕುರಿತು 'ಮೂಜಗಂ' ಇಲ್ಲಿ ಚಿಂತನ ನಡೆಯಿಸಿದ್ದಾರೆ. 'ಆತ್ಮಶೋಧನೆ' ಎಂಬ ಮೊದಲ ಬರಹದಲ್ಲಿ 'ಮಜ್ಜಿಗೆ ಕಡೆದಂತೆ ಬೆಣ್ಣೆ ಹೊರಡುವಂತೆ ಚಿಂತನ-ಮಂಥನ ಗೈದರೆ ತತ್ವದ ಬೆಣ್ಣೆ ಹೊರಟು ವಿಚಾರಶಕ್ತಿ ಜಾಗೃತವಾಗುವದು' ಎನ್ನುತ್ತ ಇದು ಆಚಾರಕ್ಕೆ ಪ್ರೇರಕವಾಗಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಇದಕ್ಕಾಗಿ ಶ್ರವಣ, ಮನನ, ನಿಧಿಧ್ಯಾಸ ಅಗತ್ಯ ಎಂಬ ನಿಲುವು ತಳೆಯುತ್ತಾರೆ. 'ಕಾಯಕವೇ ಕೈಲಾಸ'ದಲ್ಲಿ 'ಕಾಯಕದಲ್ಲಿ ನಿರತನಾದೊಡೆ ಗುರುದರ್ಶನವಾದರೂ ಮರೆಯಬೇಕು' ಎಂಬ ಶರಣರ ನಿಲುವನ್ನು ಬಲವಾಗಿ ಸಮರ್ಥಿಸುತ್ತಾರೆ.... ಈ ಎಲ್ಲ ಬರಹಗಳ ಹಿಂದಿರುವ ಶ್ರೀಗಳವರ ಸುಸಂಸ್ಕೃತ ಮನಸ್ಸು ಅವರ ಅನುಭವ ಹಾಗೂ ಅನುಭಾವ ಕೂಡ ನಮ್ಮ ಅರಿವಿಗೆ ಬರುತ್ತವೆ. ಅವರ ವಿಶಾಲ ಮನೋಭಾವ, ರಾಷ್ಟ್ರೀಯ ಸಮಗ್ರತೆಯ ಕಲ್ಪನೆ, ಧರ್ಮದ ಅಂತಃಸತ್ವದ ಅರಿವು ಇಲ್ಲಿ ಗಮನಸೆಳೆಯುತ್ತವೆ....ಈ ಪುಸ್ತಿಕೆಗೆ 'ಜೇನಹನಿ' ಎಂಬ ಶೀರ್ಷಿಕೆ ಕೊಡುವಲ್ಲಿ ಕೂಡ ಅವರ ಸೃಜನತೆಯ ಸ್ಪರ್ಶವಿದೆ. ಕಿರಿದರಲ್ಲಿ ಹಿರಿದಾದುದನ್ನು ಹಿಡಿವ ತವಕ ಇಲ್ಲಿದೆ, ಸುಲಭವಾಗಿ ಅತ್ಯಂತ ಸಾಮಾನ್ಯ ಓದುಗನಿಗೆ ಗ್ರಾಹ್ಯವಾಗಬೇಕೆಂಬ ಧೋರಣೆ ಇದೆ. ಧರ್ಮ, ಸಂಸ್ಕೃತಿ ಹಾಗೂ ಜೀವನ ಮೌಲ್ಯಗಳ ಬಗ್ಗೆ ಒಂದು ಹಿರಿಯ ಜೀವದ ಕಳಕಳಿ ವೇದ್ಯವಾಗುತ್ತದೆ· ನಮ್ಮ ಬಾಳಿಗೆ ಬೆಳಕಾಗಬಲ್ಲ ನುಡಿಮುತ್ತುಗಳನ್ನು ಈ ಪುಸ್ತಿಕೆ ಒಳಗೊಂಡಿವೆ."26

## ಹಿಂದಿ ವಾಙ್ಮಯಕ್ಕೊಂದು ಮೂಜಗಂ ಕೊಡುಗೆ: "ವಿವಿಧತಾ ಮೆ ಏಕತಾ"

ಕಾಶಿ–ಕಲಕತ್ತೆಯಲ್ಲಿನ ಅಧ್ಯಯನ ಶ್ರೀ ಮೂಜಗಂ ವ್ಯಕ್ತಿತ್ವವನ್ನು ಬಹು ಭಾಷಾಮುಖಿಯಾಗಿ ರೂಪಿಸಿತೆಂಬುದಕ್ಕೆ 'ವಿವಿಧತಾ ಮೆ ಏಕತಾ' ಒಂದು ಸುಂದರ ಸಾಧಾರ, ಕನ್ನಡ–ಇಂಗ್ಲಿಷ–ಸಂಸ್ಕೃತ–ಹಿಂದಿಯಲ್ಲಿ ಅವರ ಅಧ್ಯಯನ–

---

26 'ಜೇನಹನಿ': ಪ್ರೊ. ಮಲ್ಲಿಕಾರ್ಜುನ ಹಿರೇಮಠ, ಮಹಾಭಿನಂದನ ಸಂಪುಟ ಭಾಗ–2

ಉಪನ್ಯಾಸ–ರಚನಾಶಕ್ತಿ ರೂಪಿತಗೊಂಡವು. ಶ್ರೀ ಜಗದ್ಗುರುಗಳು ಅನೇಕ ಪ್ರಥಮ ದರ್ಜೆಯ ಸಭೆಗಳಲ್ಲಿ, ವಿದ್ವಜ್ಜನಗೋಷ್ಠಿಗಳಲ್ಲಿ, ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ವೇದಿಕೆಯಿಂದ ಉಪನ್ಯಾಸಿಸಿದ ಹಿಂದಿ ಉಪನ್ಯಾಸಗಳ ಸಂಗ್ರಹವೇ ಈ ಕೃತಿ. ಹೀಗಾಗಿ ಇದು ಅವರ ಏಕೈಕ ಹಿಂದಿ ಕೃತಿಯಾದರೂ ಪ್ರೌಢವಾಗಿದೆ. ಅವರ ಆಳವಾದ ಸಂಸ್ಕೃತಾಧ್ಯಯನ, ಕನ್ನಡದ ಒಳಾಂಗಣದ ಅರಿವು, ವಿಪುಲವಾದ ಜೀವನಾನುಭವಗಳು ಇಲ್ಲಿ ಅರ್ಥಪಾಕಗೊಂಡಿವೆ. ೧೯೮೦ ರಲ್ಲಿ ಪ್ರಕಟಗೊಂಡ ಈ ಕೃತಿಯಲ್ಲಿ ತತ್ಪೂರ್ವದ ಒಂದು ದಶಕಕ್ಕಿಂತಲೂ ಹೆಚ್ಚಿನ ಕಾಲದ ಎಂಟು ಉಪನ್ಯಾಸಗಳು ಅಡಕವಾಗಿವೆ. ಈ ಕೃತಿಯ ಆತ್ಮೀಯ ಅವಲೋಕನಗೈದ ಹಿಂದಿ ವಿದ್ವಾಂಸರಾದ ಡಾ. ಬಿ. ಎಫ್. ಹಸರಾಣಿ ಅವರ ಮಾತಿನಲ್ಲಿ ಈ ಕೃತಿಯ ಅಂತರ್ದರ್ಶನವನ್ನು ಕಂಡುಕೊಳ್ಳಬಹುದು:

"........ಪರಮಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ ಅವರು ಅನೇಕ ರಾಷ್ಟ್ರೀಯ ಅಂತರ್ರಾಷ್ಟ್ರೀಯ ಮಟ್ಟದ ಸರ್ವಧರ್ಮ ಸಮ್ಮೇಳನಗಳಲ್ಲಿ, ಅಧಿವೇಶನಗಳಲ್ಲಿ ಭಾಗವಹಿಸಿ ಹಿಂದಿಯಲ್ಲಿ ಹಲವಾರು ವಿದ್ವತ್ಪೂರ್ಣವಾದ, ಉದ್ಬೋಧಕವಾದ ಉಪನ್ಯಾಸಗಳನ್ನು ನೀಡಿ ವಿಚಾರ ಕ್ರಾಂತಿಯ ಕಹಳೆಯನ್ನೂದಿದ್ದಾರೆ. ಪೂಜ್ಯ ಶ್ರೀಗಳವರ ಇಂತಹ ಎಂಟು ಪ್ರಾತಿನಿಧಿಕ ಉಪನ್ಯಾಸಗಳ ಸಂಗ್ರಹ ಈ ಗ್ರಂಥ. ಅವುಗಳಲ್ಲಿ ಮೂಡಿಬಂದಿರುವ ರಾಷ್ಟ್ರೀಯ ಏಕತೆ, ಸಾಮಾಜಿಕ ಜೀವನದಲ್ಲಿ ಧರ್ಮದ ಪಾತ್ರ, ಸರ್ವಧರ್ಮ ಸಮನ್ವಯ, ವಿಶ್ವಶಾಂತಿ ಮತ್ತು ವಿಶ್ವಕಲ್ಯಾಣಕ್ಕೆ ಜೈನ, ಬೌದ್ಧ, ವೀರಶೈವ ಧರ್ಮ ಹಾಗೂ ದರ್ಶನಗಳ ಕೊಡುಗೆ, ಕನ್ನಡ ನಾಡು–ನುಡಿ, ಕರ್ನಾಟಕದ ಸಂಸ್ಕೃತಿ–ಸಭ್ಯತೆ, ಶರಣ ಸಾಹಿತ್ಯ–ಸಂಸ್ಕೃತಿಗಳ ಹಿರಿಮೆ–ಗರಿಮೆ, ಶರಣ–ಶರಣೆಯರ, ಜೈನ ಆಚಾರ್ಯರ ವಿಶುದ್ಧ ಜೀವನ-ದರ್ಶನ, ಮಹಾತ್ಮಾ ಗಾಂಧೀಜಿ, ವಿನೋಬಾ ಭಾವೆ, ದಲಾಯಿ ಲಾಮಾರಂತಹರ ಜೀವನಯಜ್ಞ ಮುಂತಾದ ವಿವಿಧ ವಿಷಯಗಳ ಸಿಂಹಾವಲೋಕನ ಪ್ರಸ್ತುತ ಲೇಖನದ ಪ್ರತಿಪಾದ್ಯ ವಿಷಯ........ಒಟ್ಟಿನಲ್ಲಿ 'ವಿವಿಧತಾ ಮೆ ಏಕತಾ' ಗ್ರಂಥರಚನೆ ಮಾನವನ ದುಃಖ ವಿಮೋಚನೆ, ವಿಶ್ವಶಾಂತಿ, ವಿಶ್ವಕಲ್ಯಾಣದ ಮಾರ್ಗೋಪಾಯಗಳನ್ನು ಕಂಡುಕೊಳ್ಳುವ ಒಂದು ಸಾತ್ವಿಕ ಪ್ರಯತ್ನವಾಗಿದೆ. ಈ ಬಗ್ಗೆ ಪೂಜ್ಯ ಶ್ರೀಗಳವರು ಅತ್ಯಂತ ಕಳಕಳಿಯಿಂದ ವಿಶ್ವದ ಧರ್ಮಗುರುಗಳಿಗೆ ಸೂಕ್ತ ಸಲಹೆ–ಸೂಚನೆಗಳನ್ನಿತ್ತು ಎಚ್ಚರಿಸಿದ್ದಾರೆ. ಇಂದು ಜಗತ್ತಿನಾದ್ಯಂತ ಯುದ್ಧರಕ್ಕಸ ರಕ್ತದಾಹದಿಂದ ಕುಣಿದು ಕುಪ್ಪಳಿಸುತ್ತ ತನ್ನ ಕದಂಭ ಬಾಹುಗಳಿಂದ ಮನುಕುಲವನ್ನೇ ಸಂಹರಿಸಿ ಕುಚೇಷ್ಟೆ ಮಾಡುತ್ತಿರುವಾಗ ವಿಶ್ವದ ಧರ್ಮಗುರುಗಳು ನಿಷ್ಕ್ರಿಯರಾಗಿ ಕುಳಿತುಕೊಳ್ಳದೆ ಒಂದೆಡೆ ಸೇರಬೇಕು.

ಅಂತರ್ರಾಷ್ಟ್ರೀಯ ಸರ್ವಧರ್ಮ ಸಮ್ಮೇಲನಗಳ ವೇದಿಕೆಯ ಮೇಲೆ ಮಾನವನ ದುಃಖ-ವಿಮೋಚನೆ, ವಿಶ್ವಶಾಂತಿ, ವಿಶ್ವಕಲ್ಯಾಣದ ಬಗ್ಗೆ ಆಳವಾಗಿ ಚರ್ಚಿಸಿ ಸೂಕ್ತ ಪರಿಹಾರೋಪಾಯಗಳನ್ನು, ಸುಖ-ಶಾಂತಿಯ ಸಂದೇಶಗಳನ್ನು ಧರ್ಮ-ಜ್ಞಾನದ ಜ್ಯೋತಿ ಬೆಳಗುವದರ ಮೂಲಕ ವಿಶ್ವದ ಮೂಲೆ-ಮೂಲೆಗೂ ಮುಟ್ಟಿಸಬೇಕು. ಧಾರ್ಮಿಕ-ಆಧ್ಯಾತ್ಮಿಕ ಜ್ಞಾನ ಜ್ಯೋತಿಯ ಬೆಳಕಿನಲ್ಲಿ ವ್ಯಕ್ತಿ ಸಮಾಜ-ರಾಷ್ಟ್ರ ಹಾಗೂ ವಿಶ್ವ ಶಾಂತಿ-ಸಮಾಧಾನದ ಉಸಿರು ಬಿಡುವಂತಾಗಬೇಕು ಎಂದು ಸಮಸ್ತ ವಿಶ್ವಕ್ಕೆ ಕರೆಕೊಡುತ್ತ ಪೂಜ್ಯ ಶ್ರೀಗಳವರು ಭಾರತದ 'ವಸುಧೈವ ಕುಟುಂಬಕಮ್' ಎಂಬ ಸಮಷ್ಟಿ ತತ್ವವನ್ನು ಪುನರುಚ್ಚರಿಸಿದ್ದಾರೆ."27

## ಸಿದ್ಧರಾಮನ ಕಾಯಕದಿಂದ ಸಾಹಿತ್ಯದತ್ತ ಸಂದ: "ಚಿತ್‌ಕಿರಣ"

"ಪರಂಜ್ಯೋತಿ" ಪತ್ರಿಕೆಗಾಗಿ ಪ್ರತಿ ತಿಂಗಳು ತಪ್ಪದೆ ಬರೆದ ನೂರಕ್ಕೂ ಮೇಲ್ಪಟ್ಟು ಆಶೀರ್ವಾಣಿಗಳ ಸುಂದರ ಸಂಗಮವೇ "ಚಿತ್‌ಕಿರಣ". ಸ್ವಾಭಾವಿಕವಾಗಿ ಅನೇಕ ತಿಂಗಳುಗಳ; ಅದೇಕೆ, ಅನೇಕ ವರ್ಷಗಳ ವಿಚಾರವಾಹಿನಿಯ ನಿರಂತರ ಪ್ರವಾಹದ ಒಂದು ಗದ್ಯ ಕಾವ್ಯದ ಓಟವನ್ನು ಇಲ್ಲಿ ಹತ್ತಿರದಿಂದ ನೋಡಬಹುದು. ಈ ಎಲ್ಲ ಆಶೀರ್ವಾಣಿಗಳಿಗೂ ತಲೆಬರಹವಾಗಿ ಒಂದೊಂದು ಸುಸ್ಕೃತ ಸೂಕ್ತಿಗಳು ಬಂದರೂ ಅವುಗಳ ವಿಶ್ಲೇಷಣೆ ಕನ್ನಡದ ಕಣದಲ್ಲಿ ಆಗಿದೆ. ಇದೊಂದು ಜೀವನಾನುಭವದ ಕಣಜ. ಆಳವಾದ ಚಿಂತನದ ಆರವಟಿಗೆ. ವಿಶಾಲವಾದ ದರ್ಶನ ಪ್ರಜ್ಞೆಯ ಪ್ರತೀಕ. ಇದು ಸತ್ಯವಾಗಿಯೂ ಮೂಜಗಂ ಮನೋಭಾವಕ್ಕೆ ಹಿಡಿದ ಗದ್ಯ ಚೌಕಟ್ಟಿನ ಸುಂದರ ಕನ್ನಡಿ. ಇಲ್ಲಿ ಅವರ ಅಂತರಂಗದ ಆಲೋಚನೆಯ ಸರ ಮಾಲೆಯನ್ನು ಶಬ್ದಮಾಲೆಯಲ್ಲಿ ಗುರುತಿಸಬಹುದು, ಗಮನಿಸಬಹುದು, ಆಸ್ವಾದಿಸಬಹುದು. ಇವರ ಹೃದ್ಯವಾದ ಗದ್ಯ ನಮಗೆ ನೀಡುವ ಸರಳ ವಿಚಾರಗಳ ಸುಖವನ್ನು ಇಲ್ಲಿ ಉದಾಹರಣೆಗೆಂದು ಗಮನಿಸಬಹುದು—

"ರಸವಿದ್ದ ಹಣ್ಣು ಸುಂದರವಿದ್ದಂತೆ ಕರುಣರಸಭರಿತ ಜೀವನ ಸುಂದರ ಹಾಗೂ ಬಂಧುರವಿರುತ್ತದೆ."

"ಪ್ರತಿಯೊಂದು ಚಲನೆಯ ಹಿಂದೆಯೂ ಒಂದು ಮೌನವಿದೆ; ಆ ಮೌನಕ್ಕೆ ನೀನು ಸಿದ್ಧನಾಗು."

"ಕರುಣಾಜಲದಿಂದ ಮತ್ಸರಾಗ್ನಿ ಆರುತ್ತದೆ, ಜಾತಿದ್ವೇಷಗಳು ದೂರವಾಗುತ್ತವೆ."

---

27 'ವಿವಿಧತಾ ಮೇ ಏಕತಾ'; ಡಾ॥ ಬಿ. ಎಫ್. ಹಸರಾಣಿ, ಎಂ.ಎ., ಪಿಎಚ್.ಡಿ. ಮಹಾಭಿನಂದನ ಸಂಪುಟ; ಭಾಗ—2

"ಸುಖವು ಚಿನ್ನದ ಸಂಕೋಲೆಯಾದರೆ ದುಃಖವು ಕಬ್ಬಿಣದ ಸಂಕೋಲೆ."

ದ. ಲ. ಕೆರೂರ ಅವರು ಈ ಹೊತ್ತಿಗೆಗೆ ಮುನ್ನುಡಿ ಬರೆಯುತ್ತ ಗುಣ ವರ್ಣನ ಮಾಡಿದ್ದಾರೆ—

"....ಶ್ರೀ ಮೂಜಗಂ ಅವರನ್ನು ಸಮೀಪದಿಂದ ಕಾಣುವ ಅವಕಾಶ ನನಗೆ ಒಂದು ಕಾಲುಶತಮಾನದಿಂದ ದೊರಕಿದೆ. ಅವರ ಬಹುಮುಖ ಪ್ರತಿಭೆ ಮೆಚ್ಚ ಬೇಕಾದುದೇ. ಒಂದು ಧಾರ್ಮಿಕ ಪೀಠದ ಅಧಿಕಾರಿಗಳಾಗಿದ್ದುಕೊಂಡು, ಅವರು ತಮ್ಮ ಪೀಠದ ಕರ್ತವ್ಯದ ನಿರ್ವಹಣೆಯ ಜೊತೆಗೆ ಲೋಕಸಂಗ್ರಹ ಕಾರ್ಯವನ್ನು ನಡೆಸಿಕೊಂಡು ಬಂದಿರುವದು ಅವರನ್ನು ಜನಪ್ರಿಯರನ್ನಾಗಿಸಿದೆ....ಒಂದು ತಪ ಕ್ಕಿಂತಲೂ ಹೆಚ್ಚು ಕಾಲ ಈ ಕಾರ್ಯ ನಡೆಸಿಕೊಂಡು ಬಂದನಂತರ ಶ್ರೀ ಜಗದ್ಗುರು ಗಳು ಇತ್ತೀಚಿಗೆ–'ಇನ್ನು ಸಿದ್ಧರಾಮನ ಈ ಕಾರ್ಯ ಸಾಕು, ಸಾಹಿತ್ಯದತ್ತ ಗಮನ ಹರಿಸಬೇಕು' ಎಂದು ಹೇಳುತ್ತ ಬಂದಿದ್ದಾರೆ....ಮಾನವನ ಮರವೆಯನ್ನು ನಿವಾರಿಸಿ, ಅರಿವಿನ ಬೆಳಕನ್ನು ಮೂಡಿಸಲೆಂದು ಬಂದ ಈ ಚಿತ್-ಕಿರಣ ಸಕಲರ ಬಾಳಬಟ್ಟೆಗೆ ದಾರಿದೀಪವಾಗಿದೆ ಎಂದು ಧಾರಾಳವಾಗಿ ಹೇಳಬೇಕಾಗಿದೆ.... ಸಮಾಜದಲ್ಲಿ ಎಷ್ಟು ವ್ಯಕ್ತಿಗಳೊ ಅಷ್ಟು ಸಮಸ್ಯೆಗಳು.... ಅಂಥ ಪರಿಹಾರವನ್ನು ಕಂಡುಹಿಡಿಯಲು ಇಲ್ಲಿ ಪ್ರಯತ್ನ ನಡೆದಿದೆ....ಸಮಾಜದ ಅಂಕು-ಡೊಂಕುಗಳನ್ನು ಕಂಡು ಅವರ ಮನಸ್ಸು ಕಳವಳಗೊಂಡಿದೆ. ಅಹಂಮನ್ಯ ವ್ಯಕ್ತಿಗಳ ಬಗ್ಗೆ ಅವರಲ್ಲಿ ಕೋಪದ ಬದಲು ಅನುಕಂಪ ಇದೆ....ಶ್ರೀ ಮೂಜಗಂ ಅವರ ಈ ಕಿರಣಗಳ ಬೆಳಕಿನಲ್ಲಿ ವಾಚಕರ ಭ್ರಮೆ ದೂರಾಗಿ, ಲೋಕಾನುಭವ ಹೆಚ್ಚಿ, ಸರಿಯಾದ ಅರಿವು ಮೂಡಿ ಜೀವನಮಾರ್ಗ ಸುಗಮವಾಗಬಲ್ಲದು. ಸಾಕಷ್ಟು ಸಾಧಾರವಾಗಿ ಆದರೂ ಲಲಿತವಹ ಕನ್ನಡದಲ್ಲಿ ಮೂಡಿಬಂದಿರುವ ಚಿತ್-ಕಿರಣ ಕನ್ನಡಿಗರನ್ನು ಒಳ್ಳೆಯ ದಾರಿಯಲ್ಲಿ ನಡೆಸಿಕೊಂಡು ಹೋಗಲು ಬಂದಿರುವ ಸುಂದರ ಕೃತಿ."28

### ಚಿಂತನಶೀಲ ಚಿತ್ತದ ಭಾವತರಂಗಮಾಲೆ: "ಹೊಂಗಿರಣ"

"ಚಿತ್‌ಕಿರಣ"ದಂತೆ ಜನಪ್ರಿಯತೆ ಸಂಪಾದಿಸಿದ ಇನ್ನೊಂದು ಕೃತಿ "ಹೊಂಗಿರಣ". ೧೯೭೭ ರಷ್ಟು ಪೂರ್ವದಲ್ಲೇ ಬಂದ ಈ ಕೈಹೊತ್ತಿಗೆಯಲ್ಲಿ ಒಟ್ಟು ೨೩ ಸಂಸ್ಕೃತ ಸೂಕ್ತಿಗಳಿಗೆ ಕನ್ನಡದಲ್ಲಿ ಅರ್ಥದೀಪ್ತಿ ನೀಡಲಾಗಿದ್ದು; "ಆಕಾಶವಾಣಿ"ಯಿಂದ ಪ್ರಸಾರವಾದ ನಾಲ್ಕು ಚಿಂತನಗಳೂ ಅಂತ್ಯದಲ್ಲಿ ಅಡಕ ವಾಗಿವೆ. ಸಂಸ್ಕೃತದ ಸೂಳ್ನುಡಿಗಳಿಗೆ ಕನ್ನಡದ ಅರ್ಥವ್ಯಾಪ್ತಿಯ ಪರಿವೇಶ ನೀಡಿ, ಸಹಜ–ಸರಲ–ಸುಲಭ ಶೈಲಿಯಲ್ಲಿ ವಿವರಣೆ ನೀಡಿರುವದು ಈ ಕೃತಿಯ

---

28 ದ. ಲ. ಕೆರೂರ; ಮುನ್ನುಡಿ, 'ಚಿತ್‌ಕಿರಣ', ಪುಟ–1, 2, 3

ಜನಪ್ರಿಯತೆಗೆ ಸಾಕ್ಷಿ. ಇದು ಸಂಸ್ಕೃತ ವಾಙ್ಮಯಕ್ಕೆ ಕನ್ನಡದ ಕನ್ನಡಿಯಲ್ಲಿ ಹಿಡಿದ ಪ್ರುಟ್ಟ ಕನ್ನಡಿ. ಇಲ್ಲಿಯ ಹಿತ-ಮಿತವಾದ ಗದ್ಯದ ಸಂಪತ್ತಿಗೆ ಒಂದೆರಡು ನಿದರ್ಶನಗಳನ್ನು ಗಮನಿಸಿರಿ—

"ಅಂಗವೆಂಬ ಭೂಮಿಯಲ್ಲಿ ಲಿಂಗವೆಂಬ ಬೆಳೆಯಾಗುತ್ತದೆ."

"ಭಾವ ಭೂಮಿಯ ಮೇಲೆ ಏಕತೆಯ ಕಾಳುಗಳನ್ನು ಬಿತ್ತಿ, ಪ್ರೇಮವೆಂಬ ಸಿಹಿ ನೀರನ್ನು ಹಾಕಿ ಬೆಳೆದರೆ ರಾಷ್ಟ್ರದ ಶಕ್ತಿ ಸೂರ್ಮಡಿ ಹೆಚ್ಚಾಗಿ ಸೌಗಂಧ ಬೀರಬಲ್ಲವು."

"ಮುಕ್ಕಣ್ಣನೊಲಿಸಲು ಕಣ್ಣು ಮೂಲ ಕಾರಣ."

"ಮಾತಿನಿಂದ ಕಲಹ ಬೆಳೆದಷ್ಟು ಮೌನದಿಂದ ಬೆಳೆಯಲಾರದು."

ಈ ಕಿರುಹೊತ್ತಿಗೆಗೆ ಮುನ್ನುಡಿ ಬರೆದ ಡಾ|| ಡಿ. ಎಸ್. ಕರ್ಕಿಯವರ ಮಾತುಗಳನ್ನು ಅವಗಾಹಿಸಬಹುದು—

"ಹೊಂಗಿರಣ ಎಂಬ ಈ ಕಿರುಹೊತ್ತಿಗೆ ಮೂರುಸಾವಿರಮಠದ ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರರ ತತ್ವಚಿಂತನಗಳ ಮಾಲೆ, ಜೀವನ ತತ್ವಗಳ ದೀಪಮಾಲೆ....ಇದೊಂದು ಚಿಂತನಶೀಲ ಚಿತ್ತದ ಭಾವತರಂಗಮಾಲೆ ಎಂದು ಹೇಳಿದರೆ ಸರಿಯಾದೀತು........ಸಂಸ್ಕೃತ ಸುಭಾಷಿತಗಳಲ್ಲಿ ಹುದುಗಿದ ಹುರುಳನ್ನು ವಿವರವಾಗಿ ತಿಳಿಯಪಡಿಸುವ ಸಂದರ್ಭಗಳಲ್ಲಿ ಜಗದ್ಗುರುಗಳು ತತ್ಸಮಾನವಾದ ಕೆಲವು ಕನ್ನಡ ನುಡಿಮುತ್ತುಗಳನ್ನು ಕನ್ನಡ ಸಾಹಿತ್ಯದ ಸಂಪದವನ್ನು ಮನದೆದುರು ಎತ್ತಿಹಿಡಿಯುವಂತೆ ಚೆಲುಮಾತುಗಳ ಸರಣಿಯ ಸರದಲ್ಲಿ ಪವಣಿಸಿದ ಬಗೆ ಬಗೆಗೊಳಿಸುವಂಥದು....ಹೊಂಗಿರಣದಲ್ಲಿ ತತ್ತ್ವಚಿಂತನವಿದೆ, ವಿಚಾರ ಮಂಥನವಿದೆ, ಅನುಭಾವದ ಸ್ಫುರಣವಿದೆ."29

### ಚೇತನವೇ 'ಹೂ': ಚಿಂತನವೇ 'ಬಳ್ಳಿ' ಅದೇ "ಹೂಬಳ್ಳಿ"

"ಹೊಂಗಿರಣ", "ಚಿತ್‌ಕಿರಣ"ಗಳ ಚಿಂತನಶೀಲ ವಿಶಿಷ್ಟ ಮಾಲೆಯಲ್ಲಿ ಮೂಡಿಬಂದ ಇನ್ನಿಷ್ಟು ಪ್ರೌಢ–ಪರಿಣತ ಕೃತಿ: ೧೯೮೭ ರಲ್ಲಿ ಮೈದಾಳಿದ "ಹೂಬಳ್ಳಿ". ಈ ಓಘದ ಸಾಹಿತ್ಯ ನಿರ್ಮಿತಿಯ ದಾರಿಯಲ್ಲಿ ಶ್ರೀ ಮೂಜಗಂ ಇನ್ನಿಷ್ಟು ಸ್ಥಾಯಿಯಾಗುತ್ತಿರುವುದಕ್ಕೆ ಈ ಕೃತಿ ಸಾಕ್ಷಿ. ಎರಡು ದಶಕಗಳ ಪೀಠಾರೋಹಣೋತ್ತರದ ಬದುಕಿನಲ್ಲಿ ಉಸಿರಾಡಿಸಲೂ ಸಮಯವಿಲ್ಲದ ಸಾವಿರಾರು ಕೆಲಸ ಕಾರ್ಯಗಳಲ್ಲಿ ಇಂಥ ಚಿಂತನಶೀಲ–ವಿಚಾರಶೀಲ ಸಾಹಿತ್ಯ ಬರೆದಿರುವದು

29 ಡಾ|| ಡಿ. ಎಸ್. ಕರ್ಕಿ; "ಹೊಂಗಿರಣ", ಮುನ್ನುಡಿ, ಪುಟ–1 ರಿಂದ 9

ಅಚ್ಚರಿ. ಈ ಬಗೆಯ ಸಾಹಿತ್ಯ ನಿರ್ಮಿತಿಗೆ "ಪರಂಜ್ಯೋತಿ" ಭದ್ರ ನೆಲೆಗಟ್ಟಾ ಯಿತು. ಸಂಸ್ಕೃತದ ಸಾರೋಕ್ತಿಗಳಿಗೆ ಕನ್ನಡದ ಸಾರೋಟು ಭಾಷಾ ಮಾಧ್ಯಮ ಒದಗಿಸಿತು. ಮುಖ್ಯತಃ ಇಲ್ಲಿಯ ಜಿಜ್ಞಾಸೆ ಕಾವ್ಯ–ಸಿದ್ಧಾಂತ–ಸಮಾಜ–ಶಾಂತಿ–ವಿಶ್ವಪ್ರೇಮಗಳ ಪಂಚದೀಪಗಳಿಂದ ಪಂಚಾರತಿಯಾಗಿದೆ. ಇಲ್ಲಿರುವ ಸಂಸ್ಕೃತ ಸಾರೋಕ್ತಿಗಳು ಗಮನಾರ್ಹ. ಪ್ರತಿಯೊಂದು ಸೂಕ್ತಿಸಾರವನ್ನು ಓದಿ ಆನಂದಿಸು ವಂತಿವೆ. ಅಲ್ಲಿರುವ ಸರಳತೆ ಹಾಗೂ ನಮ್ರತೆ ಕೈಬೀಸಿ ಕರೆಯುತ್ತದೆ. ಈ ಮಾತುಗಳು ನಮ್ಮವಾಗುತ್ತವೆ. ಉದಾ—

"ಮಠಾಧೀಶ್ವರರೆಂದ ಮಾತ್ರಕ್ಕೆ ನಮ್ಮಷ್ಟಕ್ಕೆ ನಾವೇ ಸುಮ್ಮನೆ ಕುಳಿತು ಕೊಂಡು ಜೀವನ ಸಾಗಿಸುವದು ಇದೀಗ ಸರಿಯೆನಿಸದು."

"ಉರಿಬರಲಿ ಸಿರಿಬರಲಿ ಸರ್ವಸ್ವವನ್ನು ಸರ್ವಾಂತರ್ಯಾಮಿಗೆ ಸಮರ್ಪಿಸಿ ಸಮಾಜ ಸೇವಕರೀಗ ಕಾರ್ಯಮಾಡಬೇಕಾಗಿದೆ."

"ಧರ್ಮ ಬದುಕಿನ ಬೇರು ಎನಿಸಿದರೆ ಅರ್ಥವು ಚಿಗುರುವ ಹೂವು."

"ಇದೀಗ ಬೇಕಾಗಿರುವದು ಮೊದಲು ಅನ್ನ, ನಂತರ ತತ್ವ."

"ಹಾಲನೆರೆದರೆ ಹಾವಿನ ನಂಜು ಸವಿಯಾಗದು; ಹೊರಗಣ ವಿದ್ಯೆಯಿಂದ ಹೃದಯ ಶುದ್ಧಿಯಾಗದು."

"ಮೈಗೆ ಕೈಗಳಂತೆ, ಕಣ್ಣುಗಳಿಗೆ ರೆಪ್ಪೆಗಳಂತೆ ಯಾರು ಯೋಚನೆಯಿಲ್ಲದೆ ಹಿತ ಬಯಸುತ್ತಾರೆಯೋ ಅವರೇ ನಿಜವಾದ ಬಂಧುಗಳು."

ಹೀಗೆ ಬದುಕನ್ನು ಹತ್ತಿರದಿಂದ ನೋಡುವ, ತೋರುವ ಕಲೆ ಇಲ್ಲಿ ಕರಗತ ವಾಗಿದೆ. ಎತ್ತರದ ತತ್ವಗಳು ಇಲ್ಲಿ ನಡುಮನೆಯ ಮಾತಾಗಿವೆ. "ಇದರಲ್ಲಿ ಮೂಡಿಬಂದ ಹೇಳಿಕೆಗಳು ಕೇವಲ ಹೇಳಿಕೆಗಳಲ್ಲ, ಹೃದಯಾಂತರಾಳದಿಂದ ಹೊರ ಹೊಮ್ಮಿದ ಭಾವಪೂರ್ಣವಾದ ವಿವೇಕ ದೀಧಿತಿಗಳು."30

"ಅನೇಕ ವಾಕ್ಯಗಳು ಕಾವ್ಯ–ಶ್ರುತಿ–ಸ್ಮೃತಿಗಳ ಆಕರದಿಂದ ಉದಾಹೃತ ವಾಗಿವೆ. ಚಿತ್ತಶುದ್ಧಿ–ಸಂಯಮ–ಸತ್ಯ–ಧರ್ಮ–ಶಾಂತಿ–ಸುಖ ಇತ್ಯಾದಿ ವಿಷಯ ಗಳ ಅನ್ಯೋನ್ಯ ಅನುಬಂಧವನ್ನು ಪೂಜ್ಯರು ಮನಂಬುಗುವಂತೆ ತಿಳಿಸಿದ್ದಾರೆ."31

---

30 ಪ್ರೊ. ಎ. ಎಲ್. ಹಿರೇಮಠ; "ಹೂಬಳ್ಳಿ", ಗ್ರಂಥ ಪರಿಚಯ, ಪುಟ–2
31 ಅದೇ, ಪುಟ–5

**"Heart's Blossoms":**
**ಒಂದು ಅವಸರದ ಒಳನೋಟ**

ಶ್ರೀ ಮೂಜಗಂ ಅವರು ನಾನಾ ಸಂದರ್ಭಗಳಲ್ಲಿ ಬರೆದ ಕನ್ನಡದ ವಚನಗಳನ್ನು ಆಂಗ್ಲಲೋಕಕ್ಕೆ ಪರಿಚಯಿಸುವ ಮೊದಲ ಸಾಹಸ ಮಾಡಿದವರು ಶ್ರೀ ಎಸ್. ಎಂ. ಅಂಗಡಿಯವರು. ಅವರು ಈ ಜವಾಬ್ದಾರಿಯ ಕೆಲಸವನ್ನು ಕೇವಲ ತಮ್ಮ ಮೇಲೆಯೇ ಹೊತ್ತುಕೊಳ್ಳದೇ; ಆಂಗ್ಲ ಭಾಷಾ ಮಾಧ್ಯಮಕ್ಕೆ ಕನ್ನಡದ ವಚನದ ನುಡಿಗಟ್ಟುಗಳನ್ನು ಅಳವಡಿಸಲು ಪ್ರೊ. ಆರ್‌ಮ್ಯಾಂಡೊ ಮೆನೆಝಿಸ್ (Prof. Armando Menezes) ಅವರ ನೆರವನ್ನು ಪಡೆದರು. ಉಭಯ ವಿದ್ವಾಂಸರಿಂದ ಹೀಗೆ ಅನುವಾದ ಕಂಡ ವಚನಗಳು ೧೯೭೪ ರಲ್ಲಿ ಪ್ರಕಟಗೊಂಡುದು ಮಾತ್ರವಲ್ಲದೆ; ಬೆಲ್ಜಿಯಂ ದೇಶದ ಲ್ಯೂವೆನ್(Leuven)ದಲ್ಲಿ ಡಾ|| ಹೋಮರ್ ಎ. ಜಾಕ್ (Dr. Homer A. Jack) ಅವರಿಂದ ಬಿಡುಗಡೆಯ ಭಾಗ್ಯ ಪಡೆದುದನ್ನು ಈಗಾಗಲೇ ಈ ಗ್ರಂಥದ ಮೂರನೆಯ ಭಾಗದಲ್ಲಿ ಸಾದ್ಯಂತವಾಗಿ ನೋಡಲಾಗಿದೆ. ಈ ಅನುವಾದಿತ ವಚನಗಳ ಮೂಲ ಕನ್ನಡದ ವಚನಗಳ ಪ್ರತ್ಯೇಕ ಸಂಕಲನ ಬಂದಿಲ್ಲವಾದರೂ, ಅನುವಾದಕರ ನಿಷ್ಣಾತ ತರ್ಜುಮೆಗಳ ಪ್ರಾಮಾಣಿಕತೆ ಹಾಗೂ ಪ್ರಾವೀಣ್ಯತೆಗಳಿಂದ ಲೇಖಕರ ಭಾವಸಂಪತ್ತನ್ನು, ಊಹಿಸುವದು ಸಾಧ್ಯವಾಗಿದೆ. ಮುಖ್ಯವಾಗಿ ಈ ವಚನಗಳಲ್ಲಿ ಮೇಲಿಂದ ಮೇಲೆ ಹೃದಯದ ಸಂಬಂಧಿಯಾದ ಉಲ್ಲೇಖಗಳು ವಿಪುಲವಾಗಿ ಬಂದಿರುವದರಿಂದ ಇದಕ್ಕೆ "Heart's Blossoms" ಎಂದು ಕರೆದಿರುವದು ಅರ್ಥಪೂರ್ಣವೇ ಆಗಿದೆ. ಹೃದಯವು ಅನುಕಂಪೆಯ ಆಗರ, ಆಶೆಗಳ ಹೂಬುಟ್ಟಿ. ಸಾಹಿತ್ಯ ದೇಗುಲದ ನಿರ್ಮಿತಿಗೆ ಹೃದಯದ ಐಶ್ವರ್ಯವೇ ಮೂಲ:

"Behold, the mind desires
To build the temple of literature
With the heart's riches"32

ಹೃದಯವು ಕರುಣೆ, ಅನುಕಂಪೆಗಳ ಆಡುಂಬೊಲವಾಗಿದೆ. ಅನುಕಂಪೆ ಇಲ್ಲದ ಸಾವಿರ ಮಾತುಗಳೂ ಜೊಳ್ಳುಗಾಳು ಎಂದು ಶ್ರೀ ಮೂಜಗಂ ಹಾಡಿದ್ದಾರೆ:

"A thousand words without
A sense of sympathy is as
A hollow seed, mere chaff...."33

---

32 Heart's Blossoms: About the Author: ix
33 " " " : x

ಶಾಂತಿಯು ಜೀವನದ ಜೀವಾಳ. ಶಾಂತಿ ಇಲ್ಲದ ವ್ಯಕ್ತಿಯಾಗಲಿ, ರಾಷ್ಟ್ರವಾಗಲಿ ನೀರಿಲ್ಲದ ಬಾವಿಯಂತೆ. ಶಾಂತಿ ಇಲ್ಲದ ಧರ್ಮವಿಲ್ಲ, ಧರ್ಮವಿಲ್ಲದ ಶಾಂತಿಯಿಲ್ಲ; ಎರಡೂ ಅಂತರಾಳದಲ್ಲಿ ಹಾಸುಹೊಕ್ಕಾಗಿರುತ್ತವೆ:

"A person without Peace,
A nation without Peace,
Is useless like a well
That has no water!
Religion without Peace,
And Peace without religion,
Are interwoven mutually,
Like warp and woof, look you,
Lord of the blossoming- creeper town
World-teacher, Founder Gurusiddhesvara!"34

ಗಂಡ-ಹೆಂಡಿರ ನಡುವಿನ ಮಮತೆಯ ಮಧುರ ಬಾಂಧವ್ಯವನ್ನು ಶಿವ ಮೆಚ್ಚುತ್ತಾನೆ. ದಂಪತಿಗಳು ಪರಸ್ಪರರನ್ನು ಅರಿತು ಅಗಲದೇ ಜೀವವೃಕ್ಷದಲ್ಲಿ ಸಾಂಗತ್ಯವನ್ನು ತುಂಬಬಲ್ಲರು:

"A wife must never leave
Her husband, so shall siva approve,
A life of harmony between
Husband and wife bears fruit
For the world's tree, look you,
Lord of the blossoming- creeper town,
World- teacher, Founder Gurusiddhesvara!"35

ಹೃದಯುವೇ ಹೂವರಳಿ ನಿಂದ ಬಳ್ಳಿ. ಆತ್ಮ ಚೈತನ್ಯವೇ ಕೋಗಿಲೆ. ಆ ಕೂಜನದಲ್ಲಿ ನೆನಪು ತುಂಬಿದೆ. ಪ್ರೇಮೋನ್ಮಾದ ಪ್ರಾದುರ್ಭವಿಸಿದೆ:

"Within the blossoming Creeper of the heart,
Behold, the spirit's cuckoo coos;
It yearns for the sweet taste
Of meditation's essence; and
It is a lodging for the spirit's light
Dwelling in the ecstasy of love.

---

34 Heart's Blossoms: Page-62
35 Heart's Blossoms: Page-81

O my beloved cuckoo- bird,
Grant that I fly
Ever toward Thee!"36

## ಪ್ರವಾಸ ಕಥನದಲ್ಲೊಂದು ಪ್ರಬುದ್ಧ ಪ್ರವೇಶ: "ನಮ್ಮ ವಿದೇಶ ಯಾತ್ರೆ"

ಪೂರ್ವ ರಾಷ್ಟ್ರಗಳಾದ ಜಪಾನ್, ಹಾಂಗ್‌ಕಾಂಗ್, ಜಕಾರ್ತಾ, ಸಿಂಗಾಪೂರ, ಥೈಲ್ಯಾಂಡಗಳಿಗೆ (೧೯೭೦) ಹಾಗೂ ಪಶ್ಚಿಮ ರಾಷ್ಟ್ರಗಳಾದ ಬೆಲ್ಜಿಯಂ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಇಟಲಿ, ಸ್ವಿಟ್ಜರ್ಲ್ಯಾಂಡ್‌ಗಳಿಗೆ (೧೯೭೪) ಜಗದ್ಗುರುಗಳು ಸಂದರ್ಶನ ನೀಡಿದ್ದು "ಸರ್ವ ಧರ್ಮಗಳ ವಿಶ್ವಶಾಂತಿ ಸಮ್ಮೇಲನ"ದ (World Conference on Religion and Peace) ಆಮಂತ್ರಣದ ಮೇರೆಗೆ. ಆ ಕುರಿತಾಗಿ ೧೯೭೫ ರಲ್ಲಿ ಬಂದ ಈ ಕೃತಿ ಪ್ರವಾಸ ಸಾಹಿತ್ಯದ ಬಗ್ಗೆ ಕನ್ನಡಿಗರಿಗೆ ತುಂಬ ರೋಚಕವಾದ, ರೋಮಾಂಚಕವಾದ, ಅಷ್ಟೇ ಪರಿಚಯಾತ್ಮಕವಾದ ವಿವರಣೆಯನ್ನು ಬುದ್ಧಿಗೆ ಊಟವಾಗಿ ಉಣಬಡಿಸಿತು. ಈಗಾಗಲೇ ಇದೇ ಗ್ರಂಥದಲ್ಲಿ ಪೂಜ್ಯ ಜಗದ್ಗುರುಗಳ ಈ ಹತ್ತಾರು ರಾಷ್ಟ್ರಗಳ ಸಂಚಾರದ ವಿವರವಾದ ವಿವರಣೆಯನ್ನು ನೀಡಿಯಾಗಿದ್ದರಿಂದ ಇಲ್ಲಿ ಮತ್ತೆ ಆ ವಿಸ್ತಾರಕ್ಕೆ ಕೈಹಾಕದೆ ಈ ಕೃತಿಯ ಬಗ್ಗೆ ಕೆಲ ವಿದ್ವಾಂಸರು ನೀಡಿದ ಅಭಿಪ್ರಾಯಗಳನ್ನು ಮಾತ್ರ ಇಲ್ಲಿ ನೀಡಲಾಗುತ್ತದೆ.

ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಸದಾಶಿವ ಒಡೆಯರ ಅವರು ಈ ಗ್ರಂಥಕ್ಕೆ ಬರೆದ ಮುನ್ನುಡಿಯ ಮಾತುಗಳನ್ನು ಪರಿವೀಕ್ಷಿಸಬಹುದು:

"ವಿಶ್ವಶಾಂತಿಗೆ ಚೈತ್ರಯಾತ್ರೆ ಕೈಕೊಂಡ ಶ್ರೀಗಳು ವಿದೇಶ ಯಾತ್ರೆಯನ್ನು ಯಶಸ್ವಿಯಾಗಿ ಪೂರೈಸಿದ ಪರಿಚಯಾತ್ಮಕ ವಿವರಣೆಯನ್ನು ಕೊಡುತ್ತ, ನಮ್ಮನ್ನೂ ತಮ್ಮ ಜೊತೆಗಾರರಂತೆ ಮುಂದೆ ಮುಂದೆ ಸಾಗಿಸಿಕೊಂಡು ಹೋಗುತ್ತಾರೆ. ಎರಡನೆಯ ವಿಶ್ವ ಸಮರದಲ್ಲಿ ಬಾಂಬ ದಾಳಿಯಿಂದ ನೆಲಸಮವಾಗಿದ್ದ; ಆದರೆ ಇಂದು ವಿಶ್ವರಂಗದ ಭವ್ಯ ರಾಷ್ಟ್ರವೆಂದು ತನ್ನ ಪ್ರಾಮಾಣಿಕ ಸೇವೆ, ಸತತೋದ್ಯೋಗ, ರಾಷ್ಟ್ರಭಕ್ತಿ, ವಿಜ್ಞಾನ, ಅಂತರ್ ಜ್ಞಾನಗಳ ಆಸಕ್ತಿಯಿಂದ ಶರವೇಗದಿಂದ ರೂಪುಗೊಳ್ಳುತ್ತಿರುವ ಜಪಾನ್ ದೇಶದ ಯಾತ್ರೆಯನ್ನು ಸುಂದರವಾಗಿ ಶ್ರೀಗಳು ಚಿತ್ರಿಸಿದ್ದಾರೆ. ಯಾವವೇ ತರತಮಕ್ಕೆ, ಭೇದಭಾವಕ್ಕೆ ಬೆಲೆಕೊಡದ, ಕನಿಷ್ಠ-ಗರಿಷ್ಠ ಮೇಲೆ-ಕೆಳಗೆ, ಹೆಚ್ಚು-ಕಡಿಮೆ ಎಂಬ ಅಲ್ಪ ವಿಚಾರಗಳಿಗೆ ಆಸ್ಪದವಿಲ್ಲದ; ಹಿಂದೂ, ಜೈನ, ಸಿಖ್, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಹಾಯಿ, ಫಾರಸಿ,

---

36 Heart's Blossoms: Page-6

ಸಿಂಟೊ, ಜ್ಯೂ, ಕನ್‌ಫ್ಯೂಶಿಯಸ್ ಮುಂತಾದ ಭಿನ್ನ ಭಿನ್ನ ಧರ್ಮದವರು ತಮ್ಮ ಪ್ರಭೇದಗಳನ್ನು ತೊರೆದು, ವಿಶ್ವಮಾನವ ಧರ್ಮದ ಸರ್ವೋತ್ತಮ ಧ್ಯೇಯ ವನ್ನು ಚರ್ಚಿಸಿ ಶಾಂತಿಯನ್ನು ಪ್ರಸ್ತಾಪಿಸಲು ಒಂದೆಡೆ ಸೇರಿದ ಅಪ್ರತಿಮ ಸಮ್ಮೇಲನ– 'ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತು' ಯಶಸ್ವಿಯಾಗಿ ಜರುಗಿದ ನೈಜ ವಿವರಣೆಯನ್ನು ಅವರು ಸೊಗಸಾಗಿ ಚಿತ್ರಿಸಿದ್ದಾರೆ.....'ನಾವು ಪರಸ್ಪರ ಸಹಾಯ-ಸಹಕಾರಗಳ ಸಿದ್ಧಾಂತಗಳನ್ನು ಮರೆತು ಬಿಟ್ಟಿದ್ದೇವೆ. ಸಮಗ್ರ ಪೃಥ್ವಿಯೇ ನಮ್ಮ ಮನೆ ಹಾಗೂ ಮಾನವ ಮಾತ್ರರೆಲ್ಲರೂ ಸಹೋದರ-ಸಹೋದರಿಯರು ಎಂಬ ಮೂಲ ತತ್ತ್ವವನ್ನೇ ನಿರ್ಲಕ್ಷಿಸಿದ್ದೇವೆ' ಮುಂತಾಗಿ ಆ ಪರಿಷತ್ತಿನಲ್ಲಿ ಹೇಳಿದ ಅವರ ಮಾತುಗಳು ಚಿಂತನಶೀಲವಾಗಿವೆ."37

ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು ಈ ಕೃತಿಯ ವಿಶಿಷ್ಟತೆಯ ಬಗೆಗೆ ಹೇಳುವ ಮಾತುಗಳು ಮುಖ್ಯ:

"ಕನ್ನಡದಲ್ಲಿ ಪ್ರವಾಸ ಸಾಹಿತ್ಯ ತನ್ನ ಮಟ್ಟಿಗೆ ವಿಪುಲವಾಗಿಯೇ ಬೆಳೆದಿದೆ. ಅದರಲ್ಲಿ 'ಮೂಜಗಂ'ರವರ ಈ ಕೃತಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆ. ಸಾಮಾನ್ಯವಾಗಿ ಇದುವರೆಗಿನ ನಮ್ಮ ಪ್ರವಾಸ ಸಾಹಿತ್ಯದಲ್ಲಿ ಬಹುಪಾಲು ಅಳಿಯನ ಇಲ್ಲವೇ ಮಗನ ಮನೆಯಲ್ಲಿ ಕುಳಿತು, ಆಯಾ ದೇಶದ ಯಾವುದೋ ಒಂದು ಸ್ಥಳ ವನ್ನು ದೂರ ನಿಂತು ನೋಡಿದುದರ ವರದಿ, ಅಧ್ಯಯನಕ್ಕಾಗಿ ಹೋದವರ ಅಥವಾ ವಿಶೇಷ ಆಹ್ವಾನಿತರಾಗಿ ಪ್ರವಾಸವನ್ನು ಕೈಕೊಂಡವರ ಅನುಭವದ ನಿರೂ ಪಣೆಗಳೂ ಇವೆ. ಅಲ್ಲಿನ ಸಮಾಜದೊಡನೆ ಬೆರೆತು, ಅಲ್ಲಿನ ಸಮಸ್ಯೆಗಳನ್ನು ಕೈಗೆತ್ತಿ ಕೊಂಡು ಕೆಲಸ ಮಾಡಿದವರ ಅನುಭವಗಳೂ ಇಲ್ಲದಿಲ್ಲ. ಆದರೆ ಇಲ್ಲಿ 'ಮೂಜಗಂ' ರವರ ವಿದೇಶ ಯಾತ್ರೆಯ ಉದ್ದೇಶ ಇವೆಲ್ಲವುಗಳಿಂದ ಹೊರತಾದುದು, ಬೇರೆಯಾದುದು, ವಿಶಿಷ್ಟವಾದುದು."38

ಶ್ರೀಯುತ ಎನ್. ಕೆ. ಕುಲಕರ್ಣಿಯವರು ಈ ಕೃತಿಯ ಬಗ್ಗೆ ತಮ್ಮ ಮೆಚ್ಚುಗೆ ಮನದುಂಬಿ ವ್ಯಕ್ತಗೊಳಿಸಿದ್ದಾರೆ:

"'ನಮ್ಮ ವಿದೇಶ ಯಾತ್ರೆ' ಜಗದ್ಗುರುಗಳ ಶಾಂತಿ ಸಂದೇಶ, ವಿಶ್ವಬಂಧುತ್ವ ಘೋಷಣೆಗಾಗಿ ಮಾತ್ರವೆ ಅಲ್ಲದೆ ಪ್ರವಾಸ ಸಾಹಿತ್ಯದಲ್ಲಿರಬೇಕಾದ ಸಕಲ ಸರಸ

---

37 ಶ್ರೀ ಸದಾಶಿವ ಒಡೆಯರ: ಮುನ್ನುಡಿ: ನಮ್ಮ ವಿದೇಶ ಯಾತ್ರೆ: ಪುಟ–4,5

38 ಡಾ|| ಎಚ್. ತಿಪ್ಪೇರುದ್ರ ಸ್ವಾಮಿ: "ನಮ್ಮ ವಿದೇಶ ಯಾತ್ರೆ": ಕೃತಿ ಪರಿಚಯ: ಮಹಾಭಿನಂದನ ಸಂಪುಟ: ಭಾಗ–೨

ಗುಣಗಳು ಅದರಲ್ಲಿ ಸಮಾವೇಶವಾಗುವದರಿಂದ ಈ ಗ್ರಂಥದ ಮೌಲ್ಯ ಇನ್ನಷ್ಟು ಹೆಚ್ಚುತ್ತದೆ; ಅದರ ಆಯಾಮ ಇನ್ನಷ್ಟು ಅಧಿಕಗೊಳ್ಳುತ್ತದೆ."39

ಒಂದು ಮಠದ ಜಗದ್ಗುರುಗಳಾಗಿದ್ದು ಇವರು ಇಷ್ಟೊಂದು ಸೂಕ್ಷ್ಮಾಗ್ರ ಮತಿಗಳಾಗಿ ವಿಶ್ವವನ್ನು ನೋಡಿರುವದು ಕುತೂಹಲ. ಜಿಜ್ಞಾಸುಗಳಿಗೆ, ವಿದ್ಯಾರ್ಥಿಗಳಿಗೆ ಹಾಗೂ ವಿದೇಶ ಪ್ರವಾಸಕ್ಕೆ ಹೋಗುವವರಿಗೆ ಕೂಡ ಇದೊಂದು ಬೆಲೆ ಬಾಳುವ ಕೈದೀವಿಗೆಯಾಗಿದೆ.

## ಕಳೆದುಹೋದ ಪುಸ್ತಕಗಳಿಗೆ ಕೊನೆಯ ನಮನ!

ಪೂಜ್ಯ ಜಗದ್ಗುರುಗಳ ಕಳೆದುಹೋದ ಪುಸ್ತಕಗಳು ಸದ್ಯಕ್ಕೆ ತಿಳಿದಮಟ್ಟಿಗೆ ನಾಲ್ಕು. ಇವುಗಳ ಮೂಲ ಹಸ್ತಪ್ರತಿಗಳೇ ಕಳೆದುಹೋಗಿರುವದು ವಿಷಾದನೀಯ. ಅವು ಇಂತಿವೆ—

೧) ಸಂಸ್ಕೃತ ಕವಿ ಚರ್ಚಾ (ಕನ್ನಡ): ೪೦೦ ಪುಟಗಳು
೨) ಸಾಹಿತ್ಯ (ಕನ್ನಡ): ೧೦೦ ಪುಟಗಳು
೩) ಅಭಿಜ್ಞಾನ ಶಾಕುಂತಲ ವಿಮರ್ಶೆ (ಕನ್ನಡ): ೨೦೦ ಪುಟಗಳು
೪) ಪೂದೋಟ (ಕನ್ನಡ ಕಥಾ ಸಂಕಲನ): ೧೦೦ ಪುಟಗಳು.

ಈ ಪುಸ್ತಕಗಳನ್ನು ಪೂಜ್ಯ ಜಗದ್ಗುರುಗಳು ಇನ್ನೂ ಕಾಶಿಯಲ್ಲಿ ವಿಜಯ ಮಹಾಂತದೇವರಾಗಿದ್ದಾಗ ತಮ್ಮ ವಯಸ್ಸಿನ ೨೪-೨೫-೨೭ ರ ಮಧ್ಯದಲ್ಲಿ ಬರೆದಿದ್ದರು. ಕಾವ್ಯತೀರ್ಥ, ವೇದಾಂತಾಚಾರ್ಯ ಮುಂತಾದ ಉನ್ನತ ಪದವಿಗಳು ಬಂದ ಹಿನ್ನೆಲೆಯಲ್ಲಿಯೇ ರಚಿತವಾದ ಮಹತ್ವದ ಗದ್ಯ ಕೃತಿಗಳಿವು. ಇವು ಒಟ್ಟಿಗೇ ಕಳೆಯಲು ಒಂದು ವಿಶಿಷ್ಟ ಕಾರಣವೂ ಉಂಟು. ಕಾಶಿಯಲ್ಲಿದ್ದಾಗ ಇವರಿಗೆ ಹುಬ್ಬಳ್ಳಿ ಮೂರುಸಾವಿರಮಠದ ಅಂದಿನ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರಿಂದ ತಕ್ಷಣವೇ ಬರಲು ತಾರು ಬಂತು. ಆಗ ಈ ಪುಸ್ತಕಗಳ ಜವಾಬ್ದಾರಿಯನ್ನೆಲ್ಲಾ ಶ್ರೀ ಚಂದ್ರಶೇಖರದೇವರು ಉದಾಸಮಠ (ಅಂದರೆ ಲಿಂಗೈಕ್ಯ ಗುರುಮಹಾಂತ ಸ್ವಾಮಿಗಳು: ಇಲಕಲ್ಲ) ಅವರ ಕೈಗೊಪ್ಪಿಸಿ ಹುಬ್ಬಳ್ಳಿ ಹಾದಿ ಹಿಡಿದರು. ಹುಬ್ಬಳ್ಳಿಯಲ್ಲಿ ಬಂದ ತಕ್ಷಣ ಜಗದ್ಗುರು ಪದವಿಗೆ ಆಮಂತ್ರಣ ಬಂದುದು, ಇಲಕಲ್ಲ-ಹುನಗುಂದ ಜನತೆ ಮೊದಲು ವಿರೋಧಿಸಿದುದು, ಅನಂತರ ಒಪ್ಪಿದುದು, ಅಧಿಕಾರ ಪತ್ರ, ಗುರುಸಿದ್ಧ ರಾಜಯೋಗೀಂದ್ರರ ಲಿಂಗೈಕ್ಯ, ಇವರ ಸಿಂಹಾಸನಾರೋಹಣ, ಮಠದ ಎಲ್ಲಾ ಜವಾಬ್ದಾರಿಗಳು ಒಮ್ಮೆಲೇ ಕೊರಳಿಗೆ

---

39 ಶ್ರೀ ಎನ್. ಕೆ. ಕುಲಕರ್ಣಿ: "ಪೂಜ್ಯ ಜಗದ್ಗುರುಗಳ ಪ್ರವಾಸ ಸಾಹಿತ್ಯ" ಮಹಾಭಿನಂದನ ಸಂಪುಟ: ಭಾಗ: ೨

ಬಿದ್ದುದು; ಈ ಕಾರ್ಯಬಾಹುಲ್ಯದಲ್ಲಿ ಆ ಪುಸ್ತಕಗಳ ಬಗ್ಗೆ ಮರೆವೆಯೂ ಆಯಿತು. ಪುಸ್ತಕಗಳನ್ನಿರಿಸಿದ ಆ ಪೆಟ್ಟಿಗೆ ಯಾರ ರಕ್ಷಣೆ ಇಲ್ಲದೆ ಅನಾಥವಾಯಿತೇನೊ! ಶ್ರೀ ಚಂದ್ರಶೇಖರದೇವರೂ ಇತ್ತ ಬಂದುಬಿಟ್ಟರು. ಅವರೂ ಇಲಕಲ್ಲ ಮಠದ ಸ್ವಾಮಿಗಳಾದರು. ಈ ತೀವ್ರ ಕಾರ್ಯಾಚರಣೆಯಲ್ಲಿ ಅವರ ಅಪ್ರಕಟಿತ ಸಾಹಿತ್ಯ ಹಾಗೂ ಕೆಲವು ಪದ್ಯಗಳು ಕಳೆದುಹೋದವು. ಮುಂದೆ ಪ್ರಯತ್ನಿಸಿದರೂ ಸಿಗಲಿಲ್ಲ.

'ಸಂಸ್ಕೃತ ಕವಿ ಚರ್ಚಾ' ಕಳೆದುದು ಒಂದು ದೊಡ್ಡ ಹಾನಿ. ಇದು ಕನ್ನಡದ ಗದ್ಯವಾಗಿತ್ತು. ಭವಭೂತಿ, ದಂಡಿ, ಕಾಳಿದಾಸ, ಮಾಘ, ಭಾಸ, ಬಾಣ ಮುಂತಾದ ೧೫–೨೦ ಸಂಸ್ಕೃತ ಕವಿಗಳ ಬಗ್ಗೆ ಪರಿಚಯ ಗ್ರಂಥ ಇದಾಗಿತ್ತು. "ಪೂದೋಟ" ಸುಂದರ ಕಥೆಗಳ ಸಂಗ್ರಹವಾಗಿತ್ತು. ಇಂದಿನ ಚಿಕ್ಕ ಕಥೆಗಳ ದಾರಿಯಲ್ಲಿ ಅರಳಿ ಬಂದ ಮೊದಲ ಕಥಾಗುಚ್ಛವಾಗಿತ್ತು. "ಸಾಹಿತ್ಯ" ಕೃತಿಯಲ್ಲಿ ಭರತ, ಮಮ್ಮಟ, ದಂಡಿ, ಭಾಮಹ, ರಾಜಶೇಖರ, ವಿಶ್ವನಾಥರ ಅಗ್ರವಿಚಾರಗಳ ಹಿನ್ನೆಲೆಯಲ್ಲಿ ಕಾವ್ಯಮೀಮಾಂಸೆಯ ಸಹಜ ಪರಾಮರ್ಶೆ ಇತ್ತು. "ಅಭಿಜ್ಞಾನ ಶಾಕುಂತಲ" ದೊರೆಯಲಾರದ್ದು ಒಂದು ದೊಡ್ಡ ಹಾನಿ. ಇವರ ಕವಿಚೇತನಕ್ಕೆ ರೋಮಾಂಚನ ನೀಡಿದ ಕೃತಿ ಇದಾಗಿತ್ತು. ಒಂದು ಕಾಲದ ಒಂದು ಘಟ್ಟದ ಸಾರವಿಚಾರ ಚರ್ಚೆಗಳು ಇಂದು ಅವರಿಗೇ ದೊರೆಯದಂತಾದವು. ಕಳೆದುಹೋದ ಕೃತಿಗಳ ಬಗ್ಗೆ ಜಗದ್ಗುರುಗಳು ಹೇಳುತ್ತಾರೆ:

"ಅವು ಕಳೆದುಹೋದ ಮೇಲೆ ನಮ್ಮ ಮನಸ್ಸಿಗೆ ಅಪಾರ ನೋವಾಯಿತ್ತು. ಆ ಕಾಲದ ನಮ್ಮ ಹೃದಯವೇ ಕಳೆದುಹೋದಂತಾಯಿತು. ಆ ಪುಸ್ತಕಗಳನ್ನು ಅದೇ ಶಕ್ತಿಯಿಂದ ನಾವು ಮತ್ತೆ ಇಂದು ಬರೆಯುವದು ಸಾಧ್ಯವೇ ಇಲ್ಲ."

ಕಳೆದುಹೋದ ಪುಸ್ತಕಗಳಿಗೆ ಕೊನೆಯ ನಮನ ನೀಡುವುದಲ್ಲದೆ ಇನ್ನೇನನ್ನು ಇಂದು ನಾವು ಮಾಡುವದಿದೆ?

## ಚಿಂತನ–ಚೇತನಗಳ ಕಾವ್ಯ ಕೂಡಲಸಂಗಮ: "ಪೂರ್ಣಜ್ಞ ವಚನಗಳು" ಶ್ರೀ ಮೂಜಗಂ ಸಾಹಿತ್ಯದ ಪಕ್ವರಸಾಫಲಗಳು

ಪೂಜ್ಯ ಜಗದ್ಗುರುಗಳವರು ತಮ್ಮ ಅರವತ್ತರ ಅರುಹಿನ ಎತ್ತರದಲ್ಲಿ ಕಂಡುಕೊಂಡ ಸಾಹಿತ್ಯ ರಚನೆಯ ನೂತನಾನ್ವೇಷಣೆಯೇ "ಪೂರ್ಣಜ್ಞ" ವಚನಗಳ ಸೃಷ್ಟಿ. ಲಾವಣಿ–ಸುಪ್ರಭಾತಗಳಿಂದ ಮೊದಲುಗೊಂಡು ವಿವಿಧ ಪದ್ಯ–ಗದ್ಯೋನ್ಮುಖವಾಗಿ ಪ್ರವಹಿಸಿದ "ಶ್ರೀ ಮೂಜಗಂ" ಸಾಹಿತ್ಯ ಸ್ರೋತ ತನ್ನ ಅಂತಿಮದ ಅಂಕಣದಲ್ಲಿ, ಅರವತ್ತರ ಅರಳಿದ ಎತ್ತರದಲ್ಲಿ ಕಂಡುಕೊಂಡದ್ದು ಈ ಸಾಹಿತ್ಯ ರಸ ಸರಸ್ವತಿಯು

ಗಾನಗೌರವ. ಹುಬ್ಬಳ್ಳಿಯ ಹಿರಿಯ ಕವಿಚೇತನ ವಾಲಿ ಗಂಗಪ್ಪನವರು ನೀಡಿದ ಮಾತುಮಾತಿನ ಸಹಜ ಸೂಚನೆಯೇ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರನ್ನು ಪೂರ್ಣಜ್ಞ ವಚನಗಳ ವಿಶಿಷ್ಟ ಸೃಷ್ಟಿಗೆ ಎಡೆಮಾಡಿದ್ದೊಂದು ಕುತೂಹಲದ ಸಂಗತಿ. ತಮ್ಮ ವಯಸ್ಸಿನ ಸುಮಾರು ೫೭–೫೮ ರಿಂದ ಚಿಗುರೊಡೆದ ಈ ಸಾಹಿತ್ಯ ಪ್ರಕಾರಕ್ಕೆ ಮುಂದಿನ ಮೂರು ವರ್ಷಗಳಲ್ಲಿ ಎರಡು ಸಾವಿರಕ್ಕೂ ಹೆಚ್ಚು ಪದ್ಯಗಳ ಸೇರ್ಪಡೆಯಾದದ್ದೊಂದು ಕುತೂಹಲಕರ ಬೆಳವಣಿಗೆಯೇ ಸರಿ. ಕನ್ನಡ ಸಾಹಿತ್ಯದಲ್ಲಿಯೇ ಇವರಿಗೆ ಈ ಕೃತಿಯಿಂದ ಒಂದು ವಿಶೇಷ ವಿಶಿಷ್ಟ ಸ್ಥಾನ ದೊರೆಯಲಿರುವದು ಈ ಪ್ರತಿಭಾ ಸೃಷ್ಟಿಯಿಂದಲೇ ಎಂದು ಧೈರ್ಯವಾಗಿ ಹೇಳಬಹುದು. ಆ ನಿಟ್ಟಿನಲ್ಲಿ ಪೂರ್ಣಜ್ಞ ವಚನಗಳ ಅಂತರಾಳದಲ್ಲಿ ಕೆಲಕಾಲ ಪ್ರವೇಶಿಸಿ, ಆ ವಚನಪಾದಗಳೊಂದಿಗೆ ಸಂಭಾಷಿಸಿ ಬರುವದು ಸೂಕ್ತ ಹಾಗೂ ಹಿತಕರ.

ಸ್ಥೂಲವಾಗಿ "ಸರ್ವಜ್ಞ"ತ್ವವು ಸಮಗ್ರ ಜೀವನಾನುಭವದ ಸಂಕೇತವಾದರೆ; "ಪೂರ್ಣಜ್ಞ"ತ್ವವು ಸಮಸ್ತ ಆತ್ಮಾನುಭವದ ಕುರುಹಾಗಿದೆ. ಎಲ್ಲವನ್ನೂ ತಿಳಿಯುವದು, ತಿಳಿದುದನ್ನು ತಿಳಿಯಾಗಿ ಹೇಳುವದು ಒಂದು ಗುಣವಾದರೆ, ಅರಿಯಲಾರದ ಘನವನರಿಯುವದು, ಅರಿತಂತೆ ಬೆರೆಯುವದು ಇನ್ನೊಂದು ಗುಣ. "ಸರ್ವಜ್ಞತ್ವ" ಮತ್ತು "ಪೂರ್ಣಜ್ಞತ್ವ" ಈ ನಿಟ್ಟಿನಲ್ಲಿ ಸತ್ಯದ ಎರಡು ವಿಭಿನ್ನ ಮುಖಗಳೇ ಸೈ! ಆದರೆ ಎರಡಕ್ಕೂ ಅಭಿವ್ಯಕ್ತಿಯ ಮುಖ ಒಂದೇ; ಅದೇ ತ್ರಿಪದಿ!!

ಈ ನಿಟ್ಟಿನಲ್ಲಿ "ಸರ್ವಜ್ಞ"ನ ಅನುಕರಣೆಯಾಗಿ "ಪೂರ್ಣಜ್ಞ" ಬಾರದೇ; ಸ್ವತಂತ್ರವಾಗಿ ಅಭಿವ್ಯಕ್ತಿಗೊಳ್ಳಲು ಅಪೇಕ್ಷಿಸಿದ್ದಾನೆ. "ಪೂರ್ಣಜ್ಞ"ನು ಪೂರ್ಣಜ್ಞನೇ ಅಲ್ಲವೇ? ಅನುಕರಣೆ ಎಂದಿಗೂ ಪೂರ್ಣಜ್ಞತ್ವದ ಲಕ್ಷಣವಲ್ಲ; ಲಕ್ಷಣವಾಗಬಾರದು. ಆದ್ದರಿಂದ 'ಪೂರ್ಣಜ್ಞ'ನ ಪೂರ್ಣಜ್ಞತ್ವದ ಅನ್ವೇಷಣೆಗೆ ಕೆಲಕಾಲ 'ಸರ್ವಜ್ಞ'ನನ್ನು ದೂರಿಟ್ಟೇ ಸಾಗುವದು ಯೋಗ್ಯ.

"ಪೂರ್ಣಜ್ಞತ್ವ" ಶ್ರೀ ಮೂಜಗಂ ಸಾಹಿತ್ಯದ ಗುರಿ ಮಾತ್ರ. ಅಂತರಾಳದಿಂದ ಅರಳುವ ನಿರಾಳದ ಈ ಸುಜ್ಞಾನ ಪುಷ್ಪವನ್ನು ಅಳೆಯುವದು ಯಾವ ಶಬ್ದಮಾಪನದಿಂದಲೂ ಸಾಧ್ಯವಿಲ್ಲ. ಶಬ್ದಮುಗ್ಧವಾಗಿ ಸ್ನೇಹ ಶಿವನತ್ತ ಕೈಬೀಸಿ ಕರೆದಾಗ ಅಲ್ಲವೇ ಜ್ಞಾನದೇಗುಲದ ಮೊದಲ ಬಾಗಿಲು ತೆರೆಯುವದು? ಆ ಸ್ವಾನುಭವದ ನಿಜಾನಂದದ ನಿಲುವನ್ನು ಅಕ್ಷರ ಮಾಧ್ಯಮದಿಂದ ಗುರುತಿಸಬಹುದೇ ಹೊರತು ಅಳೆಯುವದು ಸಾಧ್ಯವಿಲ್ಲ.

ಹುಚ್ಚು ಹಿಡಿಯಿತು ಮತ್ತೆ ಸ್ವಚ್ಛ ಕೃತಿ ರಚಯಿಸಲು
ಬಿಚ್ಚು ಮನದಿಂದ ನೈಜಾನುಭವ ರಸದೊ
ಳಚ್ಚೊತ್ತಿದಂತೆ ಪೂರ್ಣಜ್ಞ ||

ಈ 'ಹುಚ್ಚು' ಪೂರ್ಣಜ್ಞತ್ವದ ಕಡೆಗೆ ಸಾಗುತ್ತಿರುವ ಸಾಧಕನ ಗುಣ. ಅಂತೆಯೇ–

ಮೂರಳಿದು ಮೂರರಿದು ಸಾರಸತ್ವವ ತಿಳುಹಿ
ಮಾರಮರ್ದನ ಗೈದ ಗುರುಸಿದ್ಧ ಯತಿಯೆ
ಪಾರು ಮಾಡಯ್ಯ ಪೂರ್ಣಜ್ಞ||

ಎಂದು "ಪಾರು ಮಾಡಯ್ಯ" ಅಂತ ಬೇಡುವ ವಿಮಲಮತಿಯ ಕೂಗು ಕರೆ ಇಲ್ಲಿದೆಯಲ್ಲವೇ! ಆದ್ದರಿಂದ ಈ ಪೂರ್ಣಜ್ಞನೂ ಸಾಧಕತನದ ಅಭೀಪ್ಸೆ (aspiration) ಹೊಂದಿದ್ದಾನೆ. ಈತ ಮಗುವಾಗಲೂ ಬಲ್ಲ; ಮುನಿಯಾಗಲೂ ಬಲ್ಲ.

ಪೂರ್ಣಜ್ಞನು ಪೂರ್ಣದ ಕಡೆಗೆ ಸಾಗಿದ ಓರ್ವ ಆದರ್ಶ ಸಾಧಕ. ಆತನನ್ನು ಪೂರ್ಣ ತುಂಬಿದವನೆಂದು ತಿಳಿಯಬೇಡಿರಿ; ಆದರೆ ಪೂರ್ಣಕ್ಕೆ ಪಥ ಕಂಡುಕೊಂಡವನೆಂದು ಮರೆಯಬೇಡಿರಿ–

"ಪೂರ್ಣಜ್ಞ"ನೆಂದೊಡನೆ ಪೂರ್ಣದರಿವಿನ ನುಡಿಯು
ಪೂರ್ಣ ತುಂಬಿಹುದೆಂದು ಬಗೆಯ ಬೇಡಿರಿದು
ಪೂರ್ಣಕ್ಕೆ ಪಥವು ಪೂರ್ಣಜ್ಞ||

ಈ ಲೋಕವೇ ಈ ಪೂರ್ಣಜ್ಞನಿಗೆ ಶಿಕ್ಷಣ ಶಾಲೆಯಾಗಿದೆ. ವಚನ ರಚಿಸುವ ಕಲೆಯೂ ಅಲ್ಲಿಂದಲೇ ಬಂದ ವರದಾನ–

ಲೋಕ ಶಿಕ್ಷಣ ಶಾಲೆ ಲೋಕಾನುಭವವನ್ನು
ಸಾಕನಿತು ಕಲಿಸಿಹುದು ವಚನ ರಚಿಸಲ್ಕೆ
ಲೋಕ ಜನಹಿತಕೆ ಪೂರ್ಣಜ್ಞ||

"ಕಷ್ಟಗಳ ಸಾಕಷ್ಟು ಕೊಟ್ಟಿಹರು ನಮ್ಮವರು" ಎಂದು ಪೂರ್ಣಜ್ಞ ಹೇಳುತ್ತಾನೆ. ಯಾಕೆಂದರೆ ಈತ ಶೂನ್ಯದಿಂದ ಸಿಡಿದ ಪೂರ್ಣಜ್ಞನಾಗದೇ, ಜೀವನದ ರಂಗಸ್ಥಳದಿಂದ ಮಿಡಿದ ಪೂರ್ಣಜ್ಞನಾಗಿದ್ದಾನೆ.

ಸಿಹಿಯೂಟ ಸಿಹಿಮಾತು ಸುಹೃದಯಕೆ ಲೇಸಕ್ಕು
ಸಿಹಿಮಾತಿನೊಳಗೆ ಕೃತಕ ಬೆರೆತಿದ್ದರದು
ಕಹಿ–ಕಾಳಕೂಟ ಪೂರ್ಣಜ್ಞ||

ಅಕ್ಕಮಹಾದೇವಿ ಮತ್ತು ಬಸವಣ್ಣನವರ ವಚನಗಳಲ್ಲಿ ಸ್ಪಷ್ಟವಾಗಿ ನಿದರ್ಶನಕ್ಕೆ ಬಂದ ಈ ನೋವಿನ ನೋಟ ಪೂರ್ಣಜ್ಞನನ್ನೂ ಬಿಟ್ಟಿಲ್ಲ; ಮಾತ್ರವಲ್ಲ 'ಕಹಿ-ಕಾಳಕೂಟ'ವಾಗಿ ಕಾಡಿದೆ! ಒಂದರ್ಥದಲ್ಲಿ; ಕಾಡಿನ ಶಿಲೆ ಉಳಿಯ ಏಟಿನಿಂದ ಶಿವಲಿಂಗವಾದಂತೆ, ಈ ಪೂರ್ಣಜ್ಞ ಜೀವನದ ಉದ್ದಕ್ಕೂ ಸಾಲುಗಟ್ಟಿ ಬಂದ ಇಂಥ ನೂರುಕಹಿಗಳ ಆಸ್ವಾದನೆಯಿಂದಲೇ ಚುರುಕಾಗಿದ್ದಾನೆ; ಪೂರ್ಣಜ್ಞತೆಯ ದಾರಿ ಕಂಡುಕೊಂಡಿದ್ದಾನೆ.

ಈ ಪೂರ್ಣಜ್ಞ ಆತ್ಮಾನುಭವದ ಮುಗಿಲಲ್ಲಿ ತೇಲಾಡುವ ಕನಸುಗಾರನಲ್ಲ. ಮುಗಿಲಹೊಳೆಯಲ್ಲಿ ನಕ್ಷತ್ರ ಡೋಣಿಗಳನ್ನು ತೇಲಿ ಬಿಡುವವನಲ್ಲ. ಜೀವನದ ಜ್ವಲಂತ ಸಮಸ್ಯೆಗಳ ಉದ್ದಗಲಗಳನ್ನೂ ಕಣ್ಣಾರೆ ಕಂಡವ. ಸಾಕ್ಷಿ ಬೇಕೇ—

ಪ್ರೇಮವಿಲ್ಲದ ಪತ್ನಿ ಮಮತೆಯಿಲ್ಲದ ಮಾತೆ
ಧರ್ಮವಿಲ್ಲದಿಹ ಗುರುಗಳಿಹರು ಸಮಾಜ-
ಕ್ಷೇಮ ಕಂಟಕರು ಪೂರ್ಣಜ್ಞ||

ಎಲ್ಲ ವ್ಯವಹಾರದಲಿ ಸುಳ್ಳು ಮೋಸದ ತಂತ್ರ
ಸುಳ್ಳು ಸೋಗಡಿರದ ಸತ್ಯ ಪ್ರಾಮಾಣಿಕತೆ
ಯುಳ್ಳವರು ಕಡಿಮೆ ಪೂರ್ಣಜ್ಞ||

ತನುರೋಗ ಕಳೆಯಲ್ಕೆ ಎನಿತೆನಿತೊ ಮದ್ದುಂಟು
ಮನರೋಗಕುಂಟೆ ಮದ್ದು? ಮುದ್ದದಕೆ ಶಿವ
ಮನವೆ ಮದ್ದಯ್ಯ ಪೂರ್ಣಜ್ಞ||

ಈ ಪೂರ್ಣಜ್ಞನ ಪ್ರಥಮ ಸಾಧನೆಯ ಸೋಪಾನವೇ ಲೋಕಾನುಭವ. ಒಂದರ್ಥದಲ್ಲಿ ಲೋಕಾನುಭವವೇ ಅಂತರಾನುಭವದ ಒರೆಗಲ್ಲು! ಈ ಮಾತು ಶ್ರೀ ಮೂಜಗಂ ವಚನಗಳಲ್ಲಿ ಇಡಿಯಾಗಿ ಧ್ವನಿಸುತ್ತದೆ. ಇಗೋ ಪೂರ್ಣಜ್ಞ ಕಂಡ ಜೀವನದ ಆಳವಾದ ಅವಲೋಕನದ ಚಿತ್ರಗಳು—

ಗುಮ್ಮ ಗುಸುಗರು ಒಳಗೆ ತಮ್ಮ ಲೆಕ್ಕದೊಳಿಹರು
ಸೊಮ್ಮು ನಿನ್ನದಕೆ ಕಣ್ಣಿಟ್ಟು ಕುಳಿತಿಹರು
ತಮ್ಮ, ಬಲು ಜೋಕೆ ಪೂರ್ಣಜ್ಞ||

ಗೃಹಿಣಿಯೇ ನೀ ಕೇಳು ಗಹಗಹಿಸಿ ನಗಬೇಡ
ಅಹಮಿಕೆಯು ಬೇಡ ಗೌರವಾದರದಿಂದ
ವಿಹರಿಸೌ ಗೃಹದಿ ಪೂರ್ಣಜ್ಞ||

ನವಿಲು ನಡಿಗೆಯ ಹುಡಿಗಿ ಸುವಿಚಾರ ಪಥ ಬಿಡದೆ
ನವನೃತ್ಯಗಾನ ಸಾಧನೆಯ ಮಾಡಿದರೆ
ಜವದಿ ಸಿದ್ಧಿಪ್ರದು ಪೂರ್ಣಜ್ಞ॥

ಈ ಪೂರ್ಣಜ್ಞ ತುಂಬಾ ಸಸ್ನೇಹಿ. ಬಾಳಬೇಕೆಂಬ ಲವಲವಿಕೆ ಉಳ್ಳವನಿಗೆ ಆತ್ಮೀಯ ಗೆಳೆಯ. ಪೂರ್ಣಜ್ಞನಂತಹ ಪ್ರೀತಿಯ ಗೆಳೆಯ ಸಿಕ್ಕುವದು ಕಠಿಣ. ನಮ್ಮ ಹೆಜ್ಜೆ ಹೆಜ್ಜೆಯನ್ನೂ ಆತ ತಿದ್ದಬಲ್ಲ; ಕೈಹಿಡಿದು ನಡೆಸಬಲ್ಲ. ಅವನ ಮಮತೆಯ ಹಿತೋಪದೇಶಗಳಿಗೆ ಲೆಕ್ಕವೇ ಇಲ್ಲ. ಆತ ಗೆಳೆಯನಾಗಿ ಕೈ ಹಿಡಿಯುತ್ತಾನೆ, ಹಿರಿಯಣ್ಣನಾಗಿ ಹೇಳುತ್ತಾನೆ—

ಹಣಕಾಸು ವ್ಯವಹಾರ ಶನಿಕಾಟವಾದೀತು
ಘನಮೈತ್ರಿ ಭಂಗವಾದೀತು ಗೆಳೆತನದಿ
ಹಣದ ರುಣ ಬೇಡ ಪೂರ್ಣಜ್ಞ॥

ಬಡ್ಡಿ ಬೆಳೆಯುತ್ತ ಸಾಲ ಗುಡ್ಡದಂತಾಗುವದು
ಅಡ್ಡ ತರುಬುತ್ತ, ಸಾಲ ತೀರಿಸೆ ನಿನ್ನ
ಮಡ್ಡನಿಳಿಸುವರು ಪೂರ್ಣಜ್ಞ॥

ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ
ಇಂದು ಜಗದೊಳಗೆ ನಡೆದಿಹುದು ಅನ್ಯಾಯ
ಬಂದು ನೀನೋಡು ಪೂರ್ಣಜ್ಞ॥

ಅಕ್ಕಿಯಲಿ ಹರಳುಗಳು, ಚಕ್ಕೆಪುಡಿ ಸಜ್ಜಕದಿ
ಸಕ್ಕರೆಯೊಳೆಲಬು ಪುಡಿಮಾಡಿ ಬೆರೆಸುವರು
ಮುಕ್ಕಣ್ಣ ನೋಡು ಪೂರ್ಣಜ್ಞ॥

ಹೀಗೆ ಪೂರ್ಣಜ್ಞ ನಮಗೆ ಒಮ್ಮೆ ಜಾಣ ಅಣ್ಣನಾಗಿ, ಪ್ರೀತಿಯ ಗೆಳೆಯನಾಗಿ ವರ್ತಿಸುತ್ತಾನೆ. ವಿಚಿತ್ರವೆಂದರೆ 'ಶ್ರೀ ಮೂಜಗಂ' ಒಂದು ಮಹಾಮಠದ ಜಗದ್ಗುರುಗಳಾಗಿದ್ದರೂ ಮೂಜಗಂ ಮಾನಸ ಸೃಷ್ಟಿಯ 'ಪೂರ್ಣಜ್ಞ' ಮಾತ್ರ ಕಾವ್ಯದುದ್ದಕ್ಕೆ ಎಲ್ಲಿಯೂ ಜಗದ್ಗುರುವಾಗಲು ಹೋಗಿಲ್ಲ. ಆತ "ಪ್ರೇಮವೇ ದೇವರು" (Love is God) ಎಂದು ನಂಬಿದವನು. ಎಂದಿಗೂ ಆತ ಆಜ್ಞೆ ಮಾಡನು. ತಾಯಿಯಾಗಿ ಹೇಳುತ್ತಾನೆ, ಅಣ್ಣನಾಗಿ ತಿದ್ದುತ್ತಾನೆ, ಗೆಳೆಯನಾಗಿ ಮಾತಾಡುತ್ತಾನೆ. ಎಲ್ಲಿಯೂ ಈ 'ಪೂರ್ಣಜ್ಞ' ಗುರುವಾಗಿ ಆಜ್ಞೆ ಹೊರಡಿಸುವದಿಲ್ಲ. ಜಗದ್ಗುರುವಾಗಿ ಅಪ್ಪಣೆ ಕೊಡುವದಿಲ್ಲ. ಸ್ನೇಹದ ಮಾತುಗಳೇ ಪೂರ್ಣಜ್ಞನ ಎದೆತುಂಬಿದ ಮಾತುಗಳು. ಆತ ಅತ್ತರೂ ನಮ್ಮನ್ನು ನಗಿಸಬಲ್ಲ. ಹೇಳಬೇಕಾ

ದುದನ್ನೆಲ್ಲ ಹೇಳುತ್ತಾನೆ, ಮುಚ್ಚುಮರೆಯಿಲ್ಲದೇ ಹೇಳುತ್ತಾನೆ; ಆದರೆ ಹೇಳುವಿಕೆ ಯಲ್ಲಿ ಸ್ನೇಹ-ಪ್ರೀತಿ-ಸಲಿಗೆ-ಆತ್ಮೀಯತೆಯ ಸಿಹಿಯನ್ನು ಈ ವಚನಗಳಲ್ಲಿ ಸ್ಪಷ್ಟ ವಾಗಿ ಹಂಚುತ್ತಾನೆ—

ದಾಂಪತ್ಯ ಜೀವನವು ಕಂಪುಳ್ಳ ರಸಪಾಕ
ಇಂಪುಳ್ಳ ಗಾನದಂತಿರಲಿ ಸೊಂಪಿರಲಿ
ತಂಪು ಮನೆಯಂತೆ ಪೂರ್ಣಜ್ಞ॥

ಸತಿಯನ್ನು ಪರಿಭೋಗ ರತಿಯೆಂದು ತಿಳಿಯದಿರು
ಸತಿಯು ಸಖಿಯೆಂದು ಅರಿತವನೆ ಪರಮಸುಖಿ
ಸತಿ ಸುಖದ ಪ್ರತಿಯು ಪೂರ್ಣಜ್ಞ॥

ಸೊಳ್ಳೆ ಚಿಕ್ಕಾಡಿರುವ ಕಳ್ಳ ಇಲಿ ಹೆಗ್ಗಣವು
ಮಳ್ಳು ಜೊಂಡಿಗವು ಇದ್ದಲ್ಲಿ ಇರಬೇಡ
ಒಳ್ಳೆ ಮನೆಯೊಳಿರು ಪೂರ್ಣಜ್ಞ॥

ಜಗದ್ಗುರುಗಳಾದ "ಶ್ರೀ ಮೂಜಗಂ" ಅವರು "ಪೂರ್ಣಜ್ಞ"ರಾದಾಗ ಶ್ರೀಸಾಮಾನ್ಯನ ನಡೆ-ನುಡಿಗಳೊಂದಿಗೆ ಸಮೀಪದಿಂದ ಸ್ಪಂದಿಸುತ್ತಾರೆ. ಇಲ್ಲಿ "ಪೂರ್ಣಜ್ಞ" ಪರಂಪರಾಗತವಾದ ಸುವರ್ಣಸಿಂಹಾಸನಾರೂಢ ಶ್ರೀ ಜಗದ್ಗುರು ವಾಗದೇ ಎಲ್ಲರೊಂದಿಗೆ ಒಂದಾಗುವ ಮುನಿಯಾಗುತ್ತಾನೆ, ಮನುಷ್ಯನಾಗುತ್ತಾನೆ. 'ಶ್ರೀ ಮೂಜಗಂ' ಮಾನಸಗರ್ಭದ ಸತ್ಯಸಂಶೋಧಕ, ಅಪ್ಪಟ ವಾಸ್ತವವಾದಿ, ಜೀವನ ಪರಿವೀಕ್ಷಕ ಈ "ಪೂರ್ಣಜ್ಞ" ನಾಗಿದ್ದಾನೆ. ಒಂದರ್ಥದಲ್ಲಿ ಜೀವನಾನು ಭವದ ಪೂರ್ಣತ್ವವೇ ಪೂರ್ಣಜ್ಞನ ಪ್ರತೀಕವಾಗಿದೆ. ಯಾಕೆಂದರೆ ಎಲ್ಲೆಲ್ಲೂ ಶಿವತ್ವದ ಪ್ರಭೆ-ಪ್ರಭಾವಳಿಗಳನ್ನು ಕಂಡರಸಿದ ಈ ಉಜ್ವಲ ಸಾಧಕ ಶಿವತ್ವದ ನೆಲೆಯಲ್ಲಿ ಅಶಿವವು ಕಾಲೂರಿದಾಗ ಕೆಂಡಕಿಡಿಯಾಗುತ್ತಾನೆ. ಯೋಗಿಯ ಗರ್ಭ ದೊಳಗಿನ ಒಬ್ಬ ಬಂಡಾಯಗಾರ ಮೇಲೆದ್ದು ಕೂಗುತ್ತಾನೆ. ಭಿಡೆ-ಮುರುವತ್ತು ಗಳನ್ನು ಮೀರಿ ಸಮಾಜದ ಕೊಂಕು-ಡೊಂಕುಗಳನ್ನೂ, ತೆಗ್ಗು-ತೆವರುಗಳನ್ನೂ ತೋರಿಸುತ್ತಾನೆ—

ಒದನೆ ತಿನಬೇಡೆಂದು ವದನದಿ ಬೋಧಿಸುತ
ಅದನೆ ತಿಂಬಂತೆ ಆಷಾಢಭೂತಿಗಳ
ಬದುಕು ನೋಡಯ್ಯ ಪೂರ್ಣಜ್ಞ॥

ಚೈನಿಬಾಜಿಯ ಸೊಸೆಯು ಮಾನವನು ಮಾರುವಳು
ಊನವಿಲ್ಲದಿಹ ಮನೆತನದ ಗೌರವಕೆ
ಊನ ಮಾಡುವಳು ಪೂರ್ಣಜ್ಞ॥

ಬಸವೇಶ ತತ್ವವನು ಉಸುರುವದು ಬಲು ಸುಲಭ
ಬಸವಣ್ಣನಂತೆ ನಡೆಯುವದು ಕಡುಕಷ್ಟ
ನಿಸದವೀ ನುಡಿಯು ಪೂರ್ಣಜ್ಞ॥

ಸಿದ್ಧಾಂತ ತಿಳಿಯದಲೆ ಗುದ್ದಾಡುತಿಹರಯ್ಯ
ರಾದ್ಧಾಂತ ಮಾಳ್ಪ ಕ್ಷುದ್ರ ವಿಚ್ಛಿದ್ರಕರ
ಬುದ್ಧಿ ತಿದ್ದಯ್ಯ ಪೂರ್ಣಜ್ಞ॥

ಎಲ್ಲ ಪಕ್ಷಗಳಲ್ಲಿ ಕ್ಷುಲ್ಲಕರು ತುಂಬಿಹರು
ಹುಲ್ಲು ಮೆದೆಯಲ್ಲಿ ಹುಟ್ಟುವವು ಕಸಬರಿಗೆ
ಒಳ್ಳೆಯವರೆಷ್ಟು ಪೂರ್ಣಜ್ಞ॥

ಲಲಿತ ಲೋಲಾಕ್ಷಿಯರ ಸಲೆಮಾಲೆಯ ವಕ್ಷೆಯರ
ಸಲಿಗೆಗೊಳಗಾದ ಕಾವಿಧಾರಿಯ ಕೃಪ
ಕಳೆಯದಿರ್ದಪುದೆ ಪೂರ್ಣಜ್ಞ॥

ದುರಿತ ಪಾರ್ಥೇನಿಯಂ ಶಿರದ ಮಾಳಿಗೆಯಲ್ಲಿ
ಭರದಿ ಬೆಳೆದಲ್ಲಿ ಕಾಯವೆಂಬುವ ಹೊಲವು
ಒರದ ಬೀಡಕ್ಕು ಪೂರ್ಣಜ್ಞ॥

ಅವರು ಮತಸ್ಥಾಪಕರು ಇವರು ಮತಸ್ಥಾಪಕರು
ಅವರಿವರು ಎಂದು ಬವರಕ್ಕೆ ಇಳಿಯದಿರಿ
ಶಿವನೆ ಸ್ಥಾಪಕನು ಪೂರ್ಣಜ್ಞ॥

ಹಂಡ ಬಂಡರು ಕೂಡಿ ಬಂಡಾಯ ಹೂಡುವರು
ಕಂಡ ಕಂಡಂತೆ ಗೀಚುತ್ತಾ ಸಂಸ್ಕೃತಿ ಸಭ್ಯತೆಯ
ಚಂಡು ಮುರಿಯುವರು ಪೂರ್ಣಜ್ಞ॥

ಚೇಳು ಕುಟುಕಿದ ನೋವ ತಾಳಿಕೊಂಡಿರಬಹುದು
ಕಾಳಾಹಿಯಂಥ ಖೂಳ ಖಳರುಪಟಳವ
ತಾಳಲಾಸಲ್ಲ ಪೂರ್ಣಜ್ಞ॥

ಜಗದ ಗುರುವೆಂಬುವರು ಜಗದೊಳಗೆ ತುಂಬಿಹರು
ಜಗದ ಗುರುವೆನಿಸಿ ಜಗಕೆ ಬೆಳಕೀಯುವವರು
ಜಗದೊಳೆಷ್ಟು ಜನ? ಪೂರ್ಣಜ್ಞ॥

ಬಣಜಿಗರು ಜಂಗಮರು ನೊಣಬ ಶಿವಶಿಂಪಿಗರು
ಗಾಣಿಗ ಸಾದರರು ಭಾವೈಕ್ಯ ನುಡಿಯಲ್ಲಿ
ಗೊಣಗುವರು ಬರಿದೆ ಪೂರ್ಣಜ್ಞ॥

ನಮ್ಮ ಬೀಜೇಪಿಗೆ ನಮ್ಮ ಕಾಂಗ್ರೆಸ್ಸಾಯ್ಗೆ
ನಮ್ಮ ಜನತಾಕ್ಕೆ ಸ್ವಾಮಿಕೃಪೆಯೆನ್ನುವರು
ತಮ್ಮೊಳಗೆ ತಾವೆ ಪೂರ್ಣಜ್ಞ॥

ಇಂಥ ನೂರಾರು ಪದ್ಯಗಳನ್ನು ಎತ್ತಿ ಹೇಳಬಹುದು. "ಶ್ರೀ ಮೂಜಗು" ಹೃದಯುದಲ್ಲಿ "ಪೂರ್ಣಜ್ಞ" ಕುಳಿತಿದ್ದರೆ; "ಪೂರ್ಣಜ್ಞ"ನ ಹೃದಯುದಲ್ಲಿ ಓರ್ವ "ಬಂಡಾಯಗಾರ" ಕುಳಿತಿದ್ದಾನೆ. "ಪೂರ್ಣಜ್ಞ" ಇಂದಿನ ಸಾಮಾಜಿಕ ವಾಸ್ತವ ಪರಿಸರದ ಅಸಹ್ಯಗಳೊಂದಿಗೆ ಉಗ್ರವಾಗಿ ಪ್ರತಿಕ್ರಿಯಿಸಿದ್ದಾನೆ. ಈ ದೃಷ್ಟಿಯಿಂದ ಪೂರ್ಣಜ್ಞ ಪುರಾತನ ಕಾಲದವನಾಗದೇ; ಇಂದಿನ ಲೇಟೆಸ್ಟ್ ಆಗಿದ್ದಾನೆ. ಇಂದಿನ ಪ್ರಸ್ತುತ ಸಮಸ್ಯೆಗಳನ್ನು ಕೈಗೆತ್ತಿ ಕೂಗಿದ್ದಾನೆ. ಆತನ ವಾಸ್ತವ ಪ್ರಜ್ಞೆಯು 'ಇಂದುತನ'ದ ಕಿಡಿಮಾತುಗಳನ್ನು ಕೇಳಿರಿ:

ಲಂಚವಿಲ್ಲದೆ ಕಾರ್ಯ ಕೊಂಚವೂ ಸಿದ್ಧಿಸದು
ಲಂಚಾಧಿಕಾರಿ–ದೇವರ ಪ್ರಸನ್ನತೆಗೆ
ಲಂಚ ನೈವೇದ್ಯ ಪೂರ್ಣಜ್ಞ॥

ನೆರಳೀವ ಗಿಡಗಳನು ಕರುಣೆಯಿಲ್ಲದೆ ಕಡಿವ
ಹರಿವ ನದಿಗಳನು ಮಲಿನಗೊಳಿಸುವ ಜನರ
ಪರಿಯ ನೋಡಯ್ಯ ಪೂರ್ಣಜ್ಞ॥

ಕಾರಪುಡಿ ಕಾಷ್ಠಪುಡಿ ಸೇರಿಸುತ ಪೇಟೆಯಲಿ
ಮಾರಾಟ ಮಾಡಿ ಆರೋಗ್ಯ ಕೆಡಿಸುವರು
ಘೋರಾಪರಾಧ ಪೂರ್ಣಜ್ಞ॥

ಅನ್ನದೊಳಗೆ ಸೋಡಾ ಮಣ್ಣನ್ನು ಹಿಟ್ಟಿನೊಳು
ಬೆಣ್ಣೆಯೊಳು ಮೈದಾ ಹಿಟ್ಟನ್ನು ಹಾಕುತ್ತ
ಹೊನ್ನು ಗಳಿಸುವರು ಪೂರ್ಣಜ್ಞ॥

ಈ ನಿಟ್ಟಿನಲ್ಲಿ "ಪೂರ್ಣಜ್ಞ" ತನ್ನ ವೈಶಿಷ್ಟ್ಯವನ್ನು, ತನ್ನತನವನ್ನು ಕಾಪಾಡಿಕೊಂಡು ಬಂದಿದ್ದಾನೆ. ಇದೇ ನಿಟ್ಟಿನಲ್ಲಿ ಹೆಣ್ಣಿನ ಇಂದಿನ ಸ್ಥಿತಿಯ ಬಗ್ಗೆ ಪೂರ್ಣಜ್ಞ ಏನು ಹೇಳುತ್ತಾನೆ ಎಂಬುದು ಮುಖ್ಯ:

ದೇವದಾಸಿಯರೆಂದು ದೇವಿ ನಿಲಯದೊಳಿರಿಸಿ
ದೇಹ ವಿಕ್ರಯಕೆ ದೂಡುವವರನು ಯಾವ
ದೇವಿಯೊಲಿದಾಳು ಪೂರ್ಣಜ್ಞ॥

ಮುಗ್ಧ ಬಾಲೆಯರನ್ನು ಹದ್ದೆರಗಿದಂತೆರಗಿ
ಕದ್ದೊಯ್ಯುವವರ ಬದ್ದೆ ಮೇಲೊದ್ದೊದ್ದು
ಬುದ್ಧಿಗಲಿಸವರ್ಗೆ ಪೂರ್ಣಜ್ಞ॥

ಕಣ್ಣಿಟ್ಟು ಪ್ರೇಮದಲಿ ಹೆಣ್ಣೊಮ್ಮೆ ಕೂಡಿದರೆ
ಮಣ್ಣಿಗಿಳಿವತನಕ ಕೈಬಿಡಳು ಸುರಸುಖಕೆ
ಹೆಣ್ಣು ಖಣಿಯಯ್ಯ ಪೂರ್ಣಜ್ಞ॥

"ಪೂರ್ಣಜ್ಞ"ನ ಇನ್ನೊಂದು ವಿಶೇಷ ವೈಶಿಷ್ಟ್ಯವೆಂದರೆ ಆರೋಗ್ಯದ ಬಗ್ಗೆ ಆತ ಹೇಳಿರುವ ಕೆಲವು ಅಮೌಲ್ಯ ಸಲಹೆಗಳು:

ಕರಿದ ಭಜಿ ಸೇವು ಒಗ್ಗರಣೆ ಮಂಡರಳುಗಳ
ಬುರಿ ಬುರಿ ಜಿಲೇಬಿ ನಿರುತ ತಿನ್ನುವ ಚಟವು
ಹೊರಕಡೆಗೆ ಮೂಲ ಪೂರ್ಣಜ್ಞ॥

ಕಡೆದ ಮಜ್ಜಿಗೆಯನ್ನು ಬಿಡದೆ ಕುಡಿ ಉಂಡೊಡನೆ
ಅಡಿಗಡಿಗೆ ಬರುವ ಮಂದಾಗ್ನಿ ಅಪಚನಗ
ಳಡಗಿ ಹೋಗುವವು ಪೂರ್ಣಜ್ಞ॥

ಜೇನು ಸೇವಿಸೆ ಶಕ್ತಿ ಜೇನು ಸೇವಿಸೆ ಸ್ಫೂರ್ತಿ
ಜೇನು ಔಷಧಿಯು ಶಿವನ ಅಭಿಷೇಕಕ್ಕೆ
ಜೇನು ಜೀವಾಳ ಪೂರ್ಣಜ್ಞ॥

ಶ್ರೀ ಮೂಜಗಂ ಅವರ ವಿಶೇಷ ವೈಶಿಷ್ಟ್ಯವೆಂದರೆ ಸರ್ವಧರ್ಮ ಸಮದರ್ಶಿತ್ವ. ವೀರಶೈವತ್ವದಿಂದ ಕೊಂಚ ಹೊರನಿಂತು ವಿಶ್ವವನ್ನು ನೋಡುವ ಅವರ ಲೋಕೋತ್ತರ ಧಾರ್ಮಿಕ ಸ್ಥಿತಿಯನ್ನು ಮೆಚ್ಚಬೇಕು. ಸರ್ವಧರ್ಮ ಸಹನೆ, ಸರ್ವದರ್ಶನ ಸಹನೆ ಇಲ್ಲಿ ಕಾಣುವ ಮುಖ್ಯ ಗುಣ. ಮಾದರಿಗಾಗಿ ಗಮನಿಸಿರಿ:

ಏಸುವಿನ ಉಪದೇಶ ಏಸು ಜನ ಕೇಳುವರು
ಅಸುರೀಶಕ್ತಿ ತೊರೆದು ನೆನೆಯಿರಿ ದಿವ್ಯ
ಏಸುವಿನ ವಚನ ಪೂರ್ಣಜ್ಞ||

ತಿಮ್ಮಪ್ಪನನು ಜನರು ನಮ್ಮಪ್ಪ ಎನ್ನುವರು
ಸುಮ್ಮಾನದಿಂದ ಬೆಟ್ಟವೇರುವ ನೋಟ
ಕಣ್ಮನಕೆ ತೃಪ್ತಿ ಪೂರ್ಣಜ್ಞ||

ರಮಜಾನ ಹಬ್ಬವದು ಕರ್ಮಕಳೆಯುವ ಹಬ್ಬ
ವಿಮಲ ಮಾನಸದಿ ಪ್ರೇಮ ಸಂವರ್ಧಿಸುವ
ಸಮ್ಮುದದ ಹಬ್ಬ ಪೂರ್ಣಜ್ಞ||

ಆದ್ದರಿಂದ ಈ ಎಲ್ಲಾ ತ್ರಿಪದಿಗಳು ಪೂರ್ಣಜ್ಞನಿಗೆ 'ಸುಲಿದ ಬಾಳೆಯ ಹಣ್ಣಾ'ಗಿ, 'ಚಲುವ ದ್ರಾಕ್ಷೆಯ ಹಣ್ಣಾ'ಗಿ, ರಸಪಾಕವಾಗಿ ಒಲಿದು ಓಗೊಟ್ಟು ಬಂದಿವೆ—

ಸುಲಿದ ಬಾಳೆಯ ಹಣ್ಣ ಚೆಲುವ ದ್ರಾಕ್ಷಿಯ ಹಣ್ಣ
ಲಲಿತ ಭಾಷೆಯಲಿ ಬರೆದಿಹೆನು ತ್ರಿಪದಿಗಳ
ಸುಲಭ ಶೈಲಿಯಲಿ ಪೂರ್ಣಜ್ಞ||

ಕೊನೆಗೆ "ಪೂರ್ಣಜ್ಞ" ತನಗೆ ತಾನೇ ಒಂದು ಉದಾತ್ತ ಅನುಭಾವದ ಸಂದೇಶ ಹೇಳಿಕೊಳ್ಳುತ್ತಾನೆ. ತನಗೆ ತಾನೇ ಆಶೀರ್ವದಿಸಿಕೊಳ್ಳುತ್ತಾನೆ—

ಅನುಭಾವ ರಸದೂಟ ಅನುಭವಿಸಿ ಸುಖಿಯಾಗು
ಅನುಭವಿಗಳೊಡನೆ ಸರಸವಾಡಿದರೆ ನೀ
ಘನ ಮುಕ್ತಿ ಪಡೆವೆ ಪೂರ್ಣಜ್ಞ||

ಹೀಗೆ 'ಪೂರ್ಣಜ್ಞ' ವಚನಗಳು 'ಶ್ರೀ ಮೂಜಗಂ' ಸಾಹಿತ್ಯ ನಿರ್ಮಿತಿಯ ಸರ್ವೋತ್ತುಂಗ ರಸಾಫಲಗಳಾಗಿ; ಸ್ವಾನುಭವದ ಸಾರಾಯ ಷಡ್ರಸಾನ್ನ ಭೋಜನ ವನ್ನು ಉಣಿಸಿ ಮೈಮನ ತಣಿಸುತ್ತವೆ. "ಪೂರ್ಣಜ್ಞ ಗಂಗಾಧರ"ನ ಓತಪ್ರೋತ ವಾಗಿ ಸುರಿದ ಇಂಥ ಸಹಸ್ರಾರು ತ್ರಿಪದಿಗಳ ಅನುಭಾವದ ರಸಪ್ರವಾಹದಲ್ಲಿ ಮಿಂದು ಮಡಿಯಾಗುವ ಅವಕಾಶವನ್ನು ಅಭಿಮಾನಿಗಳಾದ ಕನ್ನಡಿಗರಿಗೆ ನೀಡ ಲಾಗಿದೆ. ಈ ಕೃತಿ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ನೀಡುವದರಲ್ಲಿ ಸಂಶಯವಿಲ್ಲ.

ಶ್ರೀ ಮೂಜಗಂ ವಿರಚಿತ ೩೦ ಗ್ರಂಥಗಳ ಪಕ್ಷಿನೋಟದ ವಿವರವನ್ನು; ರಚನಾಕಾಲ; ಮುದ್ರಣಕಾಲ ರಚನಾಸ್ಥಳ; ಪುಟ ಸಂಖ್ಯೆ; ಪುನರ್ಮುದ್ರಣಗಳು ಇತ್ಯಾದಿಯಾಗಿ ವಿವರಗಳನ್ನೊದಗಿಸುವ ರೇಖಾ ವಿಂಗಡಣೆಯನ್ನು ಮುಂದಿನ ಪುಟದಲ್ಲಿ ಗಮನಿಸಬಹುದು—

□

**ಶ್ರೀ ಮೂಜಗಂ ಸಾಹಿತ್ಯ ನಿರ್ಮಾಣ: ಪಕ್ಷಿನೋಟ** ಜನನ: ೧೯೨೮ (ಸಸಿವಾಳ)

| ಕ್ರ.ಸಂ. | ಪುಸ್ತಕದ ಹೆಸರು | ಪ್ರಕಾರ | ಪುಟಗಳು | ಮುದ್ರಣಗಳು | ರಚಿಸಿದ ವಯಸ್ಸು | ಸ್ಥಳ | ವಿಶೇಷ |
|---|---|---|---|---|---|---|---|
| ೧ | ಮೊಗ್ಗೆಯ ಮಾಲೆ | ಕವನ ಸಂಗ್ರಹ | ೪೬ | ೧೯೪೬<br>೧೯೭೨ | ೧೬ | ಶಿವಯೋಗ ಮಂದಿರ | |
| ೨ | ಶ್ರೀ ಶಿವಬಸವೇಶ್ವರ ನಾಮಾವಳಿ | ನಾಮಾವಳಿ | ೨೫ | ೩೦-೧೨-೪೮ | ೧೬ | " " | |
| ೩ | ಶ್ರೀ ವಿಜಯಮಹಾಂತೇಶ್ವ ಲಾವಣಿ | ಲಾವಣಿ | ೩೦ | ೧೬-೨-೪೯<br>೧೫-೪-೮೨ | ೧೮ | " " | |
| ೪ | ಶ್ರೀ ಮರುಳ ಸಿದ್ಧೇಶ್ವರ ನಾಮಾವಳಿ | ನಾಮಾವಳಿ | ೩೦ | ೧೯೪೯ | ೧೮ | " " | |
| ೫ | ಅಪ್ಪಯ್ಯ ಸ್ವಾಮಿಗಳ ಜೀವನ ಚರಿತ್ರೆ | ಗದ್ಯ | ೭೫ | ೭-೫-೫೧<br>೧೯೭೫ | ೨೧ | ಕಾಶಿಯಲ್ಲಿ | |
| ೬ | ಪಥಿಕ | ಕವನ ಸಂಕಲನ | ೧೦೦ | ೨-೧೨-೫೩<br>೧೯೭೨ | ೨೩ | " " | ಶ್ರೀ ಜ.ಚ.ನಿ. ಮುನ್ನುಡಿ |
| ೭ | ಯೋಗಿರಾಜ ಆಫ್ ಕರ್ನಾಟಕ (ಇಂಗ್ಲಿಷ) | ಗದ್ಯ | ೨೦ | ೧೯೫೩ | ೨೩ | " " | ಮುದ್ರಿತ ಪುಸ್ತಕ ಕಳೆದಿದೆ |
| ೮ | ಪೂಮಾಲೆ | ಕವನ ಸಂಕಲನ | ೫೦ | ೧೯೫೩ | ೨೪ | " " | |

| ಕ್ರ. ಸಂ. | ಪುಸ್ತಕದ ಹೆಸರು | ಪ್ರಕಾರ | ಪುಟಗಳು | ಮುದ್ರಣಗಳು | ರಚಿಸಿದ ವಯಸ್ಸು | ಸ್ಥಳ | ವಿಶೇಷ |
|---|---|---|---|---|---|---|---|
| ೯ | ಸಂಸ್ಕೃತ ಕವಿ ಚರ್ಚಾ | ಗದ್ಯ | ೪೦೦ | ೧೯೫೪-೫೫ | ೨೫-೨೬-೨೭ | ಕಾಶಿಯಲ್ಲಿ | ಹಸ್ತಪ್ರತಿ ಕಳೆದಿವೆ; ಅಚ್ಚಾಗಿಲ್ಲ |
| ೧೦ | ಸಾಹಿತ್ಯ | ಗದ್ಯ | ೧೫೮ | ,, ,, | ,, ,, | ,, ,, | ,, ,, |
| ೧೧ | ಅಭಿಜ್ಞಾನ ಶಾಕುಂತಲ ವಿಮರ್ಶೆ | ಗದ್ಯ | ೨೦೦ | ,, ,, | ,, ,, | ,, ,, | ,, ,, |
| ೧೨ | ಪೂದೋಟ | ಕಥಾ ಸಂಕಲನ | ೧೦೦ | ,, ,, | ,, ,, | ,, ,, | ,, ,, |
| ೧೩ | ಜೀವನ ವಿಕಾಸ | ಗದ್ಯ | ೪೪ | ೧೯೬೯ | ೪೦ | ಹುಬ್ಬಳ್ಳಿ | |
| ೧೪ | ಆಶೀರ್ವಾಣಿ: ಭಾಗ-೧ | ಗದ್ಯ | ೨೭೨ | ೨೮-೧೨-೭೦ | ೪೧ | ,, | |
| ೧೫ | ಜಗುದ್ಗುರು ಗುರುಸಿದ್ಧೇಶ್ವರ ನಾಮಾವಳಿ | ನಾಮಾವಳಿ | ೨೪ | ೧೪-೧-೭೩ | | | |
| | | | | ೧೯೮೦ | ೪೪ | ,, | |
| ೧೬ | ಚಿತ್ಸುಮಸ | ವಚನಗಳು | ೨೫೦ | ೧೯೭೩ | | | |
| | | | | ೧೯೭೭ | | ,, | |
| | | | | ೧೯೮೩ | ೪೪ | ,, | ಡಾ|| ಆರ್. ಸಿ. ಹಿರೇಮಠರ ಮುನ್ನುಡಿ |
| ೧೭ | ವಚನ ವಾರಿಧಿ | ,, | | | | | ಆಗಾಗ ಬರೆದ ವಚನಗಳು: ಅಚ್ಚಾಗಿಲ್ಲ |
| ೧೮ | ಅಮೃತ ಬಿಂದು | ಗದ್ಯ | ೭೫ | ೧೯೭೭ | ೪೮ | ,, | |

| ಕ್ರ. ಸಂ. | ಪುಸ್ತಕದ ಹೆಸರು | ಪ್ರಕಾರ | ಪುಟಗಳು | ಮುದ್ರಣಗಳು | ರಚಿಸಿದ ವಯಸ್ಸು | ಸ್ಥಳ | ವಿಶೇಷ |
|---|---|---|---|---|---|---|---|
| ೧೯ | ಯುಗಪ್ರುರುಷ ಯೋಗಿಕುಮಾರ | ಗದ್ಯ | ೧೧೬ | ೧೯೭೮<br>೧೯೮೦<br>೧೯೮೧ | ೪೯ | ಹುಬ್ಬಳ್ಳಿ | |
| ೨೦ | ಮರುಳಶಂಕರದೇವರು | ಗದ್ಯ | ೧೦೦ | ೧೯೭೮ | ೪೯ | ” | |
| ೨೧ | ಹಾರ್ಟ್ಸ್ ಬ್ಲಾಸಮ್ಸ್ (ಇಂಗ್ಲಿಷ) | ಗದ್ಯ | ೧೦೪ | ೯-೮-೭೪ | ೪೫ | ” | ಇಂಗ್ಲಿಷಿಗೆ ಅನುವಾದ: ಪ್ರೊ. ಅರ್ಮಂಡೊ ಮೆನೆಝಿಸ್, ಶ್ರೀ ಎಂ. ಎಸ್. ಅಂಗಡಿ. ಪುಸ್ತಕ ಬಿಡುಗಡೆ: ಬೆಲ್ಜಿಯಂ ದೇಶದ ಲ್ಯೂವೆನ್ನಿನಲ್ಲಿ. |
| ೨೨ | ನಮ್ಮ ವಿದೇಶ ಯಾತ್ರೆ | ಗದ್ಯ | ೨೨೦ | ೨೫-೨-೭೯ | ೫೦ | ” | ಇಂಗ್ಲಿಷಿಗೆ ಭಾಷಾಂತರವಾಗಿದೆ |
| ೨೩ | ಜೇನಹನಿ | ಗದ್ಯ | ೮೦ | ೨೨-೭-೮೧ | ೫೨ | ” | |
| ೨೪ | ಶಿವಯೋಗಮಂದಿರ | ಗದ್ಯ | ೫೮ | ೧೯೭೮<br>೧೯೯೦ | ೫೦ | ” | |

| ಕ್ರ. ಸಂ. | ಪುಸ್ತಕದ ಹೆಸರು | ಪ್ರಕಾರ | ಪುಟಗಳು | ಮುದ್ರಣಗಳು | ರಚಿಸಿದ ವಯಸ್ಸು | ಸ್ಥಳ | ವಿಶೇಷ |
|---|---|---|---|---|---|---|---|
| ೨೫ | ಚಿತ್ಕಿರಣ | ಗದ್ಯ | ೨೪೦ | ೮-೧೧-೮೧ | ೫೧ | ಹುಬ್ಬಳ್ಳಿ | "ಪರಂಜ್ಯೋತಿ"ಗೆ ಬರೆದ ಆಶೀರ್ವಾಣಿಗಳು |
| ೨೬ | ವಿವಿಧತಾ ಮೇ ಏಕತಾ (ಹಿಂದಿ) | " | ೬೦ | ೧೫-೧೨-೮೧ | ೫೧ | " | ಹಿಂದಿ ಉಪನ್ಯಾಸಗಳ ಸಂಗ್ರಹ |
| ೨೭ | ಆಶೀರ್ವಾಣಿ: ಭಾಗ-೨ | " | ೧೮೦ | ೧೯೮೨ | ೫೨ | " | "ಪರಂಜ್ಯೋತಿ"ಗೆ ಬರೆದ ಆಶೀರ್ವಾಣಿಗಳು, ಡಿ. ಎಸ್. ಕರ್ಕಿ ಅವರ ಮುನ್ನುಡಿ |
| ೨೮ | ಹೊಂಗಿರಣ | " | ೧೨೦ | ೧೯೭೨<br>೧೯೮೪ | ೪೩ | " | "ಪರಂಜ್ಯೋತಿ"ಗೆ ಬರೆದ ಆಶೀರ್ವಾಣಿಗಳು |
| ೨೯ | ಹೊಬಳ್ಳಿ | " | ೧೨೦ | ೨೪-೧೨-೮೬ | ೫೭ | " | " " |
| ೩೦ | ಪೂರ್ಣಜ್ಞ ವಚನಗಳು | ತ್ರಿಪದಿ | ಅಚ್ಚಿನಲ್ಲಿ | ೮೬ ರಿಂದ ೯೦ | ೬೦ | " | ಅಂದಾಜು ೨॥ ಸಾವಿರ ತ್ರಿಪದಿಗಳು |

□

# ಪೂರ್ಣಪ್ರಜ್ಞ ಗಂಗಾಧರ

## ರಜತ ದೀಪ್ತಿ

ಪರಮಪೂಜ್ಯ ಜಗದ್ಗುರುಗಳ ಬದುಕಿನಲ್ಲಿ ಮರೆಯಲಾರದ ಘಟ್ಟಗಳು ಸ್ಪಷ್ಟವಾಗಿ ತೋರುವುದು ಇಂತು–

೧) ಸಸಿವಾಳದ ಮೊದಲ ಘಟ್ಟ: ೧೯೨೭ ರಿಂದ ೧೯೩೨
೨) ಶಿವಯೋಗಮಂದಿರದಲ್ಲಿ ಸಾಧಕ ಜೀವನ: ೧೯೩೨ ರಿಂದ ೧೯೪೪
೩) ಕಾಶಿಯಲ್ಲಿ ಪ್ರೌಢ ವ್ಯಾಸಂಗ: ೧೯೪೪ ರಿಂದ ೧೯೫೮
೪) "ಪೀಠಾರೋಹಣ"ದಿಂದ "ದ್ವಾದಶ ಪೀಠಾರೋಹಣ"ದ ವರೆಗೆ: ೧೯೫೮ ರಿಂದ ೧೯೭೨
೫) "ದ್ವಾದಶ ಪೀಠಾರೋಹಣ"ದಿಂದ "ಪೀಠಾರೋಹಣದ ರಜತೋತ್ಸವ"ದ ವರೆಗೆ: ೧೯೭೨ ರಿಂದ ೧೯೮೭
೬) ರಜತೋತ್ಸವದಿಂದ ೬೩ ನೆಯ ವರ್ಷದ "ಷಷ್ಟ್ಯಬ್ದಿ ಪೂರ್ತಿ ಸಂಸ್ಮರಣ ಮಹಾಸಮಾರಂಭ"ದ ವರೆಗೆ: ೧೯೭೨ ರಿಂದ ೧೯೯೧

## ಗಂಗಾಧರ ದರ್ಶನ

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಪೀಠಾರೋಹಣದ ೨೫ ವರ್ಷಗಳು ಶ್ರೀ ಮೂರುಸಾವಿರಮಠದ ಸಾವಿರ ವರ್ಷದ ಇತಿಹಾಸದಲ್ಲಿ ಮರೆಯದ ಮೈಲುಗಲ್ಲುಗಳು! ಲೋಕದರ್ಶನ ಹಾಗೂ ಶಿವದರ್ಶನಗಳ ಸಮರಸದ ಶಿವಾನುಭವ!! ಗಡಿಯಾರದ ಮುಳ್ಳು ಬಿಡುವಿಲ್ಲದೆ ನಡೆದಂತೆ ದಣಿವಿಲ್ಲದೆ ದುಡಿದ ಪೂಜ್ಯ ಜಗದ್ಗುರುಗಳು ಒಂದು ವ್ಯಕ್ತಿಯಲ್ಲ; ಅನೇಕ ಶಕ್ತಿಗಳ ಸಂಗಮ. ಸಿದ್ಧರಾಮನ ಕರ್ಮಯೋಗ, ಬಸವಣ್ಣನ ಭಕ್ತಿಯೋಗ, ಅಲ್ಲಮಪ್ರಭುದೇವರ ಜ್ಞಾನಯೋಗ ಇವರಲ್ಲಿ ಸಮರಸದ ಶಿವಯೋಗ ಸಂಪಾದಿಸಿವೆಯೆಂದು ಸಮೀಪದಿಂದ ಕಂಡವರು ಅಭಿಮಾನದಿಂದ ಹೇಳುತ್ತಾರೆ. ಶರಣರ ಸಮಗ್ರ ಸಾಹಿತ್ಯದ ವಿಹಂಗಮ ಪರಿಚಯ ನೀಡುವ ಸುಮಾರು ೬೦–೭೦ ಲಕ್ಷ ವೆಚ್ಚದ ೬೦೦ ಗ್ರಂಥಗಳ ಪ್ರಕಾಶನ, ಈಗಾಗಲೆ ೩೫೦ ಗ್ರಂಥಗಳ ಪ್ರಕಟಣೆ, ಸಾಹಿತ್ಯ-ಸಂಸ್ಕೃತಿ–ಧರ್ಮಗಳ ಸಮನ್ವಯ ಸಾಧಿಸಿದ "ಪರಂಜ್ಯೋತಿ"ಯ ಪ್ರಕಟಣೆ, ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿಯ ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರಗಳು, ಕನ್ನಡ ಗ್ರಂಥಗಳಿಗೆ ಪುರಸ್ಕಾರ, ವೀರಶೈವ ಗ್ರಂಥಗಳಿಗೆ

ವಿಶೇಷ ಪುರಸ್ಕಾರ; ಇವು ಶ್ರೀಮಠದ ವಾಙ್ಮಯ ಪ್ರಸಾರದ ಮುಖ್ಯ ಮುಖಗಳು. ಶೈಕ್ಷಣಿಕವಾಗಿ ಉತ್ತರ ಕರ್ನಾಟಕದ ಅಭಿವೃದ್ಧಿಗೆ ಭದ್ರಬುನಾದಿ ಹಾಕಿದುದು ಈ ಮಠ. ವಿಶೇಷವಾಗಿ ಮಹಿಳಾ ಶಿಕ್ಷಣಕ್ಕೆ ಧಾರ್ಮಿಕ ಶ್ರೀರಕ್ಷೆ ನೀಡಿ; ಮಹಿಳೆಯರಿಗೆ ಶಿಶುವಿಹಾರದಿಂದ ಕಾಲೇಜಿನವರೆಗೆ ಅತ್ಯಾಧುನಿಕ ಶಿಕ್ಷಣಸೌಲಭ್ಯ ನೀಡಿದರು. ಇಂದು ಮಹಿಳಾ ಕಾಲೇಜು ಉತ್ತರ ಕರ್ನಾಟಕದ ಅತಿದೊಡ್ಡ ಮಹಿಳಾ ಶಿಕ್ಷಣ ಸಂಸ್ಥೆ. ಇದಲ್ಲದೆ ನೂರಾರು ಶೈಕ್ಷಣಿಕ ಸಂಸ್ಥೆಗಳಿಗೆ ಪೂಜ್ಯರು ನೀಡಿದ ಕೊಡುಗೆಗೆ ಕೊನೆಯಿಲ್ಲ. ಕರ್ನಾಟಕದ ಇತಿಹಾಸದಲ್ಲಿಯೇ ವೀರಶೈವ ಜಗದ್ಗುರುಗಳಲ್ಲಿ ಪ್ರಪ್ರಥಮವಾಗಿ ವಿದೇಶಕ್ಕೆ ಹೋಗಿ, ಜಗತ್ತಿನ ೧೪ ರಾಷ್ಟ್ರಗಳಲ್ಲಿ ಸಂಚರಿಸಿ, ದಿಲ್ಲಿ-ಕ್ಯೂಟೋ-ಲ್ಯೂವೆನ್‌ಗಳಲ್ಲಿ ಜರುಗಿದ ಮೂರು ವಿಶ್ವಧರ್ಮಗಳ ಮಹಾ ಪರಿಷತ್ತುಗಳಲ್ಲಿ ಪಾಲ್ಗೊಂಡು ಕನ್ನಡದ ಜಯಭೇರಿ ವಿಶ್ವದ ಬಾಂದಳದಲ್ಲಿ ಮೊಳಗಿಸಿದರು. ಸಮಾಜ ಸೇವೆ, ಬರಗಾಲದಲ್ಲಿ ಪಾದಯಾತ್ರೆ, ಗಂಜೀಕೇಂದ್ರ, ನಿರ್ಗತಿಕರಿಗೆ ಆಶ್ರಯ ನಿರಂತರ ನಡೆದುಬಂದಿದೆ. ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳ ನೂರಾರು ಮಠಗಳಿಗೆ ಸ್ವಾಮಿಗಳನ್ನು ಸಿದ್ಧಪಡಿಸಿ ಕೊಡಮಾಡಿದ ಶಿವಯೋಗ ಕೇಂದ್ರ ಶ್ರೀಮಠ. ಹಿಂದು-ಮುಸ್ಲಿಂ ಬಾಂಧವರಲ್ಲಿ ಸಹೋದರ ಸಂಬಂಧ ಅರಳಿಸಿ, ಶಾಂತಿಯ ಸುಗಂಧ ಬೀರಿ, Love is God ಎಂಬ ಮಹಾಸತ್ಯ ಸಾರಿದವರು ಶ್ರೀಗಳು. "ಕಾಯಕವೇ ಕೈಲಾಸ" ಪೂಜ್ಯರ ಪ್ರತ್ಯಕ್ಷ ಜೀವನದರ್ಶನ. ೨೦ನೆಯ ಶತಮಾನದಲ್ಲಿ ಪ್ರಪ್ರಥಮವಾಗಿ ೧೦೧ ಗುರುವಿರಕ್ತರೊಂದಿಗೆ ಧರ್ಮ ಜಾಗೃತಿಗಾಗಿ ಹುಬ್ಬಳ್ಳಿಯಿಂದ ಶಿವಯೋಗಮಂದಿರಕ್ಕೆ ಪಾದಯಾತ್ರೆ ಮಾಡಿದ ದಿವ್ಯ ಚೇತನ. ಸಹಕಾರಿ ಕ್ಷೇತ್ರದಲ್ಲಿಯೇ ಅಗ್ರಗಣ್ಯ ಪಂಕ್ತಿಯಲ್ಲಿ ನಿಲ್ಲಬಲ್ಲ ಬೃಹತ್ ಪ್ರಮಾಣದಲ್ಲಿ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯನ್ನು ಪ್ರಾರಂಭಿಸಿ, ಲಿಂ. ಶ್ರೀ ಜಗದ್ಗುರು ಗುರುಸಿದ್ಧರಾಜಯೋಗೀಂದ್ರರ ಆಶೆಯನ್ನು ಈಡೇರಿಸಿದ ಮಹಾಸಾಧನೆ.

ಪೂಜ್ಯರು ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಪೀಠಾರೋಹಣ ಗೈದಂದಿನಿಂದ (೧೯೫೮) ಇಂದಿನತನಕ (೧೯೯೧) ನಿರಂತರ ೩೨ ವರ್ಷಗಳಿಗಿಂತಲೂ ಮೇಲ್ಪಟ್ಟು ಕಾಲಾವಧಿಯಲ್ಲಿ ಸಾಧಿಸಿದ ಸಹಸ್ರಮುಖ ಸಾಧನೆಗಳನ್ನು ಈ ಗ್ರಂಥದಲ್ಲಿ ಅಲ್ಲಲ್ಲಿ ಸಂಗ್ರಾಹ್ಯವಾಗಿ ನೀಡಲಾಗಿದ್ದು; ಇಲ್ಲಿ ಆ ಸಾಧನೆಗಳ ಪಕ್ಷಿನೋಟವನ್ನು ನೀಡಲಾಗುತ್ತದೆ. ಪೂಜ್ಯ ಜಗದ್ಗುರುಗಳ ಸಮಗ್ರ ಸಾಧನೆಯ ಅಗಣಿತ ಕಾರ್ಯ-ಕಲಾಪಗಳನ್ನು ಕೆಲವೇ ಪುಟಗಳಲ್ಲಿ ಬಿಡಿಸಿ ಹೇಳುವದು ಅಸಂಭವವಾದರೂ ಸಂಗ್ರಾಹ್ಯವಾಗಿ ಮಾತ್ರ ಕೊಡಲು ಪ್ರಯತ್ನಿಸಲಾಗಿದೆ.

## ಪೀಠಾರೋಹಣದ ರಜತ ಮಹೋತ್ಸವ

ಅಂದಿನ ರಾಷ್ಟ್ರಪತಿ ಗ್ಯಾನಿ ಜೇಲಸಿಂಗ್ ಅವರು ರಜತ ಮಹೋತ್ಸವದ ಉದ್ಘಾಟನೆಯನ್ನು ಮಠದ ಪ್ರಾಂಗಣದ ಮಹಾವೇದಿಕೆಯಲ್ಲಿ ದಿ. ೧೬-೪-೧೯೮೭ ರಂದು ವಿಜೃಂಭಣೆಯಿಂದ ನೆರವೇರಿಸಿದರು. ಸುಮಾರು ಅರವತ್ತು ಸಾವಿರ ಕ್ಕಿಂತಲೂ ಮೇಲ್ಪಟ್ಟು ಜನಸಾಗರದಿಂದ ತುಂಬಿದ ಈ ಮಹಾನ್‌ಸಭೆ ನೋಡು ವಂತಿತ್ತು. ಮಠದ ಮಹಾದ್ವಾರ, ಪ್ರಾಚೀನ ಮರಶಿಲ್ಪ, ಕರ್ತೃಗದ್ದುಗೆಯ ಯೋಗವಾತಾವರಣದಿಂದ ಪ್ರಭಾವಿತರಾದ ಗ್ಯಾನಿ ಜೇಲಸಿಂಗ್ ಅವರು ಕೆಲಕಾಲ ಗರ್ಭಗೃಹದಲ್ಲಿ ಪ್ರಾರ್ಥನೆ ಸಲ್ಲಿಸಿ ಹೊರಬಂದರು. ಅವರ ಅಂದಿನ ವ್ಯಾಖ್ಯಾನ ತುಂಬಾ ಆಧ್ಯಾತ್ಮಿಕ ನೆಲೆಯಲ್ಲಿ ಭಾವಪೂರ್ಣವಾಗಿತ್ತು. ಅಂದಿನ ಮುಖ್ಯಮಂತ್ರಿ ಗಳಾದ ಶ್ರೀ ರಾಮಕೃಷ್ಣ ಹೆಗಡೆ ಅವರು ಸಮಾರಂಭದ ಅತಿಥಿಗಳಾಗಿದ್ದರು. "ರಜತ ದೀಪ್ತಿ" ಗ್ರಂಥದ ಬಿಡುಗಡೆಯನ್ನು ಗ್ಯಾನಿ ಜೇಲಸಿಂಗ್ ನೆರವೇರಿಸಿದರು. ಪ್ರೊ|| ಜಿ. ಎಚ್. ಹನ್ನೆರಡುಮಠ ಹಾಗೂ ಪ್ರೊ. ನಿರ್ಮಲಾ ಪಟ್ಟಣಶೆಟ್ಟಿ ಅವರಿಂದ ಸಂಪಾದಿತವಾದ ೫೦೦ ಪುಟಗಳ "ರಜತ ದೀಪ್ತಿ" ಪೂಜ್ಯ ಜಗದ್ಗುರುಗಳ ೨೫ ವರ್ಷಗಳ ಸಮಗ್ರ ಸಾಧನೆಗಳ ದಾಖಲೆಯಾಗಿ ರೂಪಿತವಾಗಿತ್ತು. ರಜತೋತ್ಸವದ ಅಂಗವಾಗಿ ದಿ. ೧೬-೪-೮೭ ರಿಂದ ನಿರಂತರ ಒಂದು ವಾರದ ವರೆಗೆ "ಕವಿ ಸಮ್ಮೇಲನ", "ಮಹಿಳಾ ಸಮ್ಮೇಳನ", "ಸರ್ವಧರ್ಮ ಸಮ್ಮೇಳನ", "ಪತ್ರಕರ್ತರ ಸಮ್ಮೇಳನ", "ಜಾನಪದ ಸಾಹಿತ್ಯ ಸಮ್ಮೇಳನ", "ಶರಣ ಸಾಹಿತ್ಯ ಸಮ್ಮೇಳನ" ನಡೆದು; ದಿ. ೨೩ ಏಪ್ರಿಲ್ ೮೭; ಗುರುವಾರ ಸಂಜೆ ನೂರೊಂದು ಗುರು-ವಿರಕ್ತರ ಮುಟಪ ಪೂಜೆಯೊಂದಿಗೆ ಪೂಜ್ಯ ಜಗದ್ಗುರುಗಳವರ ಸಿಂಹಾಸನಾ ರೋಹಣ ಸಮಾರಂಭ ವಿಜೃಂಭಣೆಯಿಂದ ನೆರವೇರಿತು. ಈ ಮಹಾಸಮಾರಂಭ ಗಳಲ್ಲಿ ಸನ್ಮಾನ್ಯರಾದ ಶ್ರೀ ಎಸ್. ಆರ್. ಬೊಮ್ಮಾಯಿ, ಡಾ|| ಪಂ. ಪುಟ್ಟರಾಜ ಕವಿ ಗವಾಯಿಗಳು, ಡಾ|| ಜ.ಚ.ನಿ. ಚನ್ನವೀರ ಕಣವಿ, ಜಗದ್ಗುರು ಮಾತೆ ಮಹಾ ದೇವಿ, ಡಾ|| ಸರೋಜಿನಿ ಮಹಿಷಿ, ಶ್ರೀಮತಿ ಲೀಲಾವತಿ ಆರ್. ಪ್ರಸಾದ, ಶರಣೆ ನೀಲಮ್ಮತಾಯಿ ಅಸುಂಡಿ, ಪೂಜ್ಯ ಶ್ರೀ ಪೇಜಾವರಮಠದ ವಿಶ್ವೇಶ ತೀರ್ಥ ಶ್ರೀಪಾದಂಗಳು, ಡಾ|| ಶ್ರೀ ನಿ. ಪ್ರ. ಶಿವಕುಮಾರ ಮಹಾಸ್ವಾಮಿಗಳು, ಪರಮ ತಪಸ್ವಿ ಕುಮಾರಸ್ವಾಮಿಗಳು, ಪೂಜ್ಯ ಶ್ರೀ ಶರಣಬಸಪ್ಪ ಅಪ್ಪಾ, ಗದಗಿನ ಪೂಜ್ಯ ಜಗದ್ಗುರುಗಳು, ಆನಂದಪುರಂ ಪೂಜ್ಯ ಜಗದ್ಗುರುಗಳು, ಮೈಸೂರಿನ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಆದಿಚುಂಚನಗಿರಿಯ ಶ್ರೀ ಬಾಲ ಗಂಗಾಧರ ಮಹಾಸ್ವಾಮಿಗಳು, ಸಿರಿಗೆರೆಯ ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು, ಇಲಕಲ್ಲ ಶ್ರೀಗಳು, ಶತಾಯುಷಿ ಕಪನಳ್ಳಿ ಶ್ರೀಗಳು, ಧಾರವಾಡ ಮಹಾಂತಸ್ವಾಮಿಗಳು, ಶ್ರೀ ವೀರೇಂದ್ರ ಪಾಟೀಲ, ಶ್ರೀ ಖಾದ್ರಿ

ಶ್ಯಾಮಣ್ಣ, ಶ್ರೀ ಪಾಟೀಲ ಪುಟ್ಟಪ್ಪ, ಮಾಜಿ ಮುಖ್ಯಮಂತ್ರಿ ಶ್ರೀ ಗುಂಡುರಾವ್, ಬಿ. ಡಿ. ಜತ್ತಿಯವರು, ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ, ಡಾ|| . ಎಚ್. ತಿಪ್ಪೇರುದ್ರಸ್ವಾಮಿ, ಡಾ|| ಜಿ. ಎಸ್. ಶಿವರುದ್ರಪ್ಪ, ಕೆ. ಆರ್. ಲಿಂಗಪ್ಪ, ಪ್ರೊ. ಶಂಭು ಬಳಿಗಾರ, ಬಾಣಂದೂರ ಕೆಂಪಯ್ಯ, ಡಾ|| ಆರ್. ಬಿ. ಪಾಟೀಲ ಮುಂತಾದ ನೂರಾರು ಪ್ರತಿಭಾನ್ವಿತರು ಪೂಜ್ಯರು ಭಾಗವಹಿಸಿದ್ದರೆಂಬುದರಿಂದಲೇ ಈ ಪ್ರತಿಷ್ಠಿತ ಮಹಾಸಮಾರಂಭದ ಅದ್ಭುತ ಘನತೆ ಗೌರವಗಳ ಪರಿಚಯವಾಗುತ್ತದೆ. ಜನತೆಯಿಂದ ಜನತೆಗಾಗಿ ಹಮ್ಮಿಕೊಂಡ ಈ ಮಹಾನ್ ಪರಿಷತ್ತು ಜನತಾ ಜನಾರ್ದನನತ್ತ ಸೇತುವೆಯನ್ನು ಕಟ್ಟಿದಂತಾಗಿತ್ತು.

**ಮಹಾನಗರದಲ್ಲೊಂದು "ಶಿವಯೋಗಮಂದಿರ"**

**ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ**

ಮಠಾಧಿಪತಿಗಳಾಗುವವರು ಆಧ್ಯಾತ್ಮಿಕ, ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ರಂಗಗಳಲ್ಲಿ ಸಮಗ್ರ ತರಬೇತಿ ಪಡೆಯುವದು ಅತ್ಯಾವಶ್ಯಕವೆಂಬ ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳವರ ಸಂಕಲ್ಪದಂತೆ ಪೂಜ್ಯ ಜಗದ್ಗುರುಗಳವರು "ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ" ವನ್ನು ೧೯೬೫ ರಲ್ಲಿಯೇ ಆರಂಭಿಸಿದರು. ಪ್ರತಿಯೊಂದು ಮಠವೂ ಶಿವಯೋಗಮಂದಿರವಾಗಬೇಕೆಂಬುದು ಕುಮಾರ ಸ್ವಾಮಿಗಳ ಇಚ್ಛೆಯಾಗಿತ್ತಲ್ಲವೇ! ಆ ನಿಟ್ಟನಲ್ಲಿ ಪೂಜ್ಯ ಜಗದ್ಗುರುಗಳು ಇರಿಸಿದ ದಿಟ್ಟ ಹೆಜ್ಜೆ ಇದು. ಇಲ್ಲಿ ಅಧ್ಯಯನಗೈಯುತ್ತಿರುವ ಸಾಧಕರ ಅಭ್ಯಾಸ, ಅರ್ಚನೆ, ಶಿಕ್ಷಣ, ಅನುಭವಗಳ ಅಭಿವೃದ್ಧಿಗೆ ಜಗದ್ಗುರುಗಳು ಲವಲವಿಕೆ ಉಳ್ಳವರಾಗಿದ್ದಾರೆ. ಕನ್ನಡ, ಇಂಗ್ಲಿಷ್, ಹಿಂದಿ, ಸಂಸ್ಕೃತಗಳಲ್ಲಿ ಅಧ್ಯಯನ, ವೈಜ್ಞಾನಿಕ ಯೋಗಾಧ್ಯಯನ–ಅರ್ಚನ ವಿಧಾನ–ಶಿಸ್ತು–ನಿಯಮ ಪರಿಪಾಲನೆಗಳಿಂದ ಲೋಕ ಶಿಕ್ಷಕರಾಗುವ ಶಿಕ್ಷಣವನ್ನು ಇಲ್ಲಿ ನೀಡಲಾಗುತ್ತಿದೆ. ಅಧ್ಯಯನದೊಂದಿಗೆ ಅನುಸಂಧಾನವೂ, ಸ್ವಾಧ್ಯಾಯ ಸಾಧನೆಗಳೂ ನಿರಂತರ ಸಾಗಿವೆ. ಸಾಧನೆ–ಬೋಧನೆಗಳ ಶ್ರೀಸಂಗಮವೇ ಈ ಕುಮಾರೇಶ್ವರ ಶಿವಯೋಗಿ ಸಂಘ. ಪ್ರಾಚೀನ ಸಾಹಿತ್ಯ–ಸಂಸ್ಕೃತಿಗಳ ಅಧ್ಯಯನದೊಂದಿಗೆ ಅರ್ವಾಚೀನ ಗತಿ–ಗಮನಗಳನ್ನೂ ಸಮೀಪದಿಂದ ಗಮನಿಸುವ ಅವಕಾಶ ಇವರಿಗೆ ದೊರೆತಿದೆ. ಇಲ್ಲಿ ಸಾಧಕರಾಗಿ ಬಂದವರಿಗೆ ಸಂಪೂರ್ಣ ಉಚಿತವಾಗಿ ಊಟ, ವಸತಿ, ಶಿಕ್ಷಣ ನೀಡಲಾಗುತ್ತದೆ. ಇಲ್ಲಿ ಅಧ್ಯಯನ ಮಾಡುವ ಸಾಧಕರು ಪ್ರೌಢ ವ್ಯಾಸಂಗದಲ್ಲಿ ಪ್ರೌಢಿಮೆ ಸಂಪಾದಿಸಿ, ಬಿ.ಎ., ಎಂ.ಎ., ಪಿಎಚ್.ಡಿ. ಪದವಿಗಳನ್ನು ಸಂಪಾದಿಸುತ್ತಿದ್ದಾರೆ. ಒಂದು ರೀತಿಯಿಂದ ಈ ಶ್ರೀ ಶಿವಯೋಗಿ ಸಂಘದಿಂದ ಒಂದು ಕ್ರಾಂತಿಯೇ ನಡೆದಿದೆಯೆಂದು ಹೇಳಬಹುದು. ಕಾರಣ ಈಗಾಗಲೇ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳ ಖ್ಯಾತಿವೆತ್ತ ೬೦–೬೫ ಮಠಗಳಿಗೆ ಮಠಾಧೀಶ್ವರರೆಂದು ಹೋಗಿರುವರಲ್ಲದೇ;

ಅವರಲ್ಲಿ ಕೆಲವರು ಜಗದ್ಗುರುಗಳಾಗಿ ರಾರಾಜಿಸುತ್ತಿದ್ದಾರೆ. ಕೆಲವರನ್ನು ವಿದೇಶಕ್ಕೂ ಧಾರ್ಮಿಕ ಪ್ರಸಾರಕ್ಕಾಗಿ ಕಳಿಸಲಾಗಿದೆ. ಗದಗ, ಶ್ರೀಶೈಲ, ಅನಂತಪುರದಂಥ ಜಗದ್ಗುರು ಪೀಠಗಳಿಗೂ ಇಲ್ಲಿಯ ಸಾಧಕರು ಆಯ್ಕೆಯಾಗಿ ಹೋಗಿರುವದು ಪೂಜ್ಯ ಜಗದ್ಗುರುಗಳಿಗೆ ತೃಪ್ತಿ ತಂದಿದೆ. "ಪಬ್ಲಿಕ್ ಟ್ರಸ್ಟ್ ಆ್ಯಕ್ಟ್" ಪ್ರಕಾರ ಈ ಸಂಘವನ್ನು ನೋಂದಣಿ ಮಾಡಿರುವದಲ್ಲದೇ; ಪ್ರತಿ ತಿಂಗಳೂ ಇದರ ಖರ್ಚು ವೆಚ್ಚಕ್ಕೆ ಸ್ಥಾಯಿ ನಿಧಿಯ ಯೋಜನೆಯನ್ನೂ ಮಾಡಲಾಗಿದೆ.

ಪೂಜ್ಯ ಜಗದ್ಗುರುಗಳ ಅನೇಕ ಗಮನಾರ್ಹ ಸಾಧನೆಗಳಲ್ಲಿಯೇ ಇದೊಂದು ಮರೆಯಲಾರದ ಸೇವೆಯಾಗಿದೆ. ಶಿವಯೋಗಮಂದಿರ ಹಾಗೂ ಕಾಶಿಯ ಸಕಲ ಆಧ್ಯಾತ್ಮಿಕ ಸೌಕರ್ಯಗಳು ಈ ಮಠದಲ್ಲಿ ಸಾಧಕರಿಗೆ ದೊರೆಯುತ್ತಿರುವದು ಒಂದು ವಿಶೇಷವಾಗಿದೆ. "ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ"ದಿಂದ ಅಧ್ಯಯನ ಮಾಡಿ, ಕರ್ನಾಟಕ-ಆಂಧ್ರ-ಮಹಾರಾಷ್ಟ್ರ ಮುಂತಾದ ನಾನಾ ಮಠಗಳಿಗೆ ಮಠಾಧೀಶ್ವರರಾಗಿ ಹೋದವರ ಹೆಸರುಗಳನ್ನು ಈ ಗ್ರಂಥದ ಕೊನೆಯಲ್ಲಿ ಸವಿವರವಾಗಿ ಕೊಡಲಾಗಿದೆ.

### ಹಳೆಯ ಕಾಲವನ್ನು ಗೆದ್ದುನಿಂತ ಹಿರಿಯಮಠ: ಹೊಸ ರೂಪ-ಹೊಸ ಅಲಂಕಾರ

೩೦ ವರ್ಷಗಳ ಹಿಂದೆ ನೋಡಿದ ಈ ಮಠ ಇಂದು ನೋಡಿದವರು ಬೆಕ್ಕಸ ಬೆರಗಾಗುತ್ತಾರೆ!ಒಂದಲ್ಲ; ಹತ್ತಾರು ಪವಾಡಗಳನ್ನು ಒಮ್ಮೆಲೇ ನೋಡಿದ ಅನುಭವ ಪಡೆಯುತ್ತಾರೆ! ಓರ್ವ ಆಧುನಿಕ ಮರಶಿಲ್ಪ ಪಂಡಿತರ ಪ್ರಕಾರ ಈ ಮಠದಲ್ಲಿ ಇಂದಿನ ದರದಂತೆ ಮೂರುಕೋಟಿ ರೂಪಾಯಿ ಮೌಲ್ಯದ ಕಟ್ಟಿಗೆ ಇವೆಯಂತೆ. ಆನೆಗಡುತರ ಕಂಬಗಳು, ಭೀಮಗಡುತರ ತೊಲೆಗಳು....ಈ ಮಠವನ್ನು ಮಹಾ ಮಠ ಮಾಡಿವೆ. ಈ ತನ್ನ ವಾಸ್ತುಶಿಲ್ಪದ ವೈಶಿಷ್ಟ್ಯದಿಂದಲೂ ಇದು ಮಠಗಳ ಮಠ....ಮೂರುಸಾವಿರಮಠವಾಗಿದೆ! ಈ ಬೃಹತ್ ಪ್ರಾಚೀನ ಸೌಧದ ಗೋಡೆ ಗಳೇ ೧೦ ಫೂಟು ದಪ್ಪವಾಗಿವೆ. ಈವರೆಗೆ ಈ ಹಳೆಯ ಮಠವನ್ನು ೨೫ ಲಕ್ಷ ವೆಚ್ಚದಿಂದ ದುರಸ್ತಿ ಮಾಡಲಾಗಿದೆಯಲ್ಲದೇ; ಅಂದಾಜು ೧೫ ಲಕ್ಷ ವೆಚ್ಚದಿಂದ ವರ್ಣ ಸಂಯೋಜನೆ, ವಿದ್ಯುತ್ ಸಂಯೋಜನೆ, ಅಮೃತಶಿಲಾ ಭಿತ್ತಿ, ಅತ್ಯಾಧುನಿಕ ಅಂಕಣ, ಭಾರಿ ಉಜ್ವಲ ಚಲುವು ಹೊತ್ತ ಕಾಜಿನ ಜುಮ್ಮರಗಳು ಇತ್ಯಾದಿ ಸಿದ್ಧವಾಗಿವೆ. ಗಮನಿಸಬೇಕಾದ ಸಂಗತಿಯೆಂದರೆ ಮೇಲ್ಛಾವಣಿಯ ಎಲ್ಲಾ ಕಟ್ಟಿಗೆಯ ಕೆಲಸವನ್ನು, ಹಳೆಯ ಮರಶಿಲ್ಪ ಪದ್ಧತಿಯಂತೆಯೇ ಅಂಥ ಮರಕೆಲಸ ತಜ್ಞರಿಂದಲೇ ಹೊರಳಿ ಹೊಂದಿಸಿ ಸರಿಪಡಿಸಲಾಗಿದೆ.

ಇದೆಲ್ಲ ಹಳೆಯ ಮಠಕ್ಕೆ ಹೊಸ ವೇಷ ತುಂಬಿದ ಚಮತ್ಕಾರ. ಇದಲ್ಲದೆ ಅಂದಾಜು ಒಂದೂವರೆ ಕೋಟಿಗಿಂತಲೂ ಅಧಿಕ ವೆಚ್ಚದಿಂದ ಗೋಪುರ ಗಡಿಯಾರ, ಅಂಗಡಿ ಸಾಲುಗಳು, ಅಂಗಡಿಯ ಒಳಸಾಲುಗಳು, ಬ್ಯಾಂಕ ಕಟ್ಟಡ, ಒಳಗೋಪುರ, ಹತ್ತಾರು ಶಾಲೆಗಳ ವಿಸ್ತೃತ ಕಟ್ಟಡಗಳು, ಆಫೀಸ ಕಟ್ಟಡ, ಪರಂಜ್ಯೋತಿ ಕಟ್ಟಡ, ಪ್ರಸಾದ ನಿಲಯ, ಕಲ್ಯಾಣಮಂಟಪ, ಹಾಸ್ಟೆಲ್ ಕಟ್ಟಡ, ಸಂಶೋದನ ಮಂದಿರ, ಗ್ರಂಥಾಲಯ ಮಂದಿರ ಇತ್ಯಾದಿಗಳು ರೂಪವೆತ್ತು ನಿಂದಿವೆ. ೩೦ ವರ್ಷಗಳಲ್ಲಿ ಹುಬ್ಬಳ್ಳಿ ಮಹಾನಗರದ ಜನತೆ ದಂಗುದಕ್ಕಾಗು ವಂತೆ ಈ ಚಮತ್ಕಾರ ಈ ಮಠದಲ್ಲಿ ನಡೆದ್ದದ್ದು ಪೂಜ್ಯ ಜಗದ್ಗುರುಗಳ ಕರ್ತವ್ಯ ಪ್ರಜ್ಞೆಯ ಸಾಕ್ಷಾತ್ಕಾರ!

## ಸಾಹಿತ್ಯ-ಸಂಸ್ಕೃತಿ-ಧರ್ಮಗಳ ಪ್ರಭೆ ಹರಡಿದ: "ಪರಂಜ್ಯೋತಿ"

೨೦,೦೦೦ ಪುಟಗಳಷ್ಟು ಈಗಾಗಲೆ ಅಚ್ಚಾಗಿರುವ "ಪರಂಜ್ಯೋತಿ" ಪ್ರೊ. ಜಿ. ಎಚ್. ಹನ್ನೆರಡುಮಠ ಅವರ ಸಂಪಾದಕತ್ವದಲ್ಲಿ ೧೯೬೮ ರಲ್ಲಿ ಆರಂಭ ವಾಗಿ ಸಂಸ್ಕೃತಿಯ ಸೌರಭವನ್ನು ಸೂಸುವ ಮಾಸಿಕವೆಂದು ಹೆಸರಾಂತವಾಯಿತು. ಪ್ರೊ. ಜಿ. ಎಚ್. ಹನ್ನೆರಡುಮಠ ಅವರು ೧೨ ವರ್ಷ ಈ ಪತ್ರಿಕೆಯ ಮೊದಲ ಸಂಪಾದಕರಾಗಿದ್ದು; ನಂತರ ಪ್ರಾಚಾರ್ಯ ಹುದ್ದೆಗೆ ಹೋದ ನಂತರ; ಪೂಜ್ಯ ಡಾ|| ಕೆಳದಿ ಗುರುಸಿದ್ಧದೇವ ಶಿವಾಚಾರ್ಯರ ಸಂಪಾದಕತ್ವದಲ್ಲಿ ಮುಂದು ವರೆಯಿತು.

ಸಾಹಿತ್ಯ-ಸಂಸ್ಕೃತಿ-ಧರ್ಮ-ಕಲೆ-ಆರೋಗ್ಯ ವಿಷಯಗಳ ಬಗೆಗೆ ವೈವಿಧ್ಯ ಪೂರ್ಣ ಲೇಖನಗಳನ್ನೂ, ಕವನಗಳನ್ನೂ ಒಳಗೊಂಡ ಈಪತ್ರಿಕೆ ಶೀಘ್ರದಲ್ಲಿಯೇ ಬಹು ಜನರ ಪ್ರೀತಿಯನ್ನು ಸಂಪಾದಿಸಿತು. ಇಂದು ಭಾರತದಾದ್ಯಂತ ಇದರ ಓದುಗರು ಇರುವದು ಹೆಮ್ಮೆಯ ಸಂಗತಿ.

"ಪರಂಜ್ಯೋತಿ" ಸ್ವಂತ ಮುದ್ರಣಾಲಯ ಹಾಗೂ ಸ್ವಂತ ಕಟ್ಟಡವನ್ನು ಮಠದ ಆವರಣದಲ್ಲಿಯೇ ಹೊಂದಿದೆ. "ಪರಂಜ್ಯೋತಿ" ಮುದ್ರಣ ಲಾಭಗಳಿಕೆಯ ಉದ್ದೇಶದಿಂದ ಆರಂಭವಾದುದಲ್ಲ. ಧರ್ಮ ಪ್ರಸಾರವೇ ಅದರ ಪರಮ ಧ್ಯೇಯ.

"ಪರಂಜ್ಯೋತಿ"ಯ ಪ್ರಾಣನಾಯಕರೆಂದರೆ ಪೂಜ್ಯ ಜಗದ್ಗುರು ಮಹಾ ಸನ್ನಿಧಿಯವರು. ಒಂದರ್ಥದಲ್ಲಿ ಜಗದ್ಗುರುಗಳು ಹುಟ್ಟು ಪತ್ರಿಕಾಕರ್ತರು. "ಶಿವಯೋಗಮಂದಿರ"ದಲ್ಲಿ ಇದ್ದಾಗಿನಿಂದಲೇ ಹಲವು ಲೇಖನ-ಕವನಗಳನ್ನು ಪತ್ರಿಕೆಗಳಿಗೆ ಕಳಿಸುತ್ತಿದ್ದ ಅವರು "ಸುಕುಮಾರ" ಕೈಬರಹದ ಪತ್ರಿಕೆಯ ಸಂಪಾದಕರೂ ಆಗಿದ್ದರು. ಅಂದಿನ ಆ ಅಭಿಲಾಷೆ, ಆಕಾಂಕ್ಷೆ ಅವರನ್ನು ಏಕನಿಷ್ಟೆನಲ್ಲಿ

ಎತ್ತರಿಸಿ ತಂದು ಒಂದು ಉತ್ಕೃಷ್ಟ ಪತ್ರಿಕೆಯನ್ನು ನಾಡಿಗೆ ನೀಡುವಂತೆ ಮಾಡಿತು. ಆಶ್ಚರ್ಯದ ಸಂಗತಿಯೆಂದರೆ ೨೨ ವರ್ಷಗಳಾದರೂ ಒಂದು ತಿಂಗಳು ಕೂಡಾ ಈ ಪತ್ರಿಕೆ ಅಚ್ಚಾಗದೇ ನಿಂತುದಿಲ್ಲ. ಇದರ ಹಿಂದೆ ಪೂಜ್ಯ ಜಗದ್ಗುರುಗಳ ನಿರಂತರ ಪರಿಶ್ರಮ, ಶ್ರದ್ಧೆ, ಉತ್ಸಾಹ ಎಷ್ಟಿವೆಯೆಂಬುದಕ್ಕೆ ಇದು ಸಾಕ್ಷಿ. ಧರ್ಮ–ಸಂಸ್ಕೃತಿ ಪ್ರಸಾರವಾಗಿರುವ ಈ ಪತ್ರಿಕೆ ಎಂದಿಗೂ ಲಾಭಮುಖವಾಗಿಲ್ಲ. ಜನತೆ ಇದನ್ನು ಓದಿ ಪ್ರಯೋಜನ ಪಡೆದದ್ದೇ ಒಂದು ದೊಡ್ಡ ಲಾಭ. ಆಗಾಗ ಜಾಹೀರಾತು ದಾರರು ಜಾಹೀರಾತು ನೀಡಿ ಸಹಕರಿಸಿದ್ದುಂಟು. ಆಜೀವ ಸದಸ್ಯರು, ಪೋಷಕರು ತಮ್ಮ ಮುಡಿಪು ನೀಡಿದ್ದುಂಟು. ಎಲ್ಲರ ಪ್ರೇರಣೆಯಿಂದ ಎಲ್ಲರಿಗಾಗಿ ಅರಳಿದ ಪತ್ರಿಕೆಯೇ 'ಪರಂಜ್ಯೋತಿ.' ಹಿರಿಯರಾದ ಪೂಜ್ಯ ಡಾ|| ಜ. ಚ. ನಿ. ಯವರು ಪರಂಜ್ಯೋತಿಯ ಬಗ್ಗೆ ಪ್ರಸಾದ ನುಡಿಗಳನ್ನು ಹೇಳಿದ್ದಾರೆ–

"ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠದ ಮಾಸಿಕವಾದ ಈ ಪರಂಜ್ಯೋತಿಯು ಸತ್ಯಸುಂದರವಾದ ಶಿವಾಲಯ; ಇದರೊಳಗಿಹುದು ಮಾತೆಂಬ ಜ್ಯೋತಿರ್ಲಿಂಗ, ಇದು ಕಣ್ಣುಗಳೆರಡಕ್ಕೆ ಕಾಣುವದು; ಕಿವಿಗಳೆರಡಕ್ಕೆ ಕೇಳುವದು."1

ಡಾ|| ವಸಂತ ಪಾಟೀಲ ಅವರು ಹೀಗೆ ಅಭಿಪ್ರಾಯಪಡುತ್ತಾರೆ–

"ವಿದ್ವಾಂಸರಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಇಚ್ಛಾಶಕ್ತಿಯಿಂದ ಬೆಳಗುತ್ತಿರುವ ಈ ಪರಂಜ್ಯೋತಿಯು ಶ್ರೀಗಳವರ ಘನತೆ, ಗೌರವವನ್ನೂ ಪರಿಚಯಿಸುತ್ತಿರುವದು.... ಧಾರ್ಮಿಕ ಪತ್ರಿಕಾರಂಗಕ್ಕೆ ಇದೊಂದು ಶ್ರೀಗಳವರ ಅತ್ಯುತ್ತಮ ಕೊಡುಗೆ.... ಅದರ ಹಿಂದೆ ಅಡಕವಾಗಿರುವ ಶ್ರೀಗಳವರ ದಣಿವರಿಯದ ಘನಪಾತ್ರದ ಅರಿವು ಯಾರಿಗಾದರೂ ಆಗಿರಲು ಸಾಕು."2

## ಪ್ರಕೃತಿಯ ಪ್ರಸನ್ನ ಪರಿಸರದಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ

ಬಡ ರೋಗಿಗಳಿಗೆ ಬಹುಮಾನವಾಗಿ ಪ್ರಾಪ್ತವಾದ ಈ ಆಸ್ಪತ್ರೆ ಜಲ ಮಾಲಿನ್ಯ, ಹವಾಮಾಲಿನ್ಯಗಳಿಂದ ಅಲಿಪ್ತವಾಗಿದ್ದು; ಭಾರತದಲ್ಲಿಯೇ ಸಹಕಾರಿ ತತ್ತ್ವದ ತಳಹದಿಯ ಮೇಲೆ ಸ್ಥಾಪಿತವಾದ ಪ್ರಪ್ರಥಮ ಸಹಕಾರಿ ಚಿಕಿತ್ಸಾಲಯ ವಾಗಿದೆ. ಅರವತ್ತೈದು ಎಕರೆ ವಿಸ್ತೀರ್ಣ ಕ್ಷೇತ್ರದಲ್ಲಿ ಹರಡಿಕೊಂಡ ಇದರಲ್ಲಿ ಅತ್ಯಾಧುನಿಕ ವೈದ್ಯಕೀಯ ಹಾಗೂ ಶಸ್ತ್ರಕ್ರಿಯೆಯ ಸಲಕರಣೆಗಳನ್ನು ಸುಸಜ್ಜಿತ

1 ಡಾ|| ಜ. ಚ. ನಿ. : "ರಜತ ದೀಪ್ತಿ" : ಪುಟ–11

2 ಡಾ|| ವಸಂತ ಪಾಟೀಲ: "ಪರಂಜ್ಯೋತಿ: ಬೆಳೆದು ಬಂದ ದಾರಿ," ಮಹಾಭಿನಂದನ ಸಂಪುಟ: 2

ವೈದ್ಯರಿಂದ ಅಳವಡಿಸಲಾಗಿದೆ. ಇಂದು ಕರ್ನಾಟಕ-ಮಹಾರಾಷ್ಟ್ರಗಳ ಊಹಾತೀತ ವಿವಿಧ ರೋಗಿಗಳಿಗೆ ಇದು ಕಲ್ಪವೃಕ್ಷ-ಕಾಮಧೇನುವಾಗಿದೆ. ಈ ಆಸ್ಪತ್ರೆಯ ಚೇರಮನ್ನರಾದ ಪೂಜ್ಯ ಶ್ರೀ ನಿ. ಪ್ರ. ಸಿದ್ಧಪ್ರಭು ಮಹಾಸ್ವಾಮಿಗಳು ಸಿದ್ಧ ಸಂಸ್ಥಾನಮಠ, ಚಿಂಚಣಿ ಅವರು ಈ ದವಾಖಾನೆಯ ಬಗ್ಗೆ ಹೀಗೆ ಬರೆಯುತ್ತಾರೆ–

"....ಇಂದು ಕ್ಷಯರೋಗಿಗಳಿಗೆ ಮೃತ್ಯುಂಜಯವಾಗಿ ನಿಂತಿದೆ ಈ ಆಸ್ಪತ್ರೆ. ಕ್ಷಯಪೀಡಿತರಾಗಿ ಬಂದವರು ಪುನರ್ಜನ್ಮ ಪಡೆದು ಹಸನ್ಮುಖಿಗಳಾಗಿ; ವೈದ್ಯರ, ದಾದಿಯರ, ನರ್ಸರ ಸೇವೆಯನ್ನು ಪ್ರಶಂಸಿಸುತ್ತ ಹೋಗುವ ದೃಶ್ಯ ಮನಮೋಹಕ. ಇದೇ ಪೂಜ್ಯ ಜಗದ್ಗುರುಗಳಿಗೆ ಆನಂದದ ತೃಪ್ತಿಯ ವಿಷಯ. ಇದರೊಂದಿಗೆ ರಕ್ತಭಂಡಾರ ವಿಭಾಗ, ಉಚಿತ ಹೆರಿಗೆ ವಿಭಾಗ, ಜನರಲ್ ವಾರ್ಡ, ಸ್ಪೇಶಲ್ ವಾರ್ಡಗಳೂ ರೂಪಗೊಂಡಿವೆ. ಲ್ಯಾಪ್ರೊಸ್ಕೋಪ್, ಗ್ಯಾಸ್ಟ್ರೋಸ್ಕೋಪ್, ಕಾರ್ಡಿಯೋಗ್ರಾಮ್ ಮಾನಿಟರ್ ಇತ್ಯಾದಿಯಾಗಿ ಬಹು ಬೆಲೆಬಾಳುವ ಆಧುನಿಕ ವೈದ್ಯಕೀಯ ಉಪಕರಣಗಳೊಂದಿಗೆ ಸುಸಜ್ಜಿತವಾಗಿ, ಸಮಾಜದ ಸ್ವಾಸ್ಥ್ಯಕ್ಕಾಗಿ– "ರೋಗಿಯ ಸೇವೆಯೇ ದೇವರ ಸೇವೆ" ಎಂಬ ಉದಾತ್ ಭಾವನೆಯಿಂದ ಸೇವೆ ಸಲ್ಲಿಸುತ್ತ ನಾಡಿನಲ್ಲಿ ಒಂದು ಅತ್ಯುತ್ತಮ ಆರೋಗ್ಯಧಾಮವಾಗಿ ಪ್ರಸಿದ್ಧಿ ಪಡೆದಿದೆ. ಅಸಂಖ್ಯಾತ ರೋಗಿಗಳು ಇದರ ಪ್ರಯೋಜನ ಪಡೆದು ಗುಣಮುಖರಾಗಿ, ಜೀವನದಲ್ಲಿ ಹೊಸಬೆಳಕನ್ನು ಕಂಡಿದ್ದಾರೆ....ಆದರೂ ಸನ್ನಿಧಿಯವರ ಮಾತೃಹೃದಯ ಇಷ್ಟಕ್ಕೆ ತೃಪ್ತಿ ಹೊಂದಲಿಲ್ಲ. ಈ ಆಸ್ಪತ್ರೆಗೆ ಬರುವ ದೀನ–ದಲಿತರು ಹಾಗೂ ಬಡರೋಗಿಗಳು ಸಂಪೂರ್ಣ ಗುಣಮುಖರಾಗುವವರೆಗೆ ಅವರಿಗೆ ಉಚಿತ ಪೌಷ್ಟಿಕ ಆಹಾರ ನೀಡಲು ಅಂತರಂಗ ಚಿಂತಿಸಿತು. ಕಾರ್ಯೋನ್ಮುಖರಾಗಲು ಪ್ರಚೋದಿಸಿತು. ಅಂತೆಯೇ ೧೯೮೩ ರಲ್ಲಿ 'ಶ್ರೀ ಜಗದ್ಗುರು ಗಂಗಾಧರ ಬಡರೋಗಿಗಳ ಉಚಿತ ಪ್ರಸಾದ ನಿಲಯ'ವನ್ನು ಆರಂಭಿಸಿದರು. ಇದಕ್ಕಾಗಿಯೇ ಯಾದವಾಡದಲ್ಲಿರುವ ೪೩ ಎಕರೆಯಷ್ಟು ಭೂಮಿಯನ್ನು ನೀಡಿ, ನಿರಂತರ ಅನ್ನಪ್ರಸಾದ ಸೇವೆ ನಡೆಯುವ ವ್ಯವಸ್ಥೆ ಮಾಡಿದ್ದಾರೆ."3

## ಲಿಂಗರಾಜ ಪ್ರಸಾದ ಮಂದಿರ: ಪುನರ್ನವೀಕರಣ

ಕರೇಹಂಚಿನಿಂದ ಆಚ್ಛಾದಿತವಾಗಿದ್ದ ಈ ಪ್ರಸಾದ ನಿಲಯದ ಹಳೆಯಮನೆ ಶೀರಾ ಜೀರ್ಣವಾಗಿತ್ತು. ಮಳೆ-ಗಾಳಿಯಿಂದಾಗಿ ತುಂಬ ಶಿಥಿಲವಾಗಿ ಹೋಗಿತ್ತು. ಪೂಜ್ಯ ಜಗದ್ಗುರುಗಳು ಇದನ್ನು ಸಂಪೂರ್ಣ ಕೆಡವಿ ಆಧುನಿಕ ಸುಂದರ ಕಟ್ಟಡ ನಿರ್ಮಾಣ ಮಾಡಿದರು. ಇದರ ಬೆಳವಣಿಗೆಗಾಗಿ ಹುಬ್ಬಳ್ಳಿಯ ಕಾಟನ್ ಮಾರ್ಕೆಟ,

---

3 "ಘಟಪ್ರಭೆಯ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ": ಮಹಾಭಿನಂದನ ಸಂಪುಟ: ಭಾಗ–1

ಅಕ್ಕಿಹೊಂಡ, ಗಾಂಧಿ ಮಾರ್ಕೆಟ ಹಾಗೂ ಜನತಾ ಬಜಾರ್‌ಗಳ ಮತ್ತು ಸುತ್ತಮುತ್ತ ಹಳ್ಳಿಯ ಸದ್ಭಕ್ತರು ಧನ-ಧಾನ್ಯ ಸಹಾಯ ಮಾಡಿದ್ದಾರೆ, ಮಾಡುತ್ತಿದ್ದಾರೆ. ಇದಕ್ಕಾಗಿ ಜಗದ್ಗುರುಗಳು ಶಾಶ್ವತ ವ್ಯವಸ್ಥೆ ಮಾಡಿದ್ದು, ಇಂದು ಇದು ಬಹು ಜನೋಪಯೋಗಿ ಉಚಿತ ಪ್ರಸಾದ ಮಂದಿರವಾಗಿದೆ.

## ಅಸುಂಡಿ ಚೆನ್ನಮಲ್ಲಪ್ಪ ಕಲ್ಯಾಣಮಂಟಪ

ಇಂದು ಇದು ಬಡವರ ಭಾಗ್ಯನಿಧಿಯಾಗಿದೆ. ಹುಬ್ಬಳ್ಳಿಯಲ್ಲಿ ದೀನ-ದಲಿತರಿಗಾಗಿ ಈ ಕಲ್ಯಾಣಮಂಟಪವೊಂದು ಅತ್ಯವಶ್ಯಕವಾಗಿತ್ತು. ಕಡಿಮೆ ಆದಾಯದ ಕುಟುಂಬಗಳಿಗೆ ತಮ್ಮ ಮನೆ ಮುಂದೆ ಲಗ್ನ ಮಾಡಿಕೊಳ್ಳಲು ಕಷ್ಟ ಸಾಧ್ಯವಾಗುತ್ತಿತ್ತು. ಇದನ್ನು ಜಗದ್ಗುರು ಸನ್ನಿಧಿಯವರು ಬಹು ದೂರದೃಷ್ಟಿಯಿಂದ ವಿಚಾರಿಸಿ, ಬಡವರಿಗಾಗಿ ಕಲ್ಯಾಣಮಂಟಪ ರಚನೆಗಾಗಿ ವಿಚಾರವಿನಿಮಯ ಮಾಡುತ್ತಿರುವಾಗ ಮೂರುಸಾವಿರಮಠದ ಪರಮಭಕ್ತರೂ ಆದ ಲಿಂಗೈಕ್ಯ ಚೆನ್ನಮಲ್ಲಪ್ಪನವರು ಅಸುಂಡಿ ಇವರಿಂದ ಕಲ್ಯಾಣಮಂಟಪಕ್ಕೆ ಬೇಕಾಗುವಷ್ಟು ಸಂಪತ್ತು ದಾನವು ದೊರೆಯಿತು. ಕಲ್ಯಾಣಮಂಟಪವೂ ಶ್ರೀಮಠದ ಆವರಣದಲ್ಲಿಯೇ ಒಂದು ವರ್ಷದೊಳಗಾಗಿ ಸಿದ್ಧವಾಯ್ತು. ಶ್ರೀ ಅಸುಂಡಿಯವರ ದಾನದಿಂದ ತಯಾರಾಗಿದ್ದಕ್ಕಾಗಿ ಅವರ ಹೆಸರನ್ನು ಈ ಕಲ್ಯಾಣಮಂಟಪಕ್ಕೆ ಸನ್ನಿಧಿಯವರು ಇಡಿಸಿದ್ದರಿಂದ ಕಾಯಕ ನಿಷ್ಠೆ ಸಾರ್ಥಕವಾಯ್ತು.

## ಅಕ್ಕಿ ಉಳುವಪ್ಪ ವಿದ್ಯಾರ್ಥಿ ನಿಲಯ

ಪ್ರಾಥಮಿಕ, ಮಾಧ್ಯಮಿಕ ಶಾಲೆಯಲ್ಲಿ ಓದುವ ವಿದ್ಯಾರ್ಥಿಗಳಿಗಿದ್ದ ವಸತಿ ಕೊರತೆ ನಿವಾರಣೆ ಮಾಡುವದಕ್ಕಾಗಿ ಈ ವಿದ್ಯಾರ್ಥಿ ನಿಲಯವನ್ನು ಶ್ರೀಮಠದ ಆವರಣದಲ್ಲಿಯೇ ಅಕ್ಕಿ ಉಳುವಪ್ಪನವರ ಮಕ್ಕಳಾದ ಅಕ್ಕಿ ಶಿವರುದ್ರಪ್ಪನವರ ಸಹಾಯದಿಂದ ಕಟ್ಟಿಸಲಾಗಿದೆ. ಮೂರುಸಾವಿರಮಠದ ಒಳಾಂಗಣದ ಪ್ರಾಂಗಣದಲ್ಲಿ ಈ ಸೌಧ ಸುಂದರವಾಗಿ ಮೇಲೆದ್ದು ನಿಂತಿದೆ. ಇದಕ್ಕೆ ಅಕ್ಕಿ ಉಳುವಪ್ಪ ವಿದ್ಯಾರ್ಥಿ ನಿಲಯವೆಂದು ನಾಮಕರಣ ಮಾಡಲಾಗಿದೆ. ಇಂದು ಈ ಕಟ್ಟಡದಲ್ಲಿ ಮಠದ ಅನೇಕ ಗುರುತರ ಕಾರ್ಯಭಾರ ಚಟುವಟಿಕೆಗಳು ನಡೆಯುತ್ತವೆ.

## ಮಹಾಮಠದ ಘನತೆ: ಗ್ರಂಥಾಲಯ

'ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಗ್ರಂಥಾಲಯ' ಮೂರುಸಾವಿರಮಠದ ಗ್ರಂಥ ಪ್ರೀತಿಗೆ ಸಾಕ್ಷಿ. ಬಹುಕಾಲದ ಹಿಂದೆಯೇ ಗುರುಸಿದ್ಧಪ್ಪನವರು ಬಾಳಣ್ಣನವರ ಸಹಾಯದಿಂದ ಈ ಗ್ರಂಥಾಲಯ ನಿರ್ಮಾಣವಾಯ್ತು. ಇದರಲ್ಲಿ ಹತ್ತು ಸಾವಿರದಷ್ಟು ಸಂಸ್ಕೃತ, ಕನ್ನಡ, ಇಂಗ್ಲಿಷ, ಹಿಂದಿ ಗ್ರಂಥಗಳೂ; ಸಾವಿರಾರು

ತಾಡವೋಲೆಗಳೂ ಹಾಗೂ ಕೋರಿ ಕಾಗದದ ಪುಸ್ತಕಗಳೂ ಇದ್ದು; ಇದೊಂದು ಅಮೌಲ್ಯನಿಧಿಯಾಗಿದೆ. ಶ್ರೀ ಗುಂಡಾ ಜೋಯಿಸರು ಇದರ ಸಂಶೋಧನೆ ನಡೆಸಿ ವ್ಯಾಪಕವಾದ ಗ್ರಂಥವೊಂದನ್ನು ಪ್ರಕಟಿಸಿದ್ದಾರೆ. ನಮ್ಮ ಪ್ರಾಚೀನ ಸಾಹಿತ್ಯ ವಾಙ್ಮಯ ದರ್ಶನಗಳ ಸೊತ್ತಿಗೆ ಇದು ತವನಿಧಿಯಾಗಿದೆ. ಇದಲ್ಲದೆ ಈ ಗ್ರಂಥಾಲಯದ ಮೂಲಕ ಮೂರುಸಾವಿರಮಠಕ್ಕೆ ೬೦–೭೦ ನಿಯತಕಾಲಿಕೆ ಪತ್ರಿಕೆಗಳೂ ಬರುತ್ತಿವೆ.

## ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಜನರಲ್ ಹಾಸ್ಟೆಲ್

ಶ್ರೀ ಮಠದ ಕಾರ್ಯವ್ಯಾಪ್ತಿ ಹೆಚ್ಚಾದಂತೆ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚುತ್ತ ಬಂದಿತು. ಅವರಿಗೆ ಇದ್ದ ವಿದ್ಯಾರ್ಥಿ ನಿಲಯಗಳು ಸಾಕೆನಿಸಲಿಲ್ಲ. ಬೃಹತ್ ಪ್ರಮಾಣದ ವಿದ್ಯಾರ್ಥಿ ನಿಲಯವನ್ನು ಕಟ್ಟಿಸಿದರೆ ವಿದ್ಯಾರ್ಥಿಗಳಿಗೆ ಅನುಕೂಲವಾಗಬಹುದೆಂಬ ಸದ್ಭಕ್ತರ ಕೇಳಿಕೆ ಬಹಳವಾದ್ದರಿಂದ ಶ್ರೀಮಠದ ಆವರಣದ ಬಯಲಿನಲ್ಲಿ ಈ ಕಾರ್ಯ ಹಮ್ಮಿಕೊಳ್ಳಲಾಯಿತು. ಈ ವಿದ್ಯಾರ್ಥಿ ನಿಲಯ ಸಿದ್ಧವಾಗಲು ಕರ್ನಾಟಕ ಸರಕಾರದ ಧನ ಸಹಾಯವೂ ದೊರೆಯಿತು. ಜಗದ್ಗುರುಗಳವರ ಅಮೋಘ ಪರಿಶ್ರಮದ ಫಲವೇ ಈ ಬೃಹತ್‌ಸೌಧ. ಸದ್ಭಕ್ತರಿಂದ ಹಾಗೂ ಶ್ರೀಮಠದಿಂದ ಲಕ್ಷಾಂತರ ಹಣದ ವೆಚ್ಚದಿಂದ ಈ ಬೃಹತ್ ಪ್ರಮಾಣದ ವಿದ್ಯಾರ್ಥಿ ನಿಲಯವು ತಯಾರಾಗಿ ನೂರಾರುವಿದ್ಯಾರ್ಥಿಗಳು ಪ್ರಶಾಂತ ವಾತಾವರಣದಲ್ಲಿ ಆನಂದದಿಂದ ವಿದ್ಯಾಧ್ಯಯನ ಮಾಡುತ್ತ ತಂಗಲು ಹುಬ್ಬಳ್ಳಿಯಂತಹ ಮಹಾನಗರದಲ್ಲಿ ಹೆಚ್ಚು ಅನುಕೂಲವಾಯ್ತು. ಶ್ರೀ ಸನ್ನಿಧಿಯವರ ಪರಿಶ್ರಮವು ಫಲನೀಡಿತು. ಇದರ ಉದ್ಘಾಟನೆಯನ್ನು ಕರ್ನಾಟಕ ರಾಜ್ಯದ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಬಿ. ಡಿ. ಜತ್ತಿಯವರು ಮಾಡಿದರು. ಇದರ ಕಟ್ಟಡ ನಿರ್ಮಾಣಕ್ಕೆ ಶ್ರೀ ಎಚ್. ಎಫ್. ಕಟ್ಟೀಮನಿ, ಅಂದಿನ ಶಿಕ್ಷಣ ಸಚಿವರಾಗಿದ್ದ ಶ್ರೀ ಅಣ್ಣಾರಾವ ಗಣಮುಖಿಯವರು ಸಹಕಾರ ನೀಡಿ ಈ ವಿಶಾಲ ಕಟ್ಟಡವನ್ನು ಪೂರ್ತಿಗೊಳಿಸಲು ನೆರವಾದರು.

## ವಿಜಯಮಹಾಂತ ಲಲಿತಕಲಾ ಮಹಾವಿದ್ಯಾಲಯ

ಕುಂಚಬ್ರಹ್ಮ ಮಿಣಜಗಿಯವರಿಂದ ಆರಂಭವಾಗಿದ್ದ "ಫಾಯಿನ್ ಆರ್ಟ್" ಕಲಾಮಂದಿರದ ವಿಸ್ತೃತ ವಿದ್ಯಾಲಯವೇ ಈ ವಿಜಯಮಹಾಂತ ಲಲಿತಕಲಾ ಮಹಾವಿದ್ಯಾಲಯವಾಗಿದೆ. ಶ್ರೀ ಮಿಣಜಗಿಯವರು ಅನೇಕ ವರ್ಷ ಧಾರೆಯೆರೆದ ಪರಿಶ್ರಮದ ಫಲವು ನಿರಾಧಾರವಾಗಿ ನಶಿಸಿಹೋಗುತ್ತಿರುವದನ್ನು ಜಗದ್ಗುರುಗಳು ಕಣ್ಣಾರೆ ಕಂಡರು. ಈ ಸಂಸ್ಥೆಗೆ ಮಾತೃಸಂಸ್ಥೆಯೊಂದರ ಸ್ಥಿರ ಆಶ್ರಯ ಅತ್ಯಗತ್ಯವಾಗಿತ್ತು. ಈ ನಿಟ್ಟಿನಲ್ಲಿ ತುಂಬ ಆಸ್ಥೆವಹಿಸಿ ಜಗದ್ಗುರುಗಳು ಪರಿಶ್ರಮಿಸದಿದ್ದರೆ

ಈ ಸಂಸ್ಥೆ ಕೈತಪ್ಪಿ ಹೋಗುವ ಸ್ಥಿತಿಯಲ್ಲಿತ್ತು. ಸಕಾಲಕ್ಕೆ ಪೂಜ್ಯ ಜಗದ್ಗುರುಗಳು ಈ ಕಲಾ ಮಹಾವಿದ್ಯಾಲಯದ ಪರಿಪೋಷಣೆಗೆ ಹಾಲು–ಜೇನು ಎರೆದು, ಅಪಾರ ಹಣದ ದಾನದಿಂದ ರಕ್ಷಿಸಿದರು. ಇಂದು ಈ ವಿದ್ಯಾಲಯ ಮೂರುಸಾವಿರಮಠದ ವಿದ್ಯಾಸಂಸ್ಥೆಗಳ ಸಹೋದರ ಸಂಸ್ಥೆಯಾಗಿ ಮುನ್ನಡೆಯುತ್ತಿದೆ. ನಗರದ ಮಧ್ಯವರ್ತಿ ಸ್ಥಳವಾದ ಕಾರ್ಪೋರೇಶನ್–ನೆಹರೂ ಸ್ಟೇಡಿಯಂಗಳ ಮಧ್ಯದಲ್ಲಿ, ಸುಂದರವಾದ ಕಟ್ಟಡದಲ್ಲಿ ಈ ವಿದ್ಯಾಲಯ ಸಮರ್ಥ ಪ್ರಾಚಾರ್ಯರಿಂದ, ಶಿಕ್ಷಕರಿಂದ ಪೂರ್ಣ ಪ್ರಮಾಣದಲ್ಲಿ ಶರವೇಗದಿಂದ ಬೆಳೆಯುತ್ತಿದೆ.

## ಕುಮಾರೇಶ್ವರ ವೈದಿಕ–ಜ್ಯೋತಿಷ್ಯ ಪಾಠಶಾಲೆ

ಶೈಕ್ಷಣಿಕ ಪುರೋಭಿವೃದ್ಧಿಯೊಂದಿಗೆ ಶ್ರೀಗಳು ಧಾರ್ಮಿಕ ಶ್ರೇಯೋಭಿವೃದ್ಧಿಯನ್ನು ಮರೆಯಲಿಲ್ಲವೆಂಬುದಕ್ಕೆ ಈ ಪಾಠಶಾಲೆ ಸಾಕ್ಷಿ ಹೇಳುತ್ತಿದೆ. ಕುಮಾರೇಶ್ವರ ಶಿವಯೋಗಿ ಸಂಘ ಸ್ಥಾಪನೆಯಾದ ಮೇಲೆ ಜನಜೀವನದಲ್ಲಿ ಧರ್ಮದ ಸಂಸ್ಕಾರ ಹಾಗೂ ಕ್ರಮಬದ್ಧ ಪೂಜಾವಿಧಾನಗಳನ್ನು ತಿಳಿಸಿ ಹೇಳಿ, ಒಳ್ಳೆ ಸಂಸ್ಕೃತಿಯತ್ತ ಕರೆದೊಯ್ಯಲು ಕುಮಾರೇಶ್ವರ ಹೆಸರಿನಲ್ಲಿ ವೈದಿಕ ಜ್ಯೋತಿಷ್ಯ ಪಾಠಶಾಲೆಯನ್ನು ಶ್ರೀ ಜಗದ್ಗುರು ಸನ್ನಿಧಿಯವರು ಸ್ಥಾಪಿಸಿದರು. ಇದರ ಉದ್ಘಾಟನೆಯನ್ನು ಸಿಂದಗಿ ಹಿರೇಮಠದ ಲಿಂಗೈಕ್ಯ ಶ್ರೀ ಷ. ಬ್ರ. ಶಾಂತವೀರ ಪಟ್ಟಾಧ್ಯಕ್ಷರು ಮಾಡಿ ಚೇತನ ನೀಡಿದರು. ಈ ಪಾಠಶಾಲೆಯಲ್ಲಿ ಸ್ವರಯುಕ್ತ ರುದ್ರಾಧ್ಯಯನವನ್ನು ಮಾಡಿಸಲಾಗುವದು. ಇಲ್ಲಿಯ ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ, ವಸತಿ, ಬೆಳಕು, ಗ್ರಂಥಾಲಯ ಇತ್ಯಾದಿ ವ್ಯವಸ್ಥೆಗಳನ್ನು ಧಾರಾಳವಾಗಿ ನೀಡಲಾಗಿದೆ.

## ವಿಜಯಮಹಾಂತನ ನೆನಹಿನಲ್ಲಿ ಇಲಕಲ್ಲ ವಿದ್ಯಾಸಂಸ್ಥೆ

ಇಲಕಲ್ಲಿನ "ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ"ದ ಪ್ರೇರಣೆ–ಪ್ರತಿಷ್ಠಾನ–ಪುರೋಭಿವೃದ್ಧಿಗಳಿಗೆ ಪೂಜ್ಯ ಜಗದ್ಗುರುಗಳೇ ಕಾರಣ. ಇವರ ಹಸ್ತಸ್ಪರ್ಶದಿಂದ ಇಂದು ಈ ಸಂಸ್ಥೆ ಪವಾಡಸದೃಶವಾಗಿ ಮೇಲೆದ್ದು ನಿಂದಿರುವದು ಒಂದು ಸಂತೋಷದ ಸಂಗತಿ. ಜಗತ್ತಿನಾದ್ಯಂತ ಬೆಲೆಬಾಳುವ ಗ್ರಾನೈಟ್ ಕಲ್ಲುಗಳನ್ನು ಕಳಿಸುತ್ತಿರುವದು ಈ ಸಂಸ್ಥೆಯ ನೂರಾರು ಎಕರೆ ವಿಸ್ತೀರ್ಣವಾದ ಬಂಡೆಗುಡ್ಡದಿಂದಲೇ. ಇದಕ್ಕೂ ಪೂಜ್ಯ ಜಗದ್ಗುರುಗಳೇ ಪ್ರತ್ಯಕ್ಷ–ಪರೋಕ್ಷ ಕಾರಣರು. ಕಲೆ–ವಿಜ್ಞಾನ–ವಾಣಿಜ್ಯ ವಿದ್ಯಾಲಯವನ್ನೂ, ಮಹಿಳಾ ಕಾಲೇಜನ್ನೂ, ತಾಂತ್ರಿಕ ಶಿಕ್ಷಣ ವಿದ್ಯಾಲಯವನ್ನೂ, ಶಿಕ್ಷಣ ಮಹಾವಿದ್ಯಾಲಯವನ್ನೂ ಹಮ್ಮಿಕೊಂಡು ಹೆಮ್ಮರವಾಗಿ ಬೆಳೆದುನಿಂತ ಈ ಮಹಾಸಂಸ್ಥೆ ಇಂದು ೨೫ನೆಯ ವರ್ಷದ ಬೆಳ್ಳಿಹಬ್ಬವನ್ನು ಆಚರಿಸುತ್ತಿರುವದು ಜಗದ್ಗುರುಗಳ ಆಶೀರ್ವಾದದ ಫಲವೇ

ಸರಿ. ಹಿಂದೆ ಶ್ರೀ ಜಗದ್ಗುರು ಸನ್ನಿಧಿಯವರು ಚಿತ್ತರಗಿ–ಇಲಕಲ್ಲಿನ ವಿಜಯ ಮಹಾಂತೇಶ್ವರ ಮಠಕ್ಕೆ ಅಧಿಕಾರಿಗಳಾಗಿದ್ದು; ಮಠಾಧಿಪತಿಗಳಾಗುವದು ತಪ್ಪಿ ಮೂರುಸಾವಿರಮಠದ ಜಗದ್ಗುರುಗಳಾದರು. ಆಗ ಈ ಮಠಕ್ಕೆ ತಮ್ಮ ಪರಿಸರ ದಲ್ಲಿ ಬೆಳೆದಿದ್ದ ಜಮಖಂಡಿಯ ಉದಾಸಮಠದ ಚಂದ್ರಶೇಖರದೇವರನ್ನು 'ಗುರು ಮಹಾಂತಸ್ವಾಮಿಗಳೆಂ'ಬ ನಾಮಕರಣದಿಂದ ಅಧಿಕಾರಿಗಳನ್ನಾಗಿ ಮಾಡಿದರು. ನೇಯ್ಗೆಯ ಊರಾದ ಇಲಕಲ್ಲು ಶೈಕ್ಷಣಿಕವಾಗಿಯೂ ಪುರೋಭಿವೃದ್ಧಿ ಸಾಧಿಸ ಬೇಕೆಂಬ ಮಹದಾಕಾಂಕ್ಷೆಯಿಂದ ೧೯೬೩ ರಲ್ಲಿ ಲಿಂಗೈಕ್ಯ ಗುರುಮಹಾಂತಸ್ವಾಮಿ ಗಳಿಗೆ ಪ್ರೇರಣೆ ನೀಡಿ, "ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ"ದ ಸ್ಥಾಪನೆ ಯಾಗಲು ಮೂಲ ಕಾರಣಕರ್ತರಾದರು. ಅಂದಿನ ಕರ್ನಾಟಕ ರಾಜ್ಯದ ಶಿಕ್ಷಣ ಮಂತ್ರಿಗಳಾಗಿದ್ದ ಎಸ್. ಆರ್. ಕಂಠಿಯವರ ಅಧ್ಯಕ್ಷತೆಯಲ್ಲಿ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ಶಂಕುಸ್ಥಾಪನೆಯು, ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ರ‍್ಯಾಂಗ್ಲರ್ ಡಿ. ಸಿ. ಪಾವಟೆಯವರ ಅಮೃತಹಸ್ತದಿಂದ ನೆರವೇರಿತು. ಅಂದು ಮೂರುಸಾವಿರಮಠದಿಂದ ಇಲಕಲ್ಲಿನ ಕಾಲೇಜಿಗೆ ಶ್ರೀ ಜಗದ್ಗುರು ಸನ್ನಿಧಿ ಯವರು ೨೫,೦೦೦ ರೂಪಾಯಿ ನೀಡಿ ಆಶೀರ್ವದಿಸಿದರು. ಈಗ ಈ ಕಾಲೇಜು ಬೃಹತ್‌ಪ್ರಮಾಣದಲ್ಲಿ ಬೆಳೆದು ಕರ್ನಾಟಕದ ಹೆಸರಾಂತ ವಿದ್ಯಾಸಂಸ್ಥೆ ಗಳಲ್ಲೊಂದಾಗಿದೆ. ಇದರ ಸರ್ವಾಂಗೀಣ ಪ್ರಗತಿಗೆ ಶ್ರೀ ಜಗದ್ಗುರುಗಳು, ಗುರು ಮಹಾಂತಸ್ವಾಮಿಗಳು, ಇಂದಿನ ಪೂಜ್ಯ ಮಹಾಂತಸ್ವಾಮಿಗಳು, ದಿವಂಗತ ಎಸ್. ಆರ್. ಕಂಠಿಯವರು ಹಾಗೂ ಇಲಕಲ್ಲ ಭಾಗದ ಎಲ್ಲ ಸದ್ಭಕ್ತರು ಕಾರಣೀ ಭೂತರಾಗಿದ್ದಾರೆ. ಇಂದು ಈ ಮಹಾಸಂಸ್ಥೆ ಶಿಕ್ಷಣ ವಿದ್ಯಾಲಯದಿಂದ ಹಾಗೂ ಜಗದ್ಗುರುಗಳೇ ಲಕ್ಷಾಂತರ ಹಣ ನೀಡಿ ಕಟ್ಟಿಸಿದ 'ಜಗದ್ಗುರು ಗಂಗಾಧರ ತಾಂತ್ರಿಕ ವಿದ್ಯಾಲಯ'ದಿಂದ ಪುರೋಭಿವೃದ್ಧಿ ಸಾಧಿಸಿದೆ. ತಾಂತ್ರಿಕ ವಿದ್ಯಾಲಯಗಳಲ್ಲಿ ರಾಜ್ಯದಲ್ಲಿಯೇ ದೊಡ್ಡ ತಾಂತ್ರಿಕ ವಿದ್ಯಾಲಯವಾಗಿದೆ. ರಜತೋತ್ಸವದ ಉತ್ಸವದಲ್ಲಿರುವ ಈ ವಿದ್ಯಾಸಂಸ್ಥೆಗೆ ಅಮೃತೋತ್ಸವದ ಸಂತಸದಲ್ಲಿರುವ ಪೂಜ್ಯ ಜಗದ್ಗುರುಗಳ ಪ್ರೇರಣೆ–ಪೋಷಣೆ–ಅನುಗ್ರಹಗಳು ಸದಾ ಇರಲೆಂದು ಎಲ್ಲರ ಹೃದಯದ ಹಾರೈಕೆಯಾಗಿದೆ.

## ನನ್ನ ತವರುಮನೆ: ಇಲಕಲ್ಲು

ಜಗದ್ಗುರುಗಳು ನೂರಾರು ಬಾರಿ "ಇಲಕಲ್ಲು ನನ್ನ ತವರುಮನೆ" ಎಂದು ಹೇಳಿಕೊಳ್ಳುತ್ತಾರೆ. ಜಗದ್ಗುರುಮಠಕ್ಕೆ ಹೋಗಿ ೩೨ ವರ್ಷಗಳಾದರೂ ಅನ್ನ ನೀಡಿ, ಅರುಹುನೀಡಿ ಬೆಳೆಸಿದ, ಬೆಳಗಿಸಿದ ವಿಜಯಮಹಾಂತನ ತಪೋವನದ ನೆಲೆ ಯನ್ನು ನಾನು ಮರೆಯಲಾರೆ ಎಂದು ಹೇಳಿಕೊಳ್ಳುತ್ತಾರೆ. "ವಿಜಯಮಹಾಂತ ನನ್ನು ನಂಬಿದವರಿಗೆ ಇಳಿಗಾಲವಿಲ್ಲ; ವಿಜಯಮಹಾಂತನನ್ನು ಮರೆತರೆ

ಉಳಿಗಾಲವಿಲ್ಲ"ವೆಂದು ಅಖಂಡವಾಗಿ ನಂಬಿದ ಸ್ವಾಮಿಚೇತನಗಳಲ್ಲಿ ಜಗದ್ಗುರು ಗಳೂ ಒಬ್ಬರು. ತಾವಿನ್ನೂ ಕಾಶಿಯಲ್ಲಿ ಕಲಿಯುತ್ತಿರುವಾಗ ಬಂದ ಆರ್ಥಿಕ ಮುಗ್ಗಟ್ಟಿನಲ್ಲಿ ತುಂಬ ಸಹಾಯ ಮಾಡಿದ ಇಲಕಲ್ಲಿನ ಹಿರಿಯ ಸದ್ಭಕ್ತರನ್ನು ಇವತ್ತಿಗೂ ಸೂರು-ಸಾವಿರ ಬಾರಿ ಜಗದ್ಗುರುಗಳು ನೆನೆಯುತ್ತಾರೆ. ಆದ್ದರಿಂದ ಇಲಕಲ್ಲಿನಿಂದ ಅಗಲಿಹೋದ ಸ್ವಾಮಿಗಳಾದರೂ ಜಗದ್ಗುರುಗಳು ಇಂದಿಗೂ ಇಲಕಲ್ಲಿನ ಸಮಸ್ತ ಜನತೆಯ ಹೃದಯಮಠದ ಪ್ರೀತಿಯ ಸಿಂಹಾಸನ ಏರಿದ ಸ್ವಾಮಿಗಳಾಗಿದ್ದಾರೆ. ಇಂದಿಗೂ ಇಲಕಲ್ಲಿನವರು ಜಗದ್ಗುರುಗಳನ್ನು ಕೇಳದೇ, ವಿಚಾರಿಸದೇ, ಆಶೀರ್ವಾದ ಪಡೆಯದೇ ಒಂದೂ ಕಾರ್ಯವನ್ನು ಮಾಡುವದಿಲ್ಲ. "ನನ್ನ ಮಠ ನನ್ನ ತವರೂರು" ಎಂದು ಜಗದ್ಗುರುಗಳು ಇಲ್ಲಕಲ್ಲನ್ನು ನಂಬಿದಂತೆ ಇಲಕಲ್ಲಿನವರು "ನಮ್ಮ ಸ್ವಾಮಿಗಳು ನಮ್ಮವರು" ಎಂದು ಇಂದಿಗೂ ಗುಣಗಾನ ಮಾಡುತ್ತಾರೆ. ಸ್ವಾಮಿ–ಭಕ್ತ ಮಧುರ ಸಂಬಂಧಕ್ಕೆ ಇದೊಂದು ಕರ್ನಾಟಕ ದಲ್ಲಿಯೇ ವಿಶಿಷ್ಟ ಉದಾಹರಣೆ.

## ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘ

ಮಹಾನಗರದ ಮಹಿಳಾ ಶಿಕ್ಷಣಕ್ಕೆ ಕಾಮಧೇನು-ಕಲ್ಪವೃಕ್ಷವಾದ ಈ ವಿದ್ಯಾ ವರ್ಧಕ ಸಂಘ ಗಂಗಾಧರ ರಾಜಯೋಗೀಂದ್ರರ ಜ್ಞಾನಮಾನಸ ಗಂಗೆಯ ವರದಾನ. ೧೯೬೭ ರಲ್ಲಿ ಸ್ಥಾಪಿತವಾದ ಈ ಶೈಕ್ಷಣಿಕ ಕೇಂದ್ರ ಇಂದು ಬೃಹತ್ ಪ್ರಮಾಣದ ಟೊಂಗೆ-ಟಿಸಿಲುಗಳನ್ನು ಬಿಟ್ಟಿದೆಯಲ್ಲದೆ; ಹುಬ್ಬಳ್ಳಿ ನಗರದ ವಾಣಿಜ್ಯ ಕೇಂದ್ರಕ್ಕೆ ಶೈಕ್ಷಣಿಕ ಹರವು–ಹುನ್ನಾರ ನೀಡಿದೆ. ಇಂದು ಈ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಶಿಶುವಿಹಾರ, ಪ್ರಾಥಮಿಕ ಶಾಲೆಗಳು, ಮಾಧ್ಯಮಿಕ ಶಾಲೆಗಳು, ತಾಂತ್ರಿಕ ಶಾಲೆ, ಲಲಿತಕಲಾ ಮಹಾವಿದ್ಯಾಲಯ ಹಾಗೂ ಪದವಿ ಮಹಾವಿದ್ಯಾಲಯಗಳು ಅಚ್ಚುಕಟ್ಟಾಗಿ ಸಾಗಿವೆ. ಮಹಿಳಾ ಕಾಲೇಜು ಇಂದು ಉತ್ತರ ಕರ್ನಾಟಕದಲ್ಲಿಯೇ ಅತಿ ದೊಡ್ಡ ಮಹಿಳಾ ಕಾಲೇಜು ಆಗಿದ್ದು, ಮೂರು ಸಾವಿರ ವಿದ್ಯಾರ್ಥಿನಿಯರಿಗೆ ಶೈಕ್ಷಣಿಕ ರಕ್ಷಣೆ ನೀಡಿದೆ. ಈಗಾಗಲೆ ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಜಾಗೆಗಳನ್ನು ಈ ವಿದ್ಯಾಶಾಲೆಗಳಿಗೆ ಕೊಡಮಾಡಲಾಗಿದೆ. ಜಗದ್ಗುರುಗಳ ಸರ್ವಧರ್ಮ ಸಮಭಾವನೆಯ ಸಾತ್ವಿಕ ಗುರಿಯಿದಾಗಿ ಈ ವಿದ್ಯಾಮಂದಿರಗಳಲ್ಲಿ ಸಕಲ ಮತಸ್ಥರು ಶಿಕ್ಷಕ–ಶಿಕ್ಷಕೇತರ ಹುದ್ದೆಗಳಲ್ಲಿದ್ದಾರೆ. ಈ ವಿದ್ಯಾವರ್ಧಕ ಸಂಘಕ್ಕೆ ಕಲಶಪ್ರಾಯವಾಗಿ ಪೀರಚಂದ ನಾರಣಜಿ ಕಾನಜಿ ಅವರು ಚೇರಮನ್ನರಾಗಿದ್ದು; ಅವರ ದಕ್ಷ ದಿಗ್ದರ್ಶನದಲ್ಲಿ ಈ ವಿದ್ಯಾಸೌಧಗಳು ಜ್ಞಾನ ಸೌಧಗಳಾಗಿ ಸರ್ವೋತ್ಕೃಷ್ಟ ಸೇವೆಯನ್ನು ನೀಡುತ್ತಲಿವೆ. ಇವುಗಳಿಗೆ ಪೂರಕ ವಾಗಿ ಎರಡು ಕೋಟಿ ರೂಪಾಯಿ ವೆಚ್ಚದಿಂದ ವಿದ್ಯಾರ್ಥಿಗಳ ವಸತಿಶಾಲೆ ಹಾಗೂ ವಿದ್ಯಾರ್ಥಿನಿಯರ ವಸತಿಶಾಲೆಗಳನ್ನು ನಿರ್ಮಿಸುವ ಭಾರಿ ಯೋಜನೆಯನ್ನು

ಜಗದ್ಗುರುಗಳು ಹಾಕಿಕೊಂಡಿದ್ದಾರೆ. ಅದಕ್ಕಾಗಿ ಈಗಾಗಲೇ ಬೆಳಗಾಂವ ಜಿಲ್ಲೆಯ ಶಿರಘಾಣದಲ್ಲಿ ನಾಲ್ವತ್ತು ಎಕರೆ ಭೂಮಿ ಮತ್ತು ಧಾರವಾಡದ ಹತ್ತಿರದ ಸೋಮೇಶ್ವರ ದೇವಾಲಯದ ಪಕ್ಕದಲ್ಲಿ ಮೂವತ್ತು ಎಕರೆ ಭೂಮಿಯನ್ನು ಖರೀದಿಸಲಾಗಿದೆ. ಹಿಡಿದ ಕೆಲಸವನ್ನು ಬಿಡುವದು ಜಗದ್ಗುರುಗಳ ಜೀವಮಾನ ದಲ್ಲಿಯೇ ಇಲ್ಲ.

## ಮಹಾನಗರಕ್ಕೊಂದು ಮಹಿಳಾ ಮಹಾವಿದ್ಯಾಲಯ

ಬೆಳೆಯುತ್ತಿರುವ ಹುಬ್ಬಳ್ಳಿ-ಧಾರವಾಡ ಮಹಾನಗರಗಳಲ್ಲಿ ಮಹಿಳೆಯರ ಸರ್ವದರ್ಶನಗಳನ್ನೇ ಹೆಗ್ಗುರಿಯಾಗಿರಿಸಿಕೊಂಡ ಒಂದು ಪ್ರತ್ಯೇಕ ಮಹಾ ವಿದ್ಯಾಲಯವನ್ನು ಆರಂಭಿಸುವ ಸಂಕಲ್ಪ ಪೂಜ್ಯ ಜಗದ್ಗುರುಗಳದಾಯಿತು. ೧೯೬೭ ರಲ್ಲಿ ಇದರ ಪ್ರಾರಂಭೋತ್ಸವ ಜರುಗಿತು. ಇದಕ್ಕಾಗಿ ಅನೇಕ ಕಷ್ಟ ಗಳನ್ನು ಎದುರಿಸಿದರು. ಇಂದು ಆ ಸಂಕಲ್ಪ ಪವಾಡಸದೃಶಸಿದ್ಧಿಯನ್ನು ಸಂಪಾದಿಸಿರುವದನ್ನು ನಾಡು ಕಂಡಿದೆ. ಜನಸಾಂದ್ರತೆಯಿಂದ ಕಿಕ್ಕಿರಿದ ಹುಬ್ಬಳ್ಳಿ ವಾಣಿಜ್ಯ ನಗರದ ಮಧ್ಯದಲ್ಲಿಯೇ ಮಠದ ಭಾರಿ ಬೆಲೆಯ ನಿವೇಶನ ನೀಡ ಲಾಯಿತು. ಇಂದು ಕನ್ಯಾಪಿತೃಗಳಿಗೆ ಮಕ್ಕಳ ಶಿಕ್ಷಣದ ಬಗ್ಗೆ ಅಪಾರ ಭರವಸೆ ಯನ್ನು ನೀಡಿದ ಈ ಮಹಾವಿದ್ಯಾಲಯವು ತನ್ನದೇ ಆದ ೫೦ ಲಕ್ಷದ ಮೂರು ಅಂತಸ್ತಿನ ವಿಶಾಲ ಕಟ್ಟಡ ಪಡೆದಿದೆ. ಇದಕ್ಕಾಗಿ ಸಕಲ ಧರ್ಮದ ಸದ್ಭಕ್ತರು ಧನ ಸಹಾಯ ನೀಡಿ ಪ್ರೋತ್ಸಾಹಿಸಿದ್ದಾರೆ. ಕಲೆ-ವಾಣಿಜ್ಯ ವಿಭಾಗಗಳನ್ನು ಒಳಗೊಂಡ ಮಹಾವಿದ್ಯಾಲಯದಲ್ಲಿ ಇಂದು ಮೂರುಸಾವಿರ ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿದ್ದಾರೆ. ಅರವತ್ತು ಜನ ಪ್ರಾಧ್ಯಾಪಕಿಯರು-ಪ್ರಾಧ್ಯಾಪಕರು ಸೇವೆ ಸಲ್ಲಿಸುತ್ತಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಕಲೆ, ಕ್ರೀಡೆ, ಸಂಸ್ಕೃತಿ, ಸಂಗೀತ ಪರೀಕ್ಷಾ ಕ್ಷೇತ್ರಗಳಲ್ಲಿ ಈ ವಿದ್ಯಾಲಯದ ವಿದ್ಯಾರ್ಥಿನಿಯರು ಸಮರ್ಥ ದಾಖಲೆಗಳನ್ನು ಸ್ಥಾಪಿಸುತ್ತಿರುವದು ಸಂತೋಷದ ಸಂಗತಿ. ಉತ್ತರ ಕರ್ನಾಟಕ ದಲ್ಲಿಯೇ ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಮಹಿಳಾ ಕಾಲೇಜು ದೊಡ್ಡದಾಗಿದೆ, ಆದರ್ಶವಾಗಿದೆ. ಈಗಾಗಲೇ ಈ ಕಾಲೇಜನಿಂದ ಸಹಸ್ರಾರು ವಿದ್ಯಾರ್ಥಿನಿಯರು ಪದವೀಧರರಾಗಿದ್ದಾರೆ.

ಇದರೊಂದಿಗೆ ಶ್ರೀ ಮೂರುಸಾವಿರಮಠ ವಿದ್ಯಾವರ್ಧಕ ಸಂಘವು ಪ್ರತ್ಯೇಕ ವಾಗಿ ಬಾಲಿಕೆಯರ ಪ್ರಾಥಮಿಕ-ಮಾಧ್ಯಮಿಕ ಶಾಲೆಗಳನ್ನೂ, ಮಹಿಳಾ ತಾಂತ್ರಿಕ ಶಾಲೆಯನ್ನೂ ಮತ್ತು ಮಹಿಳೆಯರ ವಸತಿಗೃಹ ಕಟ್ಟಡವನ್ನೂ ಹೊಂದಿದೆ. ಇವೆಲ್ಲವುಗಳಿಗೂ ಲಕ್ಷಾಂತರ ವೆಚ್ಚದಿಂದ ಪ್ರತ್ಯೇಕ ಕಟ್ಟಡಗಳನ್ನು ಕಟ್ಟಿಕೊಟ್ಟಿರು ವದು ಪೂಜ್ಯ ಜಗದ್ಗುರುಗಳ ಪುರುಷಸಿಂಹ ವ್ಯಕ್ತಿತ್ವದ ಕರ್ಮಯೋಗದ ಕುರುಹು.

## ಮಹಿಳೆಯರಿಗಾಗಿ ವಸತಿ ಮಂದಿರ

ಐದುಲಕ್ಷ ವೆಚ್ಚದಿಂದ ನಾಲ್ಕಂತಸ್ತಿನ ಈ ಬೃಹತ್ ಸೌಧ ಮಹಿಳಾ ಕಾಲೇಜಿನ ಎದುರಿಗೆ; ಹುಬ್ಬಳ್ಳಿ ಮಹಾನಗರದ ಮಧ್ಯದಲ್ಲಿ ಮೇಲೆದ್ದು ನಿಂದಿರುವದು ಪರಸ್ಥಳದ ಮಹಿಳೆಯರಿಗೆ ದೊಡ್ಡ ರಕ್ಷಣೆ ನೀಡಿದೆ. ೧೦೦ ವಿದ್ಯಾರ್ಥಿನಿಯರು ಇಲ್ಲಿ ಆಶ್ರಯ ಪಡೆದಿದ್ದಾರೆ. ಈ ವಸತಿಗೃಹವು ಭವ್ಯತೆಗೆ ತಕ್ಕಂತೆ ಸ್ವಚ್ಛತೆ, ಶಿಸ್ತು, ಆದರ್ಶಗಳಿಂದ ಕೂಡಿದೆ. ಸುತ್ತಲೂ ಒಳ್ಳೆಯ ಪರಿಸರ ಪಡೆದಿದೆ. ನೆಹರೂ ಮೈದಾನ, ಅಕ್ಕಮಹಾದೇವಿ ಮಂದಿರ, ಮಹಿಳಾ ಕಾಲೇಜು ಹಾಗೂ ಬ್ರಹ್ಮಾಕುಮಾರಿ ಈಶ್ವರೀಯ ವಿಶ್ವವಿದ್ಯಾಲಯದ ಸಹೋದರಿಯರ ಯೋಗ ವಿದ್ಯಾಲಯಗಳು ಇವರ ಸುತ್ತಲೂ ಇರುವದರಿಂದ ಇದಕ್ಕೆ ತನ್ನದೇ ಆದ ಶೈಕ್ಷಣಿಕ ಹಾಗೂ ಆಧ್ಯಾತ್ಮಿಕ ವಾತಾವರಣ ದೊರಕಿದೆ.

## ಮಾದರಿಯ ಮಾಧ್ಯಮಿಕ ಶಾಲೆ

ಪೂಜ್ಯ ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳಿಂದ ಸಂಸ್ಥಾಪಿಸಲ್ಪಟ್ಟ ಶ್ರೀ ಜಗದ್ಗುರು ಗಂಗಾಧರ ಪ್ರೌಢಶಾಲೆ ತುಂಬಾ ಜೀರ್ಣವಾಗಿತ್ತು. ವಿದ್ಯಾರ್ಥಿಗಳ ಸಂಖ್ಯೆಯೂ ತೀರಾ ಕಡಿಮೆ ಇತ್ತು. ಇದಕ್ಕೆ ಅಂದಾಜು ೪॥ ಲಕ್ಷ ರೂಪಾಯಿ ವೆಚ್ಚ ಮಾಡಿ ಭದ್ರವೂ, ವಿಶಾಲವೂ ಆದ ಪ್ರತ್ಯೇಕ ಕಟ್ಟಡ ಕಟ್ಟಲಾಯಿತು. ಇಂದು ಈ ಶಾಲೆ ಹುಬ್ಬಳ್ಳಿ ನಗರದ ಮಧ್ಯವರ್ತಿ ಸ್ಥಾನದಲ್ಲಿದ್ದು ಆದರ್ಶ ಶಾಲೆಯೆಂದು ಖ್ಯಾತಿ ಪಡೆದಿದೆ. ಈಗಾಗಲೇ ಈ ಹೈಸ್ಕೂಲಿನಲ್ಲಿ ಶಿಕ್ಷಣ ಕಲಿತು ಮ್ಯಾಟ್ರಿಕ್ ಪಾಸಾದ ವಿದ್ಯಾರ್ಥಿಗಳು ಭಾರತ ಹಾಗೂ ವಿದೇಶಗಳಲ್ಲಿ ಸೇವೆ ಮಾಡುತ್ತಿದ್ದಾರೆ.

## ಮಕ್ಕಳಿಗಾಗಿ ಮುದ್ದಾದ ಶಾಲೆಗಳು

ಕರೇಹಂಚಿನ ಸೋರುವ ಮನೆಗಳಲ್ಲಿ ಶ್ರೀ ಜಗದ್ಗುರು ಗಂಗಾಧರ ಪ್ರಾಥಮಿಕ ಶಾಲೆಯ ಮಕ್ಕಳು ಕಲಿಯುತ್ತಿರುವದನ್ನು ಕಂಡು ಜಗದ್ಗುರುಗಳು ಮಮ್ಮಲ ಮರುಗಿದರು. ೩॥ ಲಕ್ಷ ವೆಚ್ಚದಿಂದ ಎರಡಂತಸ್ತಿನ ವಿಶಾಲ ಶಾಲೆಯನ್ನು ಅಚ್ಚುಕಟ್ಟಾಗಿ ಕಟ್ಟಿಸಿದರು. ಈ ಶಾಲೆಗಳಲ್ಲಿ ಇಂದು ಮೂರುಸಾವಿರದಷ್ಟು ಬಾಲಕ-ಬಾಲಕಿಯರು ಓದುತ್ತಿದ್ದಾರೆ. ಮಕ್ಕಳಿಗೆ ಮಮತೆಯ ವಾತಾವರಣ, ಆಧ್ಯಾತ್ಮಿಕ ಪರಿಸರ ಅತ್ಯವಶ್ಯ. ನಮ್ಮ ಸಂಸ್ಕೃತಿಯ ರಕ್ಷಣೆಗಾಗಿ ಇಲ್ಲಿಯ ಶಿಕ್ಷಕರು ಪ್ರಯತ್ನಿಸುತ್ತಿದ್ದಾರೆ. "ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘ"ದ ಗೌರವ ಕಾರ್ಯಾಧ್ಯಕ್ಷರಾಗಿ ಡಾ॥ ಟಿ. ಎಂ. ಕೌಸಾಳಿ ಹಾಗೂ ಶ್ರೀ ವ್ಹಿ. ಎಮ್. ಮಿರ್ಜಿ ಅವರು ಈ ಮುಂಚೆ ಸೇವೆ ಸಲ್ಲಿಸಿದ್ದಾರೆ. ರಾಮಣ್ಣ ಜಾಧವ, ವಿರುಪಾಕ್ಷಪ್ಪನವರು ಕರವೀರಶೆಟ್ಟರೂ ಸಹ ಸೇವೆ ಸಲ್ಲಿಸಿದ್ದಾರೆ. ಈಗ

ಈ ಸಂಸ್ಥೆಯ ಗೌರವ ಕಾರ್ಯಾಧ್ಯಕ್ಷರಾಗಿ ಶ್ರೀ ವೀರಚಂದ ನಾರಣಜಿ ಕಾನಜಿ ಅವರು ನಿಷ್ಠೆಯಿಂದ ಕಾರ್ಯ ಮಾಡುತ್ತ ಈ ಸಂಸ್ಥೆಯನ್ನು ಉಜ್ವಲ ಪ್ರಗತಿಯತ್ತ ಶರವೇಗದಿಂದ ಮುನ್ನಡೆಸುತ್ತಿದ್ದಾರೆ.

## ಸಂಸ್ಕೃತ ವ್ಯಾಸಂಗಕ್ಕೆ ಸೂಕ್ತ ವೇದಿಕೆ

ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜು ೬೦ ವರ್ಷಕ್ಕಿಂತ ಪೂರ್ವದಿಂದಲೂ ಶ್ರೀ ಮೂರುಸಾವಿರಮಠದಲ್ಲಿ ನಡೆಯುತ್ತಿರುವ ವಿದ್ಯಾಮಂದಿರವಾಗಿದೆ. ಈ ಕಾಲೇಜಿನಿಂದ ನೂರಾರು ಜನ ಪಂಡಿತರು ತಯಾರಾಗಿ ಜಗತ್ಪ್ರಸಿದ್ಧರಾಗಿದ್ದಾರೆ. ಇದೇ ಕಾಲೇಜಿನಲ್ಲಿ ಓದಿ ದೊಡ್ಡ ದೊಡ್ಡ ಸ್ವಾಮಿಗಳು, ಜಗದ್ಗುರುಗಳು ಆಗಿದ್ದಾರೆ. ಈ ಸಂಸ್ಕೃತ ಕಾಲೇಜಿನಿಂದಲೇ ಕಲ್ಕತ್ತಾ ವಂಗೀಯ ಸಂಸ್ಕೃತ ಪರೀಕ್ಷೆಗಳು ಜರುಗುತ್ತಿದ್ದವು. ಇಂದಿನ ಜಗದ್ಗುರುಗಳು ಪೀಠಾರೋಹಣ ಮಾಡಿದ ಮೇಲೆ ಪಂ. ಬಸವರಾಜ ಶಾಸ್ತ್ರಿಗಳು ಬೃಹನ್ಮಠ ಪಗಡದಿನ್ನಿ ಅವರ ಕಡೆಯಿಂದ ಸಂಸ್ಕೃತ ಪರೀಕ್ಷೆಗಳಿಗೆ ಅನುಕೂಲವಾಗುವಂತೆ ಸಂಸ್ಕೃತ ಪ್ರವೇಶ, ಸಂಸ್ಕೃತ ಪ್ರಕಾಶ, ವ್ಯಾಕರಣ ದರ್ಪಣ ಮುಂತಾದ ಪುಸ್ತಕಗಳನ್ನು ಬರೆಯಿಸಿದ್ದಾರೆ, ಪ್ರಕಟಿಸಿದ್ದಾರೆ. ಶ್ರೀಮಠದ ಈ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ವತಿಯಿಂದ ಪ್ರತ್ಯೇಕವಾಗಿ ಸಂಸ್ಕೃತ ಪರೀಕ್ಷೆಗಳನ್ನು ಸ್ವಯಂ ಏರ್ಪಡಿಸಿ ಪ್ರಾರಂಭಿಸಿದರು. ಸಂಸ್ಕೃತ ಪ್ರವೇಶ, ಸಂಸ್ಕೃತ ಪ್ರಕಾಶ, ಸಂಸ್ಕೃತಾಭಿಜ್ಞ ಮತ್ತು ಸಂಸ್ಕೃತ ಪ್ರವೀಣ ಎಂಬ ನಾಲ್ಕು ಪರೀಕ್ಷೆಗಳು ನಡೆಯುವಂತೆ ಏರ್ಪಡಿಸಿರುವರಲ್ಲದೇ ಆಯಾ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳನ್ನೂ ಬರೆಯಿಸಿದ್ದಾರೆ. ಬೆಳಗಾಂವ, ವಿಜಾಪೂರ, ಧಾರವಾಡ ಮುಂತಾದ ಜಿಲ್ಲೆಗಳಲ್ಲಿ ೪೦ ರಷ್ಟು ಈ ಪರೀಕ್ಷಾ ಕೇಂದ್ರಗಳನ್ನು ಪ್ರಾರಂಭ ಮಾಡಿ, ಸಹಸ್ರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಸಂಸ್ಕೃತ ಪರೀಕ್ಷೆಗಳಿಗೆ ಕೂಡ್ರಿಸಿ ಸಂಸ್ಕೃತದ ಮೇಲೆ ಪ್ರೇಮ ಹುಟ್ಟುವಂತೆ ಪರಿಶ್ರಮಿಸಿದರು. ಅದರಿಂದ ಎಷ್ಟೋ ವಿದ್ಯಾರ್ಥಿಗಳು ಸಂಸ್ಕೃತ ಓದಿ ಪಂಡಿತರಾಗಿದ್ದಾರೆ. ಕೆಲವು ವರ್ಷಗಳು ಗತಿಸಿದ ನಂತರ ಇಂಗ್ಲಿಷಿನ ಪ್ರಭಾವ ಹೆಚ್ಚಾಗಿದ್ದರಿಂದ ಈ ಪರೀಕ್ಷೆಗಳು ಬಂದಾದವು. ಪ್ರಾರಂಭದಲ್ಲಿ ೩-೪ ವರ್ಷ ಶ್ರೀ ಜಗದ್ಗುರುಗಳು ಸಂಸ್ಕೃತ ಪ್ರಚಾರಕ್ಕಾಗಿ ಎಲ್ಲ ರೀತಿಯಿಂದ ಬಹಳ ದುಡಿದರು. ಸಂಸ್ಕೃತ ಕಾಲೇಜಿಗಾಗಿ ಪ್ರತ್ಯೇಕ ಬಿಲ್ಡಿಂಗ್ ಇಲ್ಲದ್ದನ್ನು ಕಂಡು, ಶ್ರೀಮಠದ ಆವರಣದಲ್ಲಿಯೇ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಸಂಸ್ಕೃತಕ್ಕಾಗಿಯೇ ಕಾಲೇಜ ಕಟ್ಟಡ ನಿರ್ಮಾಣವಾಗಿದೆ. ಇದೀಗ ಕರ್ನಾಟಕ ರಾಜ್ಯ ಸರಕಾರದ ಸಂಸ್ಕೃತ ಪರೀಕ್ಷೆಯ ಕ್ಲಾಸುಗಳು ಜರುಗಿ ಉತ್ತಮ ರೀತಿಯಲ್ಲಿ ನಡೆದಿದೆ. ಇದಕ್ಕೆ ಪ್ರತ್ಯೇಕ ಸಿಬ್ಬಂದಿ ವರ್ಗ, ಸಂಸ್ಕೃತ ಪದವೀಧರ ಪ್ರಾಧ್ಯಾಪಕರು, ಪ್ರಾಚಾರ್ಯರಿದ್ದಾರೆ. ಇಲ್ಲಿ ಅಭ್ಯಾಸ ಮಾಡುವವರಿಗೆ ಶ್ರೀಮಠದಿಂದ ಉಚಿತ ವಸತಿ ಹಾಗೂ ಪ್ರಸಾದ ನೀಡಲಾಗುತ್ತದೆ.

ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ತಮ್ಮ ಕಾಲೇಜ ಶಿಕ್ಷಣ ದೊಂದಿಗೆ ಸಂಸ್ಕೃತ ವಿದ್ಯಾಭ್ಯಾಸವನ್ನು ಈ ಕಾಲೇಜದಲ್ಲಿ ಮುಂದುವರಿಸಲು ಇಲ್ಲಿ ಕಡ್ಡಾಯಗೊಳಿಸಲಾಗಿದೆ.

## ದಾನಗಳಿಂದ ಮಾನ್ಯವಾದ ಮಹಾಮಠ

ದಕ್ಷಿಣ ಭಾರತದಲ್ಲಿ ಶ್ರೀಮಂತ ಮಠಗಳಲ್ಲೊಂದೆಂದು ಖ್ಯಾತಿ ಪಡೆದ ಈ ಮಠ ಇಷ್ಟೊಂದು ಸಂಪದ್ಭರಿತವಾದುದು ದಾನಗಳನ್ನು ಪಡೆಯುವದರಿಂದಲ್ಲ; ದಾನ ಗಳನ್ನು ನೀಡುವದರಿಂದ! ಮಠಕ್ಕೆ ಬಂದ ಸಕಲ ಭಕ್ತರ ಮುಕ್ತದಾನಗಳನ್ನು ಮರಳಿ ಭಕ್ತರಿಗೆ, ಸಂಘ– ಸಂಸ್ಥೆಗಳಿಗೆ, ವಿದ್ಯಾಶಾಲೆಗಳಿಗೆ ಮರಳಿಸುವದೇ ಈ ಮಠದ ಮಹಾಮಂತ್ರ. ಇವರು ಕೊಟ್ಟಿರುವ ದಾನಗಳಿಗೆ ಸುಸಜ್ಜಿತ ರೆಕಾರ್ಡ ಇಲ್ಲವಾದರೂ ಕನಿಷ್ಠಪಕ್ಷ ಈವರೆಗೆ ಒಂದೂವರೆ ಕೋಟಿಗಿಂತ ಹೆಚ್ಚು ಸಂಪತ್ತನ್ನು ಧನರೂಪದ ದಿಂದ, ಭೂಮಿರೂಪದಿಂದ ದಾನ ನೀಡಿವೆ. ಶ್ರೀ ಜಗದ್ಗುರು ಸನ್ನಿಧಿಯವರು ಕನ್ನಡ ನಾಡಿನ ಹಲವು ಸಂಘ-ಸಂಸ್ಥೆಗಳಿಗೂ, ಮಠ, ಮಂದಿರಗಳಿಗೂ, ಶಾಲೆ-ಕಾಲೇಜು ಗಳಿಗೂ ಸಾಕಷ್ಟು ಧನ ಸಹಾಯ ಮತ್ತು ಭೂದಾನವನ್ನು ಶ್ರೀಮಠದಿಂದ ಮಾಡಿ ದ್ದಾದಲ್ಲದೇ; ಅಲ್ಲಲ್ಲಿ ಸ್ವದೇಶ-ಪರದೇಶಗಳಲ್ಲಿ ಉಚ್ಚವ್ಯಾಸಂಗಕ್ಕಾಗಿ ಓದುತ್ತಿರುವ ಬಡಜಾಣ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ಶಿಷ್ಯವೇತನ ನೀಡಿ ಅವರ ಶಿಕ್ಷಣಕ್ಕೆ ಅನುಕೂಲ ಒದಗಿಸಿ ಉದ್ಧಾರ ಮಾಡಿದ್ದಾರೆ. ಶ್ರೀ ಜಗದ್ಗುರುಗಳು ದಾನಗೈದ ಎಲ್ಲ ಸಂಸ್ಥೆಗಳೂ ಒಳ್ಳೆಯ ಪ್ರಗತಿಯಲ್ಲಿ ಮುಂದೆ ಸಾಗಿವೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕೆಲವೊಂದು ಕರಾರಿನ ಮೇಲೆ ಶಾಶ್ವತ ನಿಧಿಯನ್ನಿಟ್ಟು, ಉತ್ತಮ ಜಾಣ ವಿದ್ಯಾರ್ಥಿಗಳಿಗೆ ಸುವರ್ಣಪದಕ ನೀಡುವ ವ್ಯವಸ್ಥೆ ಮಾಡಿಸಿ ದ್ದಾರೆ. ನಾಡಿನ ಎಲ್ಲ ಜಾತಿಯ ಅನೇಕ ಕಲಾವಿದರಿಗೆ, ಸಾಹಿತಿಗಳಿಗೆ, ಪತ್ರಿಕಾಕರ್ತ ರಿಗೆ ಸತ್ಕಾರದೊಂದಿಗೆ ಶ್ರೀಮಠದಿಂದ ಗೌರವಧನ ನೀಡಿದ್ದೂ ಉಂಟು.4

## ಸಾಲುಗದ್ದುಗೆಗಳು ಪುನರ್ನವೀಕರಣ

ಶ್ರೀ ಜಗದ್ಗುರು ಮೂರುಸಾವಿರಮಠದ ಆವರಣದಲ್ಲಿ ಅನೇಕ ಶತಮಾನ ಗಳಿಂದ ಆಗಿಹೋದ ಲಿಂಗೈಕ್ಯ ಜಗದ್ಗುರುಗಳ ಗದ್ದುಗೆಗಳು ಸಾಕಷ್ಟು ಇದ್ದು; ಅವುಗಳ ಜೀರ್ಣೋದ್ಧಾರವನ್ನು ಅಂದಿನ ಹಿರಿಯ ಭಕ್ತರ ಸಲಹೆ ಪಡೆದು ಪೂಜ್ಯ ಜಗದ್ಗುರುಗಳು ಗೈದಿದ್ದಾರೆ. ಮೂರುಸಾವಿರಮಠದ ಪ್ರಾಚೀನ ಪರಂಪರೆಗೆ ಈ ಗದ್ದುಗೆಗಳು ಪ್ರತ್ಯಕ್ಷ ಸಾಕ್ಷಿ ಹೇಳುತ್ತವೆ. ಒಟ್ಟು ೨೭ ಗದ್ದುಗೆಗಳು ಸದ್ಯ ಉಪಲಬ್ಧ ವಿದ್ದು ಭಕ್ತರು ಪರಂಪರೆಯಿಂದ ನಡೆದುಕೊಳ್ಳುತ್ತಾರೆ. ಇನ್ನುಳಿದ ಎಷ್ಟೆಷ್ಟೋ

---

4 ಶ್ರೀಮಠದ ಉದಾರಾಶ್ರಯ ಪಡೆದ ಸಂಘ, ಸಂಸ್ಥೆ, ಕಾಲೇಜು, ಶಾಲೆ, ನಿಧಿ ಸಮಿತಿಗಳ ಯಾದಿಯನ್ನು ಈ ಗ್ರಂಥದ ಕೊನೆಯಲ್ಲಿ ಕೊಡಲಾಗಿದೆ.

ಜಗದ್ಗುರುಗಳ ಸಮಾಧಿಗಳು ಮೂರುಸಾವಿರಮಠದ ಅನೇಕ ಶಾಖಾಮಠಗಳಲ್ಲಿ ಮರೆಯಾಗಿಹೋಗಿರುವ ಸಾಧ್ಯತೆ ಹೆಚ್ಚಿದೆ. ಮೂರುಸಾವಿರಮಠದ ಆವರಣ ದಲ್ಲಿರುವ ಈ ಗದ್ದುಗೆಗಳಿಗೆ ಪುನರ್ನವೀಕರಣ ಅತ್ಯಗತ್ಯವಾಗಿತ್ತು. ಪೂಜ್ಯ ಜಗದ್ಗುರುಗಳು ಇವೆಲ್ಲವುಗಳಿಗೆ ಭದ್ರ ಸಿಮೆಂಟಿನ ಆಚ್ಛಾದನೆ ಇರುವ ಸ್ಲ್ಯಾಬ್ ಹಾಕಿ ರಕ್ಷಿಸಿದ್ದಾರೆ. ಹಳೆಯ ಕಾಲದಲ್ಲಿ ಈ ಸಮಾಧಿಗಳನ್ನು ವ್ಯವಸ್ಥಿತವಾಗಿ ಮಾಡಿಲ್ಲ. ಅಲ್ಲೊಂದು ಇಲ್ಲೊಂದು ಗದ್ದುಗೆಗಳಿವೆ. ಆದ್ದರಿಂದ ಇವೆಲ್ಲವುಗಳಿಗೆ ಇಂದು ಏಕರೂಪದ ಮಾಸ್ಟರ ಪ್ಲಾನ್ ಮಾಡುವದು ಅಸಾಧ್ಯವಾಗಿದೆ. ಉದಾ ಹರಣೆಗೆ: ಕರ್ತೃ ಗುರುಸಿದ್ಧೇಶ್ವರರ ಗದ್ದುಗೆಯ ಎದುರಿಗೆ ಅಡ್ಡ-ಉದ್ದವಾಗಿ ಅನೇಕ ಗದ್ದುಗೆಗಳು ಬಂದುಬಿಟ್ಟಿವೆ. ಇವಿಲ್ಲವಾಗಿದ್ದರೆ ಈ ಸಮಾಧಿ ಮಂದಿರವನ್ನು ಈಗಿನಕ್ಕಿಂತಲೂ ಎಷ್ಟೋ ಸುಂದರವಾಗಿಯೂ, ಭವ್ಯವಾಗಿಯೂ ವಿರಚಿಸಬಹು ದಾಗಿತ್ತು. ಈ ಅನೇಕ ಗದ್ದುಗೆಗಳು ಯಾರ ಗದ್ದುಗೆಗಳು, ಯಾವ ಕಾಲದ ಗದ್ದುಗೆಗಳು ಎಂಬುದಕ್ಕೆ ಯಾವುದೇ ರೆಕಾರ್ಡ ಉಳಿದಿಲ್ಲ. ಕಾಲ ಕೋಶದಲ್ಲಿ ಅವರವರ ಕಾರ್ಯ-ಕಾಲ-ಸಾಧನೆ-ಬೋಧನೆಗಳು ಮುಚ್ಚಿಹೋಗಿವೆ. ಜಗದ್ಗುರು ಕರ್ತೃ ಗುರುಸಿದ್ಧೇಶ್ವರನ ಶ್ರೀಸಮಾಧಿಯು ಸೂರ್ಯಪ್ರಕಾಶದ ಹೊಳನಹಿಲ್ಲಿ ಎಲ್ಲವೂ ಬೆಳಕು ಕಂಡಿರಬೇಕು.

## ಬಾಗಿಲೊಳು ಕೈಮುಗಿದು ಒಳಗೆ ಬಾ ಯಾತ್ರಿಕನೆ!

ಅಮೃತ ಶಿಲಾಮಂಟಪದ ಚಲುವಿನ ಚಿತ್ತಾರ, ಶೀತಲ ಯೋಗಮೌನದ ಸಾಕ್ಷಾತ್ಕಾರಗಳಿಂದ ಮಹಾಯೋಗಿ ಗುರುಸಿದ್ಧ ಯತೀಂದ್ರನ ಗರ್ಭಗೃಹದ ಗವಿ ಮಂಟಪ ಇಂದು ಎಲ್ಲರನ್ನೂ ಕೈಬೀಸಿ ಕರೆಯುತ್ತದೆ. ಸಕಲ ಜಾತಿ-ಮತ-ಧರ್ಮ- ಪಂಥದವರಿಗೂ ಇದು ಪ್ರೀತಿಯ ತೊಟ್ಟಿಲಾಗಿದೆ, ತಾಯ ಎದೆಯ ಜೋಗುಳ ವಾಗಿದೆ. ಈ ಗದ್ದುಗೆಗೆ ಎಲ್ಲರೂ "ಹುಚ್ಚನ ಗದ್ದುಗೆ" ಎಂದು ಕೈಮುಗಿಯುತ್ತಾರೆ. ಈ ಮಹಾಯೋಗಿಯ ಬದುಕು-ಬೋಧನೆ-ಸಾಧನೆಗಳ ವಿಹಂಗಮ ಚಿತ್ರಣದ ಒಂದೆಳೆಯೂ ನಮಗೆ ಇಂದು ದೊರೆತಿಲ್ಲವಾದರೂ ಈ 'ಹುಚ್ಚ'ಯೋಗಿ ನಮ್ಮೆಲ್ಲರ ವನಾಗಿದ್ದಾನೆ. ಒಂದರ್ಥದಲ್ಲಿ ಈತ ಹುಬ್ಬಳ್ಳಿ ಮಹಾನಗರದ ಆಧ್ಯಾತ್ಮಿಕ ದಿವ್ಯ ಪಿತಾಮಹ. ಇಲ್ಲಿ ಬಂದು ಕುಳಿತರೆ ಹಸಿವು- ನೀರಡಿಕೆ ಇಂಗುತ್ತವೆ. ಚಿಂತೆ ಸಂತೋಷ ವಾಗುತ್ತದೆ. ಕಂಬನಿ ಕಾವ್ಯವಾಗುತ್ತದೆ. ಗೋಳು ಗಂಗಾನದಿಯಾಗುತ್ತದೆ. ವಿಷವು ವಸಂತವನವಾಗುತ್ತದೆ. ಇಲ್ಲಿ ಬಂದು ಮುಡಿಬಾಗಿ ವಂದಿಸಿ ಉಡಿತುಂಬಿಕೊಳ್ಳದೇ ಹೋದವರು ಒಬ್ಬರೂ ಇಲ್ಲ. ಇಂದಿಗೂ ಗಂಡ-ಹೆಂಡಿರ ನ್ಯಾಯ, ವ್ಯಾಪಾರದ ನ್ಯಾಯ, ಮನೆತನದ ಜಗಳಗಳು, ಕಳವಿನ ಕಾದಾಟಗಳು, ಹೊಲದ ನ್ಯಾಯಗಳಿಗೆ ಈ ಗದ್ದುಗೆಯೇ "ಗುಪ್ತ ಕೋರ್ಟು" ಆಗಿದೆ. ಈ ಗುರುಸಿದ್ಧ 'ಹುಚ್ಚ'ನಾದರೂ ಸತ್ಯದ ಶ್ರೀನಿಧಿಯಾದ ಮಹಾಮಹಿಮ, ಈತ ಜಾಣರ ಜಾಣ.

ಪೂಜ್ಯ ಜಗದ್ಗುರುಗಳು ಈ ಗದ್ದುಗೆಯಲ್ಲಿ ಇರಿಸಿದ ಅಖಂಡ ಭಕ್ತಿ, ಸಮರ್ಪಣೆಗಳು ಅದ್ವಿತೀಯ. ಈ ಬಲವೇ ಅವರಿಗೆ ಸಮಗ್ರ ಬಲ. ಆತನ ಶಿವ ಸಂಕಲ್ಪದ ವಾಹಕ ಶಕ್ತಿಯಾಗಿ ಅವರು ಹೋಗುತ್ತಾರೆ. ದೇವನೊಬ್ಬ ನಾಮ ಹಲವು. ಈ ಮಹಾಚೈತನ್ಯದ ದರ್ಶನವೇ ಒಂದರ್ಥದಲ್ಲಿ ಗಂಗಾಧರ ದರ್ಶನದ ಒಳದರ್ಶನ. ಶಿವಬಲವೂ ಇದೇ, ಆತ್ಮ ಬಲವೂ ಇದೇ.

ಪೂಜ್ಯ ಜಗದ್ಗುರುಗಳು ಈ ಕರ್ತೃ ಗದ್ದುಗೆಯನ್ನು ಅನೇಕಾನೇಕ ದಾನಿಗಳಾದ ಭಕ್ತರ ನೆರವು ಪಡೆದು ಬಹಳಷ್ಟು ಸಾಲಂಕಾರಗೊಳಿಸಿದರು. ಎಂದೆಂದಿಗೂ ಯಾರೂ ನೋಡದ ಗವಿಸೊಳಗಿನ ಮೂಲ ಕರ್ತೃ ಗದ್ದುಗೆಯ ಸಮಾಧಿ ದರ್ಶನ ಎಲ್ಲರಿಗೂ ದೊರೆಯುವಂತೆ ಏರ್ಪಾಟು ಮಾಡಿರುವದು ಒಂದು ಮಹತ್ಸಾಧನೆ. ಶ್ರೀ ತಮ್ಮಣ್ಣ ಕೌಸಾಳಿ ಅವರ ನೆರವಿನಿಂದ ಈ ಮಂದಿರಕ್ಕೆ ಅಮೃತ ಶಿಲಾಲಂಕರಣ ಮಾಡಿಸಿದರು. ಒಳಗೆ ವರ್ತುಲಗಂಬಗಳ ಚೌಭಿತ್ತಿಯನ್ನೂ, ರಕ್ಷಕ ಕವಾಟನ್ನೂ ಅಣಿಗೊಳಿಸಿದರು. ೭-೭ ಸಾವಿರ ತೊಲಿ ಬೆಳ್ಳಿಯಿಂದ ಗುರುಸಿದ್ಧೇಶ್ವರ ಮಂಟಪವನ್ನು ರಜತಶಿಲ್ಪಿಗಳಿಂದ ಅಣಿಗೊಳಿಸಿದರು.

ಇಂದು ಸಮಸ್ತ ಜನತೆಗೆ ಇದೊಂದು ಶಾಂತಿಧಾಮವಾಗಿಯೂ, ಸುಜ್ಞಾನಿಗಳಿಗೆ ಮುಕ್ತಿಧ·ಮವಾಗಿಯೂ ರೂಪಾಂತಿರುವದು ಪೂಜ್ಯ ಜಗದ್ಗುರುಗಳ ಕರ್ತೃತ್ವ ಶಕ್ತಿಯ ಪ್ರತೀಕವಾಗಿದೆ.

**ಕರ್ತೃ ಗದ್ದುಗೆಯ ಬೆಳ್ಳಿಮಂಟಪ :**
**ಪಾದುಕೆ ಮತ್ತು ಸುವರ್ಣ ಸಿಂಹಾಸನ**

ಹುಬ್ಬಳ್ಳಿಯ ಪ್ರಸಿದ್ಧ ವರ್ತಕರೂ, ಪೀಠದ ಸದ್ಭಕ್ತರೂ ಆದ ಶ್ರೀಯುತ ರಾಮಣ್ಣನವರು ಜಾಧವ ಹಾಗೂ ಶ್ರೀಯುತ ಹನುಮಂತಪ್ಪನವರು ಕಿನ್ನಾಳ ಇವರೀರ್ವರು ಜಗದ್ಗುರುಗಳಿಗಾಗಿ ಸುವರ್ಣಯುಕ್ತ ರಜತ ಸಿಂಹಾಸನ ಪೀಠವೊಂದನ್ನು ಸಿದ್ಧಪಡಿಸಿಕೊಡುವ ದೃಷ್ಟಿಯಿಂದ ಸನ್ನಿಧಿಯವರ ಪಾದಕ್ಕೆ ತಮ್ಮ ಭಕ್ತಿಯ ಕಾಣಿಕೆಗಳನ್ನು ಧನರೂಪದಲ್ಲಿ ಸಮರ್ಪಿಸಿದರು. ಇದರಂತೆ ಅದೇ ಊರಿನ ಶ್ರೀಯುತ ಚಂಬಣ್ಣನವರು ತಂಬ್ರಳ್ಳಿ ಇವರು ರಜತಪಾದಪೀಠ ನಿರ್ಮಿತಿಗೋಸ್ಕರ ತಮ್ಮ ಕಾಣಿಕೆಯನ್ನು ಸಲ್ಲಿಸಿದರು. ಅದೇ ರೀತಿ ಶ್ರೀಯುತ ಎಚ್ಚರಪ್ಪನವರು ಕುರಟ್ಟಿ ಇವರು ಶ್ರೀಮಠಕ್ಕೆ ಸುವರ್ಣ ಪಾದುಕೆಗಳನ್ನು ಮಾಡಿಸಲು ಕಾಣಿಕೆಯನ್ನು ನೀಡಿದರು. ಅವರೆಲ್ಲರ ಇಚ್ಛೆಯ ಪ್ರಕಾರ ಕಾಶಿ, ಬೆಳಗಾಂವ ಮುಂತಾದ ಊರುಗಳಲ್ಲಿಯ ಕಲಾಕಾರರಿಂದ ಎಲ್ಲ ಸಾಮಾನುಗಳನ್ನು ಮಾಡಿಸಿ ಶ್ರೀ ಜಗದ್ಗುರು ಪೀಠಕ್ಕೆ ಶೋಭೆ ನೀಡಿದ್ದಾರೆ. ಶ್ರೀ ಜಗದ್ಗುರುಗಳು ಪೀಠಾರೋಹಣ ಮಾಡಿದ ಕೂಡಲೇ ಭಕ್ತರಿಂದ ಈ ರೀತಿಯ ಭಕ್ತಿಯ ಧನದ ಸುರಿಮಳೆಯಾಗಿ ಅವರೆಲ್ಲರ

ಇಚ್ಛೆಯನ್ನು ಜಗದ್ಗುರುಗಳು ಪೂರೈಸಿದರಲ್ಲದೇ ಶ್ರೀಮಠದ ಘನತೆ– ಗೌರವದ ಭಾಗ್ಯದ ಬಾಗಿಲನ್ನೇ ತೆರೆದರು. ಜಗದ್ಗುರುಗಳ ಕರ್ತೃತ್ವ ವರ್ಣಿಸಲಸದಳ. ಈ ಎಲ್ಲ ಅಲಂಕಾರಗಳಿಂದ ಶ್ರೀಮಠದ ಶೋಭೆ ಇನ್ನೂ ಹೆಚ್ಚಾಗಿ ಇಂದಿಗೂ ಹೆಚ್ಚುತ್ತಲಿದೆ. ಕಲಾಪೂರ್ಣವಾದ ಈ ವಸ್ತುಗಳು ಸಾರ್ವಜನಿಕರಿಗೆ ದರ್ಶನೀಯವಾಗಿ, ಶ್ರೀಮಠದ ಸೊತ್ತಾಗಿ ಕಂಗೊಳಿಸುತ್ತಲಿವೆ. ಶ್ರೀಮಠದ ಸದ್ಭಕ್ತರ ಲಕ್ಷಾಂತರ ಕಾಣಿಕೆಯ ಹಣದಿಂದ ಸಿದ್ಧವಾದ ಕಲಾತ್ಮಕವಾದ ಬೆಳ್ಳಿಯ ಮಂಟಪವನ್ನು ಕರ್ತೃಗದ್ದುಗೆಯಲ್ಲಿ ಬಹಳ ವಿಜೃಂಭಣೆಯಿಂದ ಪ್ರತಿಷ್ಠಾಪಿಸಿದರು. ಇದಕ್ಕಾಗಿ ಲಿಂಗೈಕ್ಯ ಶ್ರೀ ಸೊಲಬಪ್ಪಜ್ಜ ಅವರು ಬಹಳ ಪರಿಶ್ರಮಿಸಿದರು.

## ಸಂತೆಯಲ್ಲಿ ನಿಶ್ಚಿಂತತೆ :

## ಶ್ರೀ ಗುರುಸಿದ್ಧೇಶ್ವರ ಅತಿಥಿಗೃಹ

ಮೂರುಸಾರಮಠದ ಕರ್ತೃ ಗದ್ದುಗೆಯ ಹಾಗೂ ಶ್ರೀ ಜಗದ್ಗುರುಗಳ ದರ್ಶನಾರ್ಥಿಗಳಾಗಿ ಬರು-ಹೋಗುವ ಭಕ್ತಾದಿಗಳ ಸಂಖ್ಯೆ ದಿನೇದಿನೇ ಹೆಚ್ಚಾಗುತ್ತಿದ್ದರಿಂದ ದೂರದಿಂದ ಬಂದವರ ಸಲುವಾಗಿ ಶ್ರೀಮೂರುಸಾವಿರಮಠದ ಆವರಣದಲ್ಲಿ "ಶ್ರೀ ಗುರುಸಿದ್ಧೇಶ್ವರ ಅತಿಥಿಗೃಹ" ಎಂಬ ಹೆಸರಿನಲ್ಲಿಯೂ, ಮತ್ತೊಂದನ್ನು "ಹಾನಗಲ್ಲ ಕುಮಾರೇಶ್ವರ'ರ ಹೆಸರಿನಲ್ಲಿಯೂ ಹೀಗೆ ಎರಡು ಅತಿಥಿಗೃಹಗಳನ್ನು ಜಗದ್ಗುರುಗಳವರು ಶ್ರೀಮಠದ ಹಾಗೂ ಸದ್ಭಕ್ತರ ಸಹಾಯದಿಂದ ಕಟ್ಟಿಸಿದ್ದಾರೆ. ಇದಲ್ಲದೇ ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀಮಠದ ಆವರಣದಲ್ಲೇ ಗೋಶಾಲೆ, ಸಾರ್ವಜನಿಕರಿಗಾಗಿ ಅಂಚೆ ಮನೆ, ಧರ್ಮಛತ್ರ, ಪೂಜಾಮಂದಿರ ಮುಂತಾದವುಗಳನ್ನು ಕಟ್ಟಿಸಿರುವದಲ್ಲದೇ ಶ್ರೀಮಠಕ್ಕೆ ಬಂದ ಭಕ್ತಾದಿಗಳಿಗೆ ಶ್ರೀ ಜಗದ್ಗುರುಗಳು ದರ್ಶನವನ್ನೀಯಲು ಗುರುಮಠ ಹಾಗೂ ಮೀಟಿಂಗ್ ಹಾಲ್‌ಗಳನ್ನು ಭದ್ರವಾಗಿ, ಸುಂದರವಾಗಿ ನವೀಕರಿಸಿದ್ದಾರೆ.

## ಶಿವಾನುಭವ ಮಂಟಪ

ಶಿವಾನುಭವವು ಪ್ರತಿಯೊಬ್ಬರಿಗೂ ಬೇಕು. ಅದರ ಸಾರವನ್ನು ಪ್ರವಚನ ಮೂಲಕ ತಿಳಿಸುವದಕ್ಕಾಗಿ, ಶ್ರೀಮಠದ ಎರಡನೇ ಅಂತಸ್ತಿನಲ್ಲಿ ಶಿವಾನುಭವ ಮಂಟಪವನ್ನು ಲಿಂಗೈಕ್ಯ ಮುರುಗೋಡ ಮಹಾಂತಶಿವಯೋಗಿಗಳಿಂದ ಪ್ರಾರಂಭೋತ್ಸವವನ್ನು ಮಾಡಿಸಿ, ಇಲ್ಲಿ ಆಗಮಿಸಿ ಶರಣಸಿದ್ಧಾಂತ ತಿರುಳನ್ನು ತಿಳಿದುಕೊಳ್ಳಲು ಈ ವಿಶಾಲ ಕಟ್ಟಡದಲ್ಲಿ ಜಿಜ್ಞಾಸುಗಳಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಈ ವಿಶಾಲ ಶಿವಾನುಭವ ಮಂಟಪವನ್ನು ಸುಂದರವಾಗುವಂತೆ ಜೀರ್ಣೋದ್ಧಾರ ಮಾಡಿಸಿದ್ದಾರೆ. ಪ್ರತಿನಿತ್ಯವೂ ಸಂಜೆ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ

ಸಾಧಕರಿಂದ ವಚನ ಸಾಹಿತ್ಯ ಪ್ರವಚನವು ನಡೆಯುವಂತೆ ಜಗದ್ಗುರುಗಳು ವ್ಯವಸ್ಥೆ ಮಾಡಿಸಿದ್ದಾರೆ.

## ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ

ಲಿಂ|| ಪೂಜ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ೧೯೫೦ರಲ್ಲಿ "ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ" ಎಂಬ ಹೆಸರಿನಿಂದ ಧಾರ್ಮಿಕ-ಸಾಹಿತ್ಯಿಕ ಸಂಶೋಧನಾ ಸಂಸ್ಥೆಯೊಂದನ್ನು ಸ್ಥಾಪಿಸಿದ್ದರು. ಸ್ಥಾಪಿಸಿದ ಕೆಲವೇ ದಿನಗಳಲ್ಲಿ ವಯೋವೃದ್ಧರಾದ ಅವರು ಲಿಂಗೈಕ್ಯರಾದರು. ಅವರು ಲಿಂಗೈಕ್ಯರಾಗುವ ಮುಂಚೆ "ತಮ್ಮ ಈ ಕಾರ್ಯವನ್ನು ಬೃಹತ್ಪ್ರಮಾಣದಲ್ಲಿ ಬೆಳೆಸಿ ನಾಡಿಗೆ ವೀರಶೈವ ಸಾಹಿತ್ಯಶಕ್ತಿಯನ್ನು ತೋರಿಸಬೇಕೆಂದು" ಅಪ್ಪಣೆ ಕೊಡಿಸಿದ್ದರಂತೆ, ಇಂದಿನ ಜಗದ್ಗುರುಗಳು ಅವರ ಇಚ್ಛೆಯನ್ನು ಪೂರೈಸಿರುವರಲ್ಲದೇ ನೂರುಪಟ್ಟು ವಿಸ್ತೃತಗೊಳಿಸಿ ಈ ಮಂಡಳವು ನಾಡಿಗೆ ಆದರ್ಶಸಂಸ್ಥೆಯಾಗುವಂತೆ ಪರಿಶ್ರಮಿಸಿದ್ದಾರೆ, ಬೆಳೆಸಿದ್ದಾರೆ, ಬೆಳೆಸುತ್ತಿದ್ದಾರೆ. ನೂರಾರು ಜನ ಸಂಶೋಧಕರಿಗೆ ಸಹಾಯ ನೀಡಿ ಉತ್ತಮ ಸಾಹಿತ್ಯ ಗ್ರಂಥಗಳನ್ನು ಜಗದ್ಗುರುಗಳು ಸ್ವತಃ ಬರೆದದ್ದಲ್ಲದೇ; ಸಂಸ್ಕೃತ, ಕನ್ನಡ, ಹಿಂದಿ, ತಮಿಳು ಮುಂತಾದ ಭಾಷೆಗಳಲ್ಲಿ ಇತರರಿಂದ ಬರೆಯಿಸಿ ಧಾರ್ಮಿಕ ಜಾಗೃತಿ ಮಾಡಿದ್ದಾರೆ, ಸಾಹಿತ್ಯ ಸಂಪತ್ತನ್ನು ಬೆಳೆಸಿದ್ದಾರೆ. ಈ ಧರ್ಮಪ್ರಚಾರಕ ಮಂಡಳದಿಂದ ಅನೇಕ ಸಂಶೋಧನಾ ಗ್ರಂಥಗಳು ಹೊರಬಂದು ವಿದ್ವನ್ಮಣಿಗಳಿಂದ ಮೆಚ್ಚುಗೆ ಪಡೆದಿವೆ. ರಾಜ್ಯ ಸರಕಾರದಿಂದ ಪುರಸ್ಕಾರ ಪಡೆದಿವೆ. ಈಗಾಗಲೇ ಬೆಳಕಿಗೆ ತಂದಿರುವ ನೂರಾರು ಗ್ರಂಥಗಳು ಸಾಹಿತ್ಯ ಸಂಸ್ಕೃತಿಗಳ ನಾನಾ ಮುಖದರ್ಶನ ಮಾಡಿಸುತ್ತಿವೆ. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಆಡಳಿತ ವ್ಯವಸ್ಥೆ ಚೆನ್ನಾಗಿ ನಡೆಯುವಂತೆ ಸುಸಜ್ಜಿತ ಕಾರ್ಯಾಲಯವೊಂದನ್ನು ಹುಬ್ಬಳ್ಳಿ ಮಠದಲ್ಲಿ ಕಟ್ಟಿಸಿದ್ದಾರೆ. ಇದರ ಸಿಬ್ಬಂದಿವರ್ಗವೂ ನಿಷ್ಠೆಯಿಂದ ದುಡಿಯಲು ಅನುಕೂಲ ಮಾಡಿಕೊಟ್ಟಿದ್ದಾರೆ.

"ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ"ದ ಮುಖ್ಯ ಸಂಶೋಧಕರಾಗಿ ಶ್ರೀ ಡಾ|| ಕೆಳದಿ ಹಿರೇಮಠ ರಾಜಗುರು ಗುರುಸಿದ್ಧದೇವ ಶಿವಾಚಾರ್ಯರು ಕೆಲಸ ಮಾಡಿ ಯಶಸ್ವಿಗೊಳಿಸುತ್ತಲಿದ್ದಾರೆ. ವೀರಶೈವ ಸಾಹಿತ್ಯದ ಜ್ಞಾನನಿಷ್ಠೆಗಳನ್ನು ಜನಮನದಲ್ಲಿ ಬೇರೂರಿಸುವ ಸಲುವಾಗಿ ಸ್ವಯಂ ತತ್ವಜ್ಞಾನದಲ್ಲಿ ಸ್ನಾತಕೋತ್ತರ ಪದವೀಧರರಾದ ಶ್ರೀ ಜಗದ್ಗುರುಗಳು ಹಗಲಿರುಳು ಪರಿಶ್ರಮ ವಹಿಸಿ ಸತ್‌ಸಂಸ್ಕಾರಗಳನ್ನು ಮೂಡಿಸುತ್ತಿರುವದು ನಾಡಿನ ಪುಣ್ಯ ವಿಶೇಷವಾಗಿದೆ. ಇದು ಜಗದ್ಗುರುಗಳ ಆದರ್ಶಯುತವಾದ ಶಾಶ್ವತ ವರ್ಧನೆಯ ಕಾರ್ಯವಾಗಿದೆ.

ನಿರಂತರ ಬೆಳೆಯುವ ಉಳಿಯುವ ಸಾಹಿತ್ಯವಾಗಿದೆ. ಭಾರತೀಯ ಸಂಸ್ಕೃತಿ ಪುನರುತ್ಥಾನಕ್ಕೂ ಸಹಾಯ-ಸಹಕಾರ ನೀಡುತ್ತಲಿದೆ. ಈ ಸಂಸ್ಥೆಯಿಂದ ಸಂಶೋಧನೆ ನಡೆಸುವವರಿಗೆ ಹಾಗೂ ಮಾರ್ಗದರ್ಶನ ಬಯಸುವವರಿಗೆ ಸಕಲ ಸೌಕರ್ಯ ಶ್ರೀಮಠದಿಂದ ಕಲ್ಪಿಸಿಕೊಡುವ ವ್ಯವಸ್ಥೆ ಮಾಡಿದ್ದಾರೆ. ಈ ಜೆ. ಜಿ. ಮಂಡಳವನ್ನು ಪಬ್ಲಿಕ್ ಟ್ರಸ್ಟ್ ಆ್ಯಕ್ಟ್ ಪ್ರಕಾರ ರಜಿಸ್ಟರ್ ಮಾಡಿಸಿದ್ದಾರೆ. ಇದೂ ಸಹ ಜಗದ್ಗುರುಗಳ ಮುಂಧೋರಣೆಯ ದೃಷ್ಟಿ.

## ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರ

ಇದು "ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ"ದ ಅಂಗವಾಗಿದೆ. ಇದೇ ಟ್ರಸ್ಟಿನಿಂದ ಇದರ ಕಾರ್ಯವ್ಯಾಪ್ತಿ ಸಾಗುತ್ತಿದೆ. ಹಲವು ಹಿರಿಯ ಹೊಂಗನಸುಗಳನ್ನು ಇರಿಸಿಕೊಂಡು ಜನ್ಮತಳೆದ "ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ"ವು ಜಿಜ್ಞಾಸುಗಳಿಗೆ ಅನೇಕ ಬೃಹತ್ ಗ್ರಂಥಗಳ ನುಡಿ ಕಾಣಿಕೆಯನ್ನು ಒದಗಿಸುತ್ತಾ ಬಂದಿದೆ. ನೂತನವಾಗಿ ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರಗಳನ್ನು ಆಯಾ ಊರುಗಳಲ್ಲಿ ಶ್ರೀ ಜಗದ್ಗುರುಗಳವರು ನಡೆಸುವ ವ್ಯವಸ್ಥೆ ಮಾಡಿದ್ದಾರೆ. ತನ್ಮುಖಾಂತರ ಸಾಧ್ಯವಾದಷ್ಟು ಜನಸಾಮಾನ್ಯರ ಅರಿವಿನ ಹಸಿವನ್ನು ಹಿಂಗಿಸಲು ಹಾಗೂ ಯೋಗ್ಯ ವಿದ್ವಾಂಸರಿಗೆ ಸದವಕಾಶ ಕಲ್ಪಿಸಲು ಸಾಹಸಪಡುವ ಉದ್ದೇಶದಿಂದಲೇ ಶಿಬಿರದ ವ್ಯವಸ್ಥೆ ಜನ್ಮತಾಳಿದ್ದು, ದೇಶದ ತುಂಬೆಲ್ಲ ಜನಜಾಗೃತಿಗಾಗಿ ಪ್ರಚಾರೋಪನ್ಯಾಸಗಳನ್ನೇರ್ಪಡಿಸಿ ಕನ್ನಡ, ಹಿಂದಿ, ಇಂಗ್ಲಿಷ್, ತಮಿಳು ಹಾಗೂ ಆಯಾ ರಾಜ್ಯಗಳ ಅಧಿಕೃತ ಭಾಷೆಗಳಲ್ಲಿ ಚಿಕ್ಕ ಚಿಕ್ಕ ವೈಚಾರಿಕ ಪುಸ್ತಕಗಳನ್ನು ಪ್ರಕಟಿಸಿ, ಅಲ್ಪ ಬೆಲೆಯಲ್ಲಿಯೇ ಮಾರಿ, ಓದುಗರ ಹೃದಯಕ್ಕೆ ಮುಟ್ಟಿಸುವದೇ ಈ ಶಿಬಿರದ ಪ್ರಚಾರೋಪನ್ಯಾಸಮಾಲೆಯ ಉದ್ದೇಶವಾಗಿದೆ. ಈ ಉಪನ್ಯಾಸಗಳಿಂದ ಕೇಳುಗರಿಗೆ ವಿಷಯದ ಸ್ಪಷ್ಟ ಕಲ್ಪನೆಯಾಗುವದಲ್ಲದೇ ಉಪನ್ಯಾಸಗಳೇ ಕಿರುಗ್ರಂಥಗಳಾಗಿ ಮುದ್ರಿತವಾಗಿ ಓದುಗರಿಗೂ ಅದರ ಲಾಭ ದೊರೆಯುವದು. ಈ ರೀತಿ ಉಭಯಮುಖವಾಗಿ ಜ್ಞಾನವಾಹಿನಿಯ ಪ್ರಚಾರ ಕಾಯಕವು ಹೆಚ್ಚು ಜನಪ್ರಿಯವಾಗುತ್ತಿರುವದು ಜಗದ್ಗುರುಗಳ ಸತತ ಪರಿಶ್ರಮದ ಪ್ರೇರಣೆಯ ಫಲವಾಗಿದೆ. ಈಗಾಗಲೇ ನಾಡಿನಲ್ಲಿ, ಪರನಾಡಿನಲ್ಲಿ ೭೦ (ಎಪ್ಪತ್ತು) ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರಗಳು ಏರ್ಪಟ್ಟು ಯಶಸ್ವಿಯಾಗಿವೆ. ಆ ೭೦ ಶಿಬಿರಗಳಲ್ಲಿ ಆದ ಎಲ್ಲ ಭಾಷಣಗಳೂ ಸಹ ಚಿಕ್ಕ ಹೊತ್ತಿಗೆಗಳಾಗಿ ೭೦ ಚಿಕ್ಕ ಪುಸ್ತಕಗಳು ಪ್ರಕಟವಾಗಿ ಜನಪ್ರಿಯವಾಗಿವೆ. ಕೆಲವು ಪುಸ್ತಕ ದ್ವಿತೀಯ, ತೃತೀಯ ಮುದ್ರಣಗಳನ್ನು ಕಂಡಿವೆ. ಈ ದಿಶೆಯಲ್ಲಿ ಜೀವಂತಧ್ವನಿಗಳ ಪರಿಪೋಷಣೆಯ ಕಾರ್ಯ ಸಾಫಲ್ಯದ ಸಂಜೀವಿನಿಯಾಗಿ ನಿಂತಿದೆಯೆನ್ನಬಹುದು. ಜಗದ್ಗುರುಗಳ ಎಲ್ಲ ಕಾರ್ಯಗಳು ಕೈಗೂಡಿ ವೈವಿಧ್ಯ ವೈಭವಗಳನ್ನು ನೋಡುವಂತಾಗಿದೆ. ಇದರಿಂದ

ಜ್ಞಾನಭಂಡಾರವು ಸುಲಭವಾಗಿ ಶ್ರೀಸಾಮಾನ್ಯರಿಗೂ ಕರತಲಾಮಲಕವಾಗುವದರಲ್ಲಿ ಸಂದೇಹವಿಲ್ಲ. ಈ ಪ್ರಚಾರೋಪನ್ಯಾಸ ಶಿಬಿರಗಳು ಎರಡು ತಿಂಗಳಿಗೊಮ್ಮೆ ಅಲ್ಲಲ್ಲಿ ಹೆಚ್ಚಾಗಿ ಹಳ್ಳಿಗಳಲ್ಲಿ ಜರುಗಿ ಜನಜಾಗೃತಿ ಮಾಡುತ್ತಲಿವೆ. ಉಪನ್ಯಾಸಕರ, ಸಾಹಿತಿಗಳ, ಗ್ರಾಮೀಣ ಜನತೆಯ ಸಹಕಾರದಿಂದ ಈ ಶಿಬಿರದ ಕಾರ್ಯಗಳು ಅಭಿವೃದ್ಧಿ ಹೊಂದುತ್ತಲಿವೆ. ಈ ಶಿಬಿರಗಳು ಅವರವರ ಧರ್ಮದಂತೆ ನಡೆದುಕೊಂಡು, ಸತ್ಯ-ಜ್ಞಾನ-ನಿಷ್ಠೆಯಿಂದ ಜೀವನ ಸಾಗಿಸಬೇಕೆಂಬುವ ವಿಚಾರದ ಪ್ರಚಾರವನ್ನು ಮಾಡುತ್ತಲಿವೆ. ಈ ದಿಸೆಯಲ್ಲಿ ಸರ್ವಧರ್ಮದವರು ಸಹಕರಿಸಿ ಸಫಲಗೊಳಿಸುತ್ತಿರುವದು ಶ್ರೀ ಜಗದ್ಗುರುಗಳಿಗೆ ಆನಂದವನ್ನು ನೀಡುತ್ತಲಿದೆ. ಈ ಶಿಬಿರದಲ್ಲಿ ಉಚಿತ ಲಿಂಗಧಾರಣೆ ನಡೆಯುತ್ತದೆ.

### ಮಹಾದ್ವಾರಗಳ ನಿರ್ಮಾಣ: ಬೆರಗುಗೊಳಿಸುವ ಸಾಹಸ

ಶ್ರೀ ಜಗದ್ಗುರು ಮೂರುಸಾವಿರಮಠವು ಪ್ರಾಚೀನ ಪರಂಪರೆಯ ಜಾಗೃತ ಪೀಠ. ಹನ್ನೆರಡನೇ ಶತಮಾನದಿಂದಲೂ ಪ್ರಸಿದ್ಧಿ ಪಡೆದಿದ್ದು ಕುಮಾರ ಸಮಯದ ಮುಖ್ಯ ಜಗದ್ಗುರು ಪೀಠ. ಇದಕ್ಕೊಂದು ಮೊದಲಿದ್ದುದಕ್ಕಿಂತ ಬೃಹತ್ಪ್ರಮಾಣದ ಮಹಾದ್ವಾರದ ಅವಶ್ಯಕತೆಯನ್ನು ಶ್ರೀಮಠದ ಆತ್ಮೀಯ ಭಕ್ತರು ಶ್ರೀ ಜಗದ್ಗುರುಗಳಿಗೆ ಮೇಲಿಂದ ಮೇಲೆ ನೆನಪಿಗೆ ತರುತ್ತಿದ್ದರು. ಜಗದ್ಗುರುಗಳಿಗೂ ಮನವರಿಕೆಯಾಗಿತ್ತು. ಮಹಾದ್ವಾರ ಕಟ್ಟಿಸಬೇಕೆಂದರೆ ಆರ್ಥಿಕ ಭದ್ರತೆಯಿಲ್ಲದೇ ಪ್ರಾರಂಭಿಸಲು ಬರುವಂತಿದ್ದಿಲ್ಲ. ಕಟ್ಟಿಸುವದಾದರೆ ನಾಡಿಗೇ ಆದರ್ಶ ಮಹಾದ್ವಾರವಾಗುವಂತೆ ಇರಬೇಕು. ಸಶಾಸ್ತ್ರೀಯವಾಗಿರಬೇಕು. ವೀರಶೈವ ಸಿದ್ಧಾಂತಕ್ಕೊಳಪಟ್ಟಿರಬೇಕು. ಅದರ ಸದುಪಯೋಗವು ಸಮಾಜಕ್ಕೆ ದೊರೆಯಬೇಕೆಂದು ಶ್ರೀ ಜಗದ್ಗುರುಗಳ ಇಚ್ಛೆ. ಇದರ ವಿಚಾರ ವಿನಿಮಯ ಮಾಡುತ್ತಿರುವಷ್ಟರಲ್ಲೇ ಮೂರುಸಾವಿರಮಠದ ಪ್ರಮುಖ ಸದ್ಭಕ್ತರಾದ ಲಿಂ|| ಅಸುಂಡಿ ಚನ್ನಮಲ್ಲಪ್ಪನವರು ಬಿಡನಾಳ ಅವರ ಮಕ್ಕಳಾದ ಶ್ರೀ ಇರಪಣ್ಣನವರು ಅಸುಂಡಿ, ಶ್ರೀ ಶೇಖರಪ್ಪನವರು ಅಸುಂಡಿ, ಮಲ್ಲೇಶಪ್ಪನವರು ಅಸುಂಡಿ ಇವರೆಲ್ಲರೂ ಶ್ರೀ ಜಗದ್ಗುರುಗಳವರ ಹತ್ತಿರ ಬಂದು ಮಹಾದ್ವಾರ ಕಟ್ಟಿಸಲಿರುವ ವಿಷಯ ತಿಳಿದುಕೊಂಡು, ಆನಂದಿತರಾಗಿ ಹುಬ್ಬಳ್ಳಿ ಮಹಾನಗರಕ್ಕೆ ಭೂಷಣವಾಗುವಂತಹ ಮಹಾದ್ವಾರ ಕಟ್ಟಿಸುವದಾಗ ಬೇಕೆಂದು ವಿನಂತಿಸಿಕೊಂಡ ಬಿಡನಾಳ ಅಸುಂಡಿ ಮನೆತನದ ಇವರೆಲ್ಲರೂ ಕೂಡಿ ೭೫ ಸಾವಿರ ರೂಪಾಯಿಗಳ ಭಕ್ತಿ ಕಾಣಿಕೆಯನ್ನು ದೊಡ್ಡ ಮಹಾದ್ವಾರ ಕಟ್ಟಿಸಲು ಶ್ರೀ ಜಗದ್ಗುರುಗಳಿಗೆ ನೀಡಿದರು. ಇವರ ಪ್ರಥಮ ಕಾಣಿಕೆಯಿಂದ ಮುಖ್ಯ ಮಹಾದ್ವಾರದ ಕಟ್ಟಡದ ಶಂಕುಸ್ಥಾಪನೆಯು ಪರಮ ತಪಸ್ವಿ ಶತಾಯುಷಿ ಕಪನಹಳ್ಳಿಯ ಶಾಖಾ ಶಿವಯೋಗಮಂದಿರದ ಶ್ರೀ ನಿ. ಪ್ರ. ರುದ್ರಮುನಿ ಶಿವಯೋಗಿಗಳಿಂದ ಆಗಿ, ಕಾರ್ಯ ಪ್ರಾರಂಭವಾಯ್ತು. ಇದಕ್ಕಾಗಿ ಗೋವಾ, ಮುಂಬಯಿಗಳಿಂದ

ಶಿಲ್ಪಶಾಸ್ತ್ರ ಪ್ರವೀಣರನ್ನು ಕರೆಸಲಾಯಿತು. ಅವರೊಡನೆ ವಿಚಾರಿಸಿ ಕೊನೆಗೆ ವಾಸ್ತುಶಿಲ್ಪಶಾಸ್ತ್ರಕೋವಿದರಾದ ಶ್ರೀ ಪಿ. ಎಲ್. ಮೆಹರವಾಡೆ ಹಾಗೂ ಶ್ರೀ ಸಿದ್ದಪ್ಪ ಮೈಸೂರ ಅವರು ಮಾಡಿದ 'ಉಪಾಯವನ್ನು' ಜಗದ್ಗುರುಗಳು ಮೆಚ್ಚಿಕೊಂಡಿದ್ದಕ್ಕೆ ಸರ್ವಭಕ್ತರು ಸಹಕಾರ ಮಾಡಿದರು.

ಮಠದ ಬಗ್ಗೆ ಯಾರು ಎಷ್ಟು ತಪ್ಪು ಮಾಡುತ್ತಾರೋ ಅಂತಹವರಿಗೆ ಅಷ್ಟೇ ಕಷ್ಟ ಕೊಡುತ್ತಾನೆ 'ಹುಚ್ಚ' ಸ್ವಾಮಿ, ಎಷ್ಟು ಒಳ್ಳೇದು ಮಾಡುತ್ತಾರೋ ಅವರಿಗೆ ಅಷ್ಟೇ ಒಳ್ಳೇದು ಮಾಡುತ್ತಾನೆ ಅದೇ ಹುಚ್ಚ ಸ್ವಾಮಿ. ಉದಾ: ಮಹಾದ್ವಾರ ಕಟ್ಟುವಾಗ ಒಬ್ಬನು ಕಾಲಲ್ಲಿ ಚಪ್ಪಲಿ ಹಾಕಿಕೊಂಡು ಗೋಪುರ ಮೇಲೆ ಕೆಲಸ ಮಾಡುತ್ತಿದ್ದನಂತೆ. ಆಗ ಬಸವಂತಪ್ಪನವರು ಹುಲಿಯಪ್ಪನವರ, ಆ ಕೆಲಸದ ಮನುಷ್ಯನಿಗೆ ಹೇಳಿದರಂತೆ. 'ಸ್ವಾಮಿ ಪೀಠಕ್ಕೆ ಸಂಬಂಧಿಸಿರುವ ಈ ಮಠದ ಗೋಪುರದ ಮೇಲೆ ಚರ್ಮದ ಚಪ್ಪಲಿ ಹಾಕಿಕೊಂಡು ಕೆಲಸ ಮಾಡುತ್ತೀ ತೆಗೆದು ಮಾಡಪ!' ಅಂದರಂತೆ. ಮತ್ತೆ ಬಸವಂತಪ್ಪನವರು ಎಲ್ಲೋ ಹೋದರಂತೆ! ಮತ್ತೆ ತಿರುಗಿ ಬಂದಾಗ ಇನ್ನುಳಿದ ಕೆಲಸಗಾರರಿಗೆ ಏನೂ ಆಗಿರದೇ ಆ ಚರ್ಮದ ಚಪ್ಪಲಿ ಹಾಕಿಕೊಂಡಿದ್ದವನು ಗೋಪುರದಿಂದ ಕೆಳಗೆ ಬಿದ್ದಿದ್ದನಂತೆ. ಅವನಿಗೆ ಆಪರೇಷನ್ ಆಗಿ ಹೊಲಿಗಿ ಆಯ್ತು, ಉಳಿದ. ಕೆಲ ದಿನದ ನಂತರ ಕೆಲಸ ಮುಂದುವರೆಸಿದ. ಸ್ವಲ್ಪ ತಪ್ಪಿಗೆ ಹೆಚ್ಚಿನ ಶಿಕ್ಷೆ ಕೊಡುವ 'ಹುಚ್ಚ'ನಾಗಿದ್ದರೆ ಮೇಲಿನಿಂದ ಬಿದ್ದವನ ಜೀವ ಹೋಗಬೇಕಿತ್ತು, ಆದರೆ ಮೇಲಿನಿಂದ ಬಿದ್ದರೂ ಜೀವ ತಗೊಳ್ಳದೇ ಅಷ್ಟೇ ಶಿಕ್ಷೆ ಕೊಟ್ಟು ಜೀವ ಉಳಿಸಿದ ಅಂತಾ ಬಸವಂತನಗರದ ಬಸವಂತಪ್ಪನವರು ನೆನಪು ಮಾಡಿ ಹೇಳಿದ ಮಾತು ಕೇಳಿದಾಗ ದುಷ್ಟ ನಿಗ್ರಹ, ಶಿಷ್ಟ ಪರಿಪಾಲಕ, ಹುಚ್ಚ ಸ್ವಾಮಿಯ ಬಗ್ಗೆ 'ಕಾಣಿಯ ಸೋಲ; ಅರ್ಧ್ವಗಾಣಿಯಗೆಲ್ಲ ನೋಡಾ' ಎಂಬ ಬಸವಣ್ಣನವರ ಮಾತು ನೆನಪಿಗೆ ಬರುತ್ತದೆ.

ಈ ಭವ್ಯ ಕಟ್ಟಡದ ದೊಡ್ಡ ಮಹಾದ್ವಾರವು ಮುಗಿಯಲು ೩ ವರ್ಷಗಳು ಹಿಡಿದವು. ವೀರಶೈವ ಸಿದ್ಧಾಂತದ ಏಕೋತ್ತರ ಶತಸ್ಥಲದ ಸವಿನೆನಪು ತರುವಂತೆ, ಗೋಪುರದ ಹೊರತಾಗಿ ೧೦೧ ಫೂಟು ಎತ್ತರದ ಹಾಗೂ ಷಟ್‌ಸ್ಥಲದ್ಯೋತಕ ವಾಗಿರುವ ಆರು ಅಂತಸ್ತುಳ್ಳ ಈ ಕಟ್ಟಡಕ್ಕೆ ೫ ಲಕ್ಷ ರೂಪಾಯಿ ವೆಚ್ಚವಾಯಿತು!! ಅಸುಂಡಿ ಮನೆತನದ ಭಕ್ತರ ಕಾಣಿಕೆ ಸೇರಿಸಿ ಉಳಿದುದೆಲ್ಲ ಶ್ರೀಮಠದಿಂದಲೇ ಖರ್ಚು ಮಾಡಿ ಕಟ್ಟಿಸಲಾಯಿತು. ಇದು ಪೂರ್ತಿಗೊಳ್ಳುವವರೆಗೆ ಇವರ ಕಂಟ್ರಾಕ್ಟರ ರಾದ ಶ್ರೀ ಶಾನಭಾಗರು ಮತ್ತು ಬಸವಂತನಗರದ ಬಸವಂತಪ್ಪನವರು ಹುಲಿಯಪ್ಪ ನವರ ಹುಬ್ಬಳ್ಳಿ ಅವರು, ಕಟ್ಟಿಸಿದ ಶ್ರಮಕ್ಕಾಗಿ ಯಾವ ಲಾಭವನ್ನೂ ಪಡೆಯದೇ ನಿಷ್ಠೆಯಿಂದ ದುಡಿದಿರುವದು ಮೂರುಸಾವಿರಮಠದ ಮೇಲೆ ಅವರಿಗಿರುವ ಅಚಲ

ಶ್ರದ್ಧೆ, ಭಕ್ತಿ ಎಂದು ಹೇಳಬಹುದು! ಈ ದೊಡ್ಡ ಮಹಾದ್ವಾರವನ್ನು ಈಗೀಗ ಕಟ್ಟಿಸಿದ್ದರೆ ಕೂಲಿ, ಸಿಮೆಂಟ, ಕಬ್ಬಿಣದ ಬೆಲೆ ಏರಿಕೆಯಿಂದಾಗಿ ಅದರ ವೆಚ್ಚ ಅಂದಾಜು ೫೦ (ಐವತ್ತು) ಲಕ್ಷದಷ್ಟು ಆಗಬಹುದೆಂದು ಎಲ್ಲರ ಅಭಿಮತ. ತತ್ವ ಹಾಗೂ ಸಿದ್ಧಾಂತ ಸೌಂದರ್ಯ ಕಲಾಪೂರ್ಣವಾಗಿದ್ದು, ನಾಡಿನ ಎಲ್ಲ ಜನಸ್ತೋಮಕ್ಕೆ ಈ ದೊಡ್ಡ ಮಹಾದ್ವಾರವು ನಾಲ್ಕೂ ದಿಕ್ಕಿಗೆ ಮುಖ ಮಾಡಿದ ಗಡಿಯಾರ ಹೊಂದಿದ್ದು ಆದರ್ಶಯುತವಾಗಿದೆ, ಸುಮನೋಹರವಾಗಿದೆ. ಕವಿ ಶ್ರೀ ಗಂಗಪ್ಪ ವಾಲಿಯವರ ಭಾಷೆಯಲ್ಲಿಯೇ ಕೇಳಿದರೆ ಮತ್ತಿಷ್ಟು ಸಂತೋಷ! ಅದು ಇಂತಿದೆ-

"ಪೂರ್ವದ್ವಾರಗೋಪುರ
ಧರ್ಮತತ್ತ್ವಬಂಧುರ
ಸುಪ್ರಭಾತ ಸುಸ್ವರ
ಸುಪ್ರಶಾಂತ ಸುಖಕರ"

ಶ್ರೀ ಎನ್ಕೆಯವರ ಭಾಷೆಯಲ್ಲಿ-

"ಇದು ಮಹಾದ್ವಾರ! ಗೌರೀಶಂಕರ ಶಿಖರದುನ್ನತಿಕೆ!
ಏಷ್ಟ ವೈಶಾಲ್ಯ! ಜಾತ್ಯತೀತೆಯೊಂದು ಹೆಗ್ಗಳಿಕೆ!
ಶರಣಜನ ಪೊಣ್ಕೆ-ಕಾಣ್ಕೆಗಳು ಬಾನೆತ್ತರಕೆ!
ಏಣಿ ಹಾಕಿವೆ, ಶ್ರೇಣಿಗೊಂಡು ಕರುಮಾಡಕ್ಕೆ!!"

ಶ್ರೀ ಸಂಗಮೇಶ ಹೊಸಮನಿಯವರ ಭಾಷೆಯಲ್ಲಿ-

"ಎಷ್ಟು ಎತ್ತರವಯ್ಯ ಈ ಗೋಪುರ!
ಆರು ಸ್ಥಳಗಳನೇರಿ, ನೂರೊಂದು ಅಡಿಹಾರಿ!
ಭಾವಬಾಂದಳ ಸೇರಿ, ನಿಂತ ನೆಲವನು ಜಾರಿ ಜಾರಿ,
ಸುತ್ತಲೂ ನೋಡಯ್ಯ ಸಾರಿ....
ಅಧ್ಯಾತ್ಮದೈಸಿರಿಯು, ವೈರಾಗ್ಯದಾಗಿರಿಯು
ಎಲ್ಲರಿಗೂ ನೀಡಿರುವ ಗಂಗಾಧರ
ಗುರುದೇವ ಕೈಯೆತ್ತಿ ವಿದ್ಯಾಧರ!!
ಎತ್ತರಕೆ ಏರಿದನು, ತನ್ನತ್ತ ಕರೆಯುವನು,
'ಬಾ' ಎಂಬ ಗಂಟೆಯ ಧ್ವನಿಯು, ವರಯೋಗಿ ಹೃದಯುಸಿರಿಯು
ಸಿದ್ಧರಾಮನು ಬಂದು ಇಳಿದ ನೆನಪಾಗುವದು,
ಬಸವ, ಅಲ್ಲಮರಾಟ ಮೆರೆಯುತಿಹುದು."

ಎಂದು ಮುಂತಾಗಿ ಅನೇಕ ಕವಿಗಳು ಶ್ರೀಮಠದ ದೊಡ್ಡ ಮಹಾದ್ವಾರ ಕಟ್ಟಡ ವನ್ನು ಹಾಡಿ ಹರಸಿದ್ದಾರೆ. ಲಿಂಗೈಕ್ಯ ಶ್ರೀ ಕಲ್ಲೂರ ಸಂಗಣ್ಣನವರೂ ಸಹ ಈ ಮಹಾದ್ವಾರದ ಬಗ್ಗೆ–

"ನೆತ್ತಿಯ ಮೇಲೆ ಸುತ್ತುಮುತ್ತ ಗೋಪುರ ಗಡಿಯಾರವನ್ನು ಹೊತ್ತು ಕೊಂಡು ಜೊತೆಗೆ ನಾಡಿನ ಆಶಾಗೋಪುರಕ್ಕಂಬಾಗಿದೆ" ಎಂಬ ನಂಬಿಗೆಯ ಹೆಸರನ್ನು ಹೊತ್ತುಕೊಂಡು ಏಕೋತ್ತರ ಶತಸ್ಥಲ ಜ್ಞಾಪಕವೂ, ವಿದ್ಯುನ್ಮಾಲಾ ದೀಪಕವೂ, ಮಹತ್ಕೃತಿ ಮೌಲ್ಯಮಾಪಕವೂ, ಷಟ್‌ಸ್ಥಲ ಸ್ಥಾಪಕವೂ, ವಾಣಿಜ್ಯಾದಿನಿಲಯ ವ್ಯಾಪಕವೂ ಹಾಗೂ ಹುಬ್ಬಳ್ಳಿ–ಧಾರವಾಡ ಮಹಾನಗರ ಕೀರ್ತಿ ವಾರ್ತಾರೂಪಕವೂ ಆದ ಮಹಾದ್ವಾರ ತಾನೇ ಶ್ರೀಮಠದ್ದಾಗಿ ಸರ್ವ ಜನಾಂಗಗಳಿಗೂ ಯುಕ್ತದ್ವಾರ ಅಲ್ಲ, ಮುಕ್ತದ್ವಾರ ಎನಿಸಿರುವದೆಂದು ಪರಿಪರಿ ಯಿಂದ ಹೃದಯತುಂಬಿ ಬಣ್ಣಿಸಿದ್ದು ನೋಡಿದರೆ, ಇದರ ವ್ಯಾಪಕತೆ, ಶ್ರೀ ಜಗದ್ಗುರುಗಳ ಸಮರ್ಥ ಕರ್ತೃತ್ವಶಕ್ತಿ ಎಷ್ಟಿದೆ ಎಂಬುದು ಕಣ್ದೆರೆದು ನೋಡುವವರಿಗೆ ಅರ್ಥವಾಗದಿರದು. ಇದೊಂದು ಕಟ್ಟಡ ನಿರ್ಮಾಣದಲ್ಲಿ ಶ್ರೀ ಜಗದ್ಗುರುಗಳ ದೊಡ್ಡ ಸಾಹಸ.

ಮತ್ತೊಂದು ಮಹಾದ್ವಾರ ಒಳಗಿನದು. ಪುರಾತನದ್ದು, ಸಂಪೂರ್ಣ ಜೀರ್ಣೋದ್ಧಾರಗೊಂಡು ವೈಶಿಷ್ಟ್ಯಪೂರ್ಣವಾಗಿದೆ, ಕಲಾಪೂರ್ಣವಾಗಿದೆ. ಮೂರು ಕಮಾನುಗಳಿಂದ ಸುಶೋಭಿತವಾಗಿದೆ. ಕೆಳಗಿನ ಎರಡು ಮಗ್ಗಲು ಕಡೆಯ ಭಾಗಗಳು ಒಂದು ಆನೆಗಾಗಿ, ಮತ್ತೊಂದು ಸೆಕ್ಯೂರಿಟಿ ಆಫೀಸರರಿಗಾಗಿ ನಿರ್ಮಾಣ ವಾಗಿ ಅವರ ಉಪಯೋಗವಾಗುತ್ತಲಿದೆ. ತಾವು ಏನೇ ಕಟ್ಟಿಸಿದರೂ ಸಹ ಅದರ ಸದುಪಯೋಗವಾದರೆ ಶ್ರೀ ಜಗದ್ಗುರುಗಳಿಗೆ ಸಮಾಧಾನ. ಕಟ್ಟಿಸಲ್ಪಟ್ಟ ಪ್ರತಿ ಯೊಂದು ಸ್ಥಾನವೂ ಜಗದ್ಗುರುಗಳ ಪ್ರತಿನಿತ್ಯದ ಮೇಲ್ವಿಚಾರಣೆಯ ಶ್ರಮದಿಂದಾಗಿ ಬೆವರಿನ ಹನಿಯಿಂದ ಕೂಡಿ ಕಾಯಕಷ್ಟ ಹಾಗೂ ಕಾಯಕನಿಷ್ಠೆಯಿಂದ ಕೂಡಿದು ದಾಗಿದೆ!! ತಾವು ಪಟ್ಟಾಭಿಷಿಕ್ತ ಪೀಠಾಧಿಪತಿ ಜಗದ್ಗುರುಗಳಾದರೂ 'ಆರಾಮ' ಎಂಬುದನ್ನು ಲವಲೇಶ ಬಯಸದೇ ನಿರಂತರ ದುಡಿಮೆಯೇ ಅವರಿಗೆ ಪೂಜೆ ಯಾಗಿದೆ. 'ಜನಸೇವೆಯೇ ಜನಾರ್ದನ ಸೇವೆ' ಎಂದು ಭಾವಿಸುತ್ತಾ ಜನಸಾಮಾನ್ಯ ರಂತೆ ತಮ್ಮ ಜೀವನವಿರಿಸಿಕೊಂಡು, ಅಹಮಹಿಮಿಕೆಯನ್ನು ತೊರೆದು ದುಡಿಯುವ ಇಂತಹ ಜಗದ್ಗುರುಗಳು ಭಾರತದಲ್ಲಿಯೇ ಸಿಗುವದು ದುರ್ಲಭವಾಗಿದೆ. ಒಳಗಿನ ಸುಂದರ ಮಹಾದ್ವಾರಕ್ಕೆ ಆಗಿನ ಕಾಲಕ್ಕೆ ರೂಪಾಯಿ ೨ ಲಕ್ಷದಷ್ಟು ಕಟ್ಟಲು ಮುಟ್ಟಿದೆ. ಇದಕ್ಕಾಗಿ ಶ್ರೀ ಚಿಕ್ಕವೀರಯ್ಯಮಠ ಅವರಿಂದ ೫೦೦೦ ರೂಪಾಯಿ ಗಳಷ್ಟು ಭಕ್ತಿ ಕಾಣಿಕೆ ಸಂದಿದೆ. ಈ ಸಣ್ಣ ನೂತನ ಮಹಾದ್ವಾರದ ಗೋಪುರ

ಗಳು ಸುಂದರವಾಗಿದ್ದು, ಶ್ರೀ ಜಗದ್ಗುರು ಮೂರುಸಾವಿರಮಠದ 'ಸಿಂಬಾಲ' ಮಧ್ಯದಲ್ಲಿ ಕಲಾತ್ಮಕ ರೀತಿಯಲ್ಲಿ ನಿರ್ಮಿತವಾಗಿ ಸುಶೋಭಿತಗೊಂಡಿವೆ.

ಮೂರುಸಾವಿರಮಠದ ನಿಷ್ಠಾವಂತ ಸದ್ಭಕ್ತರಾದ ಲಿಂ|| ಶ್ರೀ ಸಂಗಪ್ಪನವರು ನಿಲುಗಲ್ಲ ಅವರು ೪೦ (ನಾಲ್ವತ್ತು) ಸಾವಿರ ರೂಪಾಯಿಯ ಗಡಿಯಾರವೊಂದನ್ನು ಭಕ್ತಿ ಕಾಣಿಕೆಯಾಗಿ ನೀಡಿ, ಮುಂದಿನ ದೊಡ್ಡ ಮಹಾದ್ವಾರದ ಆರನೆಯ ಅಂತಸ್ತಿನ ಮೇಲೆ ಕೂಡಿಸಿದ್ದಾರೆ. ಮಹಾನಗರದಲ್ಲಿ ಅದರ ಧ್ವನಿಯಿಂದ ವೇಳೆಯ ಅರಿವಾಗಿ ಕಾರ್ಯಪ್ರವೃತ್ತರಾಗಲು ಎಚ್ಚರಾಗುವವರು ಎನಿತೋ ಜನ! ಈ ದೊಡ್ಡ ಮಹಾದ್ವಾರದ ಗಡಿಯಾರದ ಗಂಟೆಯ ನಿನಾದವು ಸುತ್ತಲೂ ಮೂರು ಮೈಲುಗಳಿಗೆ ಕೇಳುವಷ್ಟು ಶಕ್ತಿಯುಳ್ಳದ್ದಾಗಿದೆ. ಹುಬ್ಬಳ್ಳಿ ಮಹಾನಗರಕ್ಕೆ ಕಲಶಪ್ರಾಯವಾಗಿರುವ ಶ್ರೀಮಠದ ಈ ಎರಡು ಮಹಾದ್ವಾರಗಳು ಹುಬ್ಬಳ್ಳಿ ಮಹಾನಗರದ ಸೌಂದರ್ಯವೃದ್ಧಿಗೆ ಭೂಷಣಪ್ರಾಯವಾಗಿವೆ.

### "ಕುಮಾರೋದ್ಯಾನವನ"ದ ಚಲುವು

ಶ್ರೀಮಠದ ಕರ್ತೃಗದ್ದುಗೆಗೆ ಹಾಗೂ ಶ್ರೀ ಜಗದ್ಗುರುಗಳ ಮತ್ತು ಶ್ರೀಮಠಕ್ಕೆ ಬಂದ ಭಕ್ತರ ಹಾಗೂ ಸಾಧಕರ ನಿತ್ಯ ಪೂಜೆಗೆ ಹೂ-ಪತ್ರಿಗಳು ಅತ್ಯವಶ್ಯಕವೆಂಬುದನ್ನು ಗಮನಿಸಿ, ಪ್ರತ್ಯೇಕವಾಗಿ ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳ ಸ್ಮಾರಕವಾಗಿ ಶ್ರೀಮಠದ ಕಂಪೌಂಡಿನಲ್ಲಿಯೇ ಶತಮಾನದಿಂದಿರುವ ಆರುಗಾಲಿಯ ದೊಡ್ಡ ತೇರಿನ ಹಿಂಭಾಗದಲ್ಲಿ ಉದ್ಯಾನವನವನ್ನು ತಯಾರು ಮಾಡಿಸಿದರು. ಅವರಲ್ಲಿ ಸಾಕಷ್ಟು ಹೂ-ಪತ್ರಿಗಳ ಒಳ್ಳೆಯ ಸಸಿಗಳನ್ನು ಹೊರಗಿನಿಂದ ತರಿಸಿ, ಶಿಸ್ತಿನಿಂದ ಹಾಕಿಸಿ, ಸುತ್ತೆಲ್ಲ ಟೆಂಗಿನ ಸಸಿಗಳನ್ನು ನಡೆಸಿ, ಜೀರ್ಣೋದ್ಧಾರಗೊಳಿಸಿ ಸುಶೋಭಿತಗೊಳಿಸುವಂತೆ ಸದ್ಯದ ಶ್ರೀ ಜಗದ್ಗುರುಗಳು ವ್ಯವಸ್ಥೆಗೊಳಿಸಿದರು. ಬೇಸರ ಕಳೆಯುವ ಸುಂದರ ಪೂದೋಟವಾಗಿ ಜನಮನಕ್ಕಾಕರ್ಷಕವಾಗಿ ಸುಶೋಭಿತಗೊಂಡು ಶಾಂತಿಯನ್ನು, ತಂಪನ್ನು ನೀಡುತ್ತಲಿದೆ ಈ "ಕುಮಾರೋದ್ಯಾನವನ.

### ಕ್ಷಾಮ ಪರಿಹಾರ ಯೋಜನೆ

ಹಿಂದೊಮ್ಮೆ ನಾಡಿನಲ್ಲಿ (ಅಂದರೆ ಕಲಬುರ್ಗಿ, ರಾಯಚೂರ, ಬೀದರ, ವಿಜಾಪೂರ, ಬೆಳಗಾಂವ ಮುಂತಾದ ಕೆಲ ಜಿಲ್ಲೆಗಳಲ್ಲಿ) ಅನಾವೃಷ್ಟಿಯಿಂದಾಗಿ ಭೀಕರ ಬರಗಾಲಬಿದ್ದು, ಬಡಜನರು ಬವಣೆಗೀಡಾಗಿದ್ದಾಗ ಅಮೇರಿಕಾದಿಂದ ಜಾಗತಿಕ ಶಾಂತಿ ಸಮ್ಮೇಲನಕ್ಕೆ ಭಾಗವಹಿಸಲು ಶ್ರೀ ಜಗದ್ಗುರುಗಳಿಗೆ ಆಮಂತ್ರಣ ಬಂದಿದ್ದರೂ ಸಹ ಅದನ್ನು ಕಡೆಗಣಿಸಿ, ಮಾನವೀಯತೆಯ ಸಂಸ್ಕೃತಿಯನ್ನು ತಮ್ಮ ಮನಸ್ಸಿನಲ್ಲಿ ಮೆಲುಕುಹಾಕಿ, ಶ್ರೀ ಜಗದ್ಗುರುಗಳು ಹುಬ್ಬಳ್ಳಿ-ಧಾರವಾಡದ

ಪ್ರಮುಖ ಭಕ್ತರನ್ನು ಕರೆಯಿಸಿ, ಭೀಕರ ಬರಗಾಲದ ನಿವಾರಣೆಗಾಗಿ ತಾವು ಹುಬ್ಬಳ್ಳಿಯಲ್ಲಿ ಪಾದಯಾತ್ರೆ ಮಾಡುವ ಸಂಕಲ್ಪವನ್ನು ತಿಳಿಸಿದರು. ಭಕ್ತರೆಲ್ಲರೂ ಒಪ್ಪಿದರು. ಭಕ್ತರನ್ನೂ, ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರನ್ನೂ ಕರೆದುಕೊಂಡು ಹುಬ್ಬಳ್ಳಿಯಲ್ಲಿ ೯ ದಿನಗಳವರೆಗೆ ಸ್ವತಃ ಜಗದ್ಗುರುಗಳೇ ಪಾದಯಾತ್ರೆ ಮಾಡಿದರು. ಬಡಜನರ ಹಸಿವು ಹಿಂಗಿಸುವುದಕ್ಕಾಗಿ ಜಗದ್ಗುರುಗಳು ಮನೆ ಮನೆಯ ಬಾಗಿಲಿಗೆ ಪಾದಯಾತ್ರೆ ಪ್ರಯಾಣ ಬೆಳಸಿದಾಗ ಎಲ್ಲರೂ ಮುಕ್ತ ಹಸ್ತದಿಂದ ನೀಡಿದರು. ಕೇವಲ ೯ ದಿನಗಳಲ್ಲಿ ೧೦ ಲಕ್ಷದಷ್ಟು ಧನರಾಶಿ, ಸಾವಿರಾರು ಚೀಲ ಧಾನ್ಯ, ೪ ಟ್ರಕ್ಕಿನಷ್ಟು ಅರಿವೆಗಳನ್ನು ಸಂಗ್ರಹಿಸಿದರು. ಟ್ರಕ್‌ಗಟ್ಟಲೇ ರೊಟ್ಟಿಗಳನ್ನು ಮಾ ಸಿ ಸ್ವತಃ ಜಗದ್ಗುರುಗಳು ಭಕ್ತಾದಿಗಳೊಂದಿಗೆ ಬರಗಾಲ ಪೀಡಿತ ಪ್ರದೇಶಗಳಿಗೆ ಹೋಗಿ, ಧನ-ಧಾನ್ಯ ನೀಡಿ ಅನಾವೃಷ್ಟಿಯ ಭೀಕರ ಬರಗಾಲದಿಂದ ಬಳಲುತ್ತಿರುವ ಜನತೆಯನ್ನು ಅನ್ನ ವಸ್ತ್ರದ ಸಹಾಯ ನೀಡಿ ಉಳಿಸಿದರು. ರಾಮದುರ್ಗ, ಗುಳೇದಗುಡ್ಡಗಳಲ್ಲಿಯೂ ಹುಬ್ಬಳ್ಳಿಯಲ್ಲಿಯಂತೆ ಪಾದಯಾತ್ರೆ ಮಾಡಿ, ಲಕ್ಷಾಂತರ ರೂಪಾಯಿಗಳನ್ನು, ಆಹಾರ ಧಾನ್ಯವನ್ನು ಶ್ರೀಮಂತ ದಾನಿಗಳಿಂದ ಸಂಗ್ರಹಿಸಿ, ಕೂಡಿಸಿ ದೀನ-ದಲಿತ ಬಡವರಿಗೆ ನೀಡಿದರು. ದನ-ಕರುಗಳಿಗಾಗಿ ನೂರಾರು ಟ್ರಕ್ ಮೇವನ್ನು ಸಂಗ್ರಹಿಸಿ ಸಾಯುತ್ತಿರುವ ದನಗಳನ್ನು ಉಳಿಸಿದರು. ಒಟ್ಟು ಈ ಐದೂ ಜಿಲ್ಲೆಗಳಲ್ಲಿ ನೂರಾರು "ಗಂಜಿ ಕೇಂದ್ರಗಳನ್ನು" ತೆರೆಯಿಸಿದರು. ಈ ಗಂಜಿ ಕೇಂದ್ರಗಳ ವ್ಯವಸ್ಥೆಗಾಗಿ ರಾಷ್ಟ್ರೀಯ ಸ್ವಯಂ ಸೇವಕ ಸಂಘ (R.S.S.) ದವರು, ವಿಶ್ವ ಹಿಂದೂ ಪರಿಷತ್ತಿನವರು, ಆ ಊರಿನ ಮಠಾಧೀಶರು ಮುಂದೆಬಂದು ತಮ್ಮ ಆದರ್ಶ ಶಿಸ್ತಿನ ಸೇವೆಯಿಂದ ೬ ತಿಂಗಳವರೆಗೆ ಸೇವೆ ಸಲ್ಲಿಸಿದರು. ಶ್ರೀಮಠದಿಂದ ಅಲ್ಲಲ್ಲಿ ಪ್ರಾರಂಭಿಸಿದ್ದ ಈ ನೂರು ಗಂಜಿ ಕೇಂದ್ರಗಳಲ್ಲಿ ಒಟ್ಟಿನ ಲೆಕ್ಕದ ಪ್ರಕಾರ ಪ್ರತಿನಿತ್ಯ ೪೦_೪೫ ಸಾವಿರ ಜನ ನಿರ್ಗತಿಕರಿಗೆ ಉಚಿತ ವೇಳೆಗೆ ಊಟದ ವ್ಯವಸ್ಥೆ ಮಾಡಲಾಗಿತ್ತು. ಇದಕ್ಕೊಂದು 'ಪಾದಯಾತ್ರಾ ಸಮಿತಿ'ಯನ್ನು ರಚಿಸಿ, ಅಲ್ಲಲ್ಲಿಗೆ ಜನರನ್ನು ಕಳುಹಿಸಿ, ಪ್ರಸಂಗ ಬಂದರೆ ಸ್ವತಃ ಜಗದ್ಗುರುಗಳು ತಾವೇ ಹೋಗಿ ಧನ-ಧಾನ್ಯ ಹಂಚಿ ಬರುತ್ತಿರುವ ದೃಶ್ಯ ನೋಡಿದಾಗ ಯಾರಿಗೆ ತಾನೇ ಆನಂದವಾಗಿರಲಿಕ್ಕಿಲ್ಲ!?! ಜಗದ್ಗುರುಗಳಾಗಿ ತಮ್ಮ ವೈಭವವನ್ನು ಬದಿಗಿರಿಸಿ, ಈ ಮಾನವೀಯ ಅನುಕಂಪದ ಸೇವೆಯನ್ನು ಮಾಡುತ್ತ, ಬಡವರ ಕಣ್ಣೀರನ್ನು ಒರೆಸಿ ಅವರನ್ನು ಜೀವಂತ ಉಳಿಸಿರುವ ಸಾಹಸವನ್ನು ಈ ರೀತಿ ನಾಡಿನ ಯಾವ ಜಗದ್ಗುರುಗಳೂ ಮಾಡಿರಲಿಕ್ಕಿಲ್ಲವೆಂದು ಹೇಳಿದರೆ ತಪ್ಪೆನಿಸದು. ಇಂದಿಗೂ ಹುಬ್ಬಳ್ಳಿಯ ಶ್ರೀ ಜಗದ್ಗುರುಗಳನ್ನು ನಾಡಿಗೆ ನಾಡೇ ಏಕೆ ಇಡೀ ದೇಶವೇ ಸ್ಮರಿಸುತ್ತಲಿದೆ. ಇಂತಹ ಮಾನವೀಯ ಸೇವೆ ಮಾಡಲು ಧೈರ್ಯ ಬೇಕು,

ಹೃದಯ ಬೇಕು. ಇಲ್ಲಿ ಜಾತಿಯ ಭಾವನೆಯೇ ಇರಲಾರದು. ಶ್ರೀ ಜಗದ್ಗುರುಗಳವರ ಹೃದಯವೈಶಾಲ್ಯತೆ ದೇವರೂ ಮೆಚ್ಚುವಂತಹದು. ಇಂತಹ ಪವಿತ್ರ ಕಾರ್ಯದಲ್ಲಿ ಕೊನೆಯವರೆಗೂ ಹುಬ್ಬಳ್ಳಿಯ ಸದ್ಭಕ್ತರು, ಮೇಲಾಗಿ ಹಗಲಿರುಳೆನ್ನದೇ ಲಿಂ|| ಶ್ರೀ ನಿಲುಗಲ್ಲ ಸಂಗಪ್ಪನವರು, ಶಿವಯೋಗಿ ಸಂಘದ ಸಾಧಕರು ಹಗಲು ಹಚ್ಚಿ ದುಡಿದದ್ದು ಸಂಸ್ಮರಣೀಯವಾಗಿದೆ.

## ಮಠಗಳಿಗೆ ಶ್ರೀ ಜಗದ್ಗುರುಗಳಿಂದ ಸಾಧಕರ ಕೊಡುಗೆ

ಶ್ರೀ ಜಗದ್ಗುರು ಸನ್ನಿಧಿಯವರಿಗೆ ಕೇವಲ ತಮ್ಮ ಪೀಠವೊಂದೇ ಬೆಳೆಯಬೇಕೆಂಬ ಆಶೆಯಿಲ್ಲ. ಭಾರತದಲ್ಲಿರುವ ಆಯಾ ರಾಜ್ಯಗಳಲ್ಲಿರುವ ಮಠಗಳು ಬೆಳಗಬೇಕು. ಜೊತೆಗೆ ಭಕ್ತರು ಉದ್ಧಾರವಾಗಿ, ಸಂಸ್ಕೃತಿ ಸಂಪನ್ನರಾಗಿ ಸಾಮಾಜಿಕ ಸೇವೆ ಸಲ್ಲಿಸಬೇಕೆಂಬುವ ಹಿರಿಯಾಶೆ ಶ್ರೀ ಜಗದ್ಗುರುಗಳವರದು. ಆ ದೃಷ್ಟಿಯಿಂದಲೇ ಜನಜಾಗೃತಿ ಮಾಡುವ ಶಕ್ತಿಯುಳ್ಳ ವ್ಯಕ್ತಿಗಳನ್ನು ಶ್ರೀಮಠದ 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ'ದಲ್ಲಿಟ್ಟುಕೊಂಡು, ಅವರಿಗೆ ಅಧ್ಯಯನಕ್ಕೆ ಎಲ್ಲ ವ್ಯವಸ್ಥೆ ಮಾಡಿ; ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ರಂಗದಲ್ಲಿ ಸೇವೆ ಮಾಡುವ ತರಬೇತಿ ನೀಡಿ, ಸದ್ಯ ಸ್ವಾಮಿಗಳಿಲ್ಲದ ಮಠಗಳಿಗೂ ಹಾಗೂ ವಯೋವೃದ್ಧ ಸ್ವಾಮಿಗಳಿಗೂ ಆಚಾರ, ವಿಚಾರ ಸಂಪನ್ನರಾದ ಯೋಗ್ಯ ಮರಿದೇವರನ್ನು ಕೊಡುತ್ತ ಬಂದಿದ್ದಾರೆ. ಇದೊಂದು ಶ್ರೀ ಜಗದ್ಗುರುಗಳವರ ಬಹು ದೂರದೃಷ್ಟಿಯ ಹಾಗೂ ಸಾಮಾಜಿಕ ಸುಧಾರಣಾ ಚಿಂತನೆಯ ಹಿರಿಗುರಿಯಾಗಿದೆ. ಶ್ರೀ ಸನ್ನಿಧಿಯವರಲ್ಲಿ ಸಂಕುಚಿತ ದೃಷ್ಟಿ ಹಾಗೂ ಸ್ವಪ್ರತಿಷ್ಠೆಯ ಮೋಹ ತಿಲಮಾತ್ರವೂ ಕಾಣದು. ಗುರುವಿರಕ್ತರೀರ್ವರು ಕೂಡಿಕೊಂಡು ಸಮಾಜ ರಥವನ್ನು ಎಳೆಯಬೇಕೆಂದೇ ಶಿವಯೋಗಿ ಸಂಘದಲ್ಲಿ ಶ್ರೀ ಜಗದ್ಗುರುಗಳು ಇವರೀರ್ವರಿಗೂ ಸಮಾನ ಸೌಕರ್ಯ ಆಶ್ರಯ ನೀಡಿದ್ದಾರೆ. ತಮ್ಮ 'ಚಿತ್ಸುಮನ' ಗ್ರಂಥದಲ್ಲಿ ಜಗದ್ಗುರುಗಳು ಹೀಗೆ ಹೇಳಿದ್ದಾರೆ–

'ಗುರುವಿರಕ್ತರೆಂಬವರು ಸಮಾಜದ ಪುರುಷಂಗೆ ಕಣ್ಣೆರಡು ನೋಡಾ|
ಪರೆಬಂದ ಕಂಗಳಂತೆ ಇವರೀರ್ವರ ಪರಿ ಆಗಬಾರದು ನೋಡಾ|
ಕಂಗಳ ಪರೆ ಪರಿದು, ತಿಂಗಳ ಸಿರಿ ಅಂಗವಿಸಿ, ಮಂಗಳ–
ಭಾವೈಕ್ಯವಾದಾಗಲೇ ಸಮಾಜದ ಅಂಗಳ ಬೆಳಗುವದು ನೋಡಾ|
ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ'||

ಎಷ್ಟೋ ಮಠಗಳ ಭಕ್ತರು ಒಳ್ಳೇ ಮರಿದೇವರನ್ನಾಸಿಸಿ ಶ್ರೀ ಜಗದ್ಗುರುಗಳ ಹತ್ತಿರ ಬಂದಾಗ ಸದ್ಯ ಶ್ರೀಮಠದಲ್ಲಿರದಿದ್ದರೆ ಕಾಶಿ, ಶಿವಯೋಗಮಂದಿರ ಮುಂತಾದ ಊರುಗಳಿಂದ ಕರೆಯಿಸಿ, ಅವರಿಗೆ ಒಳ್ಳೆ ಬೋಧೆಯನ್ನು ಮಾಡಿ,ಸ್ವತಃ ಜಗದ್ಗುರುಗಳು ಆ ಮಠಗಳಿದ್ದ ಊರಿಗೆ ಹೋಗಿ, ಭಿನ್ನಾಭಿಪ್ರಾಯವಿದ್ದ ಜನರಿಗೆ

ತಿಳಿಹೇಳಿ, ಅಲ್ಲಿಯೇ ಇದ್ದು, ಭಿಕ್ಷೆಯನ್ನು ಮಾಡಿ ತಾವೇ ಮುಂದಾಗಿ ನಿಂತು ಪಟ್ಟಾಭಿಷೇಕವನ್ನು ಸಹ ಕೆಲವು ಮಠಗಳಲ್ಲಿ ವಿಜೃಂಭಣೆಯಿಂದ ಮಾಡಿಸಿ ಬಂದವರಾಗಿದ್ದಾರೆ. 'ಜಾಗೃತ ಮಠಗಳು ಸಮಾಜಕ್ಕೆ ಕಲ್ಯಾಣ ಮಾಡುವ ಕೇಂದ್ರಗಳಾಗಬೇಕು' ಎಂಬ ಗುರಿ ಇಟ್ಟುಕೊಂಡ ಶ್ರೀ ಜಗದ್ಗುರುಗಳು ಈಗಾಗಲೇ ಚಿತ್ತರಗಿ– ಇಲಕಲ್ ಮಹಾಂತೇಶ್ವರಮಠ, ಗದಗ ತೋಂಟದಾರ್ಯಮಠ, ದುಧನಿ ಶಾಂತಲಿಂಗೇಶ್ವರ ಮಠ, ಕೊಣ್ಣೂರ ಮರಡೀಮಠ, ಹೊಸಪೇಟೆ–ಬಳ್ಳಾರಿ ಕೊಟ್ಟೂರೇಶ್ವರಮಠ, ನಿಡಗುಂದಿ ಹಿರೇಮಠ,ಬಿಚ್ಚಾಲಿ ಹಿರೇಮಠ, ಬಂಥನಾಳ ವಿರಕ್ತಮಠ, ಗುಲಬರ್ಗಾ-ಹುಬ್ಬಳ್ಳಿ ಗದ್ದಿಗೆಮಠ, ಅನಂತಪ್ಪುರ ಮುರಘಾಮಠ,ಬಾಗಲಕೋಟೆ ಚರಂತಿಮಠ, ಹುಲಸೂರ ವಿರಕ್ತಮಠ,ಶಾಖಾ ಮೂರುಸಾವಿರಮಠವಾದ ತಿಪಟೂರ ಷಡಕ್ಷರಮಠ, ತೆಲಸಂಗ ವಿರಕ್ತಮಠ, ಕೆಳದಿಯ ರಾಜಗುರು ಹಿರೇಮಠ, ಮೋರಟಗಿ ವಿರಕ್ತಮಠ, ಹುಬ್ಬಳ್ಳಿಯ ಎರಡೆತ್ತಿನಮಠ, ಹೊಸೂರ-ಬೈಲಹೊಂಗಲ ಶಾಖಾ ಮೂರುಸಾವಿರ ಮಠ, ಶಿರಹಟ್ಟಿ ಫಕೀರೇಶ್ವರಮಠ, ಶ್ರೀಶೈಲ ಜಗದ್ಗುರು ಸಂಸ್ಥಾನಮಠ, ಅಂಕಲಗಿ ಅಡವೀಶ್ವರಮಠ, ಖೇಳಗಿ ಶಿವಲಿಂಗೇಶ್ವರಮಠ, ಮಂಟೂರ ವಿರಕ್ತಮಠ, ಮುಳ್ಳಳ್ಳಿ- ಬಮ್ಮನಳ್ಳಿ ವಿರಕ್ತಮಠ, ಕಪ್ಪತ್ತಗುಡ್ಡ ವಿರಕ್ತಮಠ, ಸವಣೂರ ಕಲ್ಮಠ, ಚೀಕಲಪರ್ವಿ (ಸೊಲ್ಲಾಪೂರ ಜಿಲ್ಲೆ) ಕರ್ಜಗಿ ವಿರಕ್ತಮಠ, ಮಾಡ್ಯಾಳ ವಿರಕ್ತಮಠ, ಕೂಡಲ, ಬಂದರವಾಡ, ಮುಳ್ಳೂರ ಕೆರೂಟಗಿ, ನರಗುಂದದ ಹಿರೇಮಠ,ಬೆಳಗಾಂವ ಕಾರಂಜಿಮಠ, ಮುಧೋಳ ವಿರಕ್ತಮಠ, ಬೆಲ್ಲದಬಾಗೇವಾಡಿ ವಿರಕ್ತಮಠ– ಮುಂತಾದ ಮಠಗಳ ಪೀಠಗಳಿಗೆ ಯೋಗ್ಯ ಸಮರ್ಥ ೬೦–೭೦ ಮರಿದೇವರನ್ನು ಜಗದ್ಗುರುಗಳು ಒಪ್ಪಿ ಆತ್ಮೀಯತೆಯಿಂದ ನೀಡಿರುವರಲ್ಲದೇ ಕೆಲವು ಮಠಗಳಿಗೆ ಪ್ರತ್ಯಕ್ಷ ತಾವೇ ನಿಂತು ಪಟ್ಟಾಭಿಷೇಕವನ್ನೂ ಮಾಡಿಸಿದ್ದಾರೆ. ಎಷ್ಟೋ ಜನ ಧರ್ಮ ಗುರುಗಳಿಗೆ ಪ್ರಸಾದಿಸ್ಥಲದ ದೀಕ್ಷೆಯನ್ನು ಕೃಪೆ ಮಾಡಿ ಅನುಗ್ರಹಿಸಿದ್ದಾರೆ.

ಕರ್ನಾಟಕ, ಆಂಧ್ರ, ಮಹಾರಾಷ್ಟ್ರದಲ್ಲಿರುವ ಮಠಗಳಿಗೂ ಶ್ರೀ ಜಗದ್ಗುರುಗಳು ಕೃಪೆದೋರಿ, ಸಾಧಕರನ್ನು ನೀಡಿ ಸಮಾಜವನ್ನು ಜಾಗೃತ ಮಾಡಿದ ಶ್ರೇಯಸ್ಸು ಶ್ರೀ ಜಗದ್ಗುರುಗಳವರದಾಗಿದೆ. ಇಂಥ ಹಲವಾರು ಕಾರ್ಯಗಳಿಂದ ಜಗದ್ಗುರುಗಳು ಲಿಂ|| ಹಾನಗಲ್ಲ ಕುಮಾರೇಶ್ವರರ ಇಚ್ಛೆಯನ್ನು ಪೂರೈಸಿದ್ದಾರೆ. ಇಂತಹ ಕಾರ್ಯಗಳಿಗೆ ನೋವು– ನಲಿವು ಎಷ್ಟೇ ಬಂದರೂ, ಧೈರ್ಯವನ್ನು ಕಳೆದುಕೊಳ್ಳದೇ, ಸಮಾಜ ಜಾಗೃತಿ ಮಾಡುವದೇ ತಮ್ಮ ಕರ್ತವ್ಯವೆಂದು ಜಗದ್ಗುರುಗಳು ಆತ್ಮ ಮನೋಬಲದಿಂದ ಮುಂದುವರಿಯುತ್ತಿದ್ದಾರೆ. ಎಷ್ಟೋ ಧರ್ಮಗುರುಗಳಲ್ಲಿ ಮತ್ತೊಬ್ಬರನ್ನು ಮೇಲಕ್ಕೆತ್ತುವ ಭಾವನೆ ಇರುವದಿಲ್ಲ! ಆದರೆ ಈ ಜಗದ್ಗುರುಗಳು ಪ್ರತಿಯೊಬ್ಬ ಮಠಾಧೀಶರು ಮುಂದೆಬಂದು, ತಮ್ಮ ತಮ್ಮ ಸ್ಥಾನದಲ್ಲಿ ತಮ್ಮ ತಮ್ಮ ಮಠದ ಘನತೆ– ಗೌರವ ಬೆಳೆಸಲು ಬೆಳೆಯಬೇಕು. ಬೆಳಗಬೇಕೆಂಬುವ

ಗುರಿಯೇ ಇವರದಾಗಿದೆ. ಇಂತಹ ವಿಶಾಲ ಭಾವನೆಯ ಜಗದ್ಗುರುಗಳು ದೊರೆತಿರುವದು ನಾಡಿನ ಸೌಭಾಗ್ಯವಾಗಿದೆ. ಸ್ವಾಮಿಗಳು ಹಾಗೂ ಜಗದ್ಗುರುಗಳಾದವರಿಗೆ ಧಾರ್ಮಿಕ ಗುರುಗಳಲ್ಲಿ ಸಮಾನತೆಯ ಮನೋಭಾವನೆ, ಸಮಾಜ ಸುಧಾರಣೆಗಾಗಿ ಅಂತರಂಗದ ಕಳಕಳಿ, ಮಾನವೀಯ ಹೃದಯವಂತಿಕೆ, ಗುರುಹಿರಿಯರ ಬಗ್ಗೆ ಕೃತಜ್ಞತೆಯ ವೃಷ್ಟಿ ಇವುಗಳು ಬರಬೇಕಾದರೂ ಪುಣ್ಯ ಪಡೆದಿರಬೇಕಾಗುತ್ತದೆಂಬುದು ಆದರ್ಶ ಪುರುಷರ ಮನವರಿಕೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಉದಾರದೃಷ್ಟಿಯೇ ಇತ್ತೀಚೆಗೆ ನಾಡಿನ ಮಠಗಳು ಮೇಲೇಳಲು ಕಾರಣವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಶ್ರೀ ಜಗದ್ಗುರುಗಳ ಅನುಭವವನ್ನು, ಸಲಹೆ-ಸೂಚನೆಯನ್ನು ತೆಗೆದುಕೊಂಡು ಮಠಾಧೀಶರು ಮುಂದೆಹೋಗುತ್ತಿರುವದು ನಾಡಿನ ಪುಣ್ಯ ವಿಶೇಷವೆಂದೇ ಬಗೆಯಬೇಕು.

ಭಾರತದ ಮಠಾಧೀಶ್ವರರು ಉದಾರ ಮನಸ್ಸು ಮಾಡಿ, ಶ್ರೀ ಮೂರುಸಾವಿರ ಮಠದ ಜಗದ್ಗುರುಗಳಂತೆ ಪ್ರತಿಯೊಬ್ಬರೊಡನೆ ಹೊಂದಿಕೊಂಡು ನಡೆದು ಸಮಾಜ ಚಿಂತನೆ ಮಾಡಿದರೆ ರಾಷ್ಟ್ರದ ರೂಪರೇಖೆಯೇ ಬದಲಾದೀತು, ಧರ್ಮ ಸಂಸ್ಕೃತಿಯ ಬುನಾದಿ ಭದ್ರವಾದೀತು.

**ಶಿವಯೋಗಮಂದಿರದಲ್ಲಿ "ಧ್ಯಾನಧಾಮ"**

ಶ್ರೀ ಜಗದ್ಗುರುಗಳು ಶಿವಯೋಗಮಂದಿರದಲ್ಲಿ ಪ್ರಸಾದ ಸ್ವೀಕರಿಸಿ, ಆಧ್ಯಾತ್ಮಿಕ ಶಿಕ್ಷಣ ಪಡೆದು ದೊಡ್ಡವರಾದರು. ಇವರು ತಮ್ಮ ಬಾಲ್ಯದ ೪ನೇ ವಯಸ್ಸಿನಲ್ಲಿಯೇ ತಮ್ಮ ತಂದೆ- ತಾಯಿ, ಬಂಧು-ಬಳಗವನ್ನು ತೊರೆದು, ಚಿತ್ತರಗಿ-ಇಳಕಲ್ಲ ವಿಜಯಮಹಾಂತೇಶಮಠದ ಉತ್ತರಾಧಿಕಾರಿಯಾಗಿ ಶಿವಯೋಗಮಂದಿರ ದಲ್ಲಿಯೇ ನೆಲೆಸಿದರು. ಅಲ್ಲಿಯೇ ನೆಲೆಸಿ ಸಂಸ್ಕಾರವನ್ನು ಪಡೆದವರು. ಶಿವಯೋಗ ಮಂದಿರವೆಂದರೆ ಸಾಕು, ಜಗದ್ಗುರುಗಳಿಗೆ ತುಂಬಾ ಅಭಿಮಾನ. ಶಿವಯೋಗಮಂದಿರದ ಬಗ್ಗೆ ಆಗಾಗ್ಗೆ ಅನೇಕ ಸಮಸ್ಯೆಗಳನ್ನು ಎದುರಿಸಿ, ನೋವನ್ನುಂಡರೂ ತಮ್ಮ ಶಿವಯೋಗಮಂದಿರವು ಬೆಳಗಿ ತಮ್ಮ ಕಣ್ಣು ನೋಡಿದರೆ ಸಾಕು ಎನ್ನುವ ಮನೋಭಾವನೆಯುಳ್ಳವರು. ಅಂತೆಯೇ ಅಲ್ಲಿ ದೊಡ್ಡವರಾಗಿ ಬೆಳೆದುದರ ಸವಿನೆನಹಿಗಾಗಿ ಪರ್ವತಶ್ರೇಣಿಯ ಮಗ್ಗುಲದಲ್ಲಿ ಅದೇ ಶಿವಯೋಗಮಂದಿರದಲ್ಲಿ 'ಹಾನಗಲ್ಲ ಕುಮಾರ ಶಿವಯೋಗಿಗಳ ಶತಮಾನೋತ್ಸವ ಶುಭದಿನ'ದೊಳಗಾಗಿ ಶ್ರೀ ಮೂರು ಸಾವಿರಮಠದಿಂದ ಲಕ್ಷಾಂತರ ಹಣ ಖರ್ಚುಮಾಡಿ, ಸುಂದರವಾದ ಆರ್.ಸಿ.ಸಿ. ಕಟ್ಟಡವನ್ನು "ಧ್ಯಾನಧಾಮ" ಹೆಸರಿನಲ್ಲಿ ಕಟ್ಟಿಸಿ, ಶತಮಾನೋತ್ಸವ ಶುಭದಿನ ದಂದು ಲಿಂ|| ಹಾಲಕೆರೆ ಅನ್ನದಾನಸ್ವಾಮಿಗಳವರಿಂದ ಉದ್ಘಾಟನೆ ಮಾಡಿಸಿದರು. ಆ "ಧ್ಯಾನಧಾಮ"ವು ಶಿವಯೋಗಮಂದಿರಕ್ಕೆ ಬರುವ ಪೂಜ್ಯ ಸ್ವಾಮಿಗಳವರ ಹಾಗೂ ಪೂಜಾನಿಷ್ಠ ಸದ್ಭಕ್ತರ ಪೂಜೆ ಹಾಗೂ ವಸತಿಗಾಗಿ ನೀಡಬೇಕೆಂಬ

ಮಹೋದ್ದೇಶವಾಗಿದೆ. ಅದೇ ರೀತಿ ಈಗಲೂ ಸಹ ಅದು ಸದುಪಯೋಗವಾಗುತ್ತ ಲಿದೆ."ಧ್ಯಾನಧಾಮ" ಒಳಭಾಗದ ಸುತ್ತೆಲ್ಲ ಶ್ರೀ ಮೂರುಸಾವಿರಮಠದ ಖರ್ಚಿನಿಂದ ಟೆಂಗಿನ ಗಿಡಗಳನ್ನು ಹಚ್ಚಿಸಿ ಸುಶೋಭಿತಗೊಳಿಸಿದ್ದಾರೆ. ಬಂದು ಹೋಗುವವರ ವ್ಯವಸ್ಥೆ ಹಾಗೂ ಉದ್ಯಾನವನದ ಸಂರಕ್ಷಣೆಗಾಗಿ ಹುಬ್ಬಳ್ಳಿ ಶ್ರೀಮಠದಿಂದ ಪ್ರತಿ ತಿಂಗಳು ಪಗಾರ ನೀಡಿ ವ್ಯವಸ್ಥಾಪಕರನ್ನಿಡಲಾಗಿದೆ.'ಧ್ಯಾನಧಾಮ'ದ ಕಟ್ಟಡದ ನಿರ್ಮಾಣವಾಗಲು ಶ್ರೀ ಜಗದ್ಗುರುಗಳಿಗೆ ಭಕ್ತರು ಕೊಡಮಾಡಿದ ಪಾದ ಕಾಣಿಕೆಯ ಹಣದಿಂದಲೇ ನಿರ್ಮಾಣವಾಗಿದೆ. ಹೆಸರಿಗೆ ತಕ್ಕಂತೆ ಧ್ಯಾನ ಮಾಡ ತಕ್ಕವರಿಗೆ ಶಾಂತಿಯನ್ನು ನೀಡುವ 'ಧ್ಯಾನಧಾಮ'ವಾಗಿ ಶಿವಯೋಗಮಂದಿರದಲ್ಲಿ ವಿಶಾಲ ಕಂಪೌಂಡಿನಿಂದ ಕೂಡಿದ ಈ ಭವ್ಯ ಕಟ್ಟಡವು ಶಾಂತ ವಾತಾವರಣದಲ್ಲಿ ಕಂಗೊಳಿಸುತ್ತಲಿದೆ.

## ಉಚಿತ ಲಿಂಗಧಾರಣೆ ಹಾಗೂ ಅಂತರ್ಜಾತೀಯ ವಿವಾಹಗಳು

ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದಂತೆ ನಡೆದುಕೊಂಡು, ಧಾರ್ಮಿಕ ಸುಸ್ಕಾರ ಪಡೆದು, ತಮ್ಮ ಮನೆತನ ಹಾಗೂ ಸಮಾಜಕ್ಕೆ ಆದರ್ಶಪ್ರಾಯರಾಗ ಬೇಕೆಂಬುವ ಮಹೋದ್ದೇಶದಿಂದ ಶ್ರೀ ಜಗದ್ಗುರುಗಳು ಲಿಂಗವಿಲ್ಲದ ಲಿಂಗಾಯತ ರಿಗೆ ಉಚಿತ ಲಿಂಗಧಾರಣೆಯನ್ನು ಈವರೆಗೆ ಹಿರೇಮಠದ ಪಟ್ಟಾಧ್ಯಕ್ಷರಿಂದ ಮಾಡಿಸುತ್ತ ಬಂದಿದ್ದಾರೆ. ಸಭೆ- ಸಮ್ಮೇಲನವನ್ನು ಜರುಗಿಸಿದಾಗ ಉಚಿತ ಲಿಂಗಧಾರಣೆಯುನ್ನು ದೊಡ್ಡ ಪ್ರಮಾಣದಲ್ಲಿ ಮಾಡಿಸುತ್ತಿದ್ದಾರೆ. ಹುಬ್ಬಳ್ಳಿಯ ಶ್ರೀಮಠದಲ್ಲಿ ಪ್ರತಿ ಅಮವಾಸ್ಯೆ ಹಾಗೂ ಹುಣ್ಣಿಮೆಗಳ ದಿನ ಅಪೇಕ್ಷೆಪಟ್ಟು ಬಂದ ಭಕ್ತರಿಗೆ ಉಚಿತ ಲಿಂಗಧಾರಣೆಯ ಪರಂಪರೆಯು ಈವರೆಗೂ ನಡೆದು ಬಂದಿದೆ. ಈವರೆಗೆ ೭೦ (ಎಪ್ಪತ್ತು) ಸಾವಿರದಷ್ಟು ಶ್ರೀಮಠದಿಂದ ಉಚಿತ ಲಿಂಗಧಾರಣೆಗಳಾಗಿವೆ. ಅವರ ಬರಿ ಎದೆಯು ಇಷ್ಟಲಿಂಗದಿಂದ ಕೂಡಿ ಸುಶೋಭಿತ ವುಳ್ಳದ್ದಾಗಿ ಮಾಡಿರುವದಲ್ಲದೇ ಅವರ ವಯಸ್ಸಿಗೆ ತಕ್ಕ ಸಂಸ್ಕಾರದ ವಿಚಾರ ಹಾಗೂ ಲಿಂಗಧಾರಣೆಯ ಪ್ರಯೋಜನವನ್ನು ಕೀರ್ತನಕಾರರಿಂದ, ಪುರಾಣಿಕ ರಿಂದ, ಭಾಷಣಕಾರರಿಂದ, ಲಿಂಗಧಾರಣೆಯ ಪ್ರಯೋಜನವನ್ನು ಹೇಳಿಸಿ ಅಭಿ ಮಾನ ಹುಟ್ಟಿಸುತ್ತಿದ್ದಾರೆ. ಇದು ಪ್ರತಿಯೊಬ್ಬ ಸ್ವಾಮಿಗಳು ಮಾಡುವ ನಿಜವಾದ ಕರ್ತವ್ಯವೆಂದು ಶ್ರೀ ಜಗದ್ಗುರುಗಳು ಪದೇ ಪದೇ ಅಪ್ಪಣೆಕೊಡಿಸುತ್ತಿದ್ದಾರೆ. ಬಯಸಿ ಬಂದವರಿಗೆ ಅಂತರ್ಜಾತಿ ವಿವಾಹವನ್ನು ಮಾಡಿಸಿ ಕಳಿಸಿ, ಅವರ ಮನೆತನ ಉದ್ಧಾರ ಮಾಡಿದ್ದಾರೆ. ಇಲ್ಲಿ ಜಾತಿ ಬೇಧ ಮಾಡದೇ ಅವರ ಇಷ್ಟ ದಂತೆ ಆಯಾ ಧರ್ಮಕ್ಕನುಗುಣವಾಗಿ ದೀಕ್ಷಾ ಸಂಸ್ಕಾರ ನೀಡಿ ಹಿಂದೂ ಸಂಸ್ಕೃತಿಯ ಭದ್ರಬುನಾದಿಯನ್ನು ಹಾಕಿದ್ದಾರೆ, ಹಾಕುತ್ತಿದ್ದಾರೆ. ಅದಕ್ಕಾಗಿ ಹುಬ್ಬಳ್ಳಿಯ ಶ್ರೀಮಠದ ಆಫೀಸಿನಲ್ಲಿ ರಜಿಸ್ಟರ್ ಬುಕ್ ಒಂದನ್ನು ಇಡಿಸಿ

ಅವರವರ ಹೆಸರು, ನೋಂದಾಯಿಸಿದ ದಿನ ಇವೆಲ್ಲವನ್ನು ಬರೆಯಿಸಿ ಕ್ರಮಬದ್ಧವಾಗಿ ವ್ಯವಸ್ಥಿತಗೊಳಿಸಿದ್ದಾರೆ. ಅಂತರ್ಜಾತಿ ವಿವಾಹಗಳನ್ನು ಹೆಚ್ಚಾಗಿ ಸುಶಿಕ್ಷಿತರೇ ಆಗಿದ್ದಾರೆ. ೫೦೦ಕ್ಕಿಂತ ಹೆಚ್ಚು ಜನರು ಶ್ರೀ ಮೂರುಸಾವಿರಮಠದಿಂದ ಯೋಗ್ಯ ಸಂಸ್ಕಾರ ಮಾಡುವ ಶಾಸ್ತ್ರಿಗಳ ಪೌರೋಹಿತ್ಯದಲ್ಲಿ ಅಂತರ್ಜಾತಿ ವಿವಾಹಿತರಾಗಿದ್ದಾರೆ ಸಹಸ್ರಾರು-ದೀನ-ದಲಿತರಿಗೂ ಶ್ರೀಮಠದಿಂದ ಉಚಿತ ವಿವಾಹದ ವ್ಯವಸ್ಥೆ ಮಾಡಿ, ಅವರಿಗೆ ಅನೂಕೂಲ ಒದಗಿಸಿಕೊಟ್ಟಿದ್ದಾರೆ. ಕಲ್ಯಾಣ ಕಾರ್ಯವನ್ನು ನಿಷ್ಠೆಯಿಂದ ಮಾಡಿಸಿ, ಬೆಂದುಹೋಗುತ್ತಿರುವ ಅವರ ಜೀವನಕ್ಕೆ ಆಶ್ರಯ ನೀಡಿ ಶ್ರೀ ಜಗದ್ಗುರುಗಳು ಸರ್ವ ಆಶ್ರಿತರಿಗೂ ಚೈತನ್ಯ ಸ್ವರೂಪರಾಗಿದ್ದಾರೆ. ಯಾರೇ ಬಡವರು ದರ್ಶನಕ್ಕೆ ಹೋಗಲಿ ಜಾತಿ ಭೇದ ಮಾಡದೇ ಅವರಿಗೆ ಸಹಾಯ ಮಾಡಿ, ಆಶೀರ್ವಾದ ಮಾಡಿ ಕಳಿಸುವ ಪರಂಪರೆ ಇಂದಿಗೂ ನಡೆದುಬಂದಿದೆ.

## ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಶಾಪಿಂಗ ಕಾಂಪ್ಲೆಕ್ಸ ನಿರ್ಮಾಣ

'ಯಾವದೇ ಧರ್ಮದ ಸಂಸ್ಕೃತಿ ಉಳಿದು, ಬೆಳೆದು ಬಾಳಿ ಬದುಕಬೇಕಾದರೆ ಆ ಧರ್ಮದ ಸಾಹಿತ್ಯವಿರಬೇಕು. ಅದರ ಪ್ರಚಾರವಾಗಬೇಕು. ಹಾಗಾಗದ ಹೊರತು, ಬೇಕಾದಷ್ಟು ದೊಡ್ಡದಾದ ಧರ್ಮದ ಜನಾಂಗವಿದ್ದರೂ, ಅದು ಬಹುದಿನ ಅಸ್ತಿತ್ವದಲ್ಲಿ ಉಳಿಯಲಾರದು. ಅದಕ್ಕಾಗಿ 'ಒಂದು ದೊಡ್ಡ ನಿಧಿ'ಯನ್ನು ಸಂಗ್ರಹಿಸಿ ತತ್‌ದ್ವಾರಾ ಗ್ರಂಥ ಸಂಶೋಧನೆಯ ಕಾರ್ಯಗಳು ಜರುಗಬೇಕು' ಎಂದು ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರಶಿವಯೋಗಿಗಳು ಈ ರೀತಿ ಪದೇ ಪದೇ ಬೋಧಿಸುತ್ತಿದ್ದರಂತೆ. ಅವರ ನುಡಿಯನ್ನು ಚಾಚೂ ತಪ್ಪದೇ ನಮ್ಮ ಹುಬ್ಬಳ್ಳಿ ಶ್ರೀ ಜಗದ್ಗುರುಗಳು ನಡೆಯಿಸಿಕೊಂಡು ಬಂದಿದ್ದಾರೆ.

ಶ್ರೀ ಜಗದ್ಗುರುಗಳವರದು ಬಹು ದೂರದೃಷ್ಟಿ. ಯಾವದೇ ಸಂಸ್ಥೆಯನ್ನು ಯಾರೇ ಕಟ್ಟಲಿ, 'ಧರ್ಮಸ್ಯ ಮೂಲಂ ಅರ್ಥಃ' ಎಂಬಂತೆ ಆರ್ಥಿಕ ಭದ್ರತೆಯ ತಳಹದಿಯ ಮೇಲೆ ಕಟ್ಟಿದರೆ ಮಾತ್ರ ಆ ಸಂಸ್ಥೆ ಬೆಳೆದು ಬೆಳಗಬಲ್ಲದು, ಇಲ್ಲದಿದ್ದರೆ ಆ ಸಂಸ್ಥೆಗಳು ಬದುಕಲಾರವು. ಆ ರೀತಿ ಆರ್ಥಿಕ ಸ್ಥಿತಿ ಭದ್ರವಿಲ್ಲದೇ ಸಂಸ್ಥೆಯನ್ನು ಸ್ಥಾಪಿಸಲೂ ಬಾರದೆಂಬುದೇ ಶ್ರೀ ಜಗದ್ಗುರುಗಳ ಅಭಿಮತ. ಹಿಂದಿನ ಲಿಂ. ಗುರುಸಿದ್ಧ ರಾಜಯೋಗೀಂದ್ರ ಜಗದ್ಗುರುಗಳು ಗ್ರಂಥ ಪ್ರಕಟನೆಗಾಗಿ ಹತ್ತು ಸಾವಿರ ರೂಪಾಯಿಗಳ ಮೊತ್ತವನ್ನು ಎಫ್. ಡಿ. ರೂಪದಲ್ಲಿ ಇಟ್ಟಿದ್ದರು. ಇನ್ನೂ ಹೆಚ್ಚಿಗೆ ಸೇರಿಸಿ ಬ್ಯಾಂಕಿನಲ್ಲಿ ಬೃಹತ್ ಪ್ರಮಾಣದಲ್ಲಿ ಬೆಳೆಯಿಸಿ, ಆದರ್ಶಯುತ ಮಾಡಿ, ಲಿಂ. ಜಗದ್ಗುರುಗಳ ಆತ್ಮಕ್ಕೆ ಶಾಂತಿ ನೀಡಬೇಕೆಂಬುದೇ ಇಂದಿನ ಜಗದ್ಗುರುಗಳ ಪ್ರಬಲ ಇಚ್ಛೆಯಾಗಿದ್ದು, ಅದೇ ರೀತಿಯಾಗಿ ಸ್ಥಾಯಿ ನಿಧಿಗಾಗಿ

ಅಹೋರಾತ್ರಿ ಪರಿಶ್ರಮಿಸಿದರು. ಬ್ಯಾಂಕಿನಿಂದ ಲಕ್ಷಾಂತರ ರೂ. ಸಾಲ ತೆಗೆದುಕೊಂಡರು. ಅನೇಕ ಜನ ವ್ಯವಹಾರ ಚತುರರನ್ನು ಭೇಟಿಯಾಗಿ ಸಲಹೆ ಕೇಳಿದರು. ಇಂತಹ ಕಾರ್ಯಗಳಿಗೆ ಧಾರವಾಡ ಜಿಲ್ಲೆಯ ಅಂದಿನ ಡೆಪ್ಯೂಟಿ ಕಮೀಷನರರಾದ ಶ್ರೀ ಇರ್ನಿರಾಯರೂ ಸಹ ಪ್ರೋತ್ಸಾಹ ನೀಡಿದರು. ನಗರ ಸುಂದರಗೊಳ್ಳಬೇಕು, ಧರ್ಮಪ್ರಚಾರಕ ಮಂಡಳಕ್ಕೆ ದೊಡ್ಡ ಆಸ್ತಿಯಾಗಬೇಕೆಂಬುದೇ ಜಗದ್ಗುರುಗಳ ಹೆಬ್ಬಯಕೆ. ಶಿಲ್ಪಿ ಶಿರೋಮಣಿಗಳಾದ ಶ್ರೀ ಪಿ. ಎಲ್. ಮೆಹರವಾಡೆ ಅವರಿಂದ ಧರ್ಮಪ್ರಚಾರಕ ಮಂಡಳ ಶಾಪಿಂಗ್ ಕಾಂಪ್ಲೆಕ್ಸದ ನಕಾಶವನ್ನು ತೆಗೆಯಿಸಿ, ಮಂಡಳದ ಎಲ್ಲ ಸದಸ್ಯರಿಂದ ಒಪ್ಪಿಗೆ ಪಡೆದು ಸುಂದರ ಕಟ್ಟಡವನ್ನು ನಿರ್ಮಾಣ ಮಾಡಿಸಿದರು. ಅಂದಿನ ಅದರ ವೆಚ್ಚ ೧೫ ಲಕ್ಷ ರೂಪಾಯಿಗಳಷ್ಟು ಬಂದಿತು. ಆದರೂ ಇದೀಗ ಅದರ ಉತ್ಪನ್ನವು ವರ್ಷಕ್ಕೆ ೪ ಲಕ್ಷ ರೂಪಾಯಿಗಳಷ್ಟಾಯಿತು. ಧರ್ಮಪ್ರಚಾರಕ ಮಂಡಳಕ್ಕೆ ಒಂದು ದೊಡ್ಡ ಶಕ್ತಿಯಾಯಿತು. ಈ ಶಕ್ತಿಯ ಬಲವೇ ಪ್ರತಿವರ್ಷವೂ ೩೦–೪೦ ಗ್ರಂಥಗಳ ಪ್ರಕಟನೆಗೆ ಸರಳ ಮಾರ್ಗವಾಯಿತು. ಇದರ ಉತ್ಪನ್ನದ ದುಡ್ಡು ಕೇವಲ ಗ್ರಂಥ ಸಂಶೋಧನ, ಪ್ರಕಟನೆ, ಹಳ್ಳಿ ಹಳ್ಳಿಗಳಲ್ಲಿ ಹಾಗೂ ದೇಶ ವಿದೇಶಗಳಲ್ಲಿ ಧರ್ಮಪ್ರಚಾರ ಮಾಡುವದಕ್ಕೆ 'ಬಾಯಲಾ' ತಯಾರಿಸಿ ಮೀಸಲಿರಿಸಿದ್ದಾರೆ. ಧರ್ಮಪ್ರಚಾರಕ ಮಂಡಳದ ಮುಖ್ಯ ಧ್ಯೇಯ ಧೋರಣೆಗೆ ಕುಂದು ಬರದಂತೆ, ನಿರಂತರ ನಡೆಯುವಂತೆ ಸುಂದರ ವ್ಯವಸ್ಥೆಗೊಳಿಸಿದ್ದು ನೋಡಿದರೆ, ಎಂತಹ ಸಾಹಿತಿಯಾದರೂ ಪ್ರಾಮಾಣಿಕವಾಗಿ ಇವರ ಮುಂಧೋರಣೆಯ ಕಾರ್ಯಕ್ಕೆ ಮೆಚ್ಚಲೇಬೇಕು. ಬಹುಶಃ ನಾಡಿನ ಮಠಗಳಲ್ಲಿ ಈ ರೀತಿ ಇಷ್ಟು ಆರ್ಥಿಕ ಭದ್ರತೆಯ ತಳಹದಿಯ ಮೇಲೆ ನಿರಂತರ ಸಾಹಿತ್ಯಿಕ, ಧಾರ್ಮಿಕ ಸೇವೆ ನಡೆಯುವಂತೆ ವ್ಯವಸ್ಥಿತಗೊಳಿಸಿದ್ದು 'ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳವೊಂದೇ' ಎಂದರೆ ತಪ್ಪಾಗಲಿಕ್ಕಿಲ್ಲ. ಶ್ರೀ ಜಗದ್ಗುರುಗಳ 'ಪ್ಲ್ಯಾನ್' ಪ್ರಕಾರ ಈಗ ಕಟ್ಟಡ ಅರ್ಧ ಆಗಿದೆ. ಇನ್ನೂ ಮುಂದೆ ನಡೆದಿದೆ. ಈ ಧರ್ಮಪ್ರಚಾರಕ ಮಂಡಳಕ್ಕೆ ಪ್ರತಿ ವರ್ಷ ೧೨ ಲಕ್ಷ ರೂಪಾಯಿ ಉತ್ಪನ್ನ ಮಾಡಿ, ಈ ಹಣದಿಂದ ವಿದೇಶದಲ್ಲಿಯೂ ಸಹ ಧರ್ಮಪ್ರಚಾರಕ ಮಂಡಳದ ಶಾಖೆಯನ್ನು ತೆಗೆದು, ಅಲ್ಲಿ ಶರಣ ತತ್ವ ಪ್ರಚಾರ ಮಾಡುವ ಮುಂಗುರಿ ಇಟ್ಟುಕೊಂಡಿದ್ದಾರೆ. ಇಷ್ಟು ಮಾಡಬೇಕಾದರೆ ಅವರಿಗೆ ಎಷ್ಟು ಕಷ್ಟವಾಗಿರಬೇಕು? ಈ ರೀತಿ ಕೆಲಸ ಮಾಡತಕ್ಕವರಿಗೆ ಇವರ ಕಷ್ಟ ನಷ್ಟ ಅರ್ಥವಾಗುತ್ತದೆಯೇ ಹೊರತು ತೆಗಳತಕ್ಕವರಿಗೆ ಶ್ರೀಸನ್ನಿಧಿಯವರ ಅಂತರಂಗದ ಅರಿವು ಅರ್ಥವಾಗದು. ಈ ಕಟ್ಟಡ ನಿರ್ಮಾಣವಾಗುವಾಗ ಕರಣಿಕ ಶ್ರೀ ಎಚ್. ಪಿ. ಹುಲ್ಯಾಳ ಅವರು ನಿಷ್ಠೆಯಿಂದ ಸೇವೆ ಸಲ್ಲಿಸಿದ್ದು ಸ್ಮರಿಸುತ್ತಾರೆ. ಜಗದ್ಗುರುಗಳ ಸಾಹಸ ಅಸದೃಶವಾದದ್ದು, ಚಿರಸ್ಮರಣೀಯವಾದುದು. ಯೋಗ್ಯ ಬಡಸಾಹಿತಿಗಳಿಗೆ, ವಿದ್ವಾಂಸರಿಗೆ, ಕಲಾವಿದರಿಗೆ,

ಧರ್ಮಪ್ರಚಾರಕರಿಗೆ ಶ್ರೀ ಜಗದ್ಗುರುಗಳವರು ಕಟ್ಟಿದ ಧರ್ಮಪ್ರಚಾರಕ ಮಂಡಳ ವರದ ಹಸ್ತವಾಗಿದೆ, ಆಸರೆಗಂಬವಾಗಿದೆ. ಇವರು ಪಟ್ಟ ಪರಿಶ್ರಮ ಒಂದು ಇತಿಹಾಸವಾದೀತು.

## ವೀರಶೈವ ಭಾರತಿ

ಶ್ರೀ ಜಗದ್ಗುರುಗಳು ಯಾವದೇ ಯೋಜನೆಯನ್ನು ಕೈಕೊಂಡರೆ ಅದು ಮುಗಿಯುವವರೆಗೂ ಸುಮ್ಮನೆ ಕೂಡ್ರುವ ಸ್ವಭಾವ ಅವರದಲ್ಲ ಅಥವಾ ಕಷ್ಟಕ್ಕೆ ಅಂಜಿ ಅರ್ಧಕ್ಕೆ ಕೈಬಿಡುವವರಲ್ಲ. 'ಜೆ. ಜಿ. ಧರ್ಮಪ್ರಚಾರಕ ಮಂಡಳ ಟ್ರಸ್ಟ'ಗೆ ಸಾಕಷ್ಟು ಹೆಚ್ಚಿಗೆ ಉತ್ಪನ್ನವಾಯಿತು. ಆ ದುಡ್ಡು ಬ್ಯಾಂಕಿನಲ್ಲಿ ಜಮಾ ಆಗಕೂಡದು. ಅದು ಸದ್ವಿನಿಯೋಗವಾಗುತ್ತಿರಬೇಕೆಂಬುದೇ ಶ್ರೀಸನ್ನಿಧಿಯವರ ಮನೀಷೆಯಾಗಿದೆ. ಆ ಕೂಡಲೇ ಅದಕ್ಕೊಂದು ಹೊಸ ಯೋಜನೆ ಹುಡುಕಿದರು. ಜಗದ್ಗುರುಗಳವರ ಅಪ್ಪಣೆ ಮೇರೆಗೆ ಪ್ರೊ. ಜಿ. ಎಚ್. ಹನ್ನೆರಡುಮಠ ಅವರು ಮೂರುಸಾವಿರಮಠ ದಿಂದ ಪ್ರಕಟವಾಗಬೇಕಾದ ೨೫ ಲಕ್ಷ ರೂಪಾಯಿ ವೆಚ್ಚದ ೬೦೦ ಗ್ರಂಥಗಳ ಸಮಗ್ರ ಪ್ಲಾನ್ ಸಿದ್ಧಮಾಡಿಕೊಟ್ಟರು. ಪ್ರೊ. ಜಿ.ಎಚ್. ಹನ್ನೆರಡುಮಠ ಅವರ ೬೦೦ ಗ್ರಂಥಗಳ ಪ್ಲಾನ್ ಪುಸ್ತಕವನ್ನು ಮಾನ್ಯ ಶ್ರೀ ಬಿ. ಡಿ. ಜತ್ತಿಯವರು, ವಿದ್ವನ್ಮಣಿಗಳು, ವಿಶ್ವವಿದ್ಯಾಲಯಗಳ ಪಂಡಿತ ಪ್ರಾಧ್ಯಾಪಕರು, ಡಾ|| ಆರ್. ಸಿ. ಹಿರೇಮಠರು ಪರಿಶೀಲನೆ ಮಾಡಿ ಒಪ್ಪಿಗೆಕೊಟ್ಟರು. ಆಗ ಮುದ್ರಣದ ಸೋವಿ ದರದ ಕಾಲದಲ್ಲಿ ೨೫ ಲಕ್ಷಕ್ಕೆ ತಯಾರಿಸಿದ ಈ ಪ್ಲಾನು ಇಂದು ೮೦ ಲಕ್ಷಕ್ಕೆ ತಲುಪಿದೆ. ನಂತರ ಅನೇಕ ಲೇಖಕರು, ಪಂಡಿತರು, ಈ ಯೋಜನೆಗೆ ಕೈಗೂಡಿಸಿದರು. ಕರ್ನಾಟಕ ವಿಶ್ವವಿದ್ಯಾಲಯದಿಂದ ವಿದ್ವನ್ಮಣಿಗಳನ್ನು ಕರೆಯಿಸಿದರು. ಚಿಕ್ಕಮಕ್ಕಳ ಮನೋವಿಕಾಸಕ್ಕಾಗಿ ಶರಣರ ಚರಿತ್ರಾಂಶ ಪುಸ್ತಕಗಳನ್ನು ಮಕ್ಕಳ ಭಾಷೆಯಲ್ಲಿ ಹೊರತರಬೇಕೆಂಬಾಶೆಯನ್ನು ಅವರಿಗೆ ತಿಳಿಸಿದರು. ಚಿಕ್ಕಮಕ್ಕಳು ನಾಡಿನ, ವಿಶ್ವದ ಜೀವಂತ ಸಂಪತ್ತು. ಅವರ ಅಂತರಂಗ ಬಳ್ಳಿಯ ಮೊಗ್ಗುಗಳು. ಮನ ಬುದ್ಧಿ ಭಾವಗಳ ಅರಳಬೇಕಾದರೆ ಚಿತ್ರಿಕರಣ ಪರಿಪೂರ್ಣ ಸರಳ ಭಾಷೆಯ ಚಿಕ್ಕ ಹೊತ್ತಿಗೆ ಗಳು ಪ್ರಕಟವಾದರೆ ಚಿಕ್ಕಮಕ್ಕಳು ಅವನ್ನು ಓದುವದರಿಂದ ಅವರ ಜೀವನಕ್ಕೆ, ಸಂಸ್ಕೃತಿಯ ಬೆಳವಣಿಗೆಗೆ ಆಧಾರವಾಗಬಹುದೆಂದು ಬಗೆದು, ಚಿಕ್ಕಮಕ್ಕಳಿಗಾಗಿಯೇ ಸಚಿತ್ರ ಚಿಕ್ಕ ಚಿಕ್ಕ ಪುಸ್ತಕಗಳನ್ನು ಹೊರಡಿಸಬೇಕೆಂದು ಯೋಚಿಸಿ, ವಿದ್ವಾಂಸರ ಒಪ್ಪಿಗೆಯನ್ನು ಪಡೆದುಕೊಂಡರು. ಇಂತಹ ಚಿಕ್ಕ ಹೊತ್ತಿಗೆಗಳ ವಿಭಾಗದ ಮುಖ್ಯ ಶೀರ್ಷಿಕೆ 'ವೀರಶೈವ ಭಾರತಿ' ಎಂದು ಇಡುವ ಬಗ್ಗೆ ಡಾ|| ಎಂ. ಎಂ. ಕಲಬುರ್ಗಿ ಅವರು ಸಲಹೆ ನೀಡಿದ್ದು ಜಗದ್ಗುರುಗಳಿಗೂ ಸರಿಯೆನಿಸಿ ಅದೇ ರೀತಿಯ ಹೆಸರಿ ನಿಂದ ಪ್ರಾರಂಭಿಸಿದ್ದಾರೆ. ಇದೀಗ 'ವೀರಶೈವ ಭಾರತಿ'ಯ ೪೦ ಕಿರುಹೊತ್ತಿಗೆಗಳು ಪ್ರಕಟವಾಗಿ ನಾಡಿನ ಬಾಲಕರನ್ನು ಆಕರ್ಷಿಸಿವೆ, ಜನಪ್ರಿಯವೆನಿಸಿವೆ. ಈವರೆಗೆ

೨ ಲಕ್ಷದಷ್ಟು 'ವೀರಶೈವ ಭಾರತಿ' ಪುಸ್ತಕ ಸಂಪದದ ಪ್ರತಿಗಳು ಅಚ್ಚಾಗಿವೆ. ಇದರಲ್ಲಿ ಕಾಯಕಯೋಗಿಗಳು, ಅನುಭಾವಿಗಳು, ಆತ್ಮಜ್ಞಾನಿಗಳು, ಶರಣರು, ಶರಣೆಯರು, ಸಂತರು, ಶಿವಾಚಾರ್ಯರು, ಸತ್‌ಕ್ರಿಯಾಶೀಲರು, ಸದ್ಗುಣ ಸಂಪನ್ನರ ಈ ಜೀವಂತ ಕಿರಣಗಳು ಪರೋಕ್ಷವಾಗಿ ಹರಡಿವೆ. ಇವುಗಳ ಪ್ರತ್ಯಕ್ಷ ಪರಿಚಯ ಈ ವೀರಶೈವ ಭಾರತಿಯಲ್ಲಿದೆ. ಸರ್ವಸಮಾನತೆಯನ್ನಾಧರಿಸಿ, ಜಾತಿ ಭೇದಗಳನ್ನು ಅಳಿಸಿ, ದಲಿತೋದ್ಧಾರಕ್ಕೆ ಪರಿಶ್ರಮಿಸಿ, ಕಾಯಕದ ಮಹತ್ವವನ್ನು ತೋರಿಸಿ, ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ ಧರ್ಮವೆಂದರೆ ಅದು 'ವೀರಶೈವ ಧರ್ಮ'ವಾಗಿದೆ. ಇಂತಹ ಮಾನವೀಯ ಧರ್ಮದ ಅಧ್ಯಯನ ಚಿಕ್ಕಮಕ್ಕಳ ಮನಸ್ಸಿನಲ್ಲಿ ಮೂಡಲೆಂಬಾಶೆಯಿಂದ ಪ್ರತಿವರ್ಷ ಈ ಚಿಕ್ಕಮಕ್ಕಳ ಮನೋವಿಕಾಸದ 'ವೀರಶೈವ ಭಾರತಿ' ಪುಸ್ತಕ ಪ್ರಕಟನೆಗೆ ಒಂದು ಲಕ್ಷದಷ್ಟು ರೂಪಾಯಿ ಖರ್ಚು ಮಾಡುತ್ತಿರುವ ಶ್ರೀ ಜಗದ್ಗುರುಗಳು ಶರಣ ಸಂಸ್ಕೃತಿಯ ಬೆಳವಣಿಗೆಗೆ ಆಧಾರ ಸ್ತಂಭರಾಗಿದ್ದಾರೆ; ಎಂದಿಗೂ ಮರೆಯದ ಸಾಹಿತ್ಯವನ್ನು ಎಳೆಮಕ್ಕಳಿಗೆ ನೀಡಿ ಸಾಹಿತ್ಯ ಸೂರ್ಯರಾಗಿದ್ದಾರೆ.

## ಗ್ರಂಥ ಪುರಸ್ಕಾರ

ಜಗದ್ಗುರುಗಳ ಮತ್ತೊಂದು ಸಮಯೋಚಿತ ಹೊಸ ಯೋಜನೆಯಾದ ಈ 'ಗ್ರಂಥ ಪುರಸ್ಕಾರ ಸಮಿತಿ' ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಒಂದು ಅಂಗವಾಗಿದೆ. ಕನ್ನಡ ಸಾಹಿತ್ಯದ ಬಗ್ಗೆ ಸಂಶೋಧನಾತ್ಮಕ, ವಿಮರ್ಶಾತ್ಮಕ ಸಾಹಿತ್ಯದಿಂದೊಡಗೂಡಿದ ಗ್ರಂಥಗಳಿಗೆ ಬಹುಮಾನ ಕೊಡುವದಾಗಿದೆ. ಅಶ್ಲೀಲವಲ್ಲದ ಸಾಮಾಜಿಕ ಕಥೆ, ಕಾದಂಬರಿ, ಕಥಾನಕ ಸಾಹಿತ್ಯ, ಪ್ರವಾಸ ಸಾಹಿತ್ಯ, ಕವನ ಮುಂತಾದವುಗಳಿಗೂ ಪುರಸ್ಕಾರವುಂಟು. ಪ್ರತಿಯೊಂದು ಬಹುಮಾನವನ್ನೂ ಸಮಾನ ರೀತಿಯಲ್ಲಿ ಹಂಚಲಾಗುವದು. ಮೊದಲನೇ ಬಹುಮಾನ ೧೦೦೦ (ಒಂದು ಸಾವಿರ) ರೂಪಾಯಿ, ಎರಡನೇ ಬಹುಮಾನ ರೂ. ೧೦೦೦, ಮೂರನೇ ಬಹುಮಾನ ೧೦೦೦ ರೂ. ಈ ರೀತಿ ಪ್ರತಿವರ್ಷವೂ ಉತ್ತಮ ಗ್ರಂಥ ಕರ್ತೃಗಳಿಗೆ ಶ್ರೀ ಮಠದ 'ಮಂಡಳ'ದಿಂದ ಹಂಚಲಾಗುವದು.

ಇದೇ ರೀತಿ ಈ ಸಮಿತಿಯಿಂದ ವೀರಶೈವ ಧರ್ಮದ ಸೈದ್ಧಾಂತಿಕ ಶಾಸ್ತ್ರೀಯ ಉತ್ಕೃಷ್ಟ ಗ್ರಂಥಗಳಿಗೆ ಮೂರು ವರ್ಷಗಳಿಗೊಮ್ಮೆ ಶ್ರೇಷ್ಠ ಕೃತಿಯೊಂದಕ್ಕೆ ಪ್ರಥಮ ಬಹುಮಾನ ೫೦೦೦ ರೂ. ಹಂಚಲಾಗುವದು. ಪ್ರಶಸ್ತಿಪತ್ರಗಳೊಂದಿಗೆ ನಗದು ಬಹುಮಾನ ನೀಡುತ್ತಿರುವ ಇಂತಹ ಯೋಜನೆಗಳನ್ನು ಶ್ರೀ ಜಗದ್ಗುರುಗಳು ಮಾಡಿರುವದರಿಂದ ಎಷ್ಟೋ ಸಾಹಿತಿಗಳಿಗೆ ಉಪಕಾರ ಮಾಡಿದಂತಾಗಿದೆ, ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದಂತಾಗಿದೆ.

## "ಪರಂಜ್ಯೋತಿ" ಭವನ

ಈ 'ಪರಂಜ್ಯೋತಿ' ಎಂಬ ಹೆಸರಿನ ಭವನವು ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಆಡಳಿತಕ್ಕೊಳಪಟ್ಟದ್ದಾಗಿದೆ. ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಹುಬ್ಬಳ್ಳಿಯ ಈಗಿನ ಬಸ್‌ಸ್ಟ್ಯಾಂಡ್ ಹತ್ತಿರ ಶ್ರೀಮಠಕ್ಕೆ ಸಂಬಂಧಿಸಿದ ಕಮೀಟಿಗಳನ್ನು ನಡೆಯಿಸುವದಕ್ಕೆ ಅನುಕೂಲವಾಗುವಂತೆ ಕಟ್ಟಡ ನಿರ್ಮಾಣವಾಗಿದೆ. ಶ್ರೀ ಜಗದ್ಗುರು ಸನ್ನಿಧಿಯವರಿಗೆ ಅಧ್ಯಯನಕ್ಕೂ, ಅರ್ಚನೆಗೂ, ವಿಶ್ರಾಂತಿಗೂ ಉಪಯೋಗವಾಗುವಂತಹ, ಪ್ರಶಾಂತ ವಾತಾವರಣದ ಭವನವಾಗಿದೆ. ಪ್ರಸಂಗ ಬಂದರೆ ವಯೋವೃದ್ಧ ಸ್ವಾಮಿಗಳಿಗೆ ಶಿವಪೂಜೆಗೆ ಅತಿಥಿ ಗೃಹವೆಂದೂ ಕೊಡಲಾಗುವದು. ಶಿವಯೋಗಕ್ಕೆ ಇದೊಂದು ಸುಮನೋಹರ ಶಾಂತಿಧಾಮವೂ, ಶಿವಾರ್ಚನೆಯ ತಂಗುದಾಣವೂ ಆಗಿದೆ.

## ಧಾರವಾಡದಲ್ಲಿ ಬಸವಮಂಗಲ ಭವನ ನಿರ್ಮಾಣ ಹಾಗೂ ಶಾಖಾ ಮೂರುಸಾವಿರಮಠದ ಜೀರ್ಣೋದ್ಧಾರ

ಧಾರವಾಡದಲ್ಲಿ ಹುಬ್ಬಳ್ಳಿಯ ಶ್ರೀಮಠಕ್ಕೆ ಸಂಬಂಧಿಸಿರುವ ಶಾಖಾ ಮೂರು ಸಾವಿರಮಠವುಂಟು. ಅದೂ ಸಹ ಕಟ್ಟಿಗೆಯ ಕೆತ್ತನೆಯಿಂದ ಕಲಾಪೂರ್ಣವಾಗಿದೆ. ಹುಬ್ಬಳ್ಳಿಯಲ್ಲಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಆಕಾರದಂತೆಯೇ ಇದ್ದು ಸಣ್ಣ ಪ್ರಮಾಣದಲ್ಲಿ ಕಂಗೊಳಿಸುತ್ತಲಿದೆ. ಆ ಮಠವೂ ಸಹ ಬಹಳ ಜೀರ್ಣವಾಗಿತ್ತು. ಅದನ್ನು ಶ್ರೀ ಜಗದ್ಗುರು ಸನ್ನಿಧಿಯವರು ಜೀರ್ಣೋದ್ಧಾರ ಮಾಡಿಸಿ ಸುಂದರ ಗೊಳಿಸಿದ್ದಾರೆ. ಪ್ರತಿವರ್ಷ ಶ್ರಾವಣ ಮಾಸದಲ್ಲಿ ಕೀರ್ತನದ ಬಗ್ಗೆ ಹಾಗೂ ಪ್ರತಿ ಸೋಮವಾರ ಶಿವಾನುಭವ ಪ್ರವಚನದ ಬಗ್ಗೆ ವ್ಯವಸ್ಥೆ ಮಾಡಿಸಿದ್ದಾರೆ. ಹುಬ್ಬಳ್ಳಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿದ್ದು ಸ್ನಾತಕೋತ್ತರ ಪದವಿ ಪರೀಕ್ಷೆಗೆ ಕೂಡ್ರುವ ಸಾಧಕರಿಗೆ ಈ ಧಾರವಾಡದ ಶಾಖಾ ಮೂರುಸಾವಿರಮಠದಲ್ಲಿದ್ದು ಅಧ್ಯಯನ ಮಾಡಲು, ಹುಬ್ಬಳ್ಳಿ ಶ್ರೀಮಠದ ಖರ್ಚಿನಿಂದಲೇ ಎಲ್ಲ ವ್ಯವಸ್ಥೆ ಮಾಡಲಾಗಿದೆ. ಅದಕ್ಕೊಂದು ಕಮೀಟಿಯನ್ನು ಧಾರವಾಡದಲ್ಲಿ ರಚಿಸಿದ್ದಾರೆ. ಅಲ್ಲಿಗೆ ಬಂದ ಭಕ್ತರ ದರ್ಶನಾಶೀರ್ವಾದ ಮಾಡುವದಕ್ಕೆ ಶ್ರೀ ಶಿವಕುಮಾರಸ್ವಾಮಿ ಗಳನ್ನು ಅಲ್ಲಿ ನಿಯಮಿಸಿದ್ದಾರೆ ಹಾಗೂ ಆ ಮಠದಲ್ಲೇ ಶಿಶುವಿಹಾರಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ.

ಈ ಶಾಖಾ ಮೂರುಸಾವಿರಮಠದ ಆವರಣದಲ್ಲಿ ಮಹಾತ್ಮ ಬಸವೇಶ್ವರರ ಹೆಸರಿನಲ್ಲಿ "ಬಸವಮಂಗಲ ಭವನ"ವನ್ನು ಶ್ರೀ ಜಗದ್ಗುರುಗಳಿಂದ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಕಟ್ಟಿಸಲಾಗಿದೆ. ಪ್ರತಿ ವರ್ಷವೂ ಅಲ್ಲಿ ಮಂಗಲಕಾರ್ಯ

ಗಳು, ಸಭೆ– ಸಮ್ಮೇಲನಗಳು ಜರುಗಿ ಧಾರವಾಡದ ಮಹಾನಗರದ ಜನರಿಗೆ ಉಪಯೋಗವಾಗುತ್ತಿರುವದು ಸಂತಸದ ಸಂಗತಿಯಾಗಿದೆ. ಧಾರವಾಡದಲ್ಲಿರುವ ಈ ಶಾಖಾ ಶ್ರೀಮಠದ ಜೀರ್ಣೋದ್ಧಾರ ಮಾಡಲು ಹುಬ್ಬಳ್ಳಿ–ಧಾರವಾಡ ಕಾರ್ಪೋರೇಶನ್‌ದ ಮಾಜಿ ಮೇಯರ್‌ರಾದ ಮಾನ್ಯ ಶ್ರೀ ಲಿ|| ಶಿವಲಿಂಗಪ್ಪನವರು ಅಗಡಿ ಹಾಗೂ ಶ್ರೀ ಉಳುವೆಪ್ಪ ಕೊಟೂರ ಮುಂತಾದವರು ಪ್ರಮುಖರಾಗಿ ಪರಿಶ್ರಮಿಸಿದ್ದಾರೆ. ಈ ಮಠವು ಬಹು ಪುರಾತನವಾದದ್ದು, ಪ್ರಾಚೀನ ಸಂಸ್ಕೃತಿ ಯಿಂದ ಕೂಡಿದುದಾಗಿದೆ.

### ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ನಿರಂತರ ಪೂಜಾಯೋಜನೆ

ಇದು ವಿಜ್ಞಾನಯುಗ, ದೇಶದ ಎಲ್ಲೆಡೆಯಲ್ಲಿಯೂ ಆಧ್ಯಾತ್ಮಿಕ, ಧಾರ್ಮಿಕ ಮತ್ತು ನೈತಿಕ ಭಾವನೆಗಳು ಕುಗ್ಗುತ್ತಲಿವೆ. ಜನತೆಯಲ್ಲಿ ಭೌತಿಕ ವಿಷಯುಗಳ ಸೆಳೆತವು ಹೆಚ್ಚಾಗಿ ಭಾರತೀಯ ಸಂಸ್ಕೃತಿಯು ಮಾಯವಾಗತೊಡಗಿದೆ. ಇಂತಹ ಸಮಯದಲ್ಲಿ ಪ್ರತಿಯೊಬ್ಬರ ಮನೋಭೂಮಿಕೆಯಲ್ಲಿ ಆಧ್ಯಾತ್ಮಿಕ ಮತ್ತು ಧಾರ್ಮಿಕ ತತ್ತ್ವಗಳನ್ನು ಸರಳವಾಗುವಂತೆ ಮೂಡಿಸುವದು ಅವಶ್ಯವಿದೆ. ಆಸ್ತಿಕ ಭಾವನೆಯು ಬೆಳೆದುಬಂದು ಜನಜೀವನವು ಪರಿಶುದ್ಧವಾಗಬೇಕಾಗಿದೆ. ಭಕ್ತಿ–ಭಾವನೆಗಳು, ಪೂಜಾನುಷ್ಠಾನುಗಳು ಮನುಷ್ಯನ ರೀತಿ–ನೀತಿಗಳಲ್ಲಿ ಹೆಚ್ಚಾಗಿ ಪರಿವರ್ತನೆ ಮಾಡಿ, ಸುಖ–ಶಾಂತಿಗಳನ್ನು ಕೊಡುವ ಹಾಗೂ ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡುವ ಮಾರ್ಗಗಳಾಗಿದ್ದು, ಈ ಭಾರತೀಯತೆಯನ್ನು ಬೆಳೆಯಿಸಿ, ಭಕ್ತರ ಜೀವನವನ್ನು ಪಾವನ ಮಾಡುವ ಉದ್ದೇಶದಿಂದ ಹುಬ್ಬಳ್ಳಿ ಮೂರುಸಾವಿರಮಠದ 'ಕರ್ತೃ ಶ್ರೀ ಜಗದ್ಗುರು ಪೂಜಾ ಸೇವಾ ಸಮಿತಿ'ಯನ್ನು ೧೯೭೪ ರಲ್ಲಿ ಸ್ಥಾಪನೆ ಮಾಡಿದ್ದಾರೆ. ತಮ್ಮ ಖಾಂತರ ಪ್ರತಿಯೊಬ್ಬರಿಗೂ ಪೂಜಾವಿನಿಯೋಗ ದೊರೆತು ಸುಖ–ಶಾಂತಿ ದೊರೆಯಲೆಂಬುವೇ ಈ ಸಮಿತಿಯ ಮೂಲ ಉದ್ದೇಶವಾಗಿದೆ.

ಹುಬ್ಬಳ್ಳಿ ಶಹರದಲ್ಲಿ ಶ್ರೀ ಜಗದ್ಗುರು ಮೂರುಸಾವಿರಮಠವು ಹನ್ನೆರಡನೆಯ ಶತಮಾನದಿಂದಲೂ ವೀರಶೈವ ಸಮಾಜದ ಮುಕುಟಮಣಿಯಂತೆ ಪ್ರಕಾಶಿಸುತ್ತಿದೆಯಲ್ಲದೇ ಪರಮತೀಯರಿಂದಲೂ ಭಕ್ತಿಯ ಪೂಜಾಸೇವೆಯನ್ನು ಪಡೆಯುತ್ತಲಿದೆ. ಶ್ರೀ ಜಗದ್ಗುರು ಮೂರುಸಾವಿರಮಠದಲ್ಲಿ ಮೂಲ ಕರ್ತೃಗಳಾದ, ನಿರ್ವಿಕಲ್ಪ ಸಮಾಧಿಸ್ಥರಾದ ಜಗದ್ಗುರು ಶ್ರೀ ಗುರುಸಿದ್ಧೇಶ್ವರ ಶಿವಯೋಗಿಗಳ ಸಮಾಧಿಯ ಪೂಜಾ ವಿನಿಯೋಗ ಕಾರ್ಯವು ೧೨ನೇ ಶತಮಾನದಿಂದ ಅಬಾಧಿತವಾಗಿ, ಸಾಗಿ ಬಂದಂತೆ ಇನ್ನೂ ಹೆಚ್ಚು ವೈಭವದಿಂದ ಚಿರಕಾಲ ನಡೆಯುಬೇಕೆಂದೂ, ಇಂತಹ ಪೂಜಾ ವಿನಿಯೋಗದ ಫಲವು ಭಕ್ತಮಹಾಜನಗಳಿಗೆ ಸಲ್ಲಬೇಕೆಂದೂ ಇಚ್ಛೆ ಮಾಡಿದ ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಅಪ್ಪಣೆ

ಕೊಡಿಸಲಾಗಿ ಎಷ್ಟೋ ಮಹಾಜನಗಳು ಭಕ್ತಿಪುರಸ್ಸರವಾಗಿ ಶ್ರೀ ಕರ್ತೃ ಗುರು ಸಿದ್ಧೇಶ್ವರ ಪೂಜಾ ವಿನಿಯೋಗಕ್ಕಾಗಿ ಪ್ರತಿಯೊಬ್ಬರೂ ೧೧೧೧ ರೂಪಾಯಿ ನೀಡಿ ಸೇವಾ ಸಮಿತಿಗೆ ಸದಸ್ಯರಾಗಿದ್ದಾರೆ. ಈ ರೀತಿ ಕಾಣಿಕೆ ಸಲ್ಲಿಸಿದವರ ಸಂಖ್ಯೆ ೪೫೦ ಕ್ಕೂ ಮಿಕ್ಕಿದೆ. ಭಕ್ತಿವಂತ ಜನರು ಹಾಗೆಯೇ ಭಕ್ತಿಯಿಂದ ಇನ್ನೂ ನೀಡುತ್ತಲೇ ಇದ್ದಾರೆ. ಸದಸ್ಯರ ಸಂಖ್ಯೆ ಬೆಳೆಯುತ್ತಲೇ ಇದೆ. ಈ ನಿಧಿಯನ್ನು 'ಶಾಶ್ವತ ವಿಶ್ವಸ್ಥ ನಿಧಿ' 'ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸಮಿತಿ'ಯ ಹೆಸರಿನಲ್ಲಿ ಬ್ಯಾಂಕಿನಲ್ಲಿಟ್ಟು, ಅದರ ಬಡ್ಡಿಯಿಂದ ನಿರಂತರವಾಗಿ ವ್ಯವಸ್ಥಿತ ಪೂಜೆ ಗೈಯುವಂತೆ ಮಾಡಿದ್ದಾರೆ. ಪೂಜಾ ಸೇವಾ ಸಮಿತಿ ಸ್ಥಾಪಿಸುವ ಸಮಯ ದಲ್ಲಿಯೇ ನಗರದಲ್ಲಿ ಗುರುಸಿದ್ಧೇಶ್ವರರ ಹೆಸರಿನಲ್ಲಿ ಸಹಕಾರಿ ಬ್ಯಾಂಕನ್ನು ಸ್ಥಾಪಿಸ ಬೇಕೆಂಬುವ ವಿಚಾರವನ್ನೂ ಸಹ ಶ್ರೀ ಜಗದ್ಗುರುಗಳು ಮಂಡಿಸಿದ್ದು ಸಂಸ್ಮರಣೀಯ. ಈ ಉದ್ದೇಶ ಸಾಧನೆ ಹೊರತುಪಡಿಸಿ ಬೇರೆ ಕಾರಣಕ್ಕಾಗಿ ವಿನಿ ಯೋಗ ಮಾಡತಕ್ಕದ್ದಲ್ಲ ಎಂದು ಸಮಿತಿಯ ಅಧ್ಯಕ್ಷರಾದ ಶ್ರೀ ಜಗದ್ಗುರುಗಳ ಹಾಗೂ ಚೇರ್‌ಮನ್ನರ ಜಾಯಿಂಟ್ ಖಾತೆ ಇಡಿಸಿ, ಚಿರಸ್ಥಾಯಿಯಾಗಿ ಮಾಡಿ ದ್ದಾರೆ. ೧೫ ಜನರುಳ್ಳ ಕಾರ್ಯಕಾರಿ ಸಮಿತಿಯೊಂದನ್ನು ರಚಿಸಿ, ಅದರ ಮುಖಾಂತರ ಧರ್ಮಕಾರ್ಯ ನಡೆಯುವಂತೆ ಮಾಡಿದ್ದಾರೆ. ಈಗಾಗಲೇ ೫ ಲಕ್ಷದವರೆಗೆ ಕೂಡಿದ ಬಡ್ಡಿಯ ಹಣದಿಂದಲೇ ಪೂಜಾನುಷ್ಠಾನ, ಪ್ರಸಾದಗಳು ಒಳ್ಳೇ ವೈಭವದಿಂದ ದಿನನಿತ್ಯ ಜರುಗುತ್ತಿವೆ. ಪ್ರತಿಯೊಂದು ವಿಷಯದಲ್ಲಿಯೂ ಶ್ರೀ ಜಗದ್ಗುರುಗಳ ಮುಂಧೋರಣೆ ಮೆಚ್ಚುವಂತಹದು. ಇವರ ಅನುಕರಣೆ ಯನ್ನು ಬೇರೆ ಮಠಾಧೀಶರು, ಇನ್ನುಳಿದ ದೇವಾಲಯ, ಮಂದಿರದವರು ಸಹ ವಿಶ್ವಸ್ಥ ನಿಧಿ ಸಂಗ್ರಹ ಮಾಡುತ್ತಲಿರುವದು ಸಂತಸದ ವಿಷಯ. ಪೂಜಾ ಸೇವಾ ಸಮಿತಿಗಾಗಿ ಶ್ರೀ ಎಸ್. ಪಿ. ಹೊಂಬಳ ಡಾಕ್ಟರರು ಹಗಲಿರುಳು ನಿಷ್ಠೆಯಿಂದ ದುಡಿದು ಕೃತಾರ್ಥರಾಗಿದ್ದಾರೆ. ಅದರ ವ್ಯವಸ್ಥೆಯನ್ನು ಚೇರಮನ್ನರಾದ ಶ್ರೀ ಎಸ್. ಎಸ್. ಕಮಡೊಳ್ಳಿಶೆಟ್ರು ಸಹ ನಿಷ್ಠೆಯಿಂದ ದುಡಿದು ಪೂಜಾ ಸೇವಾ ಸಮಿತಿಯನ್ನು ಪ್ರಗತಿಯತ್ತ ಒಯ್ಯುತ್ತಿದ್ದಾರೆ. ಈ ಸಮಿತಿಗೆ ಪ್ರತ್ಯೇಕ ಸಿಬ್ಬಂದಿ ಯಿದೆ. ನಿರಂತರ ದುಡಿದು ಹಣ್ಣಾದ ಜೀವಕ್ಕೆ ಗುರುಸಿದ್ಧೇಶ್ವರನ ಪೂಜೆ ಮನಸ್ಸಿಗೆ ಶಾಂತಿ–ಸಮಾಧಾನವನ್ನು ನೀಡುತ್ತಲಿದೆ.

'ವೀರಶೈವ ಧರ್ಮದ ತಳಹದಿಯಾದ ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರ ತತ್ತ್ವಗಳಿಗೆ ಚ್ಯುತಿಬಾರದಂತೆ 'ಘನತೆ–ಗೌರವ' ಕಾಯ್ದುಕೊಂಡು ಹೋಗುವ ಉದಾತ್ತ ವಿಚಾರದಿಂದಲೂ, ಸರ್ವ ಧರ್ಮದವರಿಗೆ ಧರ್ಮದ ಆಚಾರ ವಿಚಾರಗಳು ಹೆಚ್ಚೆಚ್ಚಾಗಿ ಬೆಳೆದುಬರಬೇಕೆಂಬ ಸದಿಚ್ಛೆಯಿಂದಲೂ ಮತ್ತು ಐಹಿಕ ಭೋಗಗಳ ಕಡೆಗೆ ರಭಸದಿಂದ ಓಡುತ್ತಿರುವ ಜನತೆಯನ್ನು ಆಧ್ಯಾತ್ಮದ ಕಡೆಗೆ

ಹೊರಳಿಸುವ ಘನ ಸಾಹಸದಿಂದಲೂ ಈ ಯೋಜನೆಯನ್ನು ಸ್ಥಾಪಿಸಲಾಗಿದೆ' ಎಂದು ಶ್ರೀ ಜಗದ್ಗುರುಗಳು ತಿಳಿಸುತ್ತಾರೆ. ಸದಸ್ಯರ ಹೆಸರುಗಳು– ಸರ್ವಶ್ರೀ ೧. ಎಸ್. ಎಸ್. ಕಮಡೊಳ್ಳಿಶೆಟ್ಟರು– (ಚೇರಮನ್) ೨. ಎಸ್. ಜಿ. ಕವಳಿ, ೩. ವಿದ್ಯಾಧರ ಹುಲ್ಮನಿ, ೪. ಗಂಗಣ್ಣ ಬತ್ತಿ, ೫. ರಾಚಪ್ಪನವರು ನೀಲಿ, ೬. ಡಾ॥ ಎಸ್. ಪಿ. ಹೊಂಬಳ, ೭. ಪಿ. ಸಿ. ಬೆಂಡಿಗೇರಿ, ೮. ಎಸ್. ಪಿ. ಪಾಟೀಲ (ಬಿಡನಾಳ), ೯. ಸಿ. ಎಸ್. ಹಿರೇಮಠ ೧೦. ಎಂ. ಬಿ. ಹೊಸಮನಿ, ೧೧. ಸಿ. ಸಿ. ಎಮ್ಮೆಟ್ಟಿ ಹಿರೇಮಠ, ೧೨. ಗುರಪ್ಪನವರು ಬಳ್ಳೊಳ್ಳಿ.

## ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯ

ಇದೊಂದು ಶ್ರೀ ಜಗದ್ಗುರುಗಳವರ ವಿನೂತನ ಉಪಕ್ರಮ. ಪರಂಪರೆಯಿಂದ ಬಂದ ಕೀರ್ತನವು ಸಾಮಾಜಿಕ ಕಥಾನಕದೊಂದಿಗೆ ಧಾರ್ಮಿಕ ನಿಷ್ಠೆ ಬೆಳೆಸುವ ಒಂದು ಸುಂದರ ಜಾನಪದ ಕಲೆ, ಜೊತೆಗೆ ಶೈಕ್ಷಣಿಕ ವೃತ್ತಿ ಮಾಧ್ಯಮವೂ ಹೌದು. ಇದನ್ನು ಮನಗಂಡ ಜಗದ್ಗುರುಗಳು ಮೊದಲು ಕೀರ್ತನಾಚಾರ್ಯ ಪಂ॥ ಹರಿಸರ್ವೋತ್ತಮಾಚಾರ್ಯರನ್ನು ಪ್ರಾಚಾರ್ಯ ಪೀಠದಲ್ಲಿ ಅಣಿಗೊಳಿಸಿ, ಇದನ್ನು ಪ್ರಾರಂಭಿಸಿದರು. ಇಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ಶಾಸ್ತ್ರೀಯ ಸಂಗೀತವನ್ನು ನುರಿತ ಸಂಗೀತ ವಿದ್ವಾಂಸರಾದ ಶ್ರೀ ಬಸಪ್ಪ ಗವಾಯಿಗಳಿಂದ ಕಲಿಸಲಾಗುತ್ತಿತ್ತು. ಶ್ರೀ ಬಸಪ್ಪ ಗವಾಯಿಗಳು ಈಗ ಶಿವಾಧೀನರಾಗಿದ್ದಾರೆ. ಇಂದು ಶ್ರೀಮಠದ ಖರ್ಚಿನಿಂದ ಸಂಪೂರ್ಣ ಉಚಿತ ಶಿಕ್ಷಣ, ವಿಶೇಷ ಸಂಗತಿಯೆಂದರೆ ಇಲ್ಲಿ ಓದಿದ ಅನೇಕ ಮಹಿಳಾ ಕೀರ್ತನಕಾರ್ತಿಯರೂ ಹಾಗೂ ಕೀರ್ತನಕಾರರೂ ಈಗ ನಾಡಿನಲ್ಲಿ ಹೆಸರುವಾಸಿಯಾಗಿದ್ದಾರೆ. ನಾಡಿನ ಅನೇಕ ನಗರ, ಹಳ್ಳಿಗಳಲ್ಲಿ ಕೀರ್ತನ ಮಾಡಿ, ಧರ್ಮ ಪ್ರಚಾರ ಮಾಡುತ್ತಿದ್ದಾರೆ. ಕೀರ್ತನ ಕಲೆಗೆ ಅನುಕೂಲವಾಗುವಂತಹ ಪುಸ್ತಕಗಳನ್ನು ಶ್ರೀಮಠದಿಂದ ಜಗದ್ಗುರುಗಳು ಬರೆಯಿಸಿದ್ದಾರೆ. ಈ ಕಿರ್ತನ ಕಾಲೇಜಿಗಾಗಿ ಸರಕಾರದ ಯಾವ ಧನಸಹಾಯ ವಿರದೇ ಇರುವದರಿಂದ ಇದಕ್ಕಾಗಿ ೫ ಲಕ್ಷ ರೂಪಾಯಿಯ ನಿಧಿಸಂಗ್ರಹ ಮಾಡಿ ಬ್ಯಾಂಕಿನಲ್ಲಿಟ್ಟು, ಅದರ ಬಡ್ಡಿಯಿಂದ ನಡೆಸುವ ಯೋಚನೆಯಲ್ಲಿದ್ದಾರೆ. ಈಗಾಗಲೇ ಅಜಮಾಸು ೨ ಲಕ್ಷ ರೂಪಾಯಿ ಆಸ್ತಿಯ ಮನೆಯನ್ನು ಶ್ರೀಮಠದ ಹುಬ್ಬಳ್ಳಿಯ ಭಕ್ತಳಾದ ಶ್ರೀಮತಿ ಗುರುಸಿದ್ಧವ್ವ ಮಾನ್ವಿ ಅವರು ಶ್ರೀಮಠಕ್ಕೆ ಕೊಟ್ಟಿದ್ದು ಇದ್ದು, ಅದನ್ನು ಇದಕ್ಕೆ ಉಪಯೋಗಿಸಬೇಕೆಂಬುವ ವಿಚಾರದಲ್ಲಿಯೂ ಇದ್ದಾರೆಂಬುದು ತಿಳಿದುಬಂದಿದೆ. ಒಟ್ಟಿನಲ್ಲಿ ಶ್ರೀ ಜಗದ್ಗುರುಗಳು ಯಾವದೇ ಸಂಘ–ಸಂಸ್ಥೆ ಸ್ಥಾಪಿಸಲಿ ಅದಕ್ಕೆ ಆರ್ಥಿಕ ಭದ್ರತೆಯ ಬುನಾದಿ ಹಾಕದೇ ಬಿಡಲಾರರು. ಶ್ರೀ ಜಗದ್ಗುರುಗಳ ಮುಂಧೋರಣೆ ಸ್ತುತ್ಯಾರ್ಹವಾದುದು. ಯಾವ ಜಗದ್ಗುರುಗಳೂ ಮಾಡದ ಕಾರ್ಯದ ಭದ್ರತೆ ಮಾಡುತ್ತಲಿದ್ದಾರೆ. ಅವರಿಗೆ

ಮಾರ್ಗದರ್ಶಕರಾಗಿದ್ದಾರೆ. ಈ ಕೀರ್ತನ ಕಾಲೇಜಿಗೆ ಪ್ರತ್ಯೇಕ ಆಫೀಸು ಸಹ ಮಾಡಿದ್ದಾರೆ. ಈ ಕಾಲೇಜಿನ ಬಗ್ಗೆ ಇನ್ನೂ ಸಾಕಷ್ಟು ತೃಪ್ತಿಯಿಲ್ಲವೆನ್ನುತ್ತಾರೆ ಹರಿಸರ್ವೋತ್ತಮಾಚಾರ್ಯರು. ಬಸಪ್ಪ ಗವಾಯಿಗಳು ತೀರಿಹೋದಮೇಲೆ ಒಳ್ಳೆಯ ಕೀರ್ತನಾಚಾರ್ಯರು ದೊರೆಯದ್ದಕ್ಕೆ ವ್ಯಸನವಾಗಿದೆ. ಕೀರ್ತನ ಕಾಲೇಜ ದಲ್ಲಿಯೇ ಅಧ್ಯಯನ ಮಾಡಿದ ಶ್ರೀಮತಿ ವಿಜಯಲಕ್ಷ್ಮಿ ಲೂತಿಮಠ ಅವರು ಈ ಮೊದಲು ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಇಲ್ಲಿಯೇ ತಯಾರಾದ ಪಂ. ಪ್ರಮಥನಾಥಶಾಸ್ತ್ರಿಗಳು, ಮಹಾಂತೇಶಶಾಸ್ತ್ರಿಗಳು ಲಕ್ಕುಂಡಿ, ಶ್ರೀಮತಿ ಸರ್ವಮಂಗಳಾ ಬಾಲೇಹೊಸೂರು ಅವರಿಂದ ಸಾವಧಾನವಾಗಿ ಕಾರ್ಯ ನಡೆದಿದೆ. ಇದಕ್ಕಾಗಿ ಪ್ರತ್ಯೇಕ ಪರೀಕ್ಷೆಗಳನ್ನು ಮಾಡಿ, ಪಠ್ಯಪುಸ್ತಕಗಳನ್ನು ಬರೆಯಿಸಿ, ಯೋಗ್ಯ ರೀತಿಯಲ್ಲಿ ಕಾರ್ಯಕಲಾಪಗಳನ್ನು ಮಾಡುವ ಇಚ್ಛೆಯನ್ನು ಇಟ್ಟು ಕೊಂಡಿದ್ದಾರೆ. ಉತ್ತೀರ್ಣರಾದವರಿಗೆ ವಾರ್ಷಿಕ ದಿನಾಚರಣೆಯಲ್ಲಿ ಪ್ರಮಾಣ ಪತ್ರ ನೀಡಲಾಗುತ್ತಿದೆ. ಇದಕ್ಕಾಗಿ ಡಾ|| ಎಸ್. ಬಿ. ಹೊಂಬಳ ಅವರು ಬಹಳ ಪರಿಶ್ರಮಿಸಿ ಬೆಳವಣಿಗೆಗೆ ಚಿಂತಿಸುತ್ತಾ ಕಾರ್ಯಗೈಯುತ್ತಲಿದ್ದಾರೆ.

ಈ ಕಾಲೇಜಿನ ಮುಖ್ಯ ಉದ್ದೇಶಗಳೆಂದರೆ:

೧) ಸನಾತನ ಹಿಂದೂ ಧರ್ಮದ ತಳಹದಿಯನ್ನು ಭದ್ರಪಡಿಸಿ, ಜನಾಂಗದಲ್ಲಿ ಐಕ್ಯಮತ್ಯವನ್ನು ಹುಟ್ಟಿಸಿ, ಪ್ರಕ್ಷುಬ್ಧವಾದ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸುವದು.

೨) ಈ ವಿದ್ಯಾಲಯದಲ್ಲಿ ಕೀರ್ತನ, ಪುರಾಣ, ಪ್ರವಚನ, ಭಾಷಣ ಮಾಡಲು ಶಾಸ್ತ್ರೋಕ್ತವಾಗಿ ಕಲಿಸಲಾಗುತ್ತದೆ.

೩) ಗಂಡು ಮತ್ತು ಹೆಣ್ಣುಮಕ್ಕಳಿಗೂ ಪ್ರವೇಶವುಂಟು.

೪) ಧಾರ್ಮಿಕ ಮತ್ತು ನೈತಿಕ ವಿಷಯಗಳನ್ನೇ ಬಹು ಮುಖ್ಯವಾಗಿ ಶಿಕ್ಷಣದಲ್ಲಿ ಅಳವಡಿಸಲಾಗಿದೆ.

೫) ಸರ್ವಧರ್ಮದ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೂ ವಯೋಮಿತಿ ನಿರ್ಬಂಧವಿಲ್ಲದೇ S. S. L. C. ವರೆಗೆ ಓದಿದವರಿಗೆ ಪ್ರವೇಶ ನೀಡ ಲಾಗುವದು.

೬) ಧನವಂತರೂ, ಕೀರ್ತನ–ಪುರಾಣ–ಪ್ರವಚನದಲ್ಲಿ ಆಸ್ಥೆಯುಳ್ಳ ಮಹಾ ಜನಗಳು ಈ ಕೀರ್ತನ ಮಹಾವಿದ್ಯಾಲಯಕ್ಕೆ ಕೂಡುವ ನಿಧಿಯನ್ನು ಆತ್ಯಾದರದಿಂದ ಸ್ವೀಕರಿಸಿ, ಆ ಹಣದಿಂದ ಬಡ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡಲಾಗುತ್ತದೆ. ಶಿಕ್ಷಣವನ್ನು ಪುಕ್ಕಟೆಯಾಗಿ ಕೊಡ ಲಾಗುವದು.

೭) ಮರಾಠಿ, ಹಿಂದಿ, ಕನ್ನಡ, ಇಂಗ್ಲಿಷ ಭಾಷೆಗಳಲ್ಲಿ ಸಹ ತರಬೇತಿ ಕೊಡಲಾಗುವದು.

೮) ಬೇರೆ ಉದ್ಯೋಗದಲ್ಲಿರುವವರು, ಕಾಲೇಜು, ಹೈಸ್ಕೂಲುಗಳಲ್ಲಿ ಶಿಕ್ಷಣ ಪಡೆಯುತ್ತಿರುವವರು ಈ ಕಾಲೇಜಿನಲ್ಲಿ ಪ್ರವೇಶ ಬಯಸಿ ಶ್ರದ್ಧೆಯಿಂದ ಅಭ್ಯಾಸ ಮಾಡುವವರಿದ್ದರೆ ಅವರಿಗೂ ಕೀರ್ತನ ಕಲೆಯ ಶಿಕ್ಷಣ ನೀಡಲಾಗುವದು.

೯) ಎಸ್. ಎಸ್. ಎಲ್. ಸಿ. ಪರೀಕ್ಷೆ ಮತ್ತು ಅದರ ಮೇಲ್ಪಟ್ಟ ಬಿ. ಎ. ಮುಂತಾದ ಡಿಗ್ರಿ ಪದವೀಧರರಿಗೆ ಪ್ರವೇಶ ದೊರೆಯುವದು. ಸಂಗೀತಬಲ್ಲ, ವಾದ್ಯಗಳನ್ನು ನುಡಿಸಬಲ್ಲ, ಸಂಸ್ಕೃತ, ಸುಸ್ವರವುಳ್ಳ (ಮಧುರಕಂಠವುಳ್ಳ) ವಿದ್ಯಾರ್ಥಿಗಳಿಗೆ ಪ್ರವೇಶವು ಸುಲಭವಾಗಿ ದೊರೆಯುವದು.

ಈ ಕಾಲೇಜು ಸಹ ಪಬ್ಲಿಕ್ ಟ್ರಸ್ಟ ಆ್ಯಕ್ಟ ಪ್ರಕಾರ ರಜಿಸ್ಟರ ಮಾಡಲ್ಪಟ್ಟಿದೆ.

## ವೀರಶೈವ ಸಂಘಟನಾ ಸಮಿತಿಗೆ ಪ್ರಾಣಪ್ರತಿಷ್ಠಾನ

ಮೂರುಸಾವಿರಮಠದ ಶ್ರೀ ಜಗದ್ಗುರುಗಳು ತಮಗೆ ವಿಶಾಲವಾದ ಧರ್ಮ ಸಮನ್ವಯ ದೃಷ್ಟಿಯಿದ್ದರೂ ಅವರವರು ಸ್ವಧರ್ಮ ನಿಷ್ಠೆಗಾಗಿ ತಮ್ಮ ತಮ್ಮ ಧರ್ಮದಂತೆ ನಡೆದು, ಸಂಘಟಿತರಾಗಿ ಜೀವನದಲ್ಲಿ ಶಾಂತಿ–ಸೌಹಾರ್ದತೆಯನ್ನು ಮೂಡಿಸಿಕೊಳ್ಳಬೇಕೆಂಬ ಅಪೇಕ್ಷೆಯನ್ನಿಟ್ಟುಕೊಂಡು, ಶ್ರೀಮಠದ ಆವರಣದಲ್ಲಿ ವೀರಶೈವ ಸಂಘಟನಾ ಸಮಿತಿಯನ್ನು ಸ್ಥಾಪಿಸಲು ಪ್ರೇರಣೆ ನೀಡಿದರು. 'ಸಂಘೇ ಶಕ್ತಿಃ ಕಲಿಯುಗೇ' ಎಂಬಂತೆ ಸಂಘಟನೆಯಿಂದ ಏನೆಲ್ಲವನ್ನೂ ಸಾಧಿಸಬಹುದು. ಭಾವೈಕ್ಯ ವಿಕಾಸಕ್ಕೆ ಅದು ಭದ್ರ ಬುನಾದಿ. ಯಾವುದೋ ಕಾರಣದಿಂದ ದೂರ ಸರಿದ ಜನರು ಒಂದುಗೂಡಿ, ಪರಸ್ಪರ ಸಹಕರಿಸಿ, ತಮ್ಮ ತಮ್ಮ ಧರ್ಮದ ಬೆಳವಣಿಗೆ ಇನ್ನೂ ಹೆಚ್ಚು ತ್ವರಿತಗತಿಯಲ್ಲಿ ಮಾಡಿಕೊಳ್ಳಲು ಸಹಾಯ ದೊರೆಯುವದು. ಹುಬ್ಬಳ್ಳಿಯಲ್ಲಿಯ ವೀರಶೈವ ಸಂಘಟನಾ ಸಮಿತಿಗೆ ಒಂದು ಕಮಿಟಿ ರಚಿಸಿ, ಅದರ ಮುಖಾಂತರ ಎಲ್ಲ ಧಾರ್ಮಿಕ ಕಾರ್ಯಕಲಾಪಗಳು ನಡೆಯುವಂತೆ ಏರ್ಪಾಡು ಮಾಡಿದ್ದಾರೆ. ಈ ಸಮಿತಿ ರಚನೆಗಾಗಿ ಮೊಟ್ಟಮೊದಲು ಹತ್ತು ವರ್ಷಗಳ ಹಿಂದೆ ಶ್ರೀ ಜಿ. ಎಸ್. ಉಮದಿಯವರೊಡನೆ ವಿಚಾರಿಸಿದರು. ಇದರ ವತಿಯಿಂದ ಪ್ರತಿವರ್ಷವೂ ಬಸವೇಶ್ವರ ಜಯಂತಿ ಉತ್ಸವವನ್ನು ಸಾರ್ವಜನಿಕವಾಗಿ ವೈಭವದಿಂದ ಮಾಡುವರಲ್ಲದೇ ಆಗಾಗ ವಿದ್ವನ್ಮಣಿಗಳನ್ನು, ಸಾಹಿತಿಗಳನ್ನು, ಕಲಾವಿದರನ್ನು ಕರೆಯಿಸಿ ಸಭೆಗಳನ್ನು ಮಠದ ಆವರಣದಲ್ಲಿ ಏರ್ಪಡಿಸಿ ವೀರಶೈವ ಸಾಹಿತ್ಯದ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ. ನಾಡಿನ

ಸಾಮಾಜಿಕ ಕಾರ್ಯಕರ್ತರನ್ನೂ ಸನ್ಮಾನಿಸಿ ಪ್ರೋತ್ಸಾಹಿಸಿದ್ದಾರೆ. ನಾಡಿನ ವೀರಶೈವ ಧರ್ಮದ ಬೆಳವಣಿಗೆಯ ದೃಷ್ಟಿಯಿಂದ ಹುಬ್ಬಳ್ಳಿಯ ಈ 'ವೀರಶೈವ ಸಂಘಟನಾ ಸಮಿತಿ' ವೈಶಿಷ್ಟ್ಯಪೂರ್ಣವಾಗಿದೆ. ಇದಕ್ಕಾಗಿ ಮೊದಲಿಗೆ ಶ್ರೀ ಜಿ. ಸಿ. ಬತ್ತುಲಿ ನಂತರ ಶ್ರೀ ಎಸ್. ಜಿ. ಕವಳಿಯವರು ಚೇರ್‌ಮನ್‌ರಾಗಿಯೂ, ಶ್ರೀ ವ್ಹಿ. ವ್ಹಿ. ಶಿರಹಟ್ಟಿಮಠ ಮತ್ತು 'ಪ್ರಜಾಜ್ಯೋತಿ' ಸಂಪಾದಕರಾದ ಶ್ರೀ ಜಿ. ಎಸ್. ಉಮದಿ ಅವರು ಪ್ರಧಾನ ಕಾರ್ಯದರ್ಶಿಗಳಾಗಿಯೂ ಸೇವೆ ಸಲ್ಲಿಸಿ, ಇದರ ಪ್ರಗತಿಗೆ ಕಾರಣರಾಗಿದ್ದಾರೆ. ಶ್ರೀ ಎಸ್. ಜಿ. ಕವಳಿಯವರು ವಿಶೇಷವಾಗಿ ಇದರ ಬೆಳವಣಿಗೆಗೆ ಸಹಾಯ-ಸಹಕಾರ ನೀಡಿ ಆದರ್ಶದತ್ತ ಒಯ್ದಿದ್ದಾರೆ. ಶ್ರೀ ಎಸ್. ಜಿ. ಕವಳಿಯವರ ನಂತರ ಶ್ರೀ ವ್ಹಿ. ಬಿ. ಡಂಗನವರ ವಕೀಲರು ಚೇರಮನ್ನರಾಗಿ ಸೇವೆ ಸಲ್ಲಿಸಿ ಪ್ರಗತಿಯತ್ತ ಒಯ್ಯುತ್ತಿದ್ದಾರೆ. ಇದಕ್ಕಾಗಿ ಶ್ರೀ ಜಗದ್ಗುರುಗಳು ಪ್ರತ್ಯೇಕ ಕಟ್ಟಡ ಕಟ್ಟಿಕೊಳ್ಳುವದಕ್ಕಾಗಿ ಶ್ರೀಮಠದ ಆವರಣದಲ್ಲಿಯೇ ಜಾಗೆಯನ್ನು ನೀಡಿದ್ದು, ಆ ಜಾಗೆಯಲ್ಲಿ ಶ್ರೀ ಎಸ್. ಜಿ. ಕವಳಿ ಹಾಗೂ ಇನ್ನುಳಿದ ಸಿಬ್ಬಂದಿಯವರು ಹೆಚ್ಚಿನ ಪರಿಶ್ರಮ ಪೂರ್ವಕ ಕಾಳಜಿ ವಹಿಸಿ ವೀರಶೈವ ಸಂಘಟನಾ ಸಮಿತಿಯ 'ಭವನವನ್ನು' ಅರ್ಧ ಮಾಡಿದ್ದನ್ನು ಕಾಲಕ್ಕೆ ತಕ್ಕಂತೆ ಅಧಿಕಾರ ವಹಿಸಿಕೊಂಡ ಶ್ರೀ ವ್ಹಿ. ಬಿ. ಡಂಗನವರ ತಮ್ಮ ಸಹಾಯ ಹಾಗೂ ಇನ್ನುಳಿದ ಭಕ್ತರ ಸಹಾಯದಿಂದ ಶ್ರೀಮಠದ ಆವರಣ ದಲ್ಲಿ ಆ ಅರ್ಧವಾದ ಭವನವನ್ನು ಪರಿಶ್ರಮವಹಿಸಿ ದುಡಿದು ಮುಗಿಸಿದ್ದಾರೆ. ಸಮಿತಿಯ ವ್ಯವಹಾರಗಳೂ ಇದೀಗ ಅಲ್ಲಿಯೇ ಸುವ್ಯವಸ್ಥಿತ ರೀತಿಯಲ್ಲಿ ನಡೆದಿವೆ. ಈ ಭವನದ ಕಟ್ಟಡಕ್ಕಾಗಿ ಹುಬ್ಬಳ್ಳಿಯ ಶ್ರೀ ಎಂ. ಬಿ. ಸಾಲಿಮಠ ಹಾಗೂ ಶ್ರೀ ಸಿಂಧಗಿ ಅವರು ವಿಶೇಷ ಆಸ್ಥೆವಹಿಸಿ ಬಹು ಪರಿಶ್ರಮಿಸಿದ್ದಾರೆ. ಈ ಸಮಿತಿಯ ಕಾರ್ಯಕಾರಿ ಮಂಡಳದಲ್ಲಿ ಈ ಜನರು ಸಕ್ರಿಯ ಕಾರ್ಯಕರ್ತರಾಗಿ ವೀರಶೈವ ಸಂಘಟನೆಗಾಗಿ ನಿರಂತರ ಪರಿಶ್ರಮಿಸುತ್ತಿದ್ದಾರೆ.

ಚೇರ್‌ಮನ್‌ರಾಗಿ ಶ್ರೀ ವ್ಹಿ. ಬಿ. ಡಂಗನವರು, ಪ್ರಧಾನ ಕಾರ್ಯದರ್ಶಿ ಗಳಾಗಿ ಶ್ರೀ ಜಿ. ಎಸ್. ಉಮದಿ, ಡಾ|| ದೀನಬಂಧು ಹಳ್ಳಿಕೇರಿ, ಜಿ. ಜಿ. ಕಮ್ಮಾರ, ವ್ಹಿ. ಬಿ. ಸುಳ್ಳದ ಮುಂತಾದವರು ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿ ದ್ದಾರೆ, ಸಲ್ಲಿಸುತ್ತಿದ್ದಾರೆ. ಈ ಸಂಘಟನಾ ಸಮಿತಿಯಿಂದ ವೀರಶೈವರ ಸಂಘಟನೆ ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆದು, ನಾಡಿಗೇ ಆದರ್ಶವಾಗಲೆಂಬ ಶ್ರೀ ಜಗದ್ಗುರುಗಳ ಬಲವಾದ ಮನೀಷೆ ಎಂದು ಈಡೇರುವದೋ ಕಾದುನೋಡಬೇಕಾಗಿದೆ. ಈ ಸಂಘಟನಾ ಸಮಿತಿಯಿಂದ ವೀರಶೈವರ ಭಾವೈಕ್ಯಕ್ಕೆ ದಾರಿದೀಪವಾಗಲಿ, ಅಂತಃ ಕರಣದ ಚಿಲುಮೆ ಚಿಮ್ಮಲೆಂದು ಗುರುಸಿದ್ಧೇಶ್ವರರಲ್ಲಿ ಪ್ರಾರ್ಥನೆ.

## 'ಸೇಲಂ'ದಲ್ಲಿ "ಶಾಖಾ ಮೂರುಸಾವಿರಮಠ" ಸ್ಥಾಪನೆ

ಶ್ರೀ ಜಗದ್ಗುರುಗಳು ಕರ್ನಾಟಕ ರಾಜ್ಯದಲ್ಲಿ ಅಷ್ಟೇ ಅಲ್ಲ, ಭಾರತದ ಬೇರೆ ರಾಜ್ಯಗಳಿಗೂ ಹೋಗಿ, ಅಲ್ಲಿಯೂ ಧರ್ಮಪ್ರಚಾರಗೈದು ಬಂದಿದ್ದಾರೆ. ೧೯೭೭ ನೇ ಇಸ್ವಿಯಲ್ಲಿ ಶ್ರೀ ಜಗದ್ಗುರುಗಳು, ಇಲಕಲ್ಲಿನ ಮಹಾಂತಸ್ವಾಮಿಗಳು, ಡಾ|| ಕೆಳದಿ ಪಟ್ಟಾಧ್ಯಕ್ಷರು, ಚಿಂಚಣಿ ಸಿದ್ಧಪ್ರಭುಸ್ವಾಮಿಗಳು ಮುಂತಾದವರನ್ನು ಕರೆದುಕೊಂಡು ದಕ್ಷಿಣ ಭಾರತದಲ್ಲಿ ತಮಿಳುನಾಡಿಗೆ ಧರ್ಮಪ್ರಚಾರಕ್ಕಾಗಿ ದಯಮಾಡಿಸಿದ್ದರು. ತಮಿಳು ಭಾಷೆಯಲ್ಲಿ ಅನುವಾದ ಮಾಡಿ ಕೀರ್ತನೆ ಹೇಳಲು ಪಂ|| ಬಸವಕುಮಾರ ಶಾಸ್ತ್ರಿಗಳು, ಕುಂದರ್ಗಿಮಠ ಧಾರವಾಡ ಅವರನ್ನು ಜೊತೆಗೆ ಕರೆದುಕೊಂಡು ಹೋಗಿದ್ದರು. ಸೇಲಂ, ಭವಾನಿ, ತ್ರಿಚನಾಪಳ್ಳಿ, ಕುಂಭಕೋಣಂ ಮುಂತಾದ ದಕ್ಷಿಣ ಭಾರತದ ಊರುಗಳಲ್ಲಿ ಶ್ರೀ ಜಗದ್ಗುರುಗಳ ಪ್ರವಾಸಕ್ಕೆ ಅದ್ಭುತ ಸ್ವಾಗತ ದೊರೆಯಿತು. ಹೋದಲ್ಲೆಲ್ಲ ಶ್ರೀಮಠದ ಧರ್ಮಪ್ರಚಾರಕ ಮಂಡಳದ ಖರ್ಚಿನಿಂದ ಡಾ|| ಕೆಳದಿ ಪಟ್ಟಾಧ್ಯಕ್ಷರಿಂದ ತಮಿಳ್ನಾಡಿನಲ್ಲಿ ಒಟ್ಟು ಮೂರುಸಾವಿರ ಜನರಿಗೆ ಲಿಂಗಧಾರಣೆಯಾಯಿತು. ಶರಣಸಿದ್ಧಾಂತದ ಪ್ರವಚನವನ್ನು ತಮಿಳಿನಲ್ಲಿ ಭಾಷಾಂತರಿಸಿ ಹೇಳಿದುದರಿಂದ ಅಲ್ಲಿಯ ಜನರ ಮೇಲೆ ಬಹಳೇ ಪರಿಣಾಮ ಉಂಟಾಯಿತು. ಅಲ್ಲಿನ ಜನರ ವೀರಶೈವ ಧರ್ಮದ ಬಗೆಗಿನ, ಶ್ರೀ ಜಗದ್ಗುರುಗಳ ಹಾಗೂ ಶ್ರೀಗಳ ಬಗೆಗಿನ ಆನಂದವನ್ನು ನೋಡಿದಾಗ ಅದನ್ನು ಬರೆಯಲುಸದಳ. ಬರೆಯಲೇಬೇಕೆಂದರೂ ಸಾವಿರಾರು ಪುಟಗಳ ಹೊತ್ತಿಗೆಗಳಲ್ಲೂ ಮುಗಿಯಲಿಕ್ಕಿಲ್ಲ! ಆ ಭಾಗದ ತಮಿಳಿನ ಎಲ್ಲ ವೀರಶೈವ ಶ್ರೀಗಳನ್ನೂ ಜೊತೆಗೆ ಕರೆದುಕೊಂಡು ಪೂರ್ವನಿಯೋಜಿತವಾಗಿ ಕಾರ್ಯಕ್ರಮ ಮಾಡಲಾಗುತ್ತಿತ್ತು. ತಮಿಳ್ನಾಡಿನ ಎಲ್ಲ ಸಮಾರಂಭಗಳೂ ವೈಶಿಷ್ಟ್ಯಪೂರ್ಣವಾಗಿದ್ದವು. ನಾಲ್ಕೂ ಊರುಗಳಲ್ಲಿ ಸನ್ಮಾನ ಪತ್ರಗಳನ್ನು ತಮಿಳಿನಲ್ಲಿ ಮುದ್ರಿಸಿ ಸಮರ್ಪಿಸಿದರು. ಸಹಸ್ರಾರು ಜನರಿಗೆ ಶಾಸ್ತ್ರೋಕ್ತವಾಗಿ ಕೆಳದಿ ಶಿವಾಚಾರ್ಯರಿಂದ ಮಲೇಶಿಯಾ, ಸಿಂಗಪೂರ್, ಲಂಕಾದಿಂದ ಬಂದವರಿಗೆ ಲಿಂಗಧಾರಣ ಮಾಡಿಸಲಾಯ್ತು. ಲಿಂಗ ಪೂಜೆ ಬಗ್ಗೆ, ಲಿಂಗಪೂಜೆಯಿಂದಾಗುವ ಲಿಂಗಾಂಗ ಸಾಮರಸ್ಯದ ಬಗ್ಗೆ, ಮಾನಸಿಕ ಶಾಂತಿಯ ಬಗ್ಗೆ ತಿಳಿಸಲಾಯಿತು. ಸನ್ನಿಧಿಯವರ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳನ್ನು ನೋಡಿ, ಅಲ್ಲಿನ ನಿಷ್ಠಾವಂತ ಭಕ್ತರಲ್ಲೊಬ್ಬರಾದ ಶ್ರೀ ಎ. ಕಂದಸ್ವಾಮಿ ಅವರು 'ಸೇಲಂ'ದಲ್ಲಿ ಶಾಖಾ ಮೂರುಸಾವಿರಮಠವೊಂದನ್ನು ಸ್ಥಾಪಿಸಬೇಕು, ಅದರ ಮೂಲಕ ತಮಿಳುನಾಡಿನಲ್ಲಿ ವೀರಶೈವ ಸಿದ್ಧಾಂತದ ಸನಾತನದಿಂದ ಬಂದ ಒಳ್ಳೆಯ ಸಂಸ್ಕೃತಿಯನ್ನು ಪ್ರಚಾರ ಮಾಡಬೇಕೆಂಬ ತಮ್ಮ ಹಂಬಲವನ್ನು ಶ್ರೀ ಜಗದ್ಗುರುಗಳವರ ಮುಂದಿಟ್ಟರು. ಅದಕ್ಕೆ ಶ್ರೀ ಜಗದ್ಗುರುಗಳು ಆನಂದದಿಂದ ಒಪ್ಪಿಕೊಂಡರು. ಆ ಕೂಡಲೇ ತಮ್ಮದೇ ಆದ ಒಂದು ಕಟ್ಟಡವನ್ನು

ಶ್ರೀ ಎ. ಕಂದಸ್ವಾಮಿಯವರು ಸಿದ್ಧರ್‌ಕೊಯಲ್='ಸಿದ್ಧರ ಕೊಳ'ದಲ್ಲಿ ಕೊಟ್ಟಿರಲ್ಲದೇ ಅಲ್ಲಿ ಒಬ್ಬ ವೈದಿಕರಿದ್ದು ಅದರ ವ್ಯವಸ್ಥೆ ನೋಡಿಕೊಂಡು ಹೋಗುವ ಖರ್ಚು ಸಹ ಕೊಡುತ್ತೇನೆಂದು ವಾಗ್ದಾನ ಮಾಡಿದರು. ಅದೇ ಸ್ಥಾನವು ಶ್ರೀ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರ ಭಾವಚಿತ್ರದಿಂದ ಸಂಶೋಭಿತವಾಗಿ, ವೀರಶೈವ ಪರಂಪರೆಯ ಶಾಸ್ತ್ರೋಕ್ತ ಪೂಜಾ ಸಂಸ್ಕಾರಗಳು ನಡೆದು ಜನಮನವನ್ನು ಆಕರ್ಷಿಸುತ್ತಲಿವೆ. ಆಧ್ಯಾತ್ಮಿಕ ಹಿನ್ನೆಲೆಯ ಶಾಂತಿ– ಸಮಾಧಾನಗಳು ಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡುತ್ತಲಿವೆ.

ತಮಿಳು ದೇಶದಿಂದ ನೂರಾರು ಜನ ಸದ್ಭಕ್ತರು ಶ್ರೀ ಮೂರುಸಾವಿರ ಮಠಕ್ಕೆ ಆಗಾಗ್ಗೆ ಬಂದು, ದರ್ಶನಾಶೀರ್ವಾದ ಪಡೆದು ಧನ್ಯರಾಗುತ್ತಿದ್ದಾರೆ. ಒಮ್ಮೆ ಶ್ರೀ ಜಗದ್ಗುರುಗಳು ತಮಿಳ್ನಾಡಿನ ಅವರೆಲ್ಲರಿಗೂ ಶಾಲು ಹೊದಿಸಿ, ಫಲಪುಷ್ಪ ಮಂತ್ರಾಕ್ಷತೆಗಳನ್ನು ನೀಡಿ ಅದ್ದೂರಿಯಿಂದ ಹುಬ್ಬಳ್ಳಿ ಮೂರುಸಾವಿರಮಠದಲ್ಲಿ ಸತ್ಕಾರ ಮಾಡಿದರು.

### ಪರಿಶ್ರಮ ತಂದ ಪ್ರಸನ್ನ ಪ್ರಭೆ:

### ಘಟಪ್ರಭೆಯ ಕ್ಷಯರೋಗ ನಿವಾರಣೆ ಆಸ್ಪತ್ರೆ

ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳಿಂದ ಕಟ್ಟಿಸಲ್ಪಟ್ಟ, ಈಗಿನ ಜಗದ್ಗುರುಗಳಿಂದ ಶುಭಮುಹೂರ್ತದಲ್ಲಿ ಪ್ರಾರಂಭಿಸಲ್ಪಟ್ಟ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ಆವರಣದಲ್ಲಿ ಕ್ಷಯರೋಗ ನಿವಾರಣೆಯ ಆಸ್ಪತ್ರೆಯ ಕೊರತೆಯನ್ನು ಕಂಡು, ಇಂದಿನ ಜಗದ್ಗುರುಗಳು ಕ್ಷಯರೋಗ ಆಸ್ಪತ್ರೆಯನ್ನು ಪ್ರಾರಂಭಿಸಿ, ೧೫–೨೦ ಲಕ್ಷ ರೂಪಾಯಿ ಹಣ ಖರ್ಚುಮಾಡಿ ಬೃಹತ್ ಪ್ರಮಾಣದ ಕಟ್ಟಡವನ್ನು ಕಟ್ಟಿಸಿದರು. ಅಲ್ಲಿ ಚಿಕಿತ್ಸೆ ಆರಂಭಿಸಿದರು. ಆಗಿನ ಆರೋಗ್ಯ ಸಚಿವರಾದ ಶ್ರೀ ಸಿದ್ಧವೀರಪ್ಪನವರು ಆಸ್ಪತ್ರೆಯನ್ನು ಉದ್ಘಾಟನೆ ಮಾಡಿದರು. ಶ್ರೀ ಜಗದ್ಗುರುಗಳು ಅಲ್ಲಲ್ಲಿ ಪಾದಯಾತ್ರೆ ಮಾಡಿ ನಿಧಿ ಸಂಗ್ರಹಿಸಿದ್ದಾರೆ. ಅಲ್ಲದೇ ಅನೇಕ ಸಹಕಾರಿ ಬಂಧುಗಳ ವಿಪುಲ ಸಹಾಯ ದೊರೆತಿದೆ. ಸಹಕಾರಿ ತತ್ತ್ವದ ತಳಹದಿ ಮೇಲೆ ಭಾರತದಲ್ಲಿಯೇ ಪ್ರಪ್ರಥಮವಾಗಿ ಪ್ರಾರಂಭಗೊಂಡ ಈ ಆಸ್ಪತ್ರೆಯು ೨೫ ವರ್ಷಗಳ ಸಾಧನೆ ಸಿದ್ಧಿಯ ಹಾಗೂ ಸೌಲಭ್ಯದ ಪಕ್ಷಿನೋಟ ಇಂತಿದೆ.

೧) ಅರವತ್ತೈದು ಎಕರೆ ವಿಸ್ತೀರ್ಣ ಸ್ಥಳ.
೨) ಕ್ಷಯರೋಗಿಗಳಿಗಾಗಿ ಪ್ರತ್ಯೇಕ ಬೃಹತ್ಪ್ರಮಾಣದ ವಿಭಾಗದ ವ್ಯವಸ್ಥೆ.
೩) ಅಪ್ಪಣ್ಣಗೌಡರ ಹೆಸರಿನಲ್ಲಿ ರಕ್ತ ಭಾಂಡಾರ ವಿಭಾಗ.
೪) ಬಹು ಬೆಲೆಯ ಆಧುನಿಕ ವೈದ್ಯಕೀಯ ಉಪಕರಣಗಳ ವ್ಯವಸ್ಥೆ.

೫) ಲಾಪ್ರೋಸ್ಕೋಪ್, ಗ್ಯಾಸ್ಟ್ರೋಸ್ಕೋಪ್, ಕಾರ್ಡಿಯೋಗ್ರಾಮ್ (E.C.G.) ಮೊನೆಟರ್ ಇತ್ಯಾದಿಗಳು.
೬) ಸುಶಿಕ್ಷಿತ ನಿರುದ್ಯೋಗಿ ಮಹಿಳೆಯರಿಗೆ ನರ್ಸಿಂಗ್ ಸ್ಕೂಲ್.
೭) ಆಸ್ಪತ್ರೆಯ ಸಿಬ್ಬಂದಿ ಮಕ್ಕಳಿಗಾಗಿ ಪ್ರತ್ಯೇಕ ಪ್ರಾಥಮಿಕ ಶಾಲೆ.
೮) ಎರಡು ಬೃಹತ್ ಅತಿಥಿ ಗೃಹಗಳು.
೯) ಸುಸಜ್ಜಿತ ಜನರಲ್ ವಾರ್ಡ್.
೧೦) ಸ್ಪೇಶಲ್ ರೂಮುಗಳು.
೧೧) ಅನುಭವಿಕ ಹಾಗೂ ಸೇವಾ ಮನೋಭಾವನೆಯ ಉತ್ತಮ ಸಿಬ್ಬಂದಿ ವರ್ಗ.
೧೨) ಅಂಚೆ ಕಚೇರಿ ವ್ಯವಸ್ಥೆ.
೧೩) ರೋಗಿಗಳ ಸೇವೆಗೆ ಎರಡು ವಾಹನಗಳು.
೧೪) ಉಚಿತ ಹೆರಿಗೆ ವಿಭಾಗ.
೧೫) ಕುಟುಂಬ ಕಲ್ಯಾಣ ಸೇವೆ.
೧೬) ಸುಸಜ್ಜಿತ ಉಪಹಾರ ಗೃಹ ಇತ್ಯಾದಿ ಇತ್ಯಾದಿ.

ಈ ಆಸ್ಪತ್ರೆಯಲ್ಲಿನ ದಾಖಲೆ ಪ್ರಕಾರ ಈ ೨೫ ವರ್ಷಗಳ ಅವಧಿಯಲ್ಲಿ ೬ ಲಕ್ಷಕ್ಕಿಂತ ಹೆಚ್ಚು ರೋಗಿಗಳು ಗುಣ ಹೊಂದಿದ್ದಾರೆ, ೫೦ ಸಾವಿರಕ್ಕಿಂತ ಹೆಚ್ಚು ರೋಗಿಗಳು ಶಸ್ತ್ರ ಚಿಕಿತ್ಸೆಯ ಮುಖಾಂತರ ಗುಣ ಹೊಂದಿದ್ದಾರೆ. ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರುಗಳ, ಸಹಕಾರಿ ಬಂಧುಗಳ ಮತ್ತು ಸಿಬ್ಬಂದಿ ವರ್ಗದ ಸೇವಾ ಮನೋಭಾವನೆಯ ಕರ್ತವ್ಯದಕ್ಷತೆಯಿಂದ ಘಟ ಪ್ರಭಾದ ಈ ಆಸ್ಪತ್ರೆ ಹೆಮ್ಮರವಾಗಿ ಬೆಳೆದು, ವೈದ್ಯಕೀಯ ಕ್ಷೇತ್ರದಲ್ಲಿಯೂ ಕಲ್ಯಾಣ ಸೇವೆ ಸಲ್ಲಿಸಿ, ನಾಡಿಗೆ ಆದರ್ಶವಾಗುತ್ತಿರುವುದು ಹೆಮ್ಮೆಪಡುವಂತಹು ದಾಗಿದೆ. ಆಸ್ಪತ್ರೆಯ ಅಭಿವೃದ್ಧಿಗಾಗಿ ಬೆಳಗಾಂವ, ಬಿಜಾಪೂರ, ಧಾರವಾಡ, ಕೊಲ್ಲಾಪೂರ, ಸಾಂಗ್ಲಿ ಮುಂತಾದ ಜಿಲ್ಲೆಗಳ ಸಹಕಾರಿ ಬಂಧುಗಳಿಂದಲೂ, ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಿಂದಲೂ, ಲಕ್ಷಾಂತರ ರೂ. ಧನ ಸಹಾಯ ಒಂದು ಪ್ರೋತ್ಸಾಹ ಸಿಕ್ಕಿದೆ. ಅಲ್ಲದೇ ಸಂಕೇಶ್ವರದ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆಯವರೂ ಸಹ ಇತ್ತೀಚೆಗೆ ಈ ಜೆ.ಜಿ.ಸಿ. ಆಸ್ಪತ್ರೆಗೆ ೭ ಲಕ್ಷ ರೂ. ಕೊಟ್ಟಿದ್ದಾರೆ, ಮತ್ತು ಘಟಪ್ರಭಾ ಸಕ್ಕರೆ ಸಹಕಾರಿ ಕಾರಖಾನೆಯವರು ಒಂದು ಲಕ್ಷ ಕೊಟ್ಟಿದ್ದಾರೆ. ಇದೇ ರೀತಿ ನಾಡಿನ ಎಲ್ಲ ಸಹಕಾರ ಸಂಘ–ಸಂಸ್ಥೆಗಳ ಸಹಾಯ ದೊರೆಯುವ ಬಗ್ಗೆ ಪ್ರಯತ್ನಿಸುತ್ತಿದ್ದಾರೆ. 'ರೋಗಿಯ ಸೇವೆಯೇ ದೇವರ ಸೇವೆ' ಎಂಬ ಉದಾತ್ತ ಭಾವನೆಯಿಂದ ರೋಗೋಪಚಾರ ಹಾಗೂ ಶಸ್ತ್ರ ಚಿಕಿತ್ಸೆಯ ಮೂಲಕ ಘನವಾದ ಮಾನವೀಯ ಸೇವಾಯುಕ್ತ ವೈದ್ಯಕೀಯ

ಸೇವೆಯನ್ನು ಸಲ್ಲಿಸುತ್ತಿರುವ ಈ ಸಹಕಾರಿ ಆಸ್ಪತ್ರೆಗೆ'ದಾರಿದ್ರ್ಯವಿದ್ದವರಲ್ಲಿ ದೈವತ್ವ ದರ್ಶನ ಪಡೆಯಬೇಕು' ಎಂಬ ವಿಶಾಲ ಮನೋಭಾವನೆಯುಳ್ಳ ಇಂದಿನ ಮೂರು ಸಾವಿರಮಠದ ಶ್ರೀ ಜಗದ್ಗುರುಗಳು ಹಲವಾರು ಒಳ್ಳೆಯ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕೆಂದು ಸಂಕಲ್ಪಿಸಿದ್ದಾರೆ. ದವಾಖಾನೆಯ ಆವರಣದಲ್ಲಿ ೧) ಧರ್ಮಶಾಲೆ ೨) ೨೫ ವಸತಿಗೃಹಗಳ ನಿರ್ಮಾಣ ೩) ವೃದ್ಧಾಶ್ರಮ ೪) ಸಹಕಾರ ಭವನ ೫) ನರ್ಸಿಂಗ್ ವಿದ್ಯಾರ್ಥಿನಿಯರಿಗಾಗಿ ವಸತಿಗೃಹ ೬) ವೈದ್ಯಕೀಯ ಮ್ಯೂಜಿಯಂ ೭) ಗ್ರಂಥಾಲಯ ೮) ಚಿಕಿತ್ಸಾಲಯ ೯) ಯೋಗಶಾಲೆ ೧೦) ರೋಗಿಗಳಿಗಾಗಿ ಚಿಕ್ಕ ಚಲನ ಚಿತ್ರಮಂದಿರ ೧೧) ಕಂಪೌಂಡ್ ಕಟ್ಟಡ ೧೨) ಅಲ್ಲಲ್ಲಿ ಉಪವನಗಳ ನಿರ್ಮಾಣ– ಈ ರೀತಿ ಮಾಡಬೇಕಾಗಿದೆಯೆಂದು ಶ್ರೀ ಜಗದ್ಗುರುಗಳವರ ಅಭಿಪ್ರಾಯವಾಗಿದೆ. ಈ ಯೋಜನೆಯಲ್ಲಿ ಯಾರಾದರೂ ೫೦ (ಐವತ್ತು) ಸಾವಿರ ರೂಪಾಯಿಗಳನ್ನು ನೀಡಿದರೆ ಅವರ ಹೆಸರಿನಲ್ಲಿ ಒಂದು ಬ್ಲಾಕ್ (ಕಾಟೇಜ್) ಕಟ್ಟಿಸುವದಾಗುವದಲ್ಲದೇ ಅವರಿಗೆ ವರ್ಷದಲ್ಲಿ ಎರಡು ತಿಂಗಳವರೆಗೆ ಉಚಿತವಾಗಿ ಆರೋಗ್ಯಕ್ಕಾಗಿ ಇರಲು ಅಲ್ಲಿಯೇ ಅನುಕೂಲತೆ ನೀಡಲಾಗುವದು.

ಶ್ರೀ ಜಗದ್ಗುರುಗಳವರ ಮುಂಧೋರಣೆ ಯೋಜನೆ ನೋಡಿದಾಗ ಎಂತಹ ವ್ಯಕ್ತಿಯಾದರೂ ಅಚ್ಚರಿಪಡುವಂತಹದಾಗಿದೆ. ಶ್ರೀ ಜಗದ್ಗುರುಗಳವರ ಕನಸು ನನಸಾಗುವಲ್ಲಿ ಸಂದೇಹವಿಲ್ಲ. ಈಗಾಗಲೇ ಆ ರೀತಿ ಕೃತಿಯಲ್ಲಿ ಮಾಡಿ ತೋರಿಸಿದ್ದಾರೆ. ಈ ಯೋಜನೆಯ ಪೂರ್ತಿಗಾಗಿ ಒಂದು ಕೋಟಿ ರೂಪಾಯಿಗಳಷ್ಟು ಅವಶ್ಯಕವಿರುವದೆಂದು ಅಂದಾಜು ಮಾಡಿ ಪ್ಲ್ಯಾನ್ ತಯಾರಿಸುತ್ತಿದ್ದಾರೆ. ಈ ಆಸ್ಪತ್ರೆಗೆ ನಿಷ್ಠಾವಂತ ಕಾರ್ಯಕರ್ತರೂ, ಶಸ್ತ್ರ ಚಿಕಿತ್ಸಾ ನಿಪುಣರೂ ಆದ ಡಾ॥ ವಿಲಾಸ ನಾಯಿಕವಾಡಿ ಅವರು ದೊರೆತದ್ದಕ್ಕೆ ಶ್ರೀ ಜಗದ್ಗುರುಗಳಿಗೆ ಅತೀವ ಆನಂದವಾಗಿದೆ. ಅವರ ಪರಿಶ್ರಮವೇ ಈ ಆಸ್ಪತ್ರೆಯು ಬೆಳೆಯಲು ಕಾರಣವಾಗಿದೆ.

## ಹರಿಜನರು ನಮ್ಮವರು: ನಾವು ಅವರವರು

ಶ್ರೀ ಜಗದ್ಗುರು ಸನ್ನಿಧಿಯವರು ಹರಿಜನರನ್ನು ಸುಸಂಸ್ಕೃತರನ್ನಾಗಿ ಮಾಡಲು ಮೊದಲಿನಿಂದಲೂ ಬಹಳಷ್ಟು ಪರಿಶ್ರಮಿಸಿದ್ದಾರೆ. ನಾಡಿನಲ್ಲಿ ಅಲ್ಲಲ್ಲಿಯ ಹರಿಜನ ಕೇರಿಗೆ ಹೋಗಿ ಸ್ವಯಂ ಪಾದಯಾತ್ರೆ ಮಾಡಿದ್ದಾರೆ. ಬಡವ–ಬಲ್ಲಿದ, ಮೇಲು–ಕೀಳು ಎನ್ನದೇ, ಜಾತಿ ಭೇದವಿಲ್ಲದೇ ಅವರವರ ಮನೆಗೆ ಹೋಗಿ, ಸಂಸ್ಕೃತಿಯ ವಿಚಾರವನ್ನು ತಿಳಿಸಿ, ೧೦–೧೫ ವರ್ಷಗಳಿಂದ ಅವರವರಲ್ಲಿನ ಕಲಹದಿಂದುಂಟಾದ ದ್ವೇಷಾಸೂಯೆಯನ್ನು ಬಗೆಹರಿಸಿ, ಪ್ರೇಮದ ಭಾವೈಕ್ಯವನ್ನುಂಟು

ಮಾಡಿ ಅವರನ್ನು ಉದ್ಧರಿಸಿದ್ದಾರೆ. ಉದಾಹರಣೆಗೆ ಹುಬ್ಬಳ್ಳಿ ಕರ್ಕಿ ಬಸವಣ್ಣನ ಗುಡಿ ಓಣಿಯಲ್ಲಿ ಅವರ ಜಗಳವನ್ನು ಬಗೆಹರಿಸಿ ಬಂದಿದ್ದಾರೆ. ಪಡದಯ್ಯನ ಹಕ್ಕಲದಲ್ಲಿ ಹರಿಜನ ಬಂಧುಗಳನ್ನು ಸುಧಾರಿಸಿ ಸ್ವಚ್ಛತೆ, ಶಿಸ್ತು ಮುಂತಾದವು ಗಳನ್ನು ತಿಳಿಸಿ ಬಂದಿದ್ದಾರೆ. ಅವರಿಗಾಗಿ ಅಂದರೆ ದೀನ–ದಲಿತರಿಗಾಗಿ ಸಹಾಯ ಮಾಡಿರುವರಲ್ಲದೇ ಅಂಗವಿಕಲರಿಗಾಗಿ ಸಹಸ್ರಾರು ರೂಪಾಯಿಗಳನ್ನು ನೀಡಿ ಉದ್ಧರಿಸಿದ್ದಾರೆ. ಜಗದ್ಗುರುಗಳು ತಮ್ಮ ಹುಬ್ಬಳ್ಳಿ ಮೂರುಸಾವಿರಮಠದಲ್ಲಿಯೂ ಸಹ ಹರಿಜನರನ್ನು ಸಂಸ್ಕರಿಸಿ ಬರಮಾಡಿಕೊಂಡು ಸಂಸ್ಕೃತಿ ಮಹಿಮೆಯನ್ನು ತಿಳಿಸಿ ಪ್ರೋತ್ಸಾಹಿಸಿದ್ದಾರೆ. ಅವರ ವಿವಾಹಾದಿ ಕಾರ್ಯಗಳಿಗೆ ಧನ–ಧಾನ್ಯ--ವಸ್ತ್ರ ಗಳನ್ನು ಶ್ರೀಮಠದಿಂದ ಉದಾರವಾಗಿ ಅನುಗ್ರಹಿಸಿದ್ದಾರೆ. ಹರಿಜನರನ್ನು ಕೇವಲ ಮಾತಿನಿಂದಲ್ಲ, ಕೃತಿಯಿಂದಲೂ ಅವರ ಕಷ್ಟ–ನಷ್ಟಗಳನ್ನು ಬಗೆಹರಿಸಿದ್ದಾರೆ. ಅವರವರ ಶ್ರದ್ಧೆ–ನಿಷ್ಠೆಗಳಿಗೆ ಅನುಸರಿಸಿ ಅವರವರ ಮನೋಬಲ ಬೆಳೆಸಿದ್ದಾರೆ.

**ಜನತೆಯ ಬಳಿಗೆ ಜಗದ್ಗುರುಗಳು:**
**ಇತಿಹಾಸ ಬೆಳಗಿದ ಪಾವನ ಪಾದಯಾತ್ರೆ**

ಶ್ರೀ ಜಗದ್ಗುರುಗಳ ಮಹತ್ಕಾರ್ಯಗಳಲ್ಲಿಯೇ ಇಂದೊಂದು ಕ್ರಾಂತಿಕಾರಕ ಹೆಜ್ಜೆ. ೨೦ನೇ ಶತಮಾನದಲ್ಲಿ ಮೊಟ್ಟಮೊದಲು ೧೬೩ ಗುರು ವಿರಕ್ತರನ್ನು ಸ್ವಯಂ ಜೊತೆಗೆ ಕರೆದುಕೊಂಡು, ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹುಬ್ಬಳ್ಳಿಯಿಂದ ಶಿವಯೋಗಮಂದಿರದವರೆಗೆ ಧರ್ಮ ಸಂವರ್ಧನೆಗಾಗಿ ೨೭–೧೧–೧೯೭೮ ರಿಂದ ೭–೧೨–೧೯೭೮ರ ವರೆಗೆ ಸಹಸ್ರಾರು ಜನ ಶರಣ–ಶರಣೆಯರನ್ನು ಕರೆದುಕೊಂಡು ಜಗದ್ಗುರುಗಳು ಯಾವ ವಾಹನ ವನ್ನೂ ಏರದೇ ಕಾಲ್ನಡಿಗೆಯಿಂದಲೇ ಹುಬ್ಬಳ್ಳಿಯಿಂದ ಶಿವಯೋಗಮಂದಿರಕ್ಕೆ ಪಾದಯಾತ್ರೆ ಮಾಡಿ, ಧರ್ಮಜಾಗೃತಿ ಮಾಡಿದ್ದು ಸಂಸ್ಮರಣೀಯ ಹಾಗೂ ಸುವರ್ಣಾಕ್ಷರದಲ್ಲಿ ಬರೆದಿಡುವ ಐತಿಹಾಸಿಕ ದಾಖಲೆಯಾಗಿದೆ.

ಇಂದಿನದು ವಿಜ್ಞಾನಯುಗ! ವಿಜ್ಞಾನಿಯ ವಾಹನ ಸೌಕರ್ಯದ ಹರಿ ದಾಟಕ್ಕೆ ಇಂದು ಜಗತ್ತು ಚಿಕ್ಕದಾಗಿದೆ. ಭೌತಿಕ ಸುಖಭೋಗ ಸಾಧನಗಳು ಹೆಚ್ಚಿವೆ. ಈ ಸುಖಭೋಗ ಸಾಧನಗಳು ಹೆಚ್ಚಿದರೂ ಮಾನವನಿಗೆ ಇಂದು ಬಯುಸಿದ ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಬಲ್ಲ ಸುಖ–ಶಾಂತಿ, ತೃಪ್ತಿ–ಸಮಾಧಾನಗಳು ನಿಜವಾಗಿ ಸಾಕಷ್ಟು ಸಿಕ್ಕಿಲ್ಲ. ಕಾರಣಮಾನವನು ಶಾಶ್ವತ ಸುಖ–ಶಾಂತಿ–ಸಮಾಧಾನಗಳನ್ನು ಅರಸುತ್ತಿದ್ದಾನೆ. ಭೌತಿಕ ಅನಿಷ್ಟಗಳಿಂದ ಪ್ರಕ್ಷುಬ್ಧ ಗೊಂಡ ಜನತೆಯ ಜೀವನವನ್ನು ಕಂಡು ಮನನೊಂದು ಮರುಕಗೊಂಡು ಶ್ರೀ ಜಗದ್ಗುರುಗಳು ಈ ಶಾಂತಿ ದೊರಕಿಸಿಕೊಡುವ ಧಾರ್ಮಿಕ ಕಾರ್ಯಕ್ಕೆ ಪ್ರವೃತ್ತರಾದರು.

ಐದುನೂರು ವರ್ಷಗಳ ಮುಂಚೆ ಯಡೆಯೂರ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅನೇಕ ಹರ ಗುರು ಚರಮೂರ್ತಿಗಳೊಡನೆ ಅಲ್ಲಲ್ಲಿ ಸಂಚರಿಸಿ, ಧರ್ಮಜಾಗೃತಿಯು, ಸಂಸ್ಕೃತಿ ಪುನರುತ್ಥಾನದ ಮಹಾಕಾರ್ಯದೊಡನೆ, ಜನರಲ್ಲಿ ಐಕ್ಯತಾ ಮನೋಭಾವನೆಯನ್ನು ಒಡಮೂಡಿಸಿದರೆಂಬುದಕ್ಕೆ ಇತಿಹಾಸವೇ ಸಾಕ್ಷಿ. ೧೦೧ ಗುರು ವಿರಕ್ತರೂ, ಹರ–ಗುರು ಚರಮೂರ್ತಿಗಳೂ, ಸಾಧಕರೂ, ಸಹಸ್ರಾರು ಸದ್ಭಕ್ತರೂ, ಶರಣ-ಶರಣೆಯರೊಡಗೂಡಿ ವಿಶಿಷ್ಟಪೂರ್ಣ ಪಾದಯಾತ್ರೆ ಘಟಿಸಲು ೫೦೦ ವರ್ಷಗಳೇ ಬೇಕಾದವು. ಇದನ್ನು ಹುಬ್ಬಳ್ಳಿ ಜಗದ್ಗುರುಗಳು ಸ್ವಯಂ ಪ್ರತ್ಯಕ್ಷ ಸಫಲವಾಗುವಂತೆ ಮಾಡಿ ತೋರಿಸಿದರು.

ಆಗಾಗ ಧರ್ಮಗುರುಗಳು ೫–೬ ಜನ ಸ್ವಾಮಿಗಳವರನ್ನು ಕರೆದು ಪಾದ ಯಾತ್ರೆ ಮಾಡಿ ಜನರ ಮನಸ್ಸಿನ ಅಜ್ಞಾನ ಕೊಳೆಯನ್ನು ಕಳೆಯುತ್ತಿದ್ದರು. ಇಷ್ಟು ಬೃಹತ್‌ಪ್ರಮಾಣದಲ್ಲಿ ಮಾಡಿದ ಜಗದ್ಗುರುಗಳ ಪಾದಯಾತ್ರೆಯು ಐತಿಹಾಸಿಕ ಪಾದಯಾತ್ರೆಯು. ಐತಿಹಾಸಿಕ ಘಟನೆಯಾಗಿರುವದಲ್ಲದೇ ಜನಜೀವನದಲ್ಲಿ ಸಂಸ್ಕೃತಿಯ ಪುನರುತ್ಥಾನವನ್ನು ಮಾಡಿತು. 'ಹಳ್ಳಿಯಿಂದಲೇ ಭಾರತ'ವೆಂಬುದನ್ನು ಮನಗಂಡು ಹುಬ್ಬಳ್ಳಿಯಿಂದ ಶಿವಯೋಗಮಂದಿರದವರೆಗೆ ಪ್ರತಿಯೊಂದು ಹಳ್ಳಿಯ ಜನರಿಗೆ ಧರ್ಮದ ತಿರುಳನ್ನು ತಿಳಿಸಿ, ಧರ್ಮಶ್ರದ್ಧೆಯನ್ನು ಬೆಳೆಯಿಸಿ, ಅವರನ್ನು ಸನ್ಮಾರ್ಗದಿಂದ ನಡೆಯುವಂತೆ ಮಾಡಿ ಪಾರಮಾರ್ಥದತ್ತ ಅವರಿಗೆ ಒಲವನ್ನು ಬೆಳೆಸಿದರು. ಈ ಧಾರ್ಮಿಕ ಕಾರ್ಯವನ್ನು ವೀರಶೈವ ಮಠಾಧಿಪತಿಗಳು ಎಲ್ಲರೂ ಕೂಡಿ ಮಾಡಬೇಕೆಂಬ ದೃಷ್ಟಿಯಿಂದಲೇ ಗುರು-ವಿರಕ್ತರೆಂಬ ಭೇದ-ಭಾವವನ್ನು ತಾಳದೇ, ಸಣ್ಣಮಠ–ದೊಡ್ಡಮಠ ಎನ್ನಲಾರದೇ ಎಲ್ಲರನ್ನೂ ಆಮಂತ್ರಿಸಿದ್ದನ್ನು ನೋಡಿದರೆ ಜಗದ್ಗುರುಗಳ ದೂರದೃಷ್ಟಿ, ಭಾವೈಕ್ಯತೆ, ವಿಶಾಲ ಮನೋಭಾವನೆ, ಧರ್ಮದ ಬಗ್ಗೆ ಇರುವ ಕಳಕಳಿ ಎದ್ದು ಕಾಣುತ್ತದೆ. ಈ ಶ್ರೀ ಜಗದ್ಗುರುಗಳು ಮಾಡಿದ ನೂರೊಂದು ಸ್ಥಲದ ಸಂಕೇತದ ನೂರೊಂದು ಗುರು–ವಿರಕ್ತರ ಪಾದ ಯಾತ್ರೆಯಲ್ಲಿ ನಿತ್ಯವೂ ವೈವಿಧ್ಯಮಯ ೧) ಕೀರ್ತನೆ ೨) ವಿದ್ವಜ್ಜನರಿಂದ ಭಾಷಣ ೩) ಲಿಂಗಧಾರಣೆ ೪) ಸಂಕ್ಷಿಪ್ತ ಲಿಂಗಪೂಜಾ ವಿಧಾನ ಪರಿಚಯ ೫) ಯೋಗಾಸನ ಪ್ರದರ್ಶನ ೬) ಧಾರ್ಮಿಕ ಗ್ರಂಥಗಳ ಬಿಡುಗಡೆ ೭) ಶರಣರ ವಚನಪಟಗಳ ಬಿಡುಗಡೆ ೮) ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರ ೯) ಹರಿಜನ ಕೇರಿಗಳ ಸಂದರ್ಶನ-ಇವೇ ಮುಂತಾದವುಗಳಾಗಿದ್ದವು. ಇವೆಲ್ಲವುಗಳ ದಿನನಿತ್ಯದ ವಿಸ್ತಾರ ವಾದ ವರದಿಗಳು ನಾಡಿನ ಪ್ರಸಿದ್ಧ ದಿನಪತ್ರಿಕೆಗಳಲ್ಲಿ ಬಂದವುಗಳನ್ನು ಈಗಲೂ ಕಾಣಬಹುದು. ಇಂತಹ ವರದಿಗಾರರಲ್ಲಿ ಶ್ರೀ ಭೋಜನಶೆಟ್ಟರು ಪ್ರಮುಖರಾಗಿದ್ದರು. ದಿನನಿತ್ಯವೂ ಹತ್ತಿಪ್ಪತ್ತು ಸಹಸ್ರ ಜನರು ಈ ಪಾದಯಾತ್ರೆಯ ಉಪಯೋಗ ತೆಗೆದುಕೊಳ್ಳುತ್ತಿದ್ದರು. ಈ ಪಾದಯಾತ್ರೆಯಲ್ಲಿ ಹುಬ್ಬಳ್ಳಿ–ಶಿವಯೋಗಮಂದಿರದ

ಮಧ್ಯದ ಕೆಲವು ಹಳ್ಳಿಗಳಲ್ಲಿ ಅನುಭವಮಂಟಪ ಹಾಗೂ ಕಲ್ಯಾಣಮಂಟಪ ಗಳನ್ನು ಸ್ಥಾಯಿ ಕಟ್ಟಡ ಸಹಿತ ಸ್ಥಾಪಿಸಿ, ಅವರನ್ನು ನಿರಂತರ ಸನ್ಮಾರ್ಗದತ್ತ ಒಯ್ಯಲು ಈ ಪಾದಯಾತ್ರೆ ಕಾರಣೀಭೂತವಾಯ್ತು. ಈ ಪಾದಯಾತ್ರೆಯಲ್ಲಿ ೫ ಸಹಸ್ರಕ್ಕಿಂತ ಹೆಚ್ಚು ಜನರಿಗೆ ಡಾ|| ಕೆಳದಿ ಪಟ್ಟಾಧ್ಯಕ್ಷರಿಂದ ಲಿಂಗಧಾರಣೆ ಮಾಡಲಾಯ್ತು. ಸಹಸ್ರಾರು ಜನರಿಗೆ ದುಶ್ಚಟಗಳಿಂದ ದೂರಮಾಡಲಾಯಿತು. ಇದೊಂದು ವೈಶಿಷ್ಟ್ಯಪೂರ್ಣ ಆದರ್ಶಮಯ ಮಾನವತಾ ಜಾಗೃತಿಯ ಕಾರ್ಯ ಕ್ರಮವಾಗಿತ್ತು. ಶ್ರೀ ಜಗದ್ಗುರುಗಳು ಏನೇ ಮಾಡಿದರೂ, ಅಭೂತಪೂರ್ವವಾಗಿ ದೇವರು ಮೆಚ್ಚುವಂತೆ, ಸಮಾಜವು ಸಮ್ಮತಿಸುವಂತೆ, ಭಕ್ತರು ಭಾವಾವೇಶವಾಗು ವಂತೆ, ಅಧಿಕಾರಿಗಳು ಸಹಕರಿಸುವಂತೆ ಮಾಡುತ್ತಾರೆಂಬುದಕ್ಕೆ ಈ ೧೦೧ ಗುರು-ವಿರಕ್ತರ ಪಾದಯಾತ್ರೆಯೇ ಸಾಕ್ಷಿಯಾಗಿವೆ. ಈ ಪಾದಯಾತ್ರೆಯಲ್ಲಿ ನಿತ್ಯವೂ ಲಿಂಗಧಾರಣೆ ಮಾಡುವದಕ್ಕೆ ಡಾ|| ಮ.ಘ.ಚ. ಗುರುಸಿದ್ಧದೇವ ಶಿವಾಚಾರ್ಯರು ರಾಜಗುರು ಹಿರೇಮಠ, ಕೆಳದಿ ಇವರ ಜೊತೆಗೆ ಬೈಲಹೊಂಗಲದ ಕುಂಬಾರಗಿರಿ ಮಠದ ಹಾಗೂ ಶ್ರೀ ಮ. ಘ. ಚ. ನಿಜಗುಣ ಶಿವಾಚಾರ್ಯರು ಗೊಗ್ಗಿಹಳ್ಳಿ ಅವರು ಭಾಗವಹಿಸಿ ಯಶಸ್ವಿಗೊಳಿಸಿದರು. ಶ್ರೀ ಫಕೀರ ಮಲ್ಲಿಕಾರ್ಜುನದೇವರು ಶಿರಹಟ್ಟಿಮಠ, ಶ್ರೀ ಪ್ರಭುದೇವರು ಚರಂತಿಮಠ ಬಾಗಲಕೋಟೆ ಮುಂತಾದವ ರಲ್ಲದೇ ಹುಬ್ಬಳ್ಳಿ ಶ್ರೀಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು, ಕೀರ್ತನ ಕಾಲೇಜಿನ ಕೀರ್ತನಕಾರರು, ಶಿವಯೋಗಮಂದಿರದ ಸಾಧಕರು, ವೈದಿಕರು ಮುಂತಾದವರು ಈ ಕಾರ್ಯಕ್ರಮದಲ್ಲಿ ನಿಷ್ಠೆಯಿಂದ ಸೇವೆ ಸಲ್ಲಿಸಿದರು. ಸದ್ಭಕ್ತರಾದ ಲಿಂ|| ನಿಲುಗಲ್ ಸಂಗಪ್ಪನವರು ಲಾರಿ ತುಂಬಾ ಮೋಸಂಬಿ ಬಾಳೇಹಣ್ಣುಗಳ ಪೂರೈಕೆಯ ನಿತ್ಯ ಭಕ್ತಿಸೇವೆ ಹಾಗೂ ಹುಬ್ಬಳ್ಳಿ--ಶಿವಯೋಗ ಮಂದಿರ ಮಾರ್ಗದ ನೆರೆಹೊರೆಯ ಸುತ್ತಮುತ್ತಲ ಹಳ್ಳಿ ಜನರ ಪರಿಶ್ರಮ ಸಾರ್ಥಕ ವಾಗಿ ಆದರ್ಶಯುತವಾಯಿತು. ಇದರಲ್ಲಿ ಪಂ|| ಬಸವಕುಮಾರ ಶಾಸ್ತ್ರಿಗಳು ಧಾರವಾಡ ಅವರು ನಿಷ್ಠಾಪೂರ್ಣ ಪೂರ್ವಭಾವಿಯಾಗಿ ಮಾಡಿದ ಸೇವೆ ಮೆಚ್ಚ ತಕ್ಕದ್ದು. ಪಾದಯಾತ್ರೆಯ ಸವಿಸ್ತಾರ ವಿವರವನ್ನು ಪಂ|| ಬಸವಕುಮಾರ ಶಾಸ್ತ್ರಿಗಳವರೇ ಬರೆದ 'ಧರ್ಮ ಜಾಗೃತಿಗಾಗಿ ಪಾದಯಾತ್ರೆ' ಎಂಬ ಪುಸ್ತಕದಲ್ಲಿ ಕಾಣಬಹುದು. ಹುಬ್ಬಳ್ಳಿ ಜಗದ್ಗುರುಗಳು ಮಾಡಿದ ೧೦೧ ಗುರು-ವಿರಕ್ತರ ಈ ಪಾದಯಾತ್ರೆಯು ಅಭೂತಪೂರ್ವವಾದುದು.

ಭಾರತದಲ್ಲಿಯ ಬೇರೆ ಬೇರೆ ರಾಜ್ಯದ ಪೂಜ್ಯ ವೀರಶೈವ ಮಠಾಧಿಪತಿ ಗಳಾದ ನೂರೊಂದು ಗುರು-ವಿರಕ್ತರೊಂದಿಗೆ ಕೂಡಿಕೊಂಡು, ಹುಬ್ಬಳ್ಳಿ ಮೂರು ಸಾವಿರಮಠದಿಂದ ದಿನಾಂಕ ೨೭-೧೧-೭೮ರಂದು ಮುಂಜಾನೆ, ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ ಹುಚ್ಚನ ನಿರ್ವಿಕಲ್ಪ ಸಮಾಧಿ ಗದ್ದುಗೆಯ ರುದ್ರಾಭಿಷೇಕ ಪೂಜೆಯ

ನಂತರ, ಮಂಗಲ ಜಯ ಜಯಕಾರವಾಗಿ, ಪ್ರಾರಂಭವಾದ ಶ್ರೀ ಹುಬ್ಬಳ್ಳಿ ಜಗದ್ಗುರುಗಳ ಈ 'ಹುಬ್ಬಳ್ಳಿ-ಶಿವಯೋಗಮಂದಿರ ಪಾದಯಾತ್ರೆ'ಯು ಹುಬ್ಬಳ್ಳಿಯ ಶ್ರೀ ಅಂಕಲಿಗಿ ಕಲಾವಿದರಿಂದ ವಿಡಿಯೋ ಚಿತ್ರೀಕರಣಗೊಂಡು, ಕುಸುಗಲ್, ಹೆಬಸೂರು, ಮಲ್ಲಾಪೂರ, ನವಲಗುಂದ, ರೋಣ, ಹಿರೇಹಾಳ, ಬೇಲೂರು, ಚೊಳಚಗುಡ್ಡ, ಬದಾಮಿ ಮಾರ್ಗವಾಗಿ; ವೈಭವದಿಂದ, ಆನಂದದಿಂದ ಜಯ ಜಯ ಕಾರ ಘೋಷಿಸುತ್ತ, ಶಿಸ್ತಿನಿಂದ ಏಕೋತ್ತರ ಶತಸ್ಥಲಗಳೇ ಕಾವಿಯ ಗುಂಪಾದಂತೆ ಪರಮಪೂಜ್ಯ ಹುಬ್ಬಳ್ಳಿ ಜಗದ್ಗುರುಗಳವರನ್ನನುಸರಿಸಿ ಕಾಲ್ನಡಿಗೆಯಲ್ಲಿ ಉತ್ಸಾಹ ದಿಂದ ಹೊರಟಿತ್ತು. ಮಾರ್ಗದುದ್ದಕ್ಕೂ ಅಲ್ಲಲ್ಲಿಯ ಹಳ್ಳಿಯ ವಾಸ್ತವ್ಯದಲ್ಲಿ ದಿನನಿತ್ಯ ನಡೆದಂತೆ ಶಿವಯೋಗಮಂದಿರದಲ್ಲಿಯೂ ಶಿವಯೋಗಮಂದಿರದ ಸಂಸ್ಥಾಪಕ ಕರ್ತೃ ಶ್ರೀ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳ ಗದ್ದುಗೆ — ಸಮಾಧಿಯ ಸಮ್ಮುಖದಲ್ಲಿ 'ಪಾದಯಾತ್ರಾ ಸಮಾರೋಪ' ರೂಪವಾದ ಬೃಹತ್ ಸಭೆ-ಸಮ್ಮೇಲನ-ಸಮಾವೇಶಗಳು ಜರುಗಿದವು.

ಪಾದಯಾತ್ರೆಯಲ್ಲಿ ಕೊನೆಯವರೆಗೆ ಭಾಗವಹಿಸಿ ಪೂರ್ಣಗೊಳಿಸಿದ ಸರ್ವ ನೂರೊಂದು ಗುರು-ವಿರಕ್ತ ಪೂಜ್ಯರಿಗೂ, ಪಾಲ್ಗೊಂಡ ಕೀರ್ತನ ಶಾಸ್ತ್ರಿಗಳಿಗೂ, ಭಾಷಣಕಾರ ವಿದ್ವಾಂಸರಿಗೂ, ಭಜನಾದಿ ಜಾನಪದ ಕಲಾವಿದರಿಗೂ ಭಕ್ತಾದಿಗಳಿಂದ ಕಾಣಿಕೆ ಗೌರವಾರ್ಪಣೆ ಸಲ್ಲಿಸಲಾಯಿತು.

ಪೂಜ್ಯರ ಈ ಬೃಹತ್ ಪಾದಯಾತ್ರೆಯ ಸಂಸ್ಮರಣೆ ಚಿರಸ್ಥಾಯಿಯಾಗಿ ಕಟ್ಟಡರೂಪದಲ್ಲಿ ಉಳಿಯುವಂತೆ ಶಿವಯೋಗಮಂದಿರದಲ್ಲಿ 'ಧ್ಯಾನಧಾಮ'ವನ್ನು ಕಟ್ಟಿಸಿದ ಹುಬ್ಬಳ್ಳಿ ಜಗದ್ಗುರುಗಳ ಸರಳತೆ, ಪ್ರೇಮ-ವಾತ್ಸಲ್ಯ-ಆತ್ಮೀಯತೆಯ ವರ್ತನೆಯನ್ನು ಪ್ರತ್ಯಕ್ಷ ಕಂಡು ಅನುಭವಿಸಿದ ನೂರೊಂದು ಗುರು-ವಿರಕ್ತರೆಲ್ಲರೂ ಗೌರವ ಸಮರ್ಪಣೆಗಾಗಿ ಜಗದ್ಗುರುಗಳನ್ನು ಭಕ್ತಿಯಿಂದ ಹೊಗಳಿದರು. ಜಗದ್ಗುರುಗಳೂ ಸಹ ಪಾದಯಾತ್ರೆಯಲ್ಲಿ ಪಾಲ್ಗೊಂಡ ಎಲ್ಲ ವ್ಯಕ್ತಿಗಳ ಹಾಗೂ ಪಾದಯಾತ್ರೆಗೆ ಎಲ್ಲ ರೀತಿಯ ಅನುಕೂಲ ಮಾಡಿರುವ ಭಕ್ತಾದಿಗಳ ಸಹಕಾರ ಸಹಾನುಭೂತಿ-ಸಹಾಯವನ್ನು ಮೆಚ್ಚಿ, ತಮ್ಮ ಹಾರ್ದಿಕ ಆನಂದವನ್ನು ಅಭಿವ್ಯಕ್ತ ಗೊಳಿಸುವ ಮೂಲಕ ಎಲ್ಲರಿಗೂ ಆಶೀರ್ವದಿಸಿದರು.

'ಈ 'ಹುಬ್ಬಳ್ಳಿ-ಶಿವಯೋಗಮಂದಿರ ಬೃಹತ್ ಪಾದಯಾತ್ರೆ' ಯಂತೆ ನೂರೊಂದು ಗುರು-ವಿರಕ್ತ ಮಠಾಧಿಪತಿ ಸ್ವಾಮಿಗಳೆಲ್ಲರೂ ತಮ್ಮ ತಮ್ಮ ಭಾಗ ದಲ್ಲಿ ಆಗಾಗ್ಗೆ ಸ್ವಯಂ ಪಾದಯಾತ್ರೆ ಮಾಡುತ್ತಾ ಧರ್ಮ ಜಾಗೃತಿ ಮಾಡಬೇಕು' ಎಂಬ ಜಗದ್ಗುರುಗಳ ಆತ್ಮೀಯ ಅಪ್ಪಣೆಗೆ ಎಲ್ಲ ಪೂಜ್ಯರೂ ಒಪ್ಪಿ ಪ್ರತಿಜ್ಞೆ ಕೈಗೊಂಡರು.

ಕೊನೆಯ ದಿನವಾದ ೭-೧೨-೧೯೭೮ ರಂದು ಕರ್ತೃ ಶ್ರೀ ಹಾನಗಲ್ಲ ಶ್ರೀ ಕುಮಾರೇಶನ ಗದ್ದುಗೆಗೆ ಸಾಮೂಹಿಕವಾಗಿ ಮಂಗಲವಾದ ನಂತರ 'ಹುಬ್ಬಳ್ಳಿ-ಶಿವಯೋಗಮಂದಿರ ಪಾದಯಾತ್ರೆ'ಯು ಪರಿಪೂರ್ಣಗೊಂಡಿತು. ಮುಂಬರುವ ಧಾರ್ಮಿಕ ಪೀಳಿಗೆಗೆ ಮಾರ್ಗದರ್ಶಕವಾಗಿ ಇತಿಹಾಸ ನಿರ್ಮಿಸಿತು.

ಶ್ರೀ ಜಗದ್ಗುರು ಸನ್ನಿಧಿಯವರು ತಮ್ಮ ೭೫ನೆಯ ವಯಸ್ಸಿನ ನಂತರ ಭಾರತದ ತುಂಬೆಲ್ಲ ಪ್ರತಿಯೊಂದು ರಾಜ್ಯಕ್ಕೂ, ೫೦೦೦ ಜನ ಸದ್ಭಕ್ತರು ಹಾಗೂ ೧೦೧ ಗುರು-ವಿರಕ್ತರನ್ನು ಕರೆದುಕೊಂಡು, ೭೫ ಬಸ್‌ಗಳನ್ನು ಮಾಡಿಕೊಂಡು, ೭೫ ದಿನಗಳವರೆಗೆ ಪ್ರವಾಸ ಮಾಡಿ ಧರ್ಮಜಾಗೃತಿ ಮಾಡುವ ಯೋಜನೆ ಇದೆಯೆಂದು ಅಪ್ಪಣೆಕೊಡಿಸಿದ್ದು ಸ್ತುತ್ಯಾರ್ಹವಾದುದು. ಅಲ್ಲದೇ ಆಯಾ ರಾಜ್ಯಗಳ ಭಾಷೆಗಳಲ್ಲಿ ವೀರಶೈವ ಧರ್ಮದ ಗ್ರಂಥಗಳನ್ನು ಪ್ರಕಟಿಸುವ ಯೋಜನೆ ಹಮ್ಮಿಕೊಂಡಿರುವರೆಂದು ತಿಳಿದಿದೆ. ಶ್ರೀ ಜಗದ್ಗುರುಗಳು ಪಾದಯಾತ್ರೆಯಿಂದ ಭಕ್ತರಿಂದ ಬಂದ ಹಣವನ್ನು ಶ್ರೀ ಶಿವಯೋಗಮಂದಿರಕ್ಕೆ ನೀಡಿದರಲ್ಲದೇ 'ನೂರೊಂದು ಗುರು ವಿರಕ್ತರ ಧರ್ಮ ಜಾಗೃತಿ ಪಾದಯಾತ್ರೆ'ಯ ಸವಿನೆನಪಿಗಾಗಿ ಶ್ರೀ ಶಿವಯೋಗ ಮಂದಿರದಲ್ಲಿ ಬರು-ಹೋಗುವ ಭಕ್ತರಿಗೆ ಶ್ರೀ ಕುಮಾರೇಶ್ವರರ ಹೆಸರಿನಲ್ಲಿ 'ಅತಿಥಿ ಗೃಹ'ವನ್ನು ಕಟ್ಟಿಸುವ ಸಲುವಾಗಿ ಉಪಯೋಗಿಸಬೇಕೆಂದು ತಿಳಿಸಿದರು. ಅದೇ ರೀತಿ 'ಅತಿಥಿ ಗೃಹ'ದ ಅಡಿಗಲ್ಲನ್ನು ಶ್ರೀ ನಾಗನೂರು ಸ್ವಾಮಿಗಳವರಿಂದ ಇಡಿಸಿ, ಅದು ಮುಕ್ತಾಯವಾಗಿ ಈಗ ಜನೋಪಯೋಗವಾಗುತ್ತಿರುವದು ಶ್ರೀ ಶಿವಯೋಗ ಮಂದಿರಕ್ಕೆ ಭೂಷಣವಾಗಿದೆ.

### ಹಸಿದ ಹೊಟ್ಟೆಗೆ ತಂಪು ತಂದ: ಬಡರೋಗಿಗಳ ಪ್ರಸಾದ ನಿಲಯ

ಒಮ್ಮೆ ಶ್ರೀ ಜಗದ್ಗುರುಗಳು ಈ ರೀತಿ ಅಪ್ಪಣೆಕೊಡಿಸಿದರು. ಅದು ಇಂತಿದೆ: 'ಹನ್ನೆರಡುಮಠರವರೆ! ಪೂಜ್ಯ ಗುರವರ್ಯರ ಇಚ್ಛೆಯಂತೆ, ದವಾಖಾನೆಯನ್ನು ಪ್ರಾರಂಭಿಸಿದ್ದಾಯಿತು. ಬೆಳೆಸಿದ್ದೂ ಆಯಿತು. ರೋಗ ನಿವಾರಣೆಗೆ ಅನೇಕ ರೀತಿಯ ವೈದ್ಯಕೀಯ ಸಲಕರಣೆಗಳನ್ನು, ಶಸ್ತ್ರಚಿಕಿತ್ಸೆಯ ನವೀನ ಉಪಕರಣಗಳನ್ನು ಖರೀದಿಸಿ ತೆಗೆದುಕೊಂಡದ್ದಾಯಿತು. ಆದರಿಂದ ಲಕ್ಷಾಂತರ ಜನರಿಗೆ ಪ್ರಯೋಜನ ದೊರೆತು, ಅವರು ರೋಗದಿಂದ ಗುಣಮುಖ ಹೊಂದಿದ್ದು ನೋಡಿ ಸಂತಸಪಟ್ಟೆವು. ಕರ್ನಾಟಕದಲ್ಲಿಯೇ ಆದರ್ಶ ಆಸ್ಪತ್ರೆ ಎಂದು ಹೆಸರು ಬಂದಿದ್ದೂ ಕೇಳಿದ್ದಾಯಿತು. ಆದರೆ ಬಡರೋಗಿಗಳ ಸೇವೆಯು ಇದಕ್ಕಿಂತಲೂ ಹೆಚ್ಚು ಆಗಿ ಅವರಿಗೆ ಊಟೋಪಚಾರ ಉಚಿತವಾಗಿ ಕೊಡುವ ಆಶೆ ನಮ್ಮ (ಜಗದ್ಗುರುಗಳ) ಮನಸ್ಸಿನಲ್ಲಿ ಮೂಡಿದೆ. ಅದುವೇ ನಿಜವಾದ ಸೇವೆ. ಎಷ್ಟೋ ಜನ ರೋಗಿಗಳು ತಾತ್ಕಾಲಿಕವಾಗಿ ರೋಗಮುಕ್ತರಾದರೂ, ಬಡತನ ಬವಣೆಯಿಂದ ಎಷ್ಟೋ ಜನ

ರೋಗಿಗಳು ಮರಣವನ್ನಪ್ಪಿದ್ದು ಕಂಡು, ಅವರು ಪೂರ್ಣ ಗುಣ ಹೊಂದುವವರೆಗೆ ಉಚಿತ ಪೌಷ್ಠಿಕ ಆಹಾರವನ್ನು ನೀಡಿದರೆ ಅದು ನಮಗೆ ಮತ್ತಿಷ್ಟು ಸಮಾಧಾನ. ಆ ಕೆಲಸಕ್ಕೆ ಕೈಹಾಕಬೇಕೆಂದು ವಿಚಾರ ಮಾಡಿದ್ದೇವೆ' ಎಂದು. ನನಗೆ ತಿಳಿಸಿದೊಡನೆ ಆಗ ನಾನು 'ಇದುವೇ ನಿಜವಾದ ಸೇವೆ. ನಿಮ್ಮಲ್ಲಿ (ಜಗದ್ಗುರುಗಳಲ್ಲಿ) ಒಮ್ಮೆ ಮನಸ್ಸಿನಲ್ಲಿ ಬಂದರೆ ಅದನ್ನು ಪೂರ್ತಿಗೊಳಿಸಿಯೇ ತೀರುತ್ತೀರಿ! ನಿಮ್ಮ ಮೇಲೆ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ, ಶ್ರೀ ಕುಮಾರೇಶ್ವರ, ಶ್ರೀ ವಿಜಯ ಮಹಾಂತೇಶ್ವರ ಈ ಮೂರು ಮಹಾನ್ ವ್ಯಕ್ತಿಗಳ ಕೃಪೆ ಅದೆ. ಅವಶ್ಯವಾಗಿ ಈ ದೀನ–ದಲಿತರ ಸೇವೆ ಮಾಡಿರಿ. ಆಸ್ಪತ್ರೆಯ ವ್ಯವಸ್ಥೆಯು ಶಿಕ್ಷಣ ಸಂಸ್ಥೆಗಳನ್ನು ತೆರೆಯುವದಕ್ಕಿಂತಲೂ ಹೆಚ್ಚು ಪವಿತ್ರವಾದ ಕೆಲಸವಾಗಿದೆ. ಮದರ್ ಥೆರೆಸಾ ಇದೇ ಕೆಲಸವನ್ನು ಮಾಡುತ್ತಿದ್ದಾರೆ' ಎಂದು ಅರಿಕೆ ಮಾಡಿಕೊಂಡ ಮರು ವರ್ಷವೇ ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ ಘಟಪ್ರಭಾ ಇದರ ಆವರಣದಲ್ಲಿಯೇ ದೀನ–ದಲಿತರ ಹಾಗೂ ಬಡರೋಗಿಗಳ ಸೇವೆಯು ಪರಮ ಪವಿತ್ರವಾದುದೆಂದು ಬಗೆದು, 'ಬಡರೋಗಿಗಳ ಉಚಿತ ಪ್ರಸಾದ ನಿಲಯವನ್ನು' ೧೯೮೩ ನೇ ಇಸ್ವಿಯಲ್ಲಿ ಪ್ರಾರಂಭಿಸಿದರು. ಅದರ ಉದ್ಘಾಟನೆಯನ್ನು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ಡಿ. ವೀರೇಂದ್ರ ಹೆಗಡೆಯವರಿಂದ ಮಾಡಿಸಿದರು. ಅದರ ಹೆಸರನ್ನು ಸಮಾಜದವರೆಲ್ಲರೂ ಕೂಡಿ 'ಜಗದ್ಗುರು ಗಂಗಾಧರ ಬಡರೋಗಿಗಳ ಉಚಿತ ಪ್ರಸಾದ ನಿಲಯ' ಎಂದು ನಾಮಕರಣ ಮಾಡಿದರು. ಅದು ನಿರಂತರ ಉಳಿದು ನಡೆಯುತ್ತ ಬೆಳೆಯಬೇಕೆಂಬ ಉದ್ದೇಶದಿಂದ ಶ್ರೀಮಠಕ್ಕೆ ಸಂಬಂಧಿಸಿರುವ, ತಮ್ಮದೇ ಆದ ಬೆಳಗಾಂವ ಜಿಲ್ಲೆಯಲ್ಲಿಯ ಯಾದವಾಡದಲ್ಲಿರುವ ೪೩ (ನಾಲ್ವತ್ತಮೂರು) ಎಕರೆ ಭೂಮಿಯನ್ನೂ ಸಹ ಅದಕ್ಕೆ (ಅನ್ನ ವ್ಯವಸ್ಥೆಗೆ) ನೀಡಿ ಕೃತಾರ್ಥರಾದರು. ಶ್ರೀ ಜಗದ್ಗುರುಗಳಿಗೆ ಬಡರೋಗಿಗಳು ದಿನಾಲು ಅಲ್ಲಿ ಊಟ ಮಾಡುವದನ್ನು ಕಂಡು ಬಲು ಸಂತಸ. ಅಲ್ಲದೇ ತಾವೇ ಸ್ವತಃ ಅವರ ಹತ್ತಿರ ಹೋಗಿ ಊಟ ಬಡಿಸುವ ದೃಶ್ಯವಂತೂ ಹೃದಯಂಗಮವಾದುದು. ಅದಕ್ಕಾಗಿ ಪ್ರತಿವರ್ಷ ಗೋಕಾಕ, ಹುಕ್ಕೇರಿ ತಾಲೂಕಿನ ಹಳ್ಳಿಗಳಲ್ಲಿ ಹೋಗಿ, ಧನ–ಧಾನ್ಯ ಭಿಕ್ಷೆ ಮಾಡಿ ಅದಕ್ಕೆ ಅನುಕೂಲ ಮಾಡಿಕೊಡುತ್ತಾರೆ. ನಿತ್ಯವೂ ಈ ಪ್ರಸಾದ ನಿಲಯದಲ್ಲಿ ನೂರಾರು ಬಡರೋಗಿಗಳು ಪ್ರಸಾದ ಸೇವಿಸುತ್ತಾರೆ. ನಿರಂತರ ಬಡರೋಗಿಗಳ ಪ್ರಸಾದ ನಿಲಯವು ನಡೆಯುವದಕ್ಕಾಗಿ ಹೊಸ ಯೋಜನೆ ರೂಪಿಸಿಕೊಂಡು ಕಾರ್ಯಪ್ರವೃತ್ತರಾಗಿದ್ದಾರೆ. 'ದಾನಗಳಲ್ಲಿ ಅನ್ನದಾನವೇ ಶ್ರೇಷ್ಠ'ವಾದದು. ಈ ದಾನದಿಂದ ಕೊಡುವವರಿಗೂ, ಪ್ರಸಾದ ಸ್ವೀಕರಿಸುವವರಿಗೂ ಸಂತೃಪ್ತಿಯುಂಟಾಗುತ್ತದೆ. ಈ ದವಾಖಾನೆಗಿ

ಹೆಚ್ಚಾಗಿ ಬಡರೋಗಿಗಳೇ ಬರುತ್ತಿರುವದರಿಂದ ಅವರಿಗೆ ಅನುಕೂಲ ಮಾಡಿ ಕೊಡಬೇಕೆಂಬುವೇ ಮುಖ್ಯ ಉದ್ದೇಶವಾಗಿದೆ. ಸಾರ್ವಜನಿಕರ ಕಡೆಯಿಂದ ಅಂದರೆ ಒಬ್ಬೊಬ್ಬರಿಂದ ಒಂದು ಸಾವಿರದಾ ಒಂದು (೧೦೦೧) ರೂಪಾಯಿಯಂತೆ ತೆಗೆದು ಕೊಂಡು, ದಾನ ಕೊಟ್ಟವರನ್ನು ಹಿತಚಿಂತಕರೆಂದು ಮಾಡಿಕೊಂಡು, ಆ ಪ್ರಸಾದ ನಿಲಯದ ಹೆಸರಿನಲ್ಲಿ ಕೂಡಿದ ಹಣವನ್ನು ಬ್ಯಾಂಕಿನಲ್ಲಿ ಠೇವಣಿಯಾಗಿಟ್ಟು, ಅದರ ಬಡ್ಡಿಯಿಂದ ನಡೆಸುವ ಯೋಜನೆ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ವರದು. ಈ ಯೋಜನೆಯು ಮನಸ್ಸಿಗೆ ಬಂದೊಡನೇ ಲಕ್ಷಾಂತರ ರೂಪಾಯಿಗಳನ್ನು ಈಗಾಗಲೇ ಕೂಡಿಸಿ ಬ್ಯಾಂಕಿನಲ್ಲಿರಿಸಿದ್ದಾರೆ. ಇದಕ್ಕಾಗಿ ಒಟ್ಟಿಗೆ ೨೫ ಲಕ್ಷ ರೂ. ಹಣ ಕೂಡಿಸಿ ಠೇವಣಿಯಾಗಿಟ್ಟು, ಅದರ ಬಡ್ಡಿಯಿಂದ ನಿರಾತಂಕವಾಗಿ ಅನ್ನದಾನ ನಡೆಯುವಂತೆ ಘಟಪ್ರಭಾದಲ್ಲಿ ಯೋಜನೆ ಮಾಡುತ್ತಿದ್ದಾರೆ. ಅನ್ನದ ಅಭಾವ ದಿಂದ ಎಷ್ಟೋ ಜನ ರೋಗಿಗಳು ನಿರ್ಗತಿಕರಾಗುವದನ್ನು ಕಂಡುಹಿಡಿದು, ಅವರಿಗೆ ಪೂರ್ಣ ಗುಣವಾಗುವ ತನಕ ಅನ್ನವನ್ನು ನೀಡಿದರೆ, ಅದು ಜೀವಕ್ಕೆ ನೆಮ್ಮದಿ ಕೊಡುತ್ತದೆಂಬುವ ಉದ್ದೇಶವೇ ಮುಖ್ಯವಾಗಿದೆ. ಪ್ರಸಾದ ನಿಲಯವು ಪ್ರಾರಂಭವಾದಾಗಿನಿಂದ ಅಲ್ಲಿ ಚಿಕಿತ್ಸೆ ಪಡೆದ ರೋಗಿಗಳ ಮರಣ ಸಂಖ್ಯೆಯೂ ಕಡಿಮೆಯಾಗುತ್ತ ನಡೆದಿದೆ. ಯಾವ ಜಾತಿ ಭೇದ ಮಾಡದೇ ಕೇವಲ ಬಡವರಾದ ಕ್ಷಯ ರೋಗಿಗಳಿಗೆ ನಿತ್ಯ ಅನ್ನ ನೀಡುತ್ತಲಿರುವ ಕಾರ್ಯ ಆದರ್ಶಯುತವಾಗಿದೆ. ಆರ್ಥಿಕ ಭದ್ರತೆ ಸುಧಾರಿಸಿದ ನಂತರ ಎಲ್ಲ ನಮೂನೆಯ ರೋಗಿಗಳಿಗೂ ಅನ್ನ ಕೊಡುವ ಯೋಜನೆ ರೂಪಿಸಿಕೊಂಡಿದ್ದಾರೆ.

ಈ ಪ್ರಸಾದ ನಿಲಯಕ್ಕಾಗಿ ಶ್ರೀಯುತ ಡಾ|| ಎಮ್.ಬಿ. ಸಾಲಿಮಠ ಹುಬ್ಬಳ್ಳಿ, ಶ್ರೀ ಆರ್. ಸಿ. ಅಂದಾನಿ ಗೋಕಾಕ, ಶ್ರೀ ರಾಮಣ್ಣ ಜಾಧವ ಹುಬ್ಬಳ್ಳಿ, ಶ್ರೀಯುತ ರ್‍ಯಾವಪ್ಪನವರು ಕೌಜಲಗಿ, ಶ್ರೀಯುತರಾದ ದಾದಾ ಮಾಸ್ತರರು ಘಟಪ್ರಭಾ, ಡಾ|| ವಿಲಾಸ ನಾಯಿಕವಾಡಿ ಮುಖ್ಯ ವೈದ್ಯಾಧಿಕಾರಿಗಳು, ಡಾ|| ಎಸ್. ಪಿ. ಹೊಂಬಳ ಹುಬ್ಬಳ್ಳಿ ಮುಂತಾದವರು ನಿಷ್ಠೆಯಿಂದ ಬಹು ಪರಿಶ್ರಮ ವಹಿಸಿ ಜಗದ್ಗುರುಗಳ ಜೊತೆಗೆ ಸೇವೆ ಸಲ್ಲಿಸುತ್ತಿರುವದು ಶ್ರೀ ಜಗದ್ಗುರುಗಳಿಗೆ ಆನಂದವನ್ನುಂಟು ಮಾಡಿದೆ. ಇದಕ್ಕೆ ಶ್ರೀ ಬಸವಗೌಡರು ಅಮ್ಮಣಗಿ ಅವರ ವಿಶೇಷ ಸಹಕಾರ ಅತ್ಯಮೂಲ್ಯವಾಗಿದೆ. ಪ್ರಸಾದ ನಿಲಯಕ್ಕೆ ಹಾಲಿನ ವ್ಯವಸ್ಥೆ ಗಾಗಿ ಒಂದು ಗೋಶಾಲೆಯನ್ನು ಪ್ರಾರಂಭಿಸಲು ಯೋಜನೆಯೊಂದನ್ನು ಮಾಡಿ ಕೊಂಡಿದ್ದಾರೆ. ರೋಗಿಗಳಿಗೆ ಔಷಧದ ಜೊತೆಗೆ ಅನ್ನ ನೀಡುವ ವ್ಯವಸ್ಥೆ ಮಾಡಿದ ಶ್ರೀ ಜಗದ್ಗುರುಗಳವರ ಈ ಮಾನವೀಯ ಸೇವೆ ಅತ್ಯದ್ಭುತವಾದುದು! ಅನುಕರಣೀ ಯವಾದುದು!! ದಾನಿಗಳಿಗೂ, ವ್ಯವಸ್ಥಾ ಸಿಬ್ಬಂದಿಗೂ ಪುಣ್ಯಪ್ರದವಾದುದು!

## ಸಾಂಪತ್ತಿಕ ಸಾಧನೆಯಲ್ಲಿ ಸೀಮೋಲ್ಲಂಘನ: ಶ್ರೀ ಗುರುಸಿದ್ಧೇಶ್ವರ ಸಹಕಾರಿ ಬ್ಯಾಂಕ ಸ್ಥಾಪನೆ

'ಸಹಕಾರ' ಎಂದರೆ ಸಂಘಟಿತ ವ್ಯವಸ್ಥೆಯ ಮೂಲಕ ಸ್ವಾವಲಂಬನೆಯ ಸಾಧನವಾಗಿರುವದಲ್ಲದೇ, ಪ್ರಜಾಪ್ರಭುತ್ವದ ಆರ್ಥಿಕ ಕಾರ್ಯ ನಿರ್ವಹಣೆಯಲ್ಲಿ ಸಹಕಾರವು ದೊಡ್ಡ ಸಾಧನವಾಗಿದೆ. ಈ ಸಹಕಾರದ ಅರ್ಥವನ್ನು ಅರಿತುಕೊಂಡ ಪೂಜ್ಯ ಜಗದ್ಗುರುಗಳವರ ಬದುಕೇ ಸಿದ್ಧರಾಮ ಶಿವಯೋಗಿಯ ಕಾಯಕ ಕ್ಷೇತ್ರ ವೆಂದು ಹೆಸರುವಾಸಿಯಾಗಿದೆ. ಇವರ ಈ ಸಮಗ್ರ ಆರ್ಥಿಕ ಸಂಪನ್ಮೂಲಗಳಿಗೆ ಒಂದು ಪ್ರತ್ಯೇಕ ಬ್ಯಾಂಕಿನ ಅವಶ್ಯಕತೆ ಕಂಡುಬಂದಿತು. ಹುಬ್ಬಳ್ಳಿ ಮೂರುಸಾವಿರ ಮಠದ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸೇವಾ ಸಮಿತಿಯನ್ನು ಸ್ಥಾಪಿಸಿ, ನಿಧಿ ಸಂಗ್ರಹಿಸುವ ಸಮಯಕ್ಕೆ ಒಂದು ಸಹಕಾರಿ ಬ್ಯಾಂಕನ್ನು ಸ್ಥಾಪಿಸ ಬೇಕೆಂಬುವ ಅಂದಿನ ಸಂಕಲ್ಪವನ್ನು ಈಡೇರಿಸದೇ ಜಗದ್ಗುರುಗಳು ಬಿಡಲಿಲ್ಲ. ಅವರು ನುಡಿದ ನುಡಿ ಅದು ಕಾರ್ಯಗತವಾದರೇನೇ ಶ್ರೀ ಜಗದ್ಗುರುಗಳಿಗೆ ಸಮಾಧಾನ. ಯಾವುದೇ ಆಗಲಿ ಕಾರ್ಯಗತ ಆಗುವತನಕ ಅದರ ಬಗ್ಗೆ ಚಿಂತನ, ಪರಸ್ಪರ ಸಮಾಲೋಚನೆ ಮಾಡುತ್ತ ಅದು ಎಷ್ಟು ದಿನಗಳು ಸಂದರೂ ತಮ್ಮ ಹಟವನ್ನು ಸಾಧಿಸುವದೇ ಅವರ ಧ್ಯೇಯ. ಒಳ್ಳೆಯದಕ್ಕೆ ಅವರ ಛಲ ಆದರ್ಶಮಯವಾದುದು. ಸಮಾಜವನ್ನು ಆರ್ಥಿಕವಾಗಿ ಮುನ್ನಡೆಸಬಲ್ಲ ಒಂದು ಅರ್ಥವ್ಯವಸ್ಥೆಗೂ ಇದು ನೆಲೆಗಟ್ಟಾಗಲೆಂದು ಬಯಸಿ ಶ್ರೀ ಗುರುಸಿದ್ಧೇಶ್ವರರ ಹೆಸರಿನಲ್ಲಿ ೧೯೭೪ ರಂದು ಸಹಕಾರಿ ಬ್ಯಾಂಕ ಸ್ಥಾಪಿಸಿದರು. ಇದಕ್ಕೆ ವೀರಶೈವ ಸಂಘಟನಾ ಸಮಿತಿಯವರು ಪೂರ್ಣ ಸಹಕರಿಸಿ ಪರಿಶ್ರಮಿಸಿದರು. ಜನರನ್ನು ಕೂಡಿಸಿದರು. ಎಲ್ಲರಿಗೂ ಒಳ್ಳೇ ತಿಳಿವಳಿಕೆ ನೀಡಿದರು. ಸಹಕಾರ ತತ್ತ್ವದ ಮಹತ್ವವನ್ನು ವಿವರಿಸಿದರು. ಸಹಕಾರದೊಡನೆ ನಡೆದು ಬ್ಯಾಂಕನ್ನು ಆದರ್ಶ ವನ್ನಾಗಿ ಮಾಡಲು ತಿಳಿಸಿ ಪ್ರತಿಯೊಬ್ಬರಿಗೂ ಹುರುಪು ಹುಮ್ಮಸ್ಸು ನೀಡಿದರು. ಶ್ರೀ ಗುರುಸಿದ್ಧೇಶ್ವರ ಸಹಕಾರಿ ಬ್ಯಾಂಕ ತನ್ನ ಕಾರ್ಯಾರಂಭ ಮಾಡಿದ ೪-೫ ವರ್ಷಗಳಲ್ಲಿಯೇ ಮೂರು ಕೋಟಿಯ ಮೊತ್ತವನ್ನು ದಾಟಿರುವದು ಗುರು ಸಿದ್ಧೇಶ್ವರನ ಆಶೀರ್ವಾದ ಹಾಗೂ ದಿಗ್ದರ್ಶಕ ಮಂಡಳಿಯ ಪರಿಶ್ರಮದ ಫಲ ವೆಂದರೆ ತಪ್ಪಾಗದು.

ಇದಕ್ಕೆ ಪ್ರತ್ಯೇಕ ಸಹಕಾರ ತತ್ತ್ವದ ತಳಹದಿಯ ಮೇಲೆ ದಿಗ್ದರ್ಶಕ ಮಂಡಳಿಯನ್ನು ರಚಿಸಿ, ಅದರ ಮುಖಾಂತರ ಪೂಜ್ಯ ಜಗದ್ಗುರುಗಳ ಸಕಾಲಿಕ ಮಾರ್ಗದರ್ಶನದ ಮೇಲೆ ಇದು ಮುನ್ನಡೆದು, ಅತ್ಯದ್ಭುತ ಪ್ರಗತಿ ಸಾಧಿಸುತ್ತಿರುವದು ಕಂಡಾಗ ನಾಡಿಗೆ ನಾಡೇ ಹೆಮ್ಮೆಪಡುವಂತಾಗಿದೆ. ಆರ್ಥಿಕ ಭದ್ರತೆಯಾಗದ ವಿನಃ ಯಾವ ಸಂಸ್ಥೆಗಳೂ ಬೆಳೆಯಲಾರವೆಂಬುದೇ ಶ್ರೀ ಜಗದ್ಗುರುಗಳ ಅಭಿಮತ.

ಆ ದೃಷ್ಟಿಯಿಂದ ಈ ಬ್ಯಾಂಕನ್ನು ಸ್ಥಾಪಿಸಿದರು. ಸರ್ವ ಸಮಾಜದವರಿಗೂ ಅನುಕೂಲವಾದಂತಾಗಿದೆ. ಪ್ರಾರಂಭ ದೆಸೆಯಲ್ಲಿ ಪ್ರಥಮ ಚೇರಮನ್ನರಾದ ಶ್ರೀ ಎಸ್. ಜಿ. ಕವಳಿಯವರು ನಿಷ್ಠೆಯಿಂದ ದುಡಿದು ಆದರ ಪ್ರಗತಿಗೆ ಕಾರಣ ರಾದರು. ಇವರೊಡನೆ ವೈಸ್ ಚೇರಮನ್ನರಾದ ಲಿಂ|| ಶಿರಹಟ್ಟಿಮಠ ವಕೀಲರು ಸಹಕರಿಸಿ ಸೇವೆ ಸಲ್ಲಿಸಿ ಆವರಿಗೆ ಅನುಕೂಲವಾಗಿದ್ದುದು ಸಂಸ್ಮರಣೀಯ. ನಂತರ ಶ್ರೀ ಗಂಗಣ್ಣ ಬತ್ಲಿ ಅವರು ಈ ಬ್ಯಾಂಕಿನ ಚೇರಮನ್ನರಾಗಿ ಮತ್ತಷ್ಟು ಪ್ರಗತಿ ಯಾಗಲು ಕಾರಣರಾದರು. ಕೆಲವೇ ದಿನಗಳಲ್ಲಿ ಅದ್ಭುತ ಪ್ರಗತಿ ಸಾಧಿಸಿ ತೋರಿಸಿ ದರು. ಈ ಬ್ಯಾಂಕಿನ ಮ್ಯಾನೇಜರರಾದ ಎಸ್. ಜಿ. ಟೆಂಗಿನಕಾಯಿಯವರ ಸಾಹಸ, ದುಡಿಮೆ, ಸಹಕಾರ ಮನೋಭಾವನೆಯೂ ಮೆಚ್ಚುವಂತಹದು. ಎಲ್ಲಾ ದಿಗ್ದರ್ಶಕ ಮಂಡಳಿಯವರು ಪ್ರಾಮಾಣಿಕತೆಯಿಂದ ದುಡಿದಿರುವುದರ ಪರಿಣಾಮದ ಫಲ ವಾಗಿ ಇಂದು ರಾಜ್ಯದಲ್ಲಿ ಆದರ್ಶ ಸಹಕಾರಿ ಬ್ಯಾಂಕ ಎನಿಸಿದೆ. ಕೇವಲ ೫ ವರ್ಷ ಗಳಲ್ಲಿ ಮೂರು ಕೋಟಿಗಿಂತಲೂ ಮಿಗಿಲಾಗಿ ಠೇವಣಿ ಕೂಡಿಸಿದ್ದ ಸಹಕಾರಿ ಬ್ಯಾಂಕುಗಳಲ್ಲಿ ರಾಜ್ಯದಲ್ಲಿಯೇ ಇದೇ ಮೊದಲನೆಯದು ಎಂದು ಅನ್ನುವ ಅಧಿಕಾರಿ ವರ್ಗದವರ ಈ ನುಡಿ ಕೇಳಿದಾಗ ಎಲ್ಲರಿಗೂ ಸಂತಸವಾಗದಿರದು. ಇದೇ ರೀತಿ ಸಹಕಾರದೊಡನೆ ಮುನ್ನಡೆಯಬೇಕೆಂಬುದು ಶ್ರೀ ಜಗದ್ಗುರುಗಳ ಹಿರಿಯಾಸೆ ಯಾಗಿದೆ.

**ಮಹಿಳೆಯರ ಮುಡಿಲಿಗೆ ಮಲ್ಲಿಗೆ ಹೂ:**
**ಮಹಿಳಾ ತಾಂತ್ರಿಕ ಶಿಕ್ಷಣ ಶಾಲೆ**

ನಿರುದ್ಯೋಗ ಸಮಸ್ಯೆಯು ನಾಡಿನ ತುಂಬೆಲ್ಲ ತಾಂಡವವಾಡುತ್ತಿರುವದನ್ನು ಕಂಡು ಶ್ರೀ ಮೂಜಗಂ ಜಗದ್ಗುರುಗಳು ಮರುಗಿದರು. ಕೇವಲ ಹೈಸ್ಕೂಲ್, ಕಾಲೇಜುಗಳನ್ನು ತೆಗೆದರೆ ನಿರುದ್ಯೋಗ ಸಮಸ್ಯೆ ಸಂಪೂರ್ಣ ಬಗೆಹರಿಯದು. ಆರ್ಟ್ಸ್ ಕಾಲೇಜುಗಳಿಂದ ಜನರಿಗೆ ಹೊಟ್ಟೆ ತುಂಬದು. ಆದರಿಂದ ಮತ್ತಷ್ಟು ಮಾನಸಿಕ ಸಮಸ್ಯೆಯು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ನೌಕರಿಯಿಲ್ಲದೇ ಪ್ರತ್ಯಕ್ಷ ಅನುಭವವಾಗುತ್ತಿರುವದನ್ನು ನೋಡಿದ ಶ್ರೀ ಜಗದ್ಗುರುಗಳು ಜನತೆಯ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಹೆಜ್ಜೆ ಹಾಕುವಂತೆ ಮಾಡಬೇಕೆಂದು ಯೋಚಿಸಿದರು. ನಿತ್ಯವೂ ನೂರಾರು ಪದವೀಧರರು ನೌಕರಿಯಿಲ್ಲದೇ ನೌಕರಿಗಾಗಿ ಬಯಸಿ, ಜಗದ್ಗುರುಗಳನ್ನು ಸಂದರ್ಶಿಸಿ ಕಣ್ಣೀರಿಡುತ್ತಿರುವುದು ದುಃಖಸಾಗರದಲ್ಲಿ ಮುಳುಗಿಸಿತು. ಉದ್ಯೋಗ ವಿದ್ದರೆ ಮನುಷ್ಯನಿಗೆ ಶಾಂತಿ, ಕಾಂತಿ, ಅದಿಲ್ಲದಿದ್ದರೆ ಜೀವನವೆಲ್ಲವೂ ಹಾಳುಭಾವಿ ಯಿದ್ದಂತೆ. ವ್ಯಕ್ತಿಗೆ ಶಕ್ತಿ ಬರದು. ಮನಸ್ಸಿಗೆ ನೆಮ್ಮದಿ ಇರದು. ಹೀಗಾಗಿ ಮನುಷ್ಯನು ನಿರುಪಾಯನಾಗಿ ದುರ್ಮಾರ್ಗದತ್ತ ಧಾವಿಸಲೂಬಹುದು. ಕಾರಣ ಇಂದಿನ ಯುವ ಪೀಳಿಗೆಗೆ ಆವರ ದಿನನಿತ್ಯಕ್ಕೆ ಉಪಯೋಗವಾಗುವಂತಹ ತಾಂತ್ರಿಕ

ಜ್ಞಾನ ಕೊಡಬೇಕೆಂದು ಶ್ರೀ ಜಗದ್ಗುರುಗಳು ಸಂಕಲ್ಪಿಸಿದರು. ಸಂಕಲ್ಪಿಸಿದ್ದೇತಡ ಆ ಕಾರ್ಯವನ್ನು ನೆರವೇರಿಸಲು ಶ್ರೀ ಜಗದ್ಗುರು ಮೂರುಸಾವಿರಮಠದ ವಿದ್ಯಾ ವರ್ಧಕ ಸಂಘದ ಚೇರಮನ್‌ರಾದ ಶ್ರೀ ನಾರಾಣಜಿ ಕಾನಜಿ ಅವರೊಡನೆ ಈ ಬಗ್ಗೆ ವಿಚಾರಿಸಿದರು. ಕಾನಜಿ ಅವರು ಸಲಹೆ ನೀಡಿದರು. ರಾಜ್ಯ ಸರಕಾರದವರು ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳು ಈಗಾಗಲೇ ಕೇವಲ ಗಂಡುಮಕ್ಕಳಿಗಾಗಿ ಕೈಗಾರಿಕಾ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು (I. T. I.) ತೆಗೆದು ನಡೆಸುತ್ತಿದ್ದರು; ಮಹಿಳೆಯರಿಗಾಗಿ ಪ್ರತ್ಯೇಕ ಕೈಗಾರಿಕಾ ತರಬೇತಿ ಸಂಸ್ಥೆ (I. T. I.) ಈ ಭಾಗ ದಲ್ಲಿ ಇದ್ದಿಲ್ಲ. ಈ ವಿಚಾರವನ್ನು ಅಂದಿನ ಕೈಗಾರಿಕಾ ಸಚಿವರಾದ ಶ್ರೀ ಎಸ್. ಆರ್. ಬೊಮ್ಮಾಯಿ ಹಾಗೂ ಕೇಂದ್ರ ಸಚಿವರಾದ ಶ್ರೀ ವೀರೇಂದ್ರ ಪಾಟೀಲರೊಡನೆ ವಿಚಾರಿಸಿ ಜಗದ್ಗುರುಗಳು ಒಂದು ನಿರ್ಣಯಕ್ಕೆ ಬಂದರು. ಫಲಸ್ವರೂಪವಾಗಿ ಮಹಿಳಾ ಕೈಗಾರಿಕಾ ತರಬೇತಿ ಕೇಂದ್ರ ನಡೆಸಲು ಮೂರುಸಾವಿರಮಠ ವಿದ್ಯಾ ವರ್ಧಕ ಸಂಘದ ವತಿಯಿಂದ ಸರಕಾರಕ್ಕೆ ಅರ್ಜಿ ಸಲ್ಲಿಸಿದರು. ಕರ್ನಾಟಕ ರಾಜ್ಯ ಸರ್ಕಾರದಿಂದ ದಿನಾಂಕ ೨೯–೧೧–೧೯೮೩ ರಂದು ಅನುಮತಿ ದೊರೆತು, ಮೂರು ಸಾವಿರಮಠದ ಆವರಣದಲ್ಲಿ ಈ ತರಬೇತಿ ಸಂಸ್ಥೆ ಪ್ರಾರಂಭವಾಗಿ ಯಶಸ್ವಿಯಾಗಿ ನಡೆಯುತ್ತಿದೆ. ಮಹಿಳೆಯರಿಗೆ ಕೈಗಾರಿಕಾ ತರಬೇತಿ ಸಂಸ್ಥೆಯಲ್ಲಿ ಕಲಿಯಬೇಕೆಂಬ ಕಲ್ಪನೆ ಅನೇಕ ಮಹಿಳೆಯರಿಗೆ ಇಲ್ಲದಿದ್ದರೂ ಅವರಿಗೆಲ್ಲ ತಿಳಿಹೇಳಿ ರೇಡಿಯೋ ಮತ್ತು ಟೆಲಿವ್ಹಿಜನ್, ಡ್ರಾಫ್ಟ್ಸ್‌ಮನ್ ಸಿವಿಲ್ ಮೊದಲಿಗೆ ಈ ಎರಡು ವಿಷಯ ಗಳಲ್ಲಿ ತರಬೇತಿ ಪಡೆಯಲು ಅನುಕೂಲ ಮಾಡಿಕೊಟ್ಟರು.

ಇಂದು ಆ ಸಂಸ್ಥೆ ಬೆಳೆಯುತ್ತ ನಡೆದಿದೆ. ಪ್ರತಿಯೊಂದು ವಿಭಾಗದಲ್ಲಿಯೂ ನುರಿತ ಪ್ರತಿಭಾವಂತ ಅನುಭವಿಕ ಅಧ್ಯಾಪಕಿಯರನ್ನು ನಿಯಮಿಸಿದರು. ಈ ಮಹಿಳಾ ಕೈಗಾರಿಕಾ ತರಬೇತಿ ಕೇಂದ್ರಕ್ಕೆ ಬೇಕಾಗುವ ಸುಮಾರು ಎರಡೂವರೆ ಲಕ್ಷ ರೂಪಾಯಿ ಬೆಲೆಯ ಅತ್ಯುತ್ತಮ ಸಲಕರಣೆಗಳನ್ನು ಒದಗಿಸಲಾಯಿತು. ವಿದ್ಯಾರ್ಥಿನಿ ಯರಿಗೆ ಯಾವುದಕ್ಕೂ ಕೊರತೆಯಿಲ್ಲದಂತೆ ಅನುಕೂಲ ಮಾಡಿಕೊಡಲಾಯಿತು.

ಉದ್ಯೋಗ ಮೂಲಶಿಕ್ಷಣವನ್ನು ನೀಡುವಲ್ಲಿ ಆದರ್ಶ ಆಶಾವಾದಿಗಳಾದ ಪೂಜ್ಯ ಶ್ರೀ ಜಗದ್ಗುರುಗಳು ಮಹಿಳಾ ತಾಂತ್ರಿಕ ವಿದ್ಯಾಲಯವೊಂದನ್ನು ಹುಬ್ಬಳ್ಳಿ ಯಲ್ಲಿ ಪ್ರಾರಂಭಿಸಿದ್ದು, ಇದು ರಾಜ್ಯದಲ್ಲಿಯೇ ಈ ಮಾದರಿಯ ಪ್ರಪ್ರಥಮ ಆದರ್ಶ ಸಂಸ್ಥೆಯಾಗಿದ್ದು, ಹೆಣ್ಣುಮಕ್ಕಳಿಗೆ ನಿರುದ್ಯೋಗ ಸಮಸ್ಯೆ ಬಗೆಹರಿಸುವ ಆಸರೆ ಕಂಬವಾಗಿದೆ. ಈ ವಿದ್ಯಾವರ್ಧಕ ಸಂಘದವರು I. T. I. ಪ್ರಾರಂಭಿಸಿದ ನಂತರ ರಾಜ್ಯ ಸರ್ಕಾರದವರು ಹಾಗೂ ಇನ್ನಿತರ ಸಂಸ್ಥೆಗಳೂ ಮಹಿಳೆಯರಿಗಾಗಿ ತಾಂತ್ರಿಕ ಸಂಸ್ಥೆ ತೆರೆಯಲು ಮುಂದಾದರು. ಈ ಸಂಸ್ಥೆಯ ಚೇರ್‌ಮನ್‌ರಾದ ಶ್ರೀ ವೀರಚಂದ ನಾರಣಜಿ ಕಾನಜಿ ಅವರೂ ಇದಕ್ಕೆ ಕಾರಣೀಭೂತರಾಗಿದ್ದಾರೆ.

ಶ್ರೀ ಜಗದ್ಗುರುಗಳಿಗೆ ಧೈರ್ಯ ತಂದುಕೊಟ್ಟು ಆರ್ಥಿಕ ದೃಷ್ಟಿಯಿಂದ ತೋರದರೆ ಬರದಂತೆ ಪರಿಶ್ರಮವಹಿಸಿ ಕಾರ್ಯಪ್ರವೃತ್ತರಾಗಿ ದುಡಿಯುತ್ತಿರುವದು ನಿಜಕ್ಕೂ ಸ್ತುತ್ಯಾರ್ಹವಾದುದು. ಈ ಮಹಿಳಾ ಕೈಗಾರಿಕಾ ತರಬೇತಿ ಸಂಸ್ಥೆಯ ಪ್ರಾಚಾರ್ಯರಾದ ಕುಮಾರಿ ಚೇತನಾ ಹಿರೇಮಠ ಮತ್ತು ಉಳಿದ ಸಿಬ್ಬಂದಿ ನಿಷ್ಠೆಯಿಂದ ದುಡಿಯುತ್ತಿರುವದರ ಪರಿಣಾಮವಾಗಿ ಈ ಸಂಸ್ಥೆ ಬೆಳವಣಿಗೆಯತ್ತ ಸಾಗಿದೆ. ಈ ಕೈಗಾರಿಕಾ ತರಬೇತಿ ಸಂಸ್ಥೆಯಲ್ಲಿ ಓದುತ್ತಿರುವ ೧೦ ವಿದ್ಯಾರ್ಥಿನಿಯರಿಗೆ ಶ್ರೀ ಮೂರುಸಾವಿರಮಠದಿಂದ ವಿದ್ಯಾರ್ಥಿವೇತನವನ್ನೂ ಸಹ ಕೊಡಲಾಗುತ್ತಿದೆ.

**ಇಲಕಲ್ಲಿಗೆ ಭವ್ಯ ವಿದ್ಯಾಲಯ:**
**ಶ್ರೀ ಜಗದ್ಗುರು ಗಂಗಾಧರ ಕೈಗಾರಿಕಾ ತರಬೇತಿ ಸಂಸ್ಥೆ**

ಇಲಕಲ್ಲಿನ ವಿಜಯಮಹಾಂತೇಶ್ವರ ವಿದ್ಯಾವರ್ಧಕ ಸಂಘವು ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಪರಿಶ್ರಮದ ಫಲದಿಂದ ಹುಟ್ಟಿದ ಸಂಸ್ಥೆ. ಅದು ಇದೀಗ ಸರ್ವರ ಸಹಕಾರ ಸಹಾಯದಿಂದ ಬೃಹತ್ಪ್ರಮಾಣದಿಂದ ಬೆಳೆದು ವಿದ್ಯಾ ಬೆಳಗು ನೀಡುತ್ತಿರುವ ಈ ಸಂಸ್ಥೆ ವಿಜಾಪೂರ ಜಿಲ್ಲೆಗೆ ಶೋಭೆ ತಂದಿದೆ. ಈ ಸಂಸ್ಥೆಯು ವಿಜಯಮಹಾಂತೇಶ್ವರ ಹೆಸರಿನಲ್ಲಿ ಕಲಾ, ವಾಣಿಜ್ಯ, ವಿಜ್ಞಾನ ಕಾಲೇಜು ಸುಂದರ ಹಾಗೂ ಸುವ್ಯವಸ್ಥಿತ ರೀತಿಯಲ್ಲಿ ಬೆಳೆಯುತ್ತ, ಆರ್ಥಿಕ ಸ್ಥಿತಿಯಲ್ಲಿಯೂ ಭದ್ರವಾಗಿ ಆದರ್ಶದತ್ತ ಸಾಗಿರುವದು ವಿಜಯಮಹಾಂತೇಶನ ಕೃಪಾ ವಿಶೇಷವೇ ಕಾರಣವಾಗಿದೆ.

ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಸ್ಥೆಯಿಂದ ಇಲಕಲ್ಲಿನಲ್ಲಿ ನಿರುದ್ಯೋಗ ಸಮಸ್ಯೆ ಬಗೆಹರಿಸುವದಕ್ಕಾಗಿ ವಿದ್ಯಾವರ್ಧಕ ಸಂಘದ ಚೇರಮನ್ನರಾದ ಶ್ರೀ ವಿ. ಸಿ. ಅಕ್ಕಿ ಹಾಗೂ ಕಾರ್ಯದರ್ಶಿಗಳಾದ ಶ್ರೀ ಬಿಜ್ಜಳ ಮಾಸ್ತರರು, ಸದಸ್ಯರಾದ ಜಾಪಗಲ್ ಮುಂತಾದವರು ಒಮ್ಮೆ ಶ್ರೀ ಜಗದ್ಗುರುಗಳ ಸನ್ನಿಧಿಗೆ ಹುಬ್ಬಳ್ಳಿಗೆ ಬಂದು ನಮ್ಮದೇ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಮತ್ತೊಂದು ಕೈಗಾರಿಕಾ ತರಬೇತಿ ಸಂಸ್ಥೆಯನ್ನು ತೆರೆಯಬೇಕೆಂದು ಮಾಡಿದ್ದೇವೆ. ಇದರಿಂದ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಗುವದು. ನಿಮ್ಮ ಸಹಾಯ ಅತ್ಯವಶ್ಯ ಬೇಕು. ನಿಮ್ಮ ಹೆಸರು ನಮ್ಮೂರಲ್ಲಿ ಉಳಿಯಬೇಕು. ಅದೇ ನಿಮ್ಮ ಹೆಸರು ಇಡುವಾಗ ಶ್ರೀ ವಿಜಯಮಹಾಂತೇಶನ ಹೆಸರು ಸೂಚಿಸಿ ನಿಮ್ಮ ವಿಶಾಲತೆಯನ್ನು ತೋರಿಸಿದಿರಿ. ಈಗ ಮಾತ್ರ ನಿಮ್ಮ ಹೆಸರಿನಲ್ಲಿ ನಮ್ಮ ಸಂಸ್ಥೆಯ ವತಿಯಿಂದ ನಡೆಸಬೇಕೆಂದು ನಿರ್ಧರಿಸಿದ್ದೇವೆ ಎಂದು ಅನೇಕ ಬಗೆಯಾಗಿ ಕೇಳಿಕೊಂಡ ನಂತರ ಶ್ರೀ ಜಗದ್ಗುರುಗಳು ಒಪ್ಪಿಕೊಂಡರು. ಶ್ರೀ ವಿಜಯಮಹಾಂತೇಶ್ವರಮಠದ ಆಶ್ರಯದಲ್ಲಿ ಬೆಳೆದು ಅಧ್ಯಯನ ಮಾಡಿ ದೊಡ್ಡವರಾದ ಹುಬ್ಬಳ್ಳಿ ಮೂರುಸಾವಿರಮಠದ

ಶ್ರೀ ಜಗದ್ಗುರುಗಳು ವಿಜಯಮಹಾಂತೇಶ್ವರ ಕಾಲೇಜಿಗೆ ಪ್ರಾರಂಭದಲ್ಲಿ ಮೂರು ಸಾವಿರಮಠದ ಅಧಿಪತಿಗಳಾಗಿ ತನು-ಮನ-ಧನದಿಂದ ಸಾಕಷ್ಟು ಸಹಾಯ ಮಾಡಿದ್ದರೂ ಸಹ ಇಲಕಲ್ಲ ವಿದ್ಯಾವರ್ಧಕ ಸಂಘದವರ ಮಾತಿಗೆ ಬೆಲೆಕೊಟ್ಟು ಮತ್ತೆ ಎರಡು ಲಕ್ಷ ರೂಪಾಯಿಗಳನ್ನು ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಪ್ರಾರಂಭಿಸಲು ಹುಬ್ಬಳ್ಳಿ ಮೂರುಸಾವಿರಮಠದಿಂದ ಕೊಡಮಾಡಿದ್ದು ನೋಡಿದರೆ ಇನ್ನುಳಿದ ಸ್ವಾಮಿಗಳಿಗೆ ಮಾರ್ಗದರ್ಶಿಗಳಾಗಿದ್ದಾರೆ. ಎಷ್ಟೋ ಸ್ವಾಮಿಗಳು ಇದ್ದಾರೆ. ಓದಿದ ಸ್ಥಾನವನ್ನು ಹೇಳಲು ನಾಚಿಕೆ ಪಡುತ್ತಾರೆ. ಅಂತಹ ಅಭಿಮಾನ ಶೂನ್ಯರೂ ಇದ್ದಾರೆ. ಪೂಜ್ಯ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ವಿಶಾಲ ಮನೋಭಾವನೆ ಆದರ್ಶವನ್ನು ಇನ್ನುಳಿದವರು ಅನುಸರಿಸಿದರೆ ನಾಡಿಗೆ, ಸಮಾಜಕ್ಕೆ ಕೃತಜ್ಞತೆಯನ್ನು ಸಲ್ಲಿಸಿದಂತಾದೀತು. ಶ್ರೀ ಜಗದ್ಗುರುಗಳು ಎಷ್ಟೋ ಸಂಸ್ಥೆಗಳನ್ನು ತೆರೆದು ತಾವು ನಡೆಸುತ್ತಿದ್ದರೂ ಮತ್ತೆ ಈ ಇಲಕಲ್ಲ ಸಂಸ್ಥೆಗೆ ಉದಾರ ದಾನ ನೀಡಿದ್ದು ಅವರ ಮಾತೃಹೃದಯದ್ಯೋತಕವಾಗಿದೆ. ಇದೀಗ ಇಲಕಲ್ಲದಲ್ಲಿಯ ಶ್ರೀ ಜಗದ್ಗುರು ಗಂಗಾಧರ ಮೂರುಸಾವಿರಮಠದ ಕೈಗಾರಿಕಾ ತರಬೇತಿ ಸಂಸ್ಥೆಯು ಕರ್ನಾಟಕ ಸರಕಾರದಿಂದ ಅಧಿಕೃತ ಮನ್ನಣೆ ಪಡೆದು ಪ್ರಸುತ್ತ ಮೂರನೇ ವರ್ಷದಲ್ಲಿ ಕಾಲಿಡುತ್ತಿದ್ದು, ಒಳ್ಳೆಯ ಶಿಸ್ತಿನಿಂದ ಆದರ್ಶಯುತವಾಗಿ ನಡೆದಿದೆ. ಪ್ರತಿಯೊಬ್ಬರಿಗೂ ಒಳ್ಳೇ ಶಿಕ್ಷಣ ನೀಡುತ್ತಿದ್ದು, ಅವರ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸುವದಕ್ಕಾಗಿ ಈ ಸಂಸ್ಥೆ ಕೈದೀವಿಗೆಯಂತಿದೆ. ಈ ತರಬೇತಿ ಸಂಸ್ಥೆಯಲ್ಲಿ ಪ್ರತಿಭಾವಂತ ಅನುಭವಿಕ A. T. I. ಮತ್ತು C. T. I. ತರಬೇತಿ ಹೊಂದಿದ ಅಧ್ಯಾಪಕರಿದ್ದಾರೆ. ಸುಸಜ್ಜಿತ ಅತ್ಯುತ್ತಮ ಸಲಕರಣೆಗಳ ಸೌಕರ್ಯವಿದ್ದು, N. C. V. T. ಪದ್ಧತಿಯ ಪ್ರಕಾರ ತರಬೇತಿ ಗೊಳಿಸಲಾಗುತ್ತಿದೆ. ೧೮೦ ವಿದ್ಯಾರ್ಥಿಗಳು ಈಗ ಅಲ್ಲಿ ಓದುತ್ತಿದ್ದಾರೆ. ಅವರಿಗೆ ೧) ಫಿಟರ್ ೨) ಡ್ರಾಫ್ಟ್ಸಮನ್ ಸಿವಿಲ್ ೩) ಇಲೆಕ್ಟ್ರೀಶಿಯನ್ ೪) ರೇಡಿಯೋ ಮತ್ತು ಟಿ. ವಿ. (ಮೆಕ್ಯಾನಿಕ್) ಮುಂತಾದ ಟ್ರೇಡುಗಳ ತರಬೇತಿ ಕೊಡಲಾಗುತ್ತಿದೆ. ತರಬೇತಿಯ ನಂತರ ಪಾಸಾದ ಅಭ್ಯರ್ಥಿಗಳಿಗೆ ನೀಡುವ ಸರ್ಟಿಫಿಕೇಟ್‌ನಿಂದ ಸ್ವಯಂ ಉದ್ಯೋಗಕ್ಕಾಗಿ, ಕೆಲಸಕ್ಕಾಗಿ ಸರ್ಕಾರದಿಂದ ಸಹಾಯ ಪಡೆಯಬಹುದಲ್ಲದೇ ಸರಕಾರಿ ಕೆಲಸಕ್ಕಾಗಿ ಅನುಕೂಲವಾಗುತ್ತದೆ. ಈ ಸಂಸ್ಥೆ ಪ್ರಾರಂಭವಾದ ಎರಡೇ ವರ್ಷದಲ್ಲಿ ಬೆಂಗಳೂರಿನ D. E. T. ಯವರು ಇದನ್ನು ಪರೀಕ್ಷಾ ಕೇಂದ್ರವೆಂದು ಮನ್ನಣೆ ನೀಡಿದ್ದು ಹೆಮ್ಮೆಯ ವಿಷಯವಾಗಿದೆ. ಈಗಾಗಲೇ ಸುಮಾರು ಹನ್ನೊಂದು ಲಕ್ಷ ರೂಪಾಯಿ ವೆಚ್ಚದ ಸ್ವಂತ ಕಟ್ಟಡದ ಕೆಲಸ ಇಲಕಲ್ಲದಲ್ಲಿ ಪ್ರಾರಂಭವಾಗಿದ್ದು, ಇದು ಪ್ರಾಚಾರ್ಯರ ಹಾಗೂ ಚೇರಮನ್ನರ ಸಾಹಸದ ಫಲವಾಗಿದೆ.

ಈ ಜಗದ್ಗುರು ಗಂಗಾಧರ ಮೂರುಸಾವಿರಮಠ I. T. I. ಸಂಸ್ಥೆಯ ಬೆಳವಣಿಗೆಗಾಗಿ ಶ್ರೀ ವೀರನಗೌಡ ಪಾಟೀಲರು ಚೇರ್‌ಮನ್ ಹಾಗೂ ಪ್ರಾಚಾರ್ಯ ರಾದ ಶ್ರೀ ಕೃ. ಪಾ. ಪಾಟೀಲ ಅವರು ಅಹೋರಾತ್ರಿ ಪರಿಶ್ರಮಿಸುತ್ತಿದ್ದಾರೆ. ನಾಡಿನಲ್ಲಿ ಆದರ್ಶ ಕೈಗಾರಿಕಾ ತರಬೇತಿ ಸಂಸ್ಥೆಯನ್ನಾಗಿ ಮಾಡಬೇಕೆಂಬ ಹೆಬ್ಬಯಕೆ ತುಂಬಿದೆ. ಆ ರೀತಿಯಾಗಿ ಕೆಲಸವೂ ನಡೆದಿದ್ದು ಸಂಸ್ಮರಣೀಯವಾಗಿದೆ.

ಮೊದಲು ಶ್ರೀ ಜಗದ್ಗುರುಗಳು ಜಿಲ್ಲೆಗೊಂದು ಇಂತಹ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ತೆರೆಯಬೇಕೆಂದು ಇಚ್ಛೆ ವ್ಯಕ್ತಪಡಿಸಿದ್ದರು. ಆದರೆ ಪ್ರತಿ ಜಿಲ್ಲೆ ಗಳಲ್ಲೂ ಅನೇಕ ಸಂಸ್ಥೆಗಳು ಇಂತಹ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ ಕಾರ್ಯ ಮಾಡುತ್ತಿರುವದನ್ನು ಕಂಡು ಸಂತಸ ವ್ಯಕ್ತಪಡಿಸಿದ್ದಾರೆ. ನಾಡಿನಲ್ಲಿರುವ ಅನೇಕ ಸಂಸ್ಥೆಗಳು ಇತ್ತ ಕಡೆಗೆ ಗಮನಕೊಟ್ಟಿರುವದೂ ಸಹ ನಾಡಿನ ಜನತೆಗೆ ಅನುಕೂಲ ಮಾಡಿಕೊಟ್ಟು ಕಾಯಕದ ಮಹತ್ವವನ್ನು ವಿವರಿಸುತ್ತಿರುವದು ಹೆಮ್ಮೆಯ ವಿಷಯವಾಗಿದೆ.

**ಶಿವನ ತೋಟದ ಮೊದಲ ಹೂಗಳು:**
**ಮಕ್ಕಳಿಗಾಗಿ ಮಮತೆಯ "ಶಿಶುವಿಹಾರ"**

ಮಕ್ಕಳಲ್ಲಿ ಶಿಸ್ತು-ಶೀಲ, ಸದ್ಗುಣ, ಸನ್ನಡತೆ ವಿನಮ್ರತೆ, ಸದಾಚಾರ, ರಾಷ್ಟ್ರ ಪ್ರೇಮ ಇವೆಲ್ಲವುಗಳನ್ನು ಬೇರೂರಿಸಬೇಕಾದರೆ ಚಿಕ್ಕವಯಸ್ಸಿನಲ್ಲಿಯೇ ಅಂತಹ ಸಂಸ್ಕಾರ ಕೊಟ್ಟರೆ ಅವರ ಭವಿಷ್ಯ ನಿರ್ಮಾಣವನ್ನು ಮಾಡಲು ಸಾಧ್ಯ. ಆ ರೀತಿ ದೊರೆಯದಿದ್ದರೆ ಅವೇ ಮಕ್ಕಳು ಸಮಾಜದ್ರೋಹಿ, ರಾಷ್ಟ್ರಘಾತುಕರಾಗಿ ತಮ್ಮ ತಂದೆ-ತಾಯಿಗಳಿಗೆ, ಗುರು-ಹಿರಿಯರಿಗೆ ಕಂಟಕಪ್ರಾಯರಾಗುತ್ತಾರೆ. ಇಂದು ಒಳ್ಳೆಯ ಸಂಸ್ಕಾರಗಳಿಲ್ಲದೇ ಶಾಲೆ-ಕಾಲೇಜುಗಳು ಹಾಳಾಗುತ್ತಲಿವೆ. ಇಂತಹ ಸಂಸ್ಥೆಗಳ ಸಂಸ್ಥಾಪಕರಿಗೂ ತಲೆನೋವಾಗಿ ಬೇಸರ ಬರುತ್ತಲಿದೆ. ಇಂದು ಎತ್ತ ನೋಡಿದತ್ತ ಶಾಲೆ-ಕಾಲೇಜುಗಳಲ್ಲಿ ಕೆಲವು ವಿದ್ಯಾರ್ಥಿಗಳಲ್ಲಿ ತಾಮಸೀಯ ಮನೋ ಭಾವನೆ ಬೆಳೆಯುತ್ತಲಿದೆ. ಅನೇಕ ರೀತಿಯ ಚಟಾಧೀನರಾಗಿ, ಸ್ವೇಚ್ಛಾಪ್ರಿಯರಾಗಿ ತಾವು ಹಾಳಾಗುವದಲ್ಲದೇ ಸಮಾಜವನ್ನೂ ಸಹ ನಾಶಪಡಿಸುತ್ತಿರುವದನ್ನು ಕಂಡು ಪೂಜ್ಯ ಶ್ರೀ ಜಗದ್ಗುರುಗಳು ಮನಸ್ಸಿನಲ್ಲಿ ನೊಂದುಕೊಂಡು, ಕೇವಲ ಸಂಸ್ಕೃತಿಯಿಂದ ಬುದ್ಧಿಯ ಬೆಳವಣಿಗೆ ಮಾಡುವ ಶಾಲೆ-ಕಾಲೇಜುಗಳನ್ನು ತೆರೆಯುವುದಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಇನ್ನು ಮುಂದೆ ಕೊಡುವದು ಒಳಿತಲ್ಲವೆಂದು ಅರಿತುಕೊಂಡು, ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಚೇರಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿ ಅವರೊಡನೆ ಸಮಾಲೋಚಿಸಿ ಎಳೆಯ ಮಕ್ಕಳಿಗೆ ಒಳ್ಳೆಯ ಸಂಸ್ಕಾರ ನೀಡಲು ಶಿಶುವಿಹಾರವನ್ನು ತೆರೆದು ಸಮಾಜಕ್ಕೆ ದೊಡ್ಡ ಉಪಕಾರ

ಮಾಡಿದಂತಾಗುತ್ತದೆ. ಇದನ್ನೇ ಮುಂದುವರೆಸಿ ನಿರ್ಜನ ಸ್ಥಾನದಲ್ಲಿ ಪ್ರಶಾಂತ ವಾತಾವರಣದಲ್ಲಿ ಗುರುಕುಲ ಮಾದರಿಯಲ್ಲಿ ಒಂದು ಶಾಲೆಯನ್ನು ಸಹ ತೆರೆಯುವ ಮುಂಧೋರಣೆ ಶ್ರೀ ಜಗದ್ಗುರುಗಳು ಇಟ್ಟುಕೊಂಡಿರುವದೂ ಸಹ ಸಂಸ್ಮರಣೀಯ ವಾಗಿದೆ. ಈ ಶಿಶುವಿಹಾರದಲ್ಲಿ ಚಿಕ್ಕಮಕ್ಕಳಿಗೆ ಶಿಸ್ತು, ಒಳ್ಳೆಯ ಸಂಸ್ಕಾರ ಕೊಟ್ಟು ಕಲಿಸುತ್ತಿರುವದು ಆನಂದದಾಯಕವಾಗಿದೆ. ಶುದ್ಧ ಹೃದಯದ ಮುದ್ದು ಮಕ್ಕಳ ಮೇಲ್ವಿಚಾರಣೆಗಾಗಿ ಸುಶಿಕ್ಷಿತ ಮಹಿಳೆಯರನ್ನು ನಿಯಮಿಸಿದ್ದಾರೆ. ಆ ಎಳೆಯ ಮಕ್ಕಳು ಸಾಲು ಸಾಲಾಗಿ ಹೋಗುವದು, ಬರುವದು, ತೊದಲ್ನುಡಿಗಳಿಂದ ಮಾತಾಡುವದು ಇದೊಂದು ಮನಸ್ಸಿಗೆ ಆಹ್ಲಾದಕರವನ್ನುಂಟು ಮಾಡಿದೆ. ಮಕ್ಕಳನ್ನು ಸುಸಂಸ್ಕಾರದತ್ತ ಒಯ್ಯುವದು, ಪೂರ್ವಭಾವಿಯಾಗಿ ಯೋಚಿಸಿ ಕಾರ್ಯರೂಪದಲ್ಲಿ ತರುವದು ನಿಜಕ್ಕೂ ಹೆಮ್ಮೆಪಡುವಂತಹದಾಗಿದೆ. ಶ್ರೀ ವೀರಚಂದ ನಾರಾಣಜಿ ಕಾನಜಿಯವರು ಇದಕ್ಕಾಗಿ ನಿಷ್ಠೆಯಿಂದ ಪರಿಶ್ರಮಿಸಿ ಪ್ರೋತ್ಸಾಹಿಸುತ್ತಿದ್ದಾರೆ.

## ರಾಷ್ಟ್ರೀಯ ಪ್ರಜ್ಞೆಗೆ ಶ್ರೀಮಠದ ಉಡುಗೊರೆ: ಶ್ರೀ ಜಗದ್ಗುರು ಗಂಗಾಧರ ಹಿಂದೀ ವಿದ್ಯಾಲಯ

ಭಾರತೀಯರಲ್ಲಿ ನಾವು ಭಾರತೀಯರು ಎಂಬುವ ಅಭಿಮಾನ ಬರಬೇಕಾದರೆ ಭಾಷಾಬಾಂಧವ್ಯ ಬರಬೇಕು. ಭಾಷೆಯು, ಬಾಂಧವ್ಯತೆಗೆ ಹಾಗೂ ರಾಷ್ಟ್ರದ ಶಕ್ತಿಯ ಬೆಳವಣಿಗೆಗೆ ಭಾಷೆಯ ವ್ಯಾಮೋಹವು ಕಾಲ್ತೊಡಕಾಗಬಾರದು. ತಮ್ಮ ತಮ್ಮ ನಾಡಿನ ಭಾಷೆಯಲ್ಲಿ ಅಭಿಮಾನವಿದ್ದು, ಅದರ ಸಾಹಿತ್ಯವನ್ನು ಬೆಳೆಸುವದನ್ನು ಮರೆಯಬಾರದು. ಮತ್ತೊಂದು ಭಾಷೆಯ ಸಾಹಿತ್ಯವನ್ನು ತಮ್ಮ ಭಾಷೆಗೆ ಅನುವಾದಿಸಿ ಶ್ರೀಮಂತಗೊಳಿಸಲು ಸಾಧನವಾಗುತ್ತದೆ.

ಸಾವಿರಾರು ವರ್ಷಗಳ ಇತಿಹಾಸವನ್ನು ಪಡೆದ ಭಾರತದೇಶದಲ್ಲಿಯೂ ಸಾಕಷ್ಟು ಭಾಷೆಗಳು ನೆಲೆಸಿವೆ. ಭಾಷೆಯ ಶಕ್ತಿಯನ್ನು ಬೆಳಸಿಕೊಂಡಿವೆ. ಭಾಷಾ ಶುದ್ಧಿಯನ್ನು, ಭಾಷಾಪ್ರಬುದ್ಧತೆಯನ್ನು, ಅತ್ಯುತ್ತಮ ಭಾವವನ್ನು ಪಡೆದು ಕೊಂಡಿವೆ. ಹೀಗಿದ್ದರೂ ಭಾಷೆಗಳ ತಿಕ್ಕಾಟ ತಪ್ಪಿಲ್ಲ. ಪ್ರತಿಯೊಂದು ಭಾಷೆ ಯವರು ಮತ್ತೊಂದು ಭಾಷೆಯ ಕೃತಿಯನ್ನು ತಮ್ಮ ಭಾಷೆಯಲ್ಲಿ ಪರಿವರ್ತನೆ ಮಾಡಿಕೊಂಡರೆ ಭಾವನೆ, ಕಲ್ಪನೆ ಮತ್ತು ವಿಚಾರಗಳನ್ನು ಹೊಂದಾಣಿಕೆ ಮಾಡಿ ಕೊಂಡು ಭಾಷಾ ಬಾಂಧವ್ಯ ಬೆಳೆಸಲು ನಾಂದಿಯಾಗುವದು. ಪ್ರತಿಯೊಬ್ಬ ಮೊದಲು ತಾಯಿಭಾಷೆ ನಂತರ ರಾಷ್ಟ್ರಭಾಷೆಯನ್ನು ಕಲಿತು, ಆಮೇಲೆ ಸಂಸ್ಕೃತ, ಇಂಗ್ಲಿಷ್ ಇನ್ನುಳಿದ ನೆರೆಹೊರೆಯ ಭಾಷೆಯನ್ನು ಸಾಹಿತ್ಯ ಸಂವರ್ಧನೆಗಾಗಿ ಕಲಿತುಕೊಂಡು ಭಾಷಾಮೈತ್ರಿಯನ್ನು ಬೆಳೆಸಿಕೊಳ್ಳುವದು ಅತ್ಯವಶ್ಯ. ಈ

ದೃಷ್ಟಿ ಇರಿಸಿಕೊಂಡು ಶ್ರೀ ಜಗದ್ಗುರುಗಳು ರಾಷ್ಟ್ರಭಾಷೆಯಾದ ಹಿಂದಿಗೆ ಮಹತ್ವ ನೀಡಿ ತಮ್ಮ ವಿದ್ಯಾವರ್ಧಕ ಸಂಘದಲ್ಲಿ ಹಿಂದಿ ವಿದ್ಯಾಲಯಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಮೊದಲಿನಿಂದಲೂ ಹಿಂದಿ ಭಾಷಾಪ್ರೇಮಿಗಳು. ಚಿಕ್ಕಂದಿನಲ್ಲಿಯೇ ಕಾಶಿಯಲ್ಲಿದ್ದಾಗ ಅದೇ ಭಾಷೆಯಲ್ಲಿ ಓದಿ ಪ್ರಭುತ್ವವನ್ನು ಪಡೆದವರಾಗಿದ್ದಾರೆ. ಹಿಂದಿ ಭಾಷೆಯಲ್ಲಿಯೂ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಆ ಅಭಿಮಾನ ಅವರಲ್ಲಿದ್ದುದರಿಂದ ಹಿಂದಿ ವಿದ್ಯಾಲಯದಿಂದ ನಾಡಿನ ಜನರು ರಾಷ್ಟ್ರಭಾಷೆ ಕಲಿತು ರಾಷ್ಟ್ರೀಯ ಭಾವೈಕ್ಯವು ಪ್ರತಿಯೊಬ್ಬರಲ್ಲಿಯೂ ಇರಲೆಂದು ಬಯಸಿ ಈ ಕಾರ್ಯಕ್ಕೆ ಪ್ರವೃತ್ತರಾಗಿದ್ದುದು ರಾಷ್ಟ್ರದ ಶಕ್ತಿಯನ್ನು ಹೆಚ್ಚಿಸಿದಂತಾಗುವದು. ಶ್ರೀ ಜಗದ್ಗುರು ಹಿಂದಿ ವಿದ್ಯಾಲಯವನ್ನು ಪ್ರಾರಂಭದಿಂದಲೂ ಸ್ವತಂತ್ರರೂಪದಲ್ಲಿ ಮೂರುಸಾವಿರಮಠ ಗರ್ಲ್ಸ್ ಹೈಸ್ಕೂಲಿನ ಅಧ್ಯಾಪಕರಾದ ಶ್ರೀ ವ್ಹಿ. ಎಂ. ಮಹಾಲೆಯವರು ನಡೆಸುತ್ತಿದ್ದರು. ಅವರು ಈ ವಿದ್ಯಾಲಯವು ಒಂದು ಸಂಸ್ಥೆಯಲ್ಲಿ ಸೇರಿಕೊಂಡರೆ ಒಂದು ಶಕ್ತಿ ಬಂದು ಮಹತ್ವ ಬರುವದೆಂದು ಬಗೆದು, ಶ್ರೀ ಜಗದ್ಗುರುಗಳಿಗೂ, ಚೇರಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿಯವರಿಗೂ ತಿಳಿಸಿ ವಿದ್ಯಾವರ್ಧಕ ಸಂಘಕ್ಕೆ ಅರ್ಜಿ ಸಲ್ಲಿಸಿದರು. ಅವರ ಅರ್ಜಿಯನ್ನು ಮೂರುಸಾವಿರಮಠ ವಿದ್ಯಾವರ್ಧಕ ಸಂಘದವರು ಮಾನ್ಯ ಮಾಡಿ ತಮ್ಮ ಸಂಸ್ಥೆಗೆ ತೆಗೆದುಕೊಂಡರು. ನಂತರ ಸರ್ಕಾರದಿಂದಲೂ ಅಧಿಕೃತ ಮನ್ನಣೆ ದೊರೆತು ಇದೀಗ ಪ್ರಗತಿಯತ್ತ ಈ ವಿದ್ಯಾಲಯವು ಸಾಗಿದೆ. ಪ್ರತಿ ವರ್ಷ ೫೦೦ ವಿದ್ಯಾರ್ಥಿಗಳು ಹಿಂದಿ ಭಾಷೆ ಓದುತ್ತಿದ್ದಾರೆ. ೭ ಜನ ಅಧ್ಯಾಪಕರಿದ್ದು, ಇದಕ್ಕಾಗಿ ಪ್ರತ್ಯೇಕ ಬಿಲ್ಡಿಂಗ್ ತಯಾರಾಗಿ ಸುವ್ಯವಸ್ಥೆಯಿಂದ ನಡೆಯುತ್ತಲಿದೆ. ಸರ್ಕಾರದ ಸಹಾಯವೂ ದೊರೆತಿದೆ. ಈ ವಿದ್ಯಾಲಯದ ಉತ್ತರೋತ್ತರ ಅಭಿವೃದ್ಧಿಗೆ ಶ್ರೀಯುತ ವ್ಹಿ.ಎಮ್. ಮಹಾಲೆಯವರು ಬಹಳ ಪರಿಶ್ರಮವಹಿಸುತ್ತಿದ್ದಾರೆ. ಮುಂದೆ ಇದನ್ನು ಬಿ. ಎಡ್. ಕಾಲೇಜನ್ನಾಗಿ ಮಾಡುವ ಆಶೆಯನ್ನು ಇಟ್ಟುಕೊಂಡಿದ್ದಾರೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳ ರಾಷ್ಟ್ರಭಾಷಾ ಪ್ರೇಮಕ್ಕೆ ಈ ವಿದ್ಯಾಲಯವೊಂದು ನಿದರ್ಶನ. ಈ ವಿದ್ಯಾಲಯದಿಂದ ಬಂಗಾರದ ಪದಕಗಳನ್ನು ರಾಜ್ಯಮಟ್ಟದಲ್ಲಿ ಪಡೆದ ವಿದ್ಯಾರ್ಥಿ-ವಿದ್ಯಾರ್ಥಿನಿಯರಿದ್ದಾರೆ. ರಾಜ್ಯ ಶಿಕ್ಷಣ ಇಲಾಖೆಯಿಂದ ರಾಜ್ಯ ಮಟ್ಟದಲ್ಲಿ ಆದರ್ಶ ಹಿಂದಿ ಶಿಕ್ಷಕರೆಂದು ಶ್ರೀ ವ್ಹಿ. ಎಮ್. ಮಹಾಲೆಯವರು ಶಿಕ್ಷಣ ಮಂತ್ರಿಗಳಿಂದ, ರಾಜ್ಯಪಾಲರಿಂದ ಪ್ರಶಸ್ತಿ ಪಡೆದು ವಿದ್ಯಾಲಯ ನಡೆಸುತ್ತಿರುವದು ನಮ್ಮ ಮೂರುಸಾವಿರಮಠ ವಿದ್ಯಾವರ್ಧಕ ಸಂಘಕ್ಕೆ ಗೌರವದ ಮಾತಾಗಿದೆ.

## ಕಲಾ ಜೀವನಕ್ಕೆ ಕಾಯಕಲ್ಪ ನೀಡಿದ: ಶ್ರೀ ವಿಜಯ ಮಹಾಂತೇಶ ಲಲಿತ ಕಲಾ ಮಹಾವಿದ್ಯಾಲಯ

ಶ್ರೀ ವಿಜಯಮಹಾಂತೇಶ್ವರ ಲಲಿತ ಕಲಾ ಮಹಾವಿದ್ಯಾಲಯವನ್ನು ಕರ್ನಾಟಕ ಫೈನ್ ಆರ್ಟ್ಸ್ ಎಜ್ಯುಕೇಶನ್ ಸೊಸೈಟಿ ಹುಬ್ಬಳ್ಳಿ ಅವರು ಮೊದಲು ನಡೆಸುತ್ತಿದ್ದರು. ಈ ಸಂಸ್ಥೆಯನ್ನು ಕುಂಚಬ್ರಹ್ಮರೆನಿಸಿಕೊಂಡ ಶ್ರೀ ಎಂ. ವ್ಹಿ. ಮಿಣಜಗಿಯವರು ಬಹು ಪರಿಶ್ರಮದಿಂದ ನಡೆಸಿಕೊಂಡು ಹೋಗುತ್ತಿದ್ದರು. ಈ ಕಾಲೇಜದಿಂದ ಅನೇಕ ಕಲಾವಿದರು ತಯಾರಾಗಿ ನಾಡಿನಲ್ಲಿ ಸುಪ್ರಸಿದ್ಧರಾಗಿದ್ದಾರೆ. ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಪಟ್ಟಾಭಿಷಕ್ತರಾದ ಮರುವರುಷವೇ ಈ ಕರ್ನಾಟಕ ಫೈನ್ ಆರ್ಟ್ಸ್ ಎಜ್ಯುಕೇಶನ್ ಸೊಸೈಟಿಗೆ ಇಪ್ಪತ್ತೈದುಸಾವಿರ ರೂಪಾಯಿಗಳನ್ನು ನೀಡಿ, ಈ ಸೊಸೈಟಿ ವತಿಯಿಂದ ಶ್ರೀ ವಿಜಯಮಹಾಂತೇಶ್ವರರ ಹೆಸರಿನಲ್ಲಿ ಫೈನ್ ಆರ್ಟ್ಸ್ ಕಾಲೇಜನ್ನು ನಡೆಸುವಂತೆ ಶ್ರೀ ಎಂ. ವ್ಹಿ. ಮಿಣಜಗಿಯವರಿಗೆ ಅಪ್ಪಣೆ ಕೊಡಿಸಿದರು. ಆ ರೀತಿ ೧೯೬೮ರ ನೆಯ ಇಸ್ವಿಯವರೆಗೂ ಆ ಕಾಲೇಜನ್ನು ವ್ಯವಸ್ಥಿತ ರೀತಿಯಿಂದ ನಡೆಸಿಕೊಂಡು ಬಂದು ಕಲಾ ಪ್ರತಿಭೆಯನ್ನು ಬೆಳೆಸಿದರು. ಶ್ರೀ ಮಿಣಜಗಿಯವರ ಹಾಗೂ ಸದಸ್ಯ ವರ್ಗದವರ ಪರಿಶ್ರಮದಿಂದ ಸಹಸ್ರಾರು ವಿದ್ಯಾರ್ಥಿ– ವಿದ್ಯಾರ್ಥಿನಿಯರು ಲಲಿತ ಕಲಾ ಪ್ರವೀಣರಾದರು. ಕುಂಚಬ್ರಹ್ಮರಾದ ಶ್ರೀ ಎಂ. ವ್ಹಿ. ಮಿಣಜಗಿಯವರಿಗೆ ಅಸ್ವಾಸ್ಥ್ಯ ಹಾಗೂ ವೃದ್ಧಾಪ್ಯದಿಂದ ಕಷ್ಟ ಉಂಟಾದಾಗ ಶ್ರೀ ಜಗದ್ಗುರುಗಳ ಸನ್ನಿಧಿಗೆ ಮಿಣಜಗಿಯವರು ಬಂದು ಕರ್ನಾಟಕ ಫೈನ್ ಆರ್ಟ್ಸ್ ಎಜ್ಯುಕೇಶನ್ ಸೊಸೈಟಿ ಹುಬ್ಬಳ್ಳಿ ಆಡಳಿತದಲ್ಲಿರುವ ಶ್ರೀ ವಿಜಯ ಮಹಾಂತೇಶ ಲಲಿತ ಕಲಾ ಮಹಾವಿದ್ಯಾಲಯವನ್ನು ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘ ಹುಬ್ಬಳ್ಳಿ ಈ ಆಡಳಿತಕ್ಕೆ ಹಸ್ತಾಂತರಿಸುವ ಕುರಿತು ಚರ್ಚಿಸಿ ವಿದ್ಯಾವರ್ಧಕ ಸಂಘಕ್ಕೆ ಅರ್ಜಿ ಸಲ್ಲಿಸಿದರು. ಶ್ರೀ ಜಗದ್ಗುರುಗಳು ಚೇರಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿ ಅವರೊಡನೆ ವಿಚಾರಿಸಿ, ಆ ಸಂಸ್ಥೆಯ ಆಡಳಿತವನ್ನು ಮೂರುಸಾವಿರಮಠ ವಿದ್ಯಾವರ್ಧಕ ಸಂಘಕ್ಕೆ ತೆಗೆದುಕೊಳ್ಳುವ ಬಗ್ಗೆ ವಿದ್ಯಾವರ್ಧಕ ಸಂಘದ ಕಮೀಟಿ ಕರೆದು ಎಲ್ಲರ ಅನುಮತಿ ಪಡೆದರು. ಶ್ರೀ ವಿಜಯ ಮಹಾಂತೇಶ ಲಲಿತ ಕಲಾ ಮಹಾವಿದ್ಯಾಲಯಕ್ಕೆ ಸಂಬಂಧಿಸಿದ ಚರ ಮತ್ತು ಸ್ಥಿರ ಆಸ್ತಿಗಳನ್ನು ಹಾಗೂ ಸಂಘದ ಆಡಳಿತವನ್ನು ವಿದ್ಯಾವರ್ಧಕ ಸಂಘಕ್ಕೆ ಯಾವುದೇ ರೀತಿ ಬಂಧನವಿಲ್ಲದೇ ಕರ್ನಾಟಕ ಫೈನ್ ಆರ್ಟ್ಸ್ ಎಜ್ಯುಕೇಶನ್ ಸೊಸೈಟಿಯವರು ವಹಿಸಿಕೊಡಲು ಲಿಖಿತ ಒಪ್ಪಿಗೆ ನೀಡಿ ಸಹಕರಿಸಿದರು.

ಶ್ರೀ ವಿಜಯ ಮಹಾಂತೇಶ ಲಲಿತ ಕಲಾ ಮಹಾವಿದ್ಯಾಲಯವು ಇದೀಗ ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಆಡಳಿತಕ್ಕೊಳ

ಪಟ್ಟು ಸುವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿರುವುದು ಸಂತಸದ ಸಂಗತಿಯಾಗಿದೆ. ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗೆ ತೆಗೆದುಕೊಳ್ಳಬೇಕಾದರೆ ಅನೇಕ ಸಮಸ್ಯೆಗಳು ಎದುರು ಬಂದರೂ ಅವೆಲ್ಲವುಗಳನ್ನು ಪರಿಹರಿಸುತ್ತ ಮುನ್ನಡೆದಿದೆ. ಶ್ರೀ ವಿಜಯಮಹಾಂತೇಶನ ಹೆಸರಿನಲ್ಲಿ ನಡೆಯುತ್ತಿರುವ ಈ ಲಲಿತ ಕಲಾ ಮಹಾವಿದ್ಯಾಲಯವನ್ನು ಏನೂ ಕಷ್ಟ ಬರಬಾರದೆಂದು ಬಗೆದು, ತಮಗೆ ಎಷ್ಟೇ ಕಷ್ಟಗಳು ತುಂಬಿದ್ದರೂ ಅವುಗಳನ್ನು ಲೆಕ್ಕಿಸದೇ ಶ್ರೀ ಜಗದ್ಗುರುಗಳು ಕಮೀಟಿ ಯವರಿಗೆ ಹಾಗೂ ಚೇರಮನ್‌ರಿಗೆ ತಿಳಿಸಿ ಮಹಾವಿದ್ಯಾಲಯವನ್ನು ಸಂಘಕ್ಕೆ ತೆಗೆದುಕೊಳ್ಳಲಾಯಿತು. ಶ್ರೀ ಜಗದ್ಗುರುಗಳು ಲಲಿತ ಕಲೆಗಳ ಮೇಲೆ ಬಹಳ ಪ್ರೇಮವುಳ್ಳವರು. ಸ್ವತಃ ಚಿತ್ರಕಾರರೂ ಆಗಿದ್ದಾರೆ. ಲಲಿತ ಕಲೆಗಳು ನಾಡಿನ ತುಂಬೆಲ್ಲ ಬೆಳಗಬೇಕು. ಕಲಾವಂತರು ನಾಡಿನಲ್ಲಿ ಹೆಚ್ಚಾಗಬೇಕೆಂಬುದೇ ಶ್ರೀ ಜಗದ್ಗುರುಗಳ ಹೆಬ್ಬಯಕೆ. ಅದರಲ್ಲಿಯೂ ಹೆಚ್ಚಾಗಿ ಸುಪ್ರಸಿದ್ಧ ಕಲಾ ತಪಸ್ವಿಗಳಾದ ಶ್ರೀ ಎಂ. ವ್ಹಿ. ಮಿಣಜಗಿಯವರ ಕಲಾ ಪ್ರತಿಭೆ ಬೆಳೆಸಬೇಕು ಮತ್ತು ಪರಮ ತಪಸ್ವಿಗಳಾದ ಶ್ರೀ ವಿಜಯಮಹಾಂತೇಶ್ವರರ ಹೆಸರು ಹುಬ್ಬಳ್ಳಿ ಯಲ್ಲಿ ಉಳಿಸಬೇಕೆಂಬುದೇ ಶ್ರೀ ಜಗದ್ಗುರುಗಳ ಮನೀಷೆ. ಶ್ರೀ ವಿಜಯ ಮಹಾಂತೇಶ್ವರ ಲಲಿತ ಕಲಾ ಮಹಾವಿದ್ಯಾಲಯವು ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘಕ್ಕೆ ಹಸ್ತಾಂತರವಾದಂದಿನಿಂದ ಇಂದಿನ ವರೆಗೂ ಒಂದು ಲಕ್ಷಕ್ಕಿಂತ ಹೆಚ್ಚು ಹಣ ಆ ವಿದ್ಯಾಲಯಕ್ಕೆ ಖರ್ಚಾಗಿದ್ದು, ಇದಕ್ಕೆಲ್ಲ ಚೇರ್‌ಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿ ಅವರ ಪರಿಶ್ರಮವೇ ಕಾರಣವಾಗಿದೆ. ಇನ್ನೂ ಬಹಳ ರೀತಿಯಲ್ಲಿ ಇದು ಬೆಳೆದು ಬೆಳಗ ಬೇಕಾದರೆ ನಾಲ್ಕೈದು ವರ್ಷಗಳೇ ಬೇಕಾಗಬಹುದೆಂಬುದು ಶ್ರೀ ಜಗದ್ಗುರುಗಳ ಅಭಿಪ್ರಾಯವಾಗಿದೆ. ಈ ಕಾಲೇಜನ್ನು ನಾಡಿಗೇ ಆದರ್ಶ ಮಾಡುವ ಹೊಂಗನಸನ್ನು ಇಟ್ಟುಕೊಂಡಿದ್ದಾರೆ. ಈ ಕಾಲೇಜಿನ ಸಿಬ್ಬಂದಿಯವರು ಇದೀಗ ನಿಷ್ಠೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರ ಪರಿಶ್ರಮ ಇನ್ನೂ ಹೆಚ್ಚಾಗಿ ಚೇರಮನ್ನರು, ಜಗದ್ಗುರುಗಳು ಆಡಳಿತ ವರ್ಗದವರನ್ನು ಸಂತೋಷಗೊಳಿಸಿದರೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಅಫಿಲಿಯೇಶನ್ ಪಡೆದುಕೊಂಡು ದೊಡ್ಡ ಪ್ರಮಾಣದಲ್ಲಿ ನಡೆಯಿಸುವ ಇಚ್ಛೆಯುಳ್ಳವರಾಗಿದ್ದಾರೆ. ಅದಕ್ಕೂ ಸಮಯಬೇಕು, ದುಡಿತ ಬೇಕು, ಎಲ್ಲರ ಪ್ರೋತ್ಸಾಹ ಬೇಕು. ಶ್ರೀ ಜಗದ್ಗುರುಗಳು ಯಾವದೇ ಕಾರ್ಯವನ್ನು ನಿರ್ವಹಿಸಿಕೊಂಡರೂ ಅದು ಪೂರ್ತಿಯಾಗುವತನಕ ಅವರಿಗೆ ತೃಪ್ತಿ ಇರದು. ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರು ನಾವು ಜಗದ್ಗುರುಗಳಾಗಿ ದ್ದೇವೆ, ಸಾಕಷ್ಟು ವೈಭವದ ಸಂಪತ್ತಿನಲ್ಲಿದ್ದೇವೆಂಬುವ ಅಹಂಕಾರ ತಿಲಮಾತ್ರವೂ ಕಾಣದು. ನಿಷ್ಠೆಯಿಂದ ದುಡಿಯಬೇಕು, ಸಮಾಜದ ಋಣ ತೀರಿಸಬೇಕು, ಜನಜಾಗೃತಿಯ ಸೇವೆ ಮಾಡಿ ಪ್ರತಿಯೊಬ್ಬರನ್ನು ಸುಸಂಸ್ಕೃತರನ್ನಾಗಿ ಮಾಡಬೇಕೆಂದು

ಜಗದ್ಗುರುಗಳು ಹಗಲಿರುಳು ಚಿಂತೆ ಮಾಡುವದನ್ನು ನೋಡಿದಾಗ ಎಂತಹ ವೈರಿಯೂ ಮೆಚ್ಚುವಂತಹದಾಗಿದೆ. ತಮ್ಮ ದೇಹ ಕಷ್ಟ ನೋಡದೇ ದುಡಿಯುತ್ತಿರುವ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಸಾಮಾಜಿಕ ಆದರ್ಶವನ್ನು ಇನ್ನುಳಿದ ಸ್ವಾಮಿಗಳು ಅನುಸರಿಸಿದರೆ ನಾಡೆಲ್ಲವೂ ಸುಭದ್ರವಾದೀತು, ಆದರ್ಶವಾದೀತು.

**ಶೈಕ್ಷಣಿಕ ಸಂಸ್ಥೆಗಳಿಗೆ ಕ್ರಾಂತಿಕಾರಕ ಆರ್ಥಿಕ ಆಸರೆ:**

**ಮೂರುಸಾವಿರಮಠ ಕಾಂಪ್ಲೆಕ್ಸ**

ಪೂಜ್ಯ ಜಗದ್ಗುರುಗಳು ಪೀಠಾರೋಹಣಗೈದ ಈ ೨೫ ವರ್ಷಗಳಲ್ಲಿ ಮಹಿಳೆಯರಿಗಾಗಿ ಶಿಶುವಿಹಾರ, ಪ್ರಾಥಮಿಕ ಶಾಲೆಗಳಿಂದ ಹಿಡಿದು ಉಚ್ಚ ವಿದ್ಯಾಲಯದವರೆಗೆ ಸರ್ವಾಂಗೀಣ ಪ್ರಗತಿ ಸಾಧಿಸಲಾಗಿದೆ. ಇದರಿಂದ ಸಾವಿರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಶೈಕ್ಷಣಿಕ ಭರವಸೆ ದೊರೆಯುವದು ಮಾತ್ರವಲ್ಲ ಎಲ್ಲ ಜಾತಿಯ ಸುಮಾರು ಸಹಸ್ರಾರು ಮಹಿಳೆಯರಿಗೆ ನೌಕರಿಯ ಅವಕಾಶ ದೊರೆತು ಅವರ ಬದುಕು ಆರ್ಥಿಕವಾಗಿ ಸ್ಥಿರವಾಗಿ ನೆಲೆಗೊಳ್ಳಲು ಪ್ರೇರಣೆ ದೊರೆತಿದೆ.

ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘವು ಸ್ಥಾಪಿತವಾದಂದಿನಿಂದ ಆ ಸಂಸ್ಥೆಯ ಅಡಿಯಲ್ಲಿ ಅನೇಕ ಶೈಕ್ಷಣಿಕ ಸಂಸ್ಥೆಗಳು ಜನ್ಮತಾಳಿವೆ ಪ್ರಗತಿ ಪಥದಲ್ಲಿ ಸಾಗಿವೆ.

ಈಗಿನ ಕಾಲದಲ್ಲಿ ಕೇವಲ ಶೈಕ್ಷಣಿಕ ಸಂಸ್ಥೆಗಳನ್ನು ದಿನೇ ದಿನೇ ಬೆಳೆಸುತ್ತ ಹೋದಲ್ಲಿ ಪ್ರಯೋಜನವಾಗದು. ಸಂಸ್ಥೆಗಳನ್ನು ಸ್ಥಾಪಿಸುವದು ಸುಲಭ. ಆದರೆ ಅವುಗಳನ್ನು ನಡೆಸಿಕೊಂಡು ಹೋಗುವದು ಕಡು ಕಷ್ಟ. ಅವುಗಳಿಗೆ ಆರ್ಥಿಕ ಭದ್ರ ಬುನಾದಿ ಹಾಕದಿದ್ದರೆಅವುಗಳ ಬೆಳವಣಿಗೆ ಆಗಲಾರದೆಂಬುವೇ ಶ್ರೀ ಜಗದ್ಗುರುಗಳವರ ಅಭಿಮತ. ಇತ್ತಿತ್ತಲಾಗಿ ಜನರಲ್ಲಿ ಆರ್ಥಿಕ ಸ್ಥಿತಿ ಕಡಿಮೆಯಾಗುತ್ತಿರುವಾಗ ಭಿಕ್ಷೆ ಕೊಡತಕ್ಕವರೂ ವಿಚಾರಿಸುತ್ತಿದ್ದಾರೆ. ಹೀಗಾಗಿ ಶ್ರೀ ಜಗದ್ಗುರುಗಳು ಬಹಳ ವಿಚಾರ ಮಾಡಿ ಸ್ವಂತ ಕಾಲ ಮೇಲೆ ನಿಲ್ಲುವಂತೆ ಆರ್ಥಿಕ ಸ್ಥಿತಿ ಭದ್ರಮಾಡಿಕೊಂಡರೆ ಶೈಕ್ಷಣಿಕ ಸುಸ್ಥೆಗಳು ಬದುಕಬಹುದೆಂದು ತಿಳಿದು ಆರ್ಥಿಕ ಭದ್ರತೆಗೆ ಬುನಾದಿ ಹಾಕಿದರು. ಇದಕ್ಕಾಗಿ ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಚೇರಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿಯವರನ್ನು ವಿಚಾರಿಸಿದರು. ಅವರ ಒಪ್ಪಿಗೆ ಪಡೆದ ನಂತರ ಮೂರುಸಾವಿರಮಠ ಕಾಂಪ್ಲೆಕ್ಸನ್ನು ಕಟ್ಟುವದಕ್ಕಾಗಿ ಮೂರುಸಾವಿರಮಠ ಪ್ಲೇಗ್ರೌಂಡಿನ ದಂಡೆಗುಂಟ ೩೩ ಸುಂದರ ಅಂಗಡಿಗಳ ರೂಪರೇಷೆಯನ್ನು ಮಾಡಲು ಆರ್ಕಿಟೆಕ್ಟರಾದ ಶ್ರೀ ಪಿ. ಎಲ್. ಮೆಹರವಾಡೆಯವರಿಗೆ

ಒಪ್ಪಿಸಲಾಯಿತು, ಮೂರುಸಾವಿರಮಠ ಬಿಲ್ಡಿಂಗ್ ಕಾಂಪ್ಲೆಕ್ಸ್ ಕಮೀಟಿ ರಚಿಸ ಲಾಯಿತು.ಅದಕ್ಕೆ ಚೇರಮನ್ನರೆಂದು ಶ್ರೀ ವೀರಚಂದ ನಾರಾಣಜಿ ಕಾನಜಿಯವರನ್ನು ಆರಿಸಲಾಯಿತು. ಶ್ರೀ ಎಸ್. ಎಸ್. ಕಮಡೊಳ್ಳಿಶೆಟ್ಟರು, ಶ್ರೀ ಸಿ.ಸಿ. ಯಮ್ಮೆಟ್ಟಿ ಹಿರೇಮಠ, ಶ್ರೀ ಎಂ.ಎಂ. ಹೂಲಿ ವಕೀಲರು, ಡಾ|| ಎಸ್.ಪಿ. ಹೊಂಬಳ ಅವರು ಸದಸ್ಯರಾದರು. ಈ ಸಮಿತಿ ವತಿಯಿಂದ ಬಿಲ್ಡಿಂಗ್ ಕಾರ್ಯ ಮಾಡಲು ನಿರ್ಧರಿಸ ಲಾಯಿತು. ಇದರ ರೂಪರೇಷೆಯಾದ ನಂತರ ಪ್ರಥಮತಃ ಬಹಳ ಕಷ್ಟಗಳು ಬಂದೊದಗಿದರೂ ಶ್ರೀ ಜಗದ್ಗುರುಗಳು ಧೈರ್ಯಗುಂದದೇ ಆ ಕೆಲಸವನ್ನು ಮುಂದುವರಿಸಿದರು. ಇದನ್ನು ಕಟ್ಟುವದಕ್ಕಾಗಿ ಪರ್ಮಿಶನ್ ಕೊಡಿಸುವದಕ್ಕಾಗಿ ಆಗಿನ ಹುಬ್ಬಳ್ಳಿ-ಧಾರವಾಡ ನಗರ ಕಮೀಶನರರಾದ ಶ್ರೀ ಜಿ. ಎಂ. ಪುರೋಹಿತರು ಬಹಳ ಪರಿಶ್ರಮವಹಿಸಿ ಪರ್ಮಿಶನ್ ಕೊಡಿಸಿ ಕಾರ್ಯಕ್ಕೆ ಚೇತನಗೊಳಿಸಿದರು. ಈ ಕಾರ್ಯದ ಮುಖಾಂತರ ಅವರು ಅವರನ್ನು ಸದಾ ನೆನೆಯುವಂತೆ ಉಪಕಾರ ಮಾಡಿ ಹೋಗಿದ್ದಾರೆ. ಇದರ ಸಲುವಾಗಿ ಶ್ರೀ ಎಸ್. ಎಸ್. ಕಮಡೊಳ್ಳಿಶೆಟ್ಟರೂ ಸಹ ತುಂಬಾ ಪರಿಶ್ರಮವಹಿಸಿದ್ದರು. ೧೯೮೨ರ ವಿಜಯದಶಮಿಯ ಶುಭ ಸಂದರ್ಭದಲ್ಲಿ ಈ ಕಾಂಪ್ಲೆಕ್ಸಿನ ಅಡಿಗಲ್ಲನ್ನು ಶ್ರೀ ಶಿವಯೋಗಿ ಪುಂಗವರಾದ ಶ್ರೀ ಮ. ನಿ. ಪ್ರ. ರುದ್ರಮುನಿ ಸ್ವಾಮಿಗಳಿಂದ ಹಾಕಿಸಲ್ಪಟ್ಟಿತು. ಈ ಮೂರು ಸಾವಿರಮಠ ಕಾಂಪ್ಲೆಕ್ಸ್‌ನ ೩೩ ಅಂಗಡಿಗಳು ಮುಗಿಯುವವರೆಗೂ ಶ್ರೀ ವೀರಚಂದ ನಾರಾಣಜಿ ಕಾನಜಿಯವರು ಪಟ್ಟ ಪರಿಶ್ರಮ ನೋಡಿದರೆ ಅಸಾಧ್ಯವಾದುದು. ತಮ್ಮ ಸ್ವಂತ ಕಾರ್ಯಕ್ಕಿಂತಲೂ ಹೆಚ್ಚು ದುಡಿದರು. ಆರ್ಕಿಟೆಕ್ಟರಾದ ಶ್ರೀ ಮದನ ದೇಸಾಯಿಯವರ ಮೇಲ್ವಿಚಾರಣೆಯಲ್ಲಿ ಈ ಕಾರ್ಯ ಪ್ರಾರಂಭಿಸಿ, ೨ ವರ್ಷಗಳ ವರೆಗೂ ತಮ್ಮ ಬುದ್ಧಿಯನ್ನು ಉಪಯೋಗಿಸಿ ವಿದ್ಯಾವರ್ಧಕ ಸಂಘಕ್ಕೆ ಯಾವ ತೊಂದರೆಯಾಗದಂತೆ ಬಲಪಡಿಸಿದ್ದು ನೋಡಿದರೆ ಎಂತಹ ವ್ಯಕ್ತಿಯೂ ಮೆಚ್ಚ ಬೇಕಾದದ್ದು. ಈ ೩೩ ಅಂಗಡಿಗಳು ಮುಗಿಯಲು ೨೫ ಲಕ್ಷಕ್ಕಿಂತಲೂ ಹೆಚ್ಚು ಹಣ ಖರ್ಚು ಬಂದರೂ ಎಷ್ಟೂ ಸಾಲವಾಗದಂತೆ ಮತ್ತೆ ತಾಂತ್ರಿಕ ಶಾಲೆಗಳಿಗೆ ಅಂಗಡಿಕಾರರಿಂದ ೨ ಲಕ್ಷಕ್ಕಿಂತ ಹೆಚ್ಚು ಹಣ ಸಹಾಯ ಪಡೆದುಕೊಂಡು ಸುಂದರ ಗೊಳಿಸಿದ್ದಾರೆ. ಇದಲ್ಲದೇ ಅಂಗಡಿಗಳ ಕೆಳಗೆ ಹಿಂದಿ ಮಹಾವಿದ್ಯಾಲಯ, ಶಿಶು ವಿಹಾರ ಹಾಗೂ ವಿಜ್ಞಾನ ಮಂದಿರವನ್ನು ಅಲ್ಲಿ ಕಟ್ಟಿಸಿ ಆ ಸ್ಥಾನ ಸದುಪಯೋಗ ಮಾಡಿದ್ದಾರೆ. ಅದಕ್ಕೂ ಸುಮಾರು ಲಕ್ಷಕ್ಕಿಂತ ಹೆಚ್ಚು ಖರ್ಚು ಬಂದು ಶ್ರೀ ಮೂರು ಸಾವಿರಮಠ ವಿದ್ಯಾವರ್ಧಕ ಸಂಘಕ್ಕೆ ಕಳೆ ಹಾಗೂ ಶಕ್ತಿ ಬಂದಿದೆ. ಮೊದಲು ಆ ಪ್ಲೇಗ್ರೌಂಡಿನ ಸುತ್ತಲೂ ಯಾರು ಹೋಗುವಂತಿರಲಿಲ್ಲ. ಮಲಮೂತ್ರಗಳ ತವರುಮನೆಯಾಗಿತ್ತು. ಮುಖ, ಮೂಗು ಮುಚ್ಚಿಕೊಂಡು ದಾರಿಯಲ್ಲಿ ಅಡ್ಡಾಡ ಬೇಕಾಗಿತ್ತು. ಅದು ಇದೀಗ ಹೊರಗೆ ಲಕ್ಷ್ಮೀ ನಿವಾಸವಾಗಿದ್ದು ಒಳಗೆ ಸರಸ್ವತಿ

ಮಂದಿರವಾಗಿ ಕಲಾಪೂರ್ಣವಾಗಿ ಶೋಭೆಗೊಂಡು ಉಪಯೋಗವಾಗುತ್ತಲಿರುವದು ಶ್ರೀ ಜಗದ್ಗುರುಗಳ ಮುಂಧೋರಣೆ, ಶ್ರೀ ನಾರಾಣಜಿ ಕಾನಜಿ ಅವರ ಪರಿಶ್ರಮವೇ ಕಾರಣವಾಗಿದೆ. ಇದ್ದ ಶೈಕ್ಷಣಿಕ ಸಂಸ್ಥೆಗಳ ಬೆಳವಣಿಗೆ ಹಾಗೂ ಹೊಸದಾಗಿ ಪ್ರಾರಂಭಿಸಬೇಕೆಂಬುವದಕ್ಕೆ ಹೊಸ ಹುರುಪು ಮೂಡಿದಂತಾಗುತ್ತದೆ. ವರ್ಷಕ್ಕೆ ೨-೩ ಲಕ್ಷ ಉತ್ಪನ್ನ ಬರುವಷ್ಟು ಅನುಕೂಲವಾಗಿದೆ. ಆ ದುಡ್ಡು ಮಠಕ್ಕೆ ಉಪಯೋಗಿಸದೇ ಕೇವಲ ಮಠದಿಂದ ನಡೆಯುವ ಶೈಕ್ಷಣಿಕ ಸಂಸ್ಥೆಗಳಿಗೆ ಉಪಯೋಗವಾಗಬೇಕೆಂಬುದೇ ಶ್ರೀ ಜಗದ್ಗುರುಗಳ ಇಚ್ಛೆಯಾಗಿದೆ. ಆ ರೀತಿ ಘಟನೆಯನ್ನು ಮಾಡಿದ್ದಾರೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಹಿಡಿದ ಸತ್‌ಕಾರ್ಯವನ್ನು ಬಿಡದೇ ಮುಗಿಸುವ ಹಠವಾದಿಗಳು, ಪ್ರಾರಂಭವಾದದ್ದು ಮುಗಿಯಲೇಬೇಕು. ಅಲ್ಲಿಯವರೆಗೆ ಸಮಾಧಾನವಿಲ್ಲ. ನಿರಂತರ ಕೆಲಸವಿದ್ದರೇನೇ ಅವರಿಗೆ ತೃಪ್ತಿ. 'ಕಾಯಕವೇ ಕೈಲಾಸ' ಈ ನುಡಿಯು ಶ್ರೀ ಜಗದ್ಗುರುಗಳಲ್ಲಿ ನಿಜವಾಗಿಯೂ ರೂಪುಗೊಂಡಿದೆ. ಆ ಕೆಲಸವು ಸಾಗಿದೆ. ಕಾಯಕದಿಂದ ಕೈಲಾಸ ಕಾಣತಕ್ಕ ಪರಿಶ್ರಮಿ ಜಗದ್ಗುರುಗಳಾದ ಇವರು ನಮ್ಮ ನಾಡಿಗೆ ಭಾಗ್ಯದಂತಿದ್ದಾರೆ. ಈ ಕಟ್ಟಡ ಪೂರ್ತಿ ಮುಗಿಯುವವರೆಗೆ ಶ್ರೀ ಎಚ್. ಪಿ. ಹುಲ್ಯಾಳ, ಶ್ರೀ ಬಿ. ಜಿ. ಹಿರೇಮಠ, ಶ್ರೀ ಎಂ. ಜಿ. ಬೆಟಗೇರಿ ಮುಂತಾದವರು ದುಡಿದು ಪರಿಶ್ರಮ ಸಾರ್ಥಕಗೊಳಿಸಿದ್ದಾರೆ.

### ಹಿಂದೂ- ಮುಸಲ್ಮಾನರಲ್ಲಿ ಸುಮಧುರ ಬಾಂಧವ್ಯ:
### ಮಾನವೀಯ ಸಾಧನೆಯ ಶಾಂತಿಮಂಚ

ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಮಹತ್ತರವಾದ ಹಾಗೂ ಮಾನವೀಯತೆಯಿಂದ ಕೂಡಿದ ಅತ್ಯದ್ಭುತ ಕಾರ್ಯವನ್ನೆಸಗಿ ಮಾನವ ಕಲ್ಯಾಣವನ್ನು ಮಾಡಿದ್ದು ಐತಿಹಾಸಿಕ ಸತ್ಯ! ಹುಬ್ಬಳ್ಳಿ ಮಹಾನಗರದಲ್ಲಿ ಹಿಂದೂ- ಮುಸ್ಲಿಂರಲ್ಲಿ ಸುಮಧುರ ಬಾಂಧವ್ಯ ಮೂಡಿಸಿ, ಶಾಂತಿ ಸ್ಥಾಪಿಸಿದ್ದು ಇದೊಂದು ಐತಿಹಾಸಿಕ ಘಟನೆಯಾಗಿದೆ. ಇತ್ತೀಚೆಗೆ ೧೯೪೪ರಲ್ಲಿ ಹಿಂದೂ-ಮುಸ್ಲಿಂರಲ್ಲಿ ದ್ವೇಷಾಸೂಯೆಗಳ ಕಾಳ್ಗಿಚ್ಚು ಧಗಿಧಗಿಸುತ್ತಿರುವಾಗ ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹಿಂದೂ- ಮುಸ್ಲಿಂರಲ್ಲಿ ಪ್ರೇಮ ಭಾವೈಕ್ಯವನ್ನು ನಿರ್ಮಿಸಿ ಪವಾಡಸದೃಶ ಕಾರ್ಯವನ್ನೆಸಗಿದ್ದು ಇನ್ನೂ ಅಚ್ಚಳಿಯದಂತಿದೆ.

೧೯೮೪ ರಲ್ಲಿ ಹುಬ್ಬಳ್ಳಿಯಲ್ಲಿ ಹುಯ್ಲೆದ್ದ ಹದಗೆಟ್ಟ ವಾತಾವರಣ! ಯಾರ ಕಂಕುಳಲ್ಲಿ ಚೂರಿ, ಯಾರ ಬೆನ್ನಲ್ಲಿ ಬಡಗಿ.... ಅನಿಶ್ಚಿತ ಗಂಡಾಂತರ!! ದಾರಿಯಲ್ಲಿ ನಾಯಿಗಳು ಕಚ್ಚಾಡಿದರೆ ಕೂಡಾ ಮನುಷ್ಯರು ಮನುಷ್ಯರ ಮೇಲೆ ಮುಗಿಬಿದ್ದ

ರೇನೋ ಎಂಬಂತಹ ಸಂಶಯಾಸ್ಪದ ಪ್ರಸಂಗ!!! ಎಲ್ಲ ಧರ್ಮಗಳೂ ಜ್ಯೋತಿ ಸ್ವರೂಪಿ ಭಗವಂತನನ್ನು; ನಿರಾಕಾರನೂ, ಕರುಣಾಮಯಿಯೂ ಆದ ಶಿವ ಪರಮಾತ್ಮನನ್ನು ತೋರುವ ಭಿನ್ನ ಭಿನ್ನ ಮಾರ್ಗಗಳು. ಆತನೇ ಅಲ್ಲಾ, ಆತನೇ ಶಿವ, ಆತನ ಮಕ್ಕಳು ನಾವೆಲ್ಲ ಎಂಬಂತಹ ಶ್ರೀ ಧರ್ಮಗಳ ಶ್ರದ್ಧೆ....ತಾಯಿ ರಕ್ಕಸಿಯಾದಂತೆ....ಪೈಶಾಚಿಕ ಹಿಂಸೆ, ರಕ್ತ ಪಿಪಾಸೆ, ಕ್ರೌರ್ಯ, ಮತ್ಸರ, ಜಿದ್ದು, ರಣಹದ್ದು ಗುಣಗಳು ಪವಿತ್ರವಾದ ಧರ್ಮದ ಸುಳ್ಳು ಹೆಸರಿನಲ್ಲಿ, ಕಪಟ ವೇಷ ದಲ್ಲಿ ಸ್ವಚ್ಛಂದವಾಗಿ ಚಲ್ಲಾಡಿದ ವಿಶೃಂಖಲ ಸ್ಥಿತಿ. ಈ ವಿಷಗಾಳಿಯಲ್ಲಿ ಹುಬ್ಬಳ್ಳಿ ಮಹಾನಗರವು 'ಹುಡದಿಯಾಗುವದರಲ್ಲಿ' ಇತ್ತು ಎಂದು ಹೇಳಿದರೆ ತಪ್ಪಾಗದು. ಅದನ್ನು ಉಪಾಯದಿಂದ ತಪ್ಪಿಸಿ ನಾಗರಿಕರೆಲ್ಲ ನೆಮ್ಮದಿಯ ಬದುಕನ್ನು ಬದುಕಲು ಹಾದಿ ಮಾಡಿಕೊಟ್ಟ ಕೀರ್ತಿ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರಿಗೆ ಸಲ್ಲುವದು.

ಅಂದು ಜೂನ್ ತಿಂಗಳಲ್ಲಿ ಮನೆಗಳಿಗೆ ಬೆಂಕಿ ಹಚ್ಚುವದು, ಅಂಗಡಿಗಳಿಗೆ ಹೊಕ್ಕು ಲೂಟಿ ಮಾಡುವದು, ಸುಡುವದು, ಲಗ್ನ ಸಮಾರಂಭಕ್ಕೆ ದಾಸ್ತಾನು ಮಾಡಿದ ಕಾಳು– ಕಡಿ, ಪಾತ್ರೆಗಳನ್ನೆಲ್ಲ ದೋಚಿಕೊಂಡು ಹೋಗುವದನ್ನು ನೋಡಿ ದಾಗ ಇಡೀ ನಾಗರಿಕ ಜೀವನವೇ ಭಯ, ವಿಹ್ವಲದಿಂದ ತತ್ತರಿಸಿ ಹೋಗುವಂತಾ ಯಿತು. ಆಗ ಹಿಂದುಗಳ ಮೇಲೆ ಮುಸಲ್ಮಾನರೂ, ಮುಸಲ್ಮಾನರ ಮೇಲೆ ಹಿಂದೂ ಗಳು ಹಲ್ಲು ಕಡಿಯಹತ್ತಿದರು. ರಾಜ್ಯ ಸರ್ಕಾರ ತನ್ನ ಪೋಲೀಸ್ ದಳದ ಮುಖಾಂತರ ತಾತ್ಪೂರ್ತಿಕ ಶಾಂತಿಯನ್ನು ಸ್ಥಾಪಿಸಲು ಪ್ರಯತ್ನಪಟ್ಟಿತು. ಜಿಂಕೆ, ಆನೆಯಂತಹ ಪಶುಗಳಲ್ಲಿ ಸಹ ಸಂಯಮ, ಸಂಘ ಬುದ್ಧಿಗಳು ಕಂಡುಬರುವಾಗ ಕರ್ತವ್ಯ ಬುದ್ಧಿ, ತ್ಯಾಗ ಜೀವನ ಮಾನವ–ಮಾನವರಲ್ಲಿ ಕಂಡುಬರಲಾರದೇ? ಎಂದು ಕೇಳುವಂತಾಯಿತು. ನಗರದ ಬುದ್ಧಿಜೀವಿಗಳು, ಸಮಾಜ ಸುಧಾರಕರು ಮಹಾಪೌರರ ನೇತೃತ್ವದಲ್ಲಿ ಶಾಂತಿ ಸ್ಥಾಪನೆಯ ಸಮಿತಿಯೊಂದನ್ನು ರಚಿಸಿ ಕಾರ್ಯ ಪ್ರವೃತ್ತವಾಯಿತು. ಅದು ಕೂಡಾ ಬಹಳ ದಿನ ನಿಭಾಯಿಸಲಿಲ್ಲ. ಮುಸಲ್ಮಾನರ ಪವಿತ್ರ ದಿನವಾದ 'ಈದ್–ಉಲ್–ಫಿತರ್' ವೇಳೆಯಲ್ಲಿ ಗಂಡಾಂತರ ಹೆಡೆ ಎತ್ತಿ ನಿಲ್ಲುವ ಮುನ್ಸೂಚನೆಯಂತೆ ಅದೊಂದು ವಾರ ಇರುವಾಗ ಹೊಸದೊಂದು ಕಾರ್ಮೋಡ ಕಗ್ಗತ್ತಲೆಗೆ ಇಂಬುಗೊಡುವಂತೆ ಭುಗಿಲ್ ಎಂದು ಅಟ್ಟಹಾಸವನ್ನು ಬೀರಿತು. ಈ ಸಲ ಹಾದಿಯಲ್ಲಿ ಹೋಗುವ ಜನಸಾಮಾನ್ಯರನ್ನು ಗೂಂಡಾಗಳ ಗುಂಪು ಬಂದು ಜಂಬೆ, ಚೂರಿಯಿಂದ ಇರಿದು ಕೊಲ್ಲುವದು, ಗಾಯಗೊಳಿಸುವದು, ಆಟೋರಿಕ್ಷಾ ಸುಡುವದು ಸುರುವಾಯಿತು. ಸಾರ್ವಜನಿಕರು ತಮ್ಮ ಉದ್ಯೋಗ ವ್ಯವಸಾಯ ಮಾಡಲು ಹೋಗುವದು ಒತ್ತಟ್ಟಿಗೆ ಉಳಿದು ರಾತ್ರಿ ನಿದ್ದೆ ಮಾಡು ವದೂ ದುಸ್ತರವಾಯಿತು. ಕರ್ನಾಟಕ ರಾಜ್ಯ ಸರ್ಕಾರದವರು ಹೊರಗಿನಿಂದ

ಸಹಸ್ರಾರು ಹೆಚ್ಚಿನ ಪೋಲಿಸ್ ಸಿಬ್ಬಂದಿ ಉಸ್ತುವಾರಿಗೆ ಕಳಿಸಿದರೂ ಪರಿಸ್ಥಿತಿ ನಿಯಂತ್ರಣಕ್ಕೆ ಬರಲು ಕಷ್ಟಸಾಧ್ಯವಾಯಿತು. ಜನರು ಭಯಾನಕ ಪರಿಸ್ಥಿತಿಯಲ್ಲಿ ಹೊತ್ತುಗಳೆಯುವ ದುರ್ಧರ ಪ್ರಸಂಗ ಆವರಿಸಿತು.

ಹುಬ್ಬಳ್ಳಿಯ ಜನನಿಬಿಡ ಪ್ರದೇಶವೆನಿಸಿದ ಶ್ರೀ ಮೂರುಸಾವಿರಮಠದಲ್ಲಿ ಪೂಜೆಗೆ ಬರುವ ಭಕ್ತಾದಿಗಳಿರಲಿ, ಒಂದು ಬೆಕ್ಕಿನ ಪಿಳ್ಳೆಯೂ ಬರದಂತೆ ಭಣಗುಡ ಹತ್ತಿತು. ಮೂರುಸಾವಿರಮಠದ ಶ್ರೀ ಜಗದ್ಗುರುಗಳಿಗೆ ಚಿಂತೆ ಆವರಿಸಿತು. ಹೀಗಾದರೆ ಮುಂದೆ ಹೇಗೆ? ಎಂಬ ಪ್ರಶ್ನೆ ಅವರನ್ನು ಸಹಜವಾಗಿ ಕಳವಳಕ್ಕೀಡು ಮಾಡಿತು. ಈ ಕಾರ್ಗತ್ತಲೆಯನ್ನು ಹೋಗಲಾಡಿಸುವ ದಾರಿ ಯಾವುದೂ ಹೊಳೆಯ ಲಿಲ್ಲ. ಆದರೂ ಧೃತಿಗೆಡದೇ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರಿಗೆ ದಿನಾಲೂ ಮುಂಜಾನೆ ಶಾಂತಿಯುಂಟಾಗಲು ಪ್ರಾರ್ಥನೆ ಮಾಡಹಚ್ಚಿದರು. ತಾವು ದಿನಾಲು ಪೂಜೆಯ ವೇಳೆಯಲ್ಲಿ 'ಗುರುಸಿದ್ಧೇಶ್ವರಾ ದಾರಿ ತೋರಿಸು' ಎಂದು ಅಂಗಲಾಚಿ ಬೇಡಿಕೊಂಡರು. ಆಗ ಕರ್ತವ್ಯಬುದ್ಧಿ ಜಾಗೃತವಾಯಿತು. ಸಾಮಾಜಿಕ ನೆಮ್ಮದಿ ಕಾಪಾಡಿಕೊಂಡು ಬರುವ ಸಲುವಾಗಿ ಹಿಂದೂ-ಮುಸ್ಲಿಂ ಬಾಂಧವ್ಯವನ್ನು ಗಟ್ಟಿಯಾಗಿ ಪೊಸೆಯುವ ಸಂಕಲ್ಪ ಮಾಡಿದರು. ಅಷ್ಟರಲ್ಲಿ ರಮ್‌ಜಾನ್ ಹಬ್ಬವು ತೀರ ಸಮೀಪ ಬಂದಿರುವದರಿಂದ ಮುಸ್ಲಿಂ ಮುಖಂಡರು ಶಾಂತಿಯಿಂದ ಹಬ್ಬವನ್ನಾಚರಿಸುವ ಉಪಾಯ ಯೋಜನೆ ಹುಡುಕಲು ಮೂರುಸಾವಿರಮಠದ ಜಗದ್ಗುರುಗಳನ್ನು ಕಂಡರು. ತಮ್ಮ ಸ್ವಾಭಾವಿಕ ಅನಿಸಿಕೆಗಳನ್ನು ಅವರ ಮುಂದೆ ಮಂಡಿಸಿದರು. ಇವರಲ್ಲದೇ ಕೇಂದ್ರಮಂತ್ರಿಗಳು, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆಯವರು, ಕೈಗಾರಿಕಾ ಸಚಿವರಾದ ಶ್ರೀ ಎಸ್. ಆರ್. ಬೊಮ್ಮಾಯಿಯವರು, ಮಾಜಿ ಕಾರ್ಮಿಕ ಸಚಿವರಾದ ಶ್ರೀ ಅಜೀಜ್ ಶೇಠ್ ಮುಂತಾದವರು ಶ್ರೀ ಜಗದ್ಗುರುಗಳಿಗೆ ಪತ್ರದ ಮೂಲಕ, ಫೋನಿನ ಮೂಲಕ, ತಾರ ಮೂಲಕ ನಿತ್ಯವೂ ಧರ್ಮಗುರುಗಳಾದ ನೀವು ಹಿಂದೂ-ಮುಸ್ಲಿಂ ಬಾಂಧವ್ಯವನ್ನು ಬೆಳೆಸಿ ನಾಡಿಗೆ ಸುಖ-ಶಾಂತಿಯನ್ನು ನೀಡಬೇಕೆಂದು ಪತ್ರ ಬರಲಾರಂಭಿಸಿದವು. ಶ್ರೀ ಜಗದ್ಗುರುಗಳಿಗೆ ನಿತ್ಯವೂ ಹಿಡಿಸಲಾರದಷ್ಟು ಚಿಂತೆ. ಪ್ರಸಾದ ಚಿಂತೆಗೂ ಕೊರತೆಯಾಗುವಷ್ಟು ಚಿಂತಿಸಿದರು. ಮರಮರನೆ ಮರುಗಿದರು. ಹಿಂದೂ-ಮುಸ್ಲಿಂ ಮುಖಂಡರನ್ನು ಕೂಡಿಸಿದರು. ಪರಿಪರಿಯಿಂದ ತಿಳಿಹೇಳಿದರು. ಎರಡೂ ಸಮಾಜದವರೂ ಕೂಡಿ ಹುಬ್ಬಳ್ಳಿ ಮಹಾನಗರದಲ್ಲಿ ರಮಜಾನ ಹಬ್ಬವನ್ನು ಸೌಹಾರ್ದಯುತವಾಗಿ ಆಚರಿಸಲು ಸಲಹೆ ಮಾಡಿದರು. ಕೆಲ ಹೊತ್ತು 'ಎತ್ತು ಎರೆಗೆ ಎಳೆಯಿತು, ಕೋಣ ಕೆರೆಗೆ ಎಳೆಯಿತು' ಎಂಬ ವಾತಾವರಣ ಆಗ ಉದ್ಭವವಾಯಿತು. ಜಗದ್ಗುರುಗಳಿಗೆ ಹಿಡಿಸಲಾರದಷ್ಟು ದುಃಖ ತುಂಬಿತು, ಸಹನೆ ಮೀರಿತು. ಆಗ

ಜಗದ್ಗುರುಗಳು ತಡೆಯದೇ, ಕರ್ತೃ ಗುರುಸಿದ್ಧೇಶ್ವರನನ್ನು ಸ್ಮರಿಸಿ ಈ ರೀತಿ ನುಡಿದರು. ಅದು ಇಂತಿದೆ: 'ನೀವಿಬ್ಬರೂ (ಹಿಂದೂ–ಮುಸ್ಲಿಂರು) ಹೊಡೆದಾಡುತ್ತ ಹೋದರೆ ದಿನನಿತ್ಯವೂ ನಡೆಯುವ ಕೋಟ್ಯಾಂತರ ರೂಪಾಯಿಗಳ ವ್ಯವಹಾರ ನಿಂತುಹೋಗುವದು. ಬಡಬಗ್ಗರು ಎರಡೂ ಸಮಾಜದಲ್ಲಿರುವದು ನಿಮಗೆ ತಿಳಿಯದೆ? ಅವರೆಲ್ಲ ಉಪವಾಸ–ವನವಾಸ ಬೀಳುವದನ್ನು ನಾವು ನೋಡಲಾರೆವು. ನೀವು ಪರಸ್ಪರ ಪ್ರೀತಿ, ವಿಶ್ವಾಸದಿಂದ ನಡೆಯದಿದ್ದರೆ ನಾವೇನು ಮಾಡಲಿಕ್ಕೆ ಆಗುತ್ತದೆ? ಈ ಮಠ ಬಿಟ್ಟು ಅಡವಿ ಸೇರಿ ಪರಮಾತ್ಮನಲ್ಲಿ ದೇವರೇ ಎರಡೂ ಸಮಾಜದವರಿಗೆ ಸದ್ಬುದ್ಧಿ ಕೊಡು ಎಂದು ಪ್ರಾರ್ಥಿಸುವದೊಂದೇ ನಮಗೆ ಉಳಿದಿರುವ ಹಾದಿಯೆಂದು' ಸ್ಪಷ್ಟಪಡಿಸಿದರು. ಆಗ ಅಭೇದ್ಯವಾದ ಕೋಟೆಯ ಬಾಗಿಲು ಮೆಲ್ಲನೇ ತೆರೆಯಿತು. ಹಿಂದೂ–ಮುಸ್ಲಿಂ ಬಾಂಧವರಲ್ಲಿ ವಿವೇಕೋದಯವಾಯಿತು. ನಂತರ ರಮಜಾನ್ ಹಬ್ಬವನ್ನು ಮಹಾಪೌರರೊಡಗೂಡಿ ಹಿಂದೂ–ಮುಸ್ಲಿಂ ಬಾಂಧವರೆಲ್ಲ ಆಚರಿಸಿ, ಪರಸ್ಪರ ವಿಶ್ವಾಸ ತೋರಿ ಶಾಂತಿ ನೆಲೆಸಲು ಹಾದಿ ಮಾಡಿ ಕೊಟ್ಟರು.

ನಗರದ ಜನಸಾಮಾನ್ಯರಲ್ಲಿ ಆಡುಮಾತಿನಲ್ಲಿ ಕಂಡುಬಂದ ಪ್ರತಿಕ್ರಿಯೆಗಳನ್ನು ಶ್ರೀ ಹುಚ್ಚೇಶ್ವರ ಮೇದಿ ಅವರ ಭಾಷೆಯಲ್ಲಿಯೇ ತಿಳಿದರೆ ಮತ್ತಷ್ಟು ಅರ್ಥವಾದೀತು. ಇವುಗಳು ಹಲವು ಹನ್ನೊಂದು ಚಮತ್ಕಾರ ಭರಿತವಾಗಿವೆ. ಹಿಂಜಿ ನೋಡಿದರೆ ಅದರಲ್ಲಿಯ ತಿರುಳು ನಮಗೆ ದೃಗ್ಗೋಚರವಾಗುವಲ್ಲಿ ಸಂದೇಹವಿಲ್ಲ.

೧) 'ಇದು ಮರಿ ಪಂಜಾಬ ಆಗುವ ಲಕ್ಷಣವಿತ್ತು. ಸಾವಿರಾರು ಹೆಣ ಬೀಳುವ ಸಂದರ್ಭವಿತ್ತು. ಅದನ್ನು ತಪ್ಪಿಸಿದ ಪೂಜ್ಯ ಜಗದ್ಗುರುಗಳ ಪ್ರಯತ್ನ ಶ್ಲಾಘನೀಯ' ಎಂದು ಆಡಿದ್ದುಂಟು.

೨) ಕ್ಷತ್ರಿಯ ಸಮಾಜದವರಂತೂ 'ನಮಗೆ ದಿನಾಲೂ ನಿದ್ರೆ ಹತ್ತದಂತಾಗಿತ್ತು. ಶಾಂತಿ ಸ್ಥಾಪನೆಯಿಂದ ನೆಮ್ಮದಿ ತಂದುಕೊಟ್ಟು ನಮ್ಮ ವ್ಯಾಪಾರೋದ್ಯಮಕ್ಕೆ ತೊಡಗುವಂತಾಯಿತು' ಎಂದರು.

೩) ವಿಶ್ವಶಾಂತಿಯ ಮನೋಧರ್ಮವನ್ನು ಬೆಳೆಸಿಕೊಳ್ಳಲು ಜಗದ್ಗುರುಗಳು ದೇಶ–ವಿದೇಶಗಳಲ್ಲಿ ಸಂಚರಿಸಿ ಬಂದ ಫಲವನ್ನು ಕೃತಿಯಲ್ಲಿ ಮಾಡಿ ತೋರಿಸಿದರು.

೪) ಇಷ್ಟು ವರ್ಷಗಳಲ್ಲಿ ಮಾಡಿದ ಮಾನವ ಸೇವೆ ಹಾಗೂ ಶೈಕ್ಷಣಿಕ ಸೇವೆಗಿಂತ ಹತ್ತುಪಟ್ಟು ಹೆಚ್ಚಿನದು.

೫) ರಮಜಾನ್ ಹಬ್ಬದ ದಿನ ಮುಸ್ಲಿಂ ಬಾಂಧವರಷ್ಟೇ ನಾವು ತಿರುಗಿ ಒರುವದು ದುರ್ಲಭವೆಂದು ತಿಳಿದುಕೊಂಡಿದ್ದರು. ಹಿಂದೂ–ಮುಸ್ಲಿಂ ಬಾಂಧವರು

ಪರಸ್ಪರ ಪ್ರೀತಿಯಿಂದ ಆಲಿಂಗನ ಮಾಡಿದ್ದನ್ನು ಕಂಡು, ನಾನು ನನ್ನ ಮಕ್ಕಳು-ಮೊಮ್ಮಕ್ಕಳು ಮೂರುಸಾವಿರಮಠದ ಸ್ವಾಮಿಗಳ ಹೆಸರು ಹೇಳಿ ಊಟ ಮಾಡುವ ಹಾಗಾಯಿತು. ಇದೊಂದು ಪವಾಡಸದೃಶ ಕೃತಿ. ನೀವು ಆದರ್ಶ ಜಗದ್ಗುರುಗಳಾದಿರಿ ಎಂದು ಮುಂತಾಗಿ ಅಂದುಕೊಂಡದ್ದುಂಟು. ಆದರೆ ಜಗದ್ಗುರುಗಳು ಮಾತ್ರ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಪ್ರೇರಣೆ, ಹಿಂದೂ-ಮುಸ್ಲಿಂ ಬಾಂಧವರು ಶಾಶ್ವತವಾಗಿ ಪರಸ್ಪರ ವಿಶ್ವಾಸದಿಂದ ನಡೆದುಕೊಂಡರೆ ಅದೇ ನಾವು ಪ್ರಯತ್ನಪಟ್ಟದ್ದಕ್ಕೂ ಸಾರ್ಥಕವೆಂದು ಭಾವಿಸುತ್ತೇವೆ ಎಂದು ಪ್ರಾಂಜಲ ಮನದವರಾಗಿದ್ದಾರೆ.

**೧) ಚಿತ್ತರಗಿ-ಇಲ್ಲಕಲ್ಲ ಮಹಾಂತಸ್ವಾಮಿಗಳ ದೃಷ್ಟಿಯಲ್ಲಿ:**

ಪೂಜ್ಯ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಈ ಸಾಮಾಜಿಕ ಬಾಂಧವ್ಯ, ಸಮತಾಭಾವ, ನವಯುಗಕ್ಕೆ ಸಲ್ಲುವ ಸದ್ಭಾವ ದರ್ಶನ ನಮ್ಮೆಲ್ಲರಿಗೂ ಆದರ್ಶವಾದುದು. ಹುಬ್ಬಳ್ಳಿ ನಗರದ ಶಾಂತಿಗೆ ನಾಂದಿಹಾಕಿದ ಶ್ರೀಗಳಿಗೆ ಹೃದಯದ ನಮನ.

**೨) ಕರ್ನಾಟಕದ ಮುಖ್ಯಮಂತ್ರಿ ಮಾನ್ಯ ರಾಮಕೃಷ್ಣ ಹೆಗಡೆಯವರ ದೃಷ್ಟಿಯಲ್ಲಿ:**

ಹುಬ್ಬಳ್ಳಿಯಲ್ಲಿ ಜಾತ್ಯಾತೀತ ಸೌಹಾರ್ದವನ್ನು ಕಾಪಾಡಿಕೊಳ್ಳುವಲ್ಲಿ, ಹಿಂದೂ-ಮುಸ್ಲಿಂರಲ್ಲಿ ಸದಿಚ್ಛೆ-ಸದ್ಭಾವನೆಗಳು ತಲೆದೋರಿ ಶಾಂತ ವಾತಾವರಣ ವುಂಟಾಗುವಂತೆ ಮಾಡುವಲ್ಲಿ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಕಳಕಳಿಯಿಂದ ಪರಿಶ್ರಮಿಸಿದ್ದನ್ನು ಮತ್ತು ಅದು ಸಂಪೂರ್ಣ ಯಶಸ್ವಿಯಾಗುವಂತೆ ಮಾಡಿದ್ದು ತಿಳಿದು ಸಂತೋಷವಾಗಿದೆ.

**೩) ಮಾನ್ಯ ಎಸ್. ಆರ್. ಬೊಮ್ಮಾಯಿಯವರ ದೃಷ್ಟಿಯಲ್ಲಿ:**

ಇತ್ತೀಚೆಗೆ ಹುಬ್ಬಳ್ಳಿಯಲ್ಲಿ ನಡೆದ ಕೋಮು ಗಲಭೆಯಿಂದ ನಗರದಲ್ಲಿ ಅಶಾಂತಿ ಮತ್ತು ಭಯದ ವಾತಾವರಣವುಂಟಾದ ಸಮಯದಲ್ಲಿ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳವರು ಎರಡೂ ಕೋಮಿನವರಿಗೂ ಪುನಃ ವಿಶ್ವಾಸದ ಶಾಂತ ವಾತಾವರಣ ನಿರ್ಮಾಣ ಮಾಡುವಲ್ಲಿ ಯಶಸ್ವಿಯಾಗಿದ್ದು, ಸರಕಾರದ ಪರವಾಗಿ, ನನ್ನ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳು ಸಲ್ಲಿಸುತ್ತೇನೆ....

**೪) ಮಾಜಿ ಕಾರ್ಮಿಕ ಮಂತ್ರಿಗಳಾದ ಅಜೀಜ್‌ಶೇಠರ ದೃಷ್ಟಿಯಲ್ಲಿ:**

ಈ ದಿನ ಇತಿಹಾಸದಲ್ಲಿ ಸುವರ್ಣಾಕ್ಷರದಲ್ಲಿ ಬರೆಯುವ ದಿನ. ನಗರದಲ್ಲಿ ಮೂರುಸಾವಿರಮಠದ ಸ್ವಾಮೀಜಿಯವರು ಮುಸ್ಲಿಂ ಬಾಂಧವರಿಗೆ ರಮ್‌ಜಾನ್

ಪ್ರಾರ್ಥನೆ ಸಲ್ಲಿಸಲು ಅವಕಾಶ ಮಾಡಿಕೊಟ್ಟರು. ಕೇವಲ ನಗರದ ಮುಸ್ಲಿಂರ ಪರವಾಗಿ ಅಲ್ಲ, ಇಡೀ ಕರ್ನಾಟಕದ ಮುಸ್ಲಿಂ ಜನತೆಯ ಪರವಾಗಿ ನಾನು ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

**೫) ಶಾಸಕರಾದ ಶ್ರೀ ಎಂ. ಎಂ. ಹಿಂಡಸಗೇರಿ ಅವರ ದೃಷ್ಟಿಯಲ್ಲಿ:**

ಹುಬ್ಬಳ್ಳಿಯಲ್ಲಿ ಶಾಂತಿ ಸ್ಥಾಪಿತವಾಗಿ ಸಾಮಾನ್ಯ ಪರಿಸ್ಥಿತಿ ನಿರ್ಮಾಣ ಗೊಳ್ಳುವಂತೆ ಪರಿಶ್ರಮಿಸಿದ ಮೂರುಸಾವಿರಮಠದ ಸ್ವಾಮೀಜಿಯವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಜಗದ್ಗುರುಗಳು ಸಕಾಲಿಕವಾಗಿ ಪ್ರಯತ್ನಿಸಿದ್ದರಿಂದ ಮುಸ್ಲಿಂ ಬಾಂಧವರ ಗಾಸಿಗೊಂಡ ಭಾವನೆಗಳನ್ನು ಹೋಗಲಾಡಿಸಲು ಸಾಧ್ಯ ವಾಯಿತು. ಧರ್ಮವು ಅದು ಒಂದು ಅವಿಭಾಜ್ಯವಾದುದು. ಧರ್ಮಗುರುಗಳು ರಾಜಶಕ್ತಿಗಿಂತ ಹೆಚ್ಚಿಗೆ ಸಾಮರಸ್ಯವುಂಟು ಮಾಡಬಲ್ಲರು ಎಂಬುದಕ್ಕೆ ಮೂರು ಸಾವಿರಮಠದ ಶ್ರೀ ಜಗದ್ಗುರುಗಳೇ ಸಾಕ್ಷಿ. ಈ ಪ್ರಸಂಗದಲ್ಲಿ ನಮ್ಮ ಹಿತೈಷಿ ಗಳಾದ ಶ್ರೀ ಮುತ್ತಣ್ಣ ಬತ್ಲಿಯವರ ನೆರವನ್ನು ಮರೆಯಲಾರೆವು. ಉಭಯ ಕೋಮುಗಳೂ ಸೌಹಾರ್ದಯುತವಾಗಿ ಬಾಳಿ ಹುಬ್ಬಳ್ಳಿಯು ಸಾಮರಸ್ಯದ ಸಂಕೇತ ವಾಗುವಂತೆ ಮಾಡುವ ಪ್ರಯತ್ನಗಳು ಮುಂದುವರಿಯಲಿ.

**೬) ಡಾ|| ವೃಷಭೇಂದ್ರ ಸ್ವಾಮಿಗಳ ಭಾಷೆಯಲ್ಲಿ:**

ಚಾರಿತ್ರಿಕವಾಗಿ ಸರ್ವಧರ್ಮದ ಸಮನ್ವಯ ಸಮಾನತೆಯ ಮಂತ್ರವನ್ನು ಅರಿತು, ಆಚರಿಸಿ ತೋರಿಸಿದ ಬಸವ ಧರ್ಮದ ಪ್ರತಿನಿಧಿಗಳಾದ ಹುಬ್ಬಳ್ಳಿ ಮೂರುಸಾವಿರಮಠದ ಪೂಜ್ಯಶ್ರೀ ಜಗದ್ಗುರುಗಳು ಮೊನ್ನೆ ನಡೆದ ಹುಬ್ಬಳ್ಳಿಯ ಗಲಭೆ ಘರ್ಷಣೆಗಳಿಗೆ ಶಾಂತಿಮಂತ್ರ ಬೋಧಿಸಿದ ಪ್ರವಾದಿಯಾದರು. ಜನತೆ ಎಲ್ಲವೂ ತತ್ತರಿಸುತ್ತಿರುವಾಗ, ಗಲಭೆ ಕರ್ನಾಟಕದಾದ್ಯಂತ ಪಸರಿಸುವ ಮೊದಲೇ ಶ್ರೀಗಳು ಎಲ್ಲ ಪಂಗಡಗಳ ನಾಯಕರಲ್ಲಿ ಸ್ನೇಹ, ಸೌಹಾರ್ದ, ಸಹಕಾರ ಮೂಡು ವಂತೆ ಮಾಡಿ, ಒಂದು ಶಾಂತಿ ಮಂತ್ರ ಮಾಟವನ್ನೇ ಮಾಡಿಬಿಟ್ಟರು. ಶ್ರೀಮಠ ಎಲ್ಲ ಧರ್ಮದ ಅನುಯಾಯಿಗಳ ಗೌರವದ ಧರ್ಮಪೀಠ. ರಾಷ್ಟ್ರವ್ಯಾಪೀ ಘರ್ಷಣೆ ಗಳ ಪರಿಹಾರಕ್ಕೆ ಸರ್ವಧರ್ಮಗಳ ಹಿರಿಯರು ನಿಷ್ಕ್ರಿಯರಾಗದೇ ಕೈಗೆ ಕೈ ಹಚ್ಚಿ ಮುನ್ನಡೆಯಬೇಕೆಂಬ ಈ ಉದಾಹರಣೆ ಕೀಲಿಕೈ ಆಗಿದೆ.

**೭) ಡಾ|| ಪಂಚಾಕ್ಷರಿ ಹಿರೇಮಠವರ ದೃಷ್ಟಿಯಲ್ಲಿ:**

ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಮನುಜಕುಲದ ಮೇಲಿನ ತಮ್ಮ ಪ್ರೇಮದಿಂದ, ಅವರ ಕರುಣೆಯಿಂದ, ಹುಬ್ಬಳ್ಳಿಯನ್ನು ಇನ್ನೊಂದು ಭೀವಂಡಿಯಾಗದಂತೆ, ಪಂಜಾಬ ಆಗದಂತೆ ರಕ್ಷಿಸಿದುದು ಪೂಜ್ಯ ಶ್ರೀಗಳ ಅಂತಃಕರಣಕ್ಕೆ, ದೂರದೃಷ್ಟಿಗೆ ಸಾಕ್ಷಿಯಾಗಿದೆ.

೮) ಶ್ರೀ ಶಂಕರ ಪಾಟೀಲರ ದೃಷ್ಟಿಯಲ್ಲಿ:

ಹುಬ್ಬಳ್ಳಿ ನಗರದಲ್ಲಿ ಸಂಭವಿಸಬಹುದಾಗಿದ್ದ ಈ ಭೀಕರ ಅನಾಹುತವನ್ನು ತಪ್ಪಿಸಿದ ಮೂರುಸಾವಿರಮಠದ ಜಗದ್ಗುರುಗಳು ಮಾನವೀಯತೆಯ ಸಾಕಾರ ಮೂರ್ತಿಯೆನಿಸಿದ್ದಾರೆ. ಈ ಹಿಂದೆ ಭೀಕರ ಬರಗಾಲದ ಸಂದರ್ಭದಲ್ಲಿ ಬಡ ಬಗ್ಗರಿಗೆ ಪುಕ್ಕಟೆ ಆಹಾರ ದೊರೆಯುವಂತೆ ಗಂಜೀ ಕೇಂದ್ರಗಳನ್ನು ತೆರೆಯುವಲ್ಲಿ ಮಹತ್ವದ ಪಾತ್ರವಹಿಸಿದ್ದರು. ಈಗ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇಂತಹ ವಿಪನ್ನಾವಸ್ಥೆಗಳಲ್ಲಿ ಮಠಾಧೀಶರು ಎಂತಹ ಉದಾತ್ತ ಪಾತ್ರ ನಿರ್ವಹಿಸ ಬಲ್ಲರೆಂಬುದನ್ನು ತಮ್ಮ ಈ ಕೃತಿಯ ಮೂಲಕ ಮೂರುಸಾವಿರಮಠದ ಜಗದ್ಗುರು ಗಳು ಮತ್ತೆ ತೋರಿಸಿದ್ದು ಒಂದು ಐತಿಹಾಸಿಕ ಸಂಗತಿಯಾಗಿದೆ.

೯) "ವಿಶ್ವವಾಣಿ" ದಿನಪತ್ರಿಕೆಯ ಭಾಷೆಯಲ್ಲಿ:

'ಮತೀಯ ಸೌಹಾರ್ದತೆ ಈ ನೆಲದಲ್ಲಿ ಮನೆ ಮಾಡಿಕೊಂಡಿದೆ. ಕೆಲ ಅವಿವೇಕಿಗಳಿಂದಾದ ದ್ವೇಷಕ್ಕೆ ಶ್ರೀ ಮೂರುಸಾವಿರಮಠ ಜಗದ್ಗುರು ಗಂಗಾಧರ ಅವರು ತೆರೆ ಎಳೆದು ಈ ನೆಲದ ಪರಂಪರೆ ಮುಂದುವರಿಸಿದಂತಾಯಿತು.'

೧೦) "ಪ್ರಜಾಜ್ಯೋತಿ" ವಾರಪತ್ರಿಕೆಯ ದೃಷ್ಟಿಯಲ್ಲಿ:

'ಇತಿಹಾಸದ ಪುಟಗಳಲ್ಲಿ ಬರೆಯುವಂತಹ ಕಾರ್ಯಕವನ್ನು ಮಾಡಿದ ಮೂರು ಸಾವಿರಮಠದ ಶ್ರೀ ಜಗದ್ಗುರುಗಳನ್ನು ನಾಡು ಎಂದಿಗೂ ಮರೆಯದು.'

೧೧) ಪ್ರೊ|| ಬಿ. ಎ. ತೆಳಗಡಿಯವರ ಭಾಷೆಯಲ್ಲಿ:

'ಜಾತಿ-ಮತಗಳ ತಾರತಮ್ಯವಿಲ್ಲದೇ ಎಲ್ಲರನ್ನೂ ತೆರೆದ ಹೃದಯದಿಂದ ಬರಮಾಡಿಕೊಳ್ಳುವ ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠವು ಭಾವೈಕ್ಯತೆಯ ಉಜ್ವಲ ಸಂಕೇತವಾಗಿ ಕಂಗೊಳಿಸುತ್ತದೆ. ಹೊತ್ತಿ ಉರಿಯುತ್ತಿದ್ದ ಹುಬ್ಬಳ್ಳಿ ನಗರದಲ್ಲಿ ಇತ್ತೀಚೆಗೆ ಮತೀಯ ಸೌಹಾರ್ದತೆ ಸ್ಥಾಪಿಸಿದ ಪೂಜ್ಯ ಜಗದ್ಗುರುಗಳವರ ಮಹತ್ಸಾಧನೆಯೇ ಈ ಮಾತಿಗೆ ಪ್ರತ್ಯಕ್ಷ ಸಾಕ್ಷಿ.'

೧೨) ಪ್ರೊ|| ಎಸ್. ಎಸ್. ಭೂಸರೆಡ್ಡಿ ಅವರ ಭಾಷೆಯಲ್ಲಿ:

'ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಕರುಣೆಯಿಂದ, ಮೋಡದಂತೆ ಎರಗಿ ಬಂದ ಭೀಕರ ಸಮಸ್ಯೆ ಮಂಜಿನಂತೆ ಕರಗಿಹೋಯಿತು, ತಿಳಿವಳಿಕೆಯ ಚಂದ್ರೋದಯವಾಯಿತು.'

೧೩) ನಿವೃತ್ತ ಡಿ.ಎಸ್.ಪಿ. ಶ್ರೀ ಎನ್.ಟಿ. ಜಿತೂರಿ ಅವರ ದೃಷ್ಟಿಯಲ್ಲಿ:

'ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಮುಂದಾಗಿ ಶಾಂತಿಯನ್ನು

ನೆಲೆಸುವಂತೆ ಶ್ರಮಿಸದಿದ್ದರೆ ಇಷ್ಟು ತೀವ್ರ ಶಾಂತಿ ನೆಲೆಸುತ್ತಿರಲಿಲ್ಲ. ಅವರಿಗೆ ನಾವೆಲ್ಲ ಚಿರಋಣಿಗಳು.'

**೧೪) ಕವಿ ಶ್ರೀ ಗಂಗಪ್ಪ ವಾಲಿ ಅವರ ಕವಿವಾಣಿಯಲ್ಲಿ:**

'ಮೂಜಗಂ ಬೋಧಿಸಿದ ಶಾಂತಿಯ
ಮಂತ್ರವೆಸಗಿತು ಸೋಜಿಗಂ
ರಾಜಿಸಲಿ ಸ್ಥಿರವಾಗಿ ಜಗದಲಿ
ಭವ್ಯ ಭಾವೈಕ್ಯದ ಯುಗಂ.'

**೧೫) ಶ್ರೀ ವ್ಹಿ. ಎನ್. ಇರಕಲ್ಲ ಅವರ ದೃಷ್ಟಿಯಲ್ಲಿ:**

'ದೇವರ ಅವತಾರವೆಂಬುದಕ್ಕೆ ಶ್ರೀ ಮೂಜಗಂ ಅವರೇ ಸಾಕ್ಷಿ.'

**೧೬) ಶ್ರೀ ಎಂ.ಡಿ. ಗೋಗೇರಿ ಅವರ ಕವಿವಾಣಿಯಲ್ಲಿ:**

'ಹಿಂದು ಮುಸ್ಲಿಮರನು ಒಂದುಗೂಡಿಸುವಂಥ
ಸೇತುಬಂಧನವಾದೆ ಗಂಗಾಧರ
ಇನ್ನೆಂದು ಈ ನೆಲವು ರಕ್ತದೋಕುಳಿಯಿಂದ,
ದೂರಾಗಿ ಇರುವಂತೆ ಹರಸುತ್ತಿರು.'

**೧೭) ಶ್ರೀ ಕೌತಾಳ ವೀರಪ್ಪನವರ ಭಾಷೆಯಲ್ಲಿ:**

'ಹಿಂದೂ-ಮುಸ್ಲಿಂರ ಭಾವೈಕ್ಯ ಹಾಗೂ ಶಾಂತಿ ಪ್ರಧಾನ ಸಹ ಬಾಳ್ವೆಗಾಗಿ ಮೂರುಸಾವಿರಮಠದ ಶ್ರೀ ಸನ್ನಿಧಿಯವರು ಆಡಿದ ಪಾತ್ರವು ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಒಂದು ಚಿರಸ್ಮರಣೀಯ ದಾಖಲೆ, ಇದು ವೀರಶೈವ ಪೀಠಕ್ಕೆ ಸಂದ ಕೀರ್ತಿ.'

**೧೮) INDIA-TODY ಮಾಸಪತ್ರಿಕೆ, ಹೊಸದಿಲ್ಲಿ:**

'ಮೂರುಸಾವಿರಮಠದ ಜಗದ್ಗುರುಗಳ ಮಾರ್ಗದರ್ಶನದಲ್ಲಿ ಈ ಜಾತಿಯ ವಿರಸವನ್ನು ಹೋಗಲಾಡಿಸಿ ಬಾಂಧವ್ಯ ಬೆಳೆಸುವ ಪ್ರಯತ್ನ ಮಾಡುತ್ತಿರುವದು ಸಂಸ್ಮರಣೀಯ.'

**೧೯) ಸಮಾಜ-ಪತ್ರಿಕೆಯ ದೃಷ್ಟಿಯಲ್ಲಿ:**

ಎರಡು ದಿನಗಳ ಸತತ ಪರಿಶ್ರಮದ ನಂತರ ಶ್ರೀ ಮೂಜಗಂ ರು ಎರಡೂ ಜನಾಂಗದವರನ್ನು ಒಂದೆಡೆ ಕೂಡಿಸಿ, ಶಾಂತಿ-ಸೌಹಾರ್ದತೆ ಪುನರ್ ಸ್ಥಾಪಿಸಲು ಪ್ರಥಮ ಹೆಜ್ಜೆಯಿಟ್ಟು ಕಾರ್ಯಗತ ಮಾಡಿದ್ದು ನಾಗರಿಕರು ಸಮಾಧಾನದಿಂದ ಉಸಿರೆಳೆದಿದ್ದಾರೆ.

೨೦) ಕೊಟ್ರೇಶ್ ಆರಾಧ್ಯಮಠ, ಜೋಯಿಸರಹರಳಹಳ್ಳಿ ಇವರ ದೃಷ್ಟಿಯಲ್ಲಿ:

'ಸದ್ಯ ಸಂಭವಿಸಿದ ಗಲಭೆಗಳ ಸಂಬಂಧದಲ್ಲಿ ಸರ್ವ ಮತೀಯರಲ್ಲಿ ಬಾಂಧವ್ಯ ಸಮರಸವನ್ನುಂಟು ಮಾಡಿದ್ದು ಶ್ರೀ ಜಗದ್ಗುರುಗಳು ಗೈದ ಅಸಾಮಾನ್ಯ ಕಾರ್ಯ. ಯಾವ ಸರ್ಕಾರಕ್ಕೂ ಜಗ್ಗದ ಅಹಿಂಸೆಗಳು ಒಬ್ಬ ಮಠಾಧೀಶರ 'ಶಾಂತಿ ಸಂದೇಶ'ದಿಂದ ತಕ್ಷಣವೇ ನಿಂತುಬಿಟ್ಟವು. ಅಂದು ಗಾಂಧೀ, ಬುದ್ಧ, ಏಸು ಪೈಗಂಬರ, ಮಹಾವೀರರು ಹೇಳಿದ್ದನ್ನೇ ಇಂದು ಜಗದ್ಗುರುಗಳೂ ಹೇಳಿ ಕಾರ್ಯರೂಪಕ್ಕೆ ತಂದಿದ್ದಾರೆ. ಶಾಂತಿ, ನೆಮ್ಮದಿ ಸ್ಥಾಪಿಸಿದ ಇಂತಹ ಪುಣ್ಯ ಪುರುಷರನ್ನು ಪಡೆದ ಕನ್ನಡ ನಾಡು, ಜನರು ಧನ್ಯರು!!'

ಈ ರೀತಿ ಇನ್ನೂ ಅನೇಕ ಶುಭಸಂದೇಶಗಳು ಶ್ರೀ ಜಗದ್ಗುರುಗಳ ಮಾನವೀಯ ಸೇವೆ ನೋಡಿ ಬಂದಿದ್ದು ಪೂಜ್ಯರ ಮೇಲಿರುವ ಅಪಾರ ಪ್ರೇಮ, ವಿಶ್ವಾಸಗಳನ್ನು ಎತ್ತಿಹಿಡಿದಿದೆ.

ಹುಬ್ಬಳ್ಳಿ ಪೂಜ್ಯ ಜಗದ್ಗುರುಗಳ ಸಾಹಸದ ಸಾತ್ವಿಕ ಕರೆಯೇ ಪ್ರತ್ಯಕ್ಷ ಸಾಕ್ಷಿ. ಅವರು ಅದ್ಭುತ ಶಕ್ತಿಯ ಸಾಕಾರ ಮೂರ್ತಿಯಾಗಿದ್ದಾರೆ. ಶ್ರೀ ಜಗದ್ಗುರುಗಳು ಶಾಂತಿಪಾಲನೆಗಾಗಿ ಕರೆದ ಅನೇಕ ಸಭೆಗಳಲ್ಲಿ ನಾನು ಭಾಗವಹಿಸಿ, ಪೂಜ್ಯರ ಕಳಕಳಿಯ ಅಂತಃಕರುಣೆಯನ್ನು ಪ್ರತ್ಯಕ್ಷ ಕಂಡು ಆಶ್ಚರ್ಯಚಕಿತನಾಗಿದ್ದೇನೆ. ೨೫ವರ್ಷಗಳ ಅವಧಿಯಲ್ಲಿ ಮಾಡಿದ ನೂರಾರು ಭಾಷಣಗಳಲ್ಲಿ ಇದು ಸರ್ವೋತ್ಕೃಷ್ಟ ಹೃದಯಸ್ಪರ್ಶಿ! ಹಿಂದೂ-ಮುಸಲ್ಮಾನರಲ್ಲಿ ಸುಮಧುರ ಬಾಂಧವ್ಯ ಹುಟ್ಟಿಸಿ, ಮಹಾಕ್ರಾಂತಿಯನ್ನು ಮಾಡಿದ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಸರ್ವಧರ್ಮದವರಿಗೆ ಜಗದ್ಗುರುಗಳಾಗಿ ಪರಿಣಮಿಸುವಂತೆ ಮಾಡಿದ ಸಾಹಸ ಅತ್ಯದ್ಭುತವಾದುದು.

ಈ ಶಾಂತಿಯೋಜನೆಯಲ್ಲಿ ಹೃದಯಪೂರ್ವಕ ಸಹಕರಿಸಿ ದುಡಿದವರಾದ, ಈ ಕಾರ್ಯದಲ್ಲಿ ನಗರದ ಪ್ರತಿಷ್ಠಿತರೆನಿಸಿದ ಸರ್ವಶ್ರೀ ಎಂ. ಜಿ. ಜರತಾರಘರ, ಬಿ. ಎ. ದೇಸಾಯಿ, ಎಸ್. ಎಸ್. ಶೆಟ್ಟರ್ ವಕೀಲರು, ಎಂ. ಎಂ. ಹಿಂಡಸಗೇರಿ, ವ್ಹಿ. ಬಿ. ಡಂಗನವರ, ಬಿ. ಎಂ. ಮುಜಾಹಿದ್, ಪಿ. ಟಿ. ಹಬೀಬ, ಎನ್. ಟಿ. ಹಬೀಬ, ನಿರಂಜನ, ಡಾ|| ಅಹ್ಮದ್, ಟಿ. ಆರ್. ಪಾಟೀಲ, ಎ. ಆರ್. ಜೆ. ಪಠಾಣ, ವ್ಹಿ. ಎನ್. ಇರಕಲ್ಲ, ಎಂ. ಎಸ್. ಕೊರವಿ, ಎಸ್. ಜಿ. ಕವಳಿ, ಮೆಹರವಾಡೆ, ವ್ಹಿ. ಬಿ. ಹೊಂಬಳ, ಪದಕಿ, ತಾತೂಸ್ಕರ್, ಎನ್. ಟಿ. ಜಿತೂರಿ, ಎಸ್. ಎಸ್. ಕಮಡೊಳ್ಳಿಶೆಟ್ಟರು, ವೀರಶೈವ ಸಂಘಟನಾ ಸಮಿತಿಯ ಸದಸ್ಯರು, ಗಂಗಣ್ಣ ಬತ್ಲಿ, ಮುತ್ತಣ್ಣ ಬತ್ಲಿ, ಡಾ|| ಪಾಂಡುರಂಗ ಪಾಟೀಲ, ಶ್ರೀಕಾಂತ ದೇಸಾಯಿ, ಶ್ರೀಕಾಂತ ಹೂಗಾರ, ಎಂ. ವಿ. ವಿರಕ್ತಮಠ, ಸಿ. ಸಿ. ಯಮ್ಮೆಟ್ಟಿ

ಹಿರೇಮಠ, ಹುಚ್ಚೇಶ್ವರ ಮೇದಿ, ಜಿ. ಜಿ. ಕಮ್ಮಾರ, ಮುಧೋಳ, ಬೆಂಗಳೂರಿ, ಕಾಟವೆ ಬಂಧುಗಳು, ಪಿ. ಎಚ್. ಪವಾರ, ಶೇಖಣ್ಣ ಬೆಂಡಿಗೇರಿ, ಜಾಬಿನ್ ಟೆಂಗಿನಕಾಯಿ, ವಿದ್ಯಾಧರ ಹುಲ್ಮನಿ, ಎಂ. ಎಂ. ಹೂಲಿ ವಕೀಲರು, ಕಾಲೆಬುಡ್ಡೆ, ಪ್ರಿನ್ಸಿಪಾಲ ಅಬ್ದುಲ್ ಕರೀಂಸಾಬ್, ಎ. ಎಲ್. ಹಿರೇಮಠ, ಕಲ್ಲಯ್ಯನಮಠ, ಮಿಸ್ಕಿನ್, ಖೋಡೆ ಡಿ. ವಿಶ್ವನಾಥ, ವ್ಹಿ. ಎಮ್. ಮಿರ್ಜಿ, ದಂಡಿನ ಈಶ್ವರಗೌಡ, ಎಸ್. ಎಲ್. ಪಾಟೀಲ ಇವರಲ್ಲದೇ ನಿಷ್ಠಾವಂತ ಪೋಲೀಸ್ ಅಧಿಕಾರಿಗಳಾದ ಶ್ರೀಯುತರಾದ ಮಾನ್ಯ ಸುಭಾಸ ಭರಣಿ, ಜ್ಯೋತಿಪ್ರಕಾಶ ಮಿರ್ಜಿ, ಬೇಕಲ್, ದಾಸ್ತಿಕೊಪ್ಪ, ಚವ್ಹಾಣ, ಕುಲಕರ್ಣಿ ಇನ್ನೂ ಮುಂತಾದವರು, ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ, ವಿಶಾಲ ಕರ್ನಾಟಕ, ವಿಶ್ವವಾಣಿ, ನವನಾಡು, ಸಾಲಾರ (ಉರ್ದು), ಪ್ರಜಾವಾಣಿ, ಸಕಾಳ, ಸಮಾಜ, ಪ್ರಜಾಜ್ಯೋತಿ ಮುಂತಾದ ಪತ್ರಿಕೆಗಳ ಪ್ರತಿನಿಧಿಗಳು ಇವರೆಲ್ಲರೂ ಶಾಂತಿ ಪ್ರತಿಜ್ಞೆಗೆ ಅನುವು ಮಾಡಿಕೊಟ್ಟಿದ್ದನ್ನು ಶ್ರೀ ಜಗದ್ಗುರುಗಳು ತುಂಬುಹೃದಯದಿಂದ ನೆನೆಯುತ್ತಿರುತ್ತಾರೆ.

ಶಾಶ್ವತ ಶಾಂತಿಗಾಗಿ ಹುಬ್ಬಳ್ಳಿ ಮಹಾನಗರದ ಪ್ರತಿಯೊಂದು ಓಣಿಗೂ ೫ ಜನರಂತೆ ಸರ್ವಧರ್ಮದವರನ್ನು ಸದಸ್ಯರನ್ನಾಗಿ ಮಾಡಿ ಆ ಓಣಿಯನ್ನು ಶಾಂತಿಯುತವಾಗಿಡಲು ಯೋಜಿಸಿದ್ದು ಶ್ರೀ ಜಗದ್ಗುರು ಮಹಾಸನ್ನಿಧಿಯವರ ಮುಂಧೋರಣೆ ದೃಷ್ಟಿಯಾಗಿದೆ. ಈ ಶಾಂತಿಸಮಿತಿಯ ಕಾರ್ಯಾಚರಣೆಯಿಂದಾಗಿ ಇತ್ತೀಚಿನ ಅನೇಕ ರಾಷ್ಟ್ರೀಯ ಗಂಡಾಂತರಗಳಲ್ಲಿ ಹುಬ್ಬಳ್ಳಿ ಶಾಂತಿಯನ್ನು ಕಾಪಾಡಿಕೊಂಡಿರುವದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ.

## ಮೂಲ ಮೂರುಸಾವಿರಮಠದ ಸಮಗ್ರ ಸರ್ವಾಂಗೀಣ ನವೀಕರಣ:

ಶ್ರೀ ಜಗದ್ಗುರು ಮೂರುಸಾವಿರಮಠವೆಂದೊಡನೆಯೇ ಕಟ್ಟಿಗೆ ಕೆತ್ತನೆಯಿಂದ ಕೂಡಿದ, ಬೃಹತ್ಪ್ರಮಾಣದ, ಉದ್ದುದ್ದ ಕಂಬಗಳಿಂದ ಸಾಲಂಕೃತವಾದ, ಕಲಾಪ್ರಪೂರ್ಣವಾದುದೇ ಶ್ರೀ ಮೂರುಸಾವಿರಮಠವೆಂದು ಎದುರಿಗೆ ಕಣ್ಮುಂದೆ ಕಟ್ಟಿದಂತಾಗುತ್ತದೆ. ಶ್ರೀ ಮೂರುಸಾವಿರಮಠವನ್ನು ನೂರಾರು ವರ್ಷಕ್ಕೊಮ್ಮೆ ಜೀರ್ಣೋದ್ಧಾರ ಮಾಡಿದಂತೆ ಕಾಣುತ್ತದೆ. ಹಿಂದಿನ ಭಾಗದ ಆಕೃತಿಯ ಲಕ್ಷಣ, ಮುಂಭಾಗದ ಆಕೃತಿಯ ಲಕ್ಷಣ ಭಿನ್ನ ಭಿನ್ನ ಸ್ವರೂಪವುಳ್ಳದ್ದಾಗಿರುತ್ತದೆ. ಆಗಿನ ಕಾಲದ ಕಟ್ಟಿಗೆಯ ಆಕಾರ, ವಿಶಾಲವಾದ ಅಂಕಣಗಳುಳ್ಳ ಪ್ರಸಾದ ನಿಲಯ, ಅಡಿಗೆಯ ಹಾಗೂ ಪೂಜಾ ಮಂದಿರಗಳೂ ಸಹ ವೈಶಿಷ್ಟ್ಯಪೂರ್ಣವಾಗಿದ್ದು, ಹಿಂಭಾಗದ ಗೋಡೆಗಳು ಸಸ ೦-೮ ಫೂಟು ಅಗಲವುಳ್ಳದ್ದಾಗಿ ಸಣ್ಣ ಸಣ್ಣ ಕಿಡಕಿಗಳಿಂದ ಭದ್ರವಾಗಿ ಈವರೆಗೂ ಕಂಗೊಳಿಸುತ್ತವೆ. ಆಗ ಬಳಸಿದ ಕಲ್ಲುಗಳೂ ವಿಚಿತ್ರವಾದ ಹಲಬೆ ಕಲ್ಲುಗಳು ಅಲ್ಲಲ್ಲಿ ಕಾಣುತ್ತವೆ. ಮೇಲೆ ಅಂದರೆ ಶಿವಾನುಭವಮಂಟಪಕ್ಕೆ

ಹೋಗುವ ಮಾರ್ಗ ಹಳೇಪದ್ಧತಿಯ ಪರಂಪರೆ ಅಲ್ಲಿ ಎದ್ದುಕಾಣುತ್ತದೆ. ಶಿವಾನುಭವಮಂಟಪವೂ ಸಹ ಕಲೆಯ ಮಹತ್ವವನ್ನು ಎತ್ತಿತೋರಿಸುತ್ತದೆ. ರಾಜ್ಯದಲ್ಲಿಯೇ ಇಷ್ಟು ಎತ್ತರ, ವಿಶಾಲ ಹಾಗೂ ಕಟ್ಟಿಗೆಯ ಕಂಭಗಳಿಂದ ಕೂಡಿದ ಮಠಗಳು ಇಲ್ಲವೆಂದೇ ನೋಡಿದವರು ಹೇಳುತ್ತಿದ್ದಾರೆ. ಇದೊಂದು ಪ್ರಾಚೀನ ಸಂಸ್ಕೃತಿಯ ಹಿರಿಮೆಯನ್ನು ಎತ್ತಿತೋರಿಸುತ್ತದೆ. ಕಟ್ಟಿಗೆಯ ಕೆತ್ತನೆಯಿಂದ ಕೂಡಿದ ಈಗಿನ ಮುಂಭಾಗದ ಮೂರುಸಾವಿರಮಠವು ಹನ್ನೆರಡನೇ ಶತಮಾನ ದಿಂದಲೂ ಇದೆಯೆಂದು ಹೇಳಲು ಬರುವದಿಲ್ಲ. ಕಟ್ಟಿಗೆಯ ಆಯುಷ್ಯವನ್ನು ನೋಡಿದರೆ ಆಗಾಗ ಮಠವನ್ನು ತೆಗೆದು, ಸ್ವರೂಪವನ್ನು ಕೊಟ್ಟು, ಜೀರ್ಣೋದ್ಧಾರ ಮಾಡುತ್ತಾ ಬಂದಂತೆ ಕಾಣುತ್ತದೆ. ಎದುರಿಗೆ ಕಾಣುವ ಭವ್ಯ ಮಠದ ಎಡಭಾಗ ದಲ್ಲಿ ಕಂಗೊಳಿಸುತ್ತಿರುವ ಗದ್ದುಗೆಯೇ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು ನಿರ್ವಿಕಲ್ಪ ಸಮಾಧಿಸ್ಥರಾಗಿ, ಚಿರಂಜೀವಿಗಳಾಗಿ, ಚಿತ್ಪ್ರಕಾಶ ಸ್ವರೂಪರಾಗಿ ಸದ್ಭಕ್ತ ರಿಗೆ ಸನ್ಮಂಗಳಾಶೀರ್ವಾದಗಳನ್ನು ಅನುಗ್ರಹಿಸುತ್ತಾ ಲಿಂಗಾನಂದದಲ್ಲಿ ಲೀನ ವಾಗಿರುವ ಸಮಾಧಿ ಮಂಟಪವಾಗಿದೆ. ಕರ್ತೃ ಸಮಾಧಿ ಶರಣ ಸಂಸ್ಕೃತಿಯ ಅಮೃತ ಕಿರಣಗಳನ್ನು ಸುತ್ತೆಲ್ಲ ಸೂರೆಗೈಯುತ್ತಲಿದೆ. ನಂಬುಗೆಯಂತೆ, ಭಕ್ತಾದಿ ಜನರು ಅಹೋರಾತ್ರಿ ನಡೆದುಕೊಳ್ಳುವ ಜ್ವಲಂತ ಗದ್ದುಗೆಯದು, ಜಾಗೃತ ಗದ್ದುಗೆಯದು. ಈ ಕರ್ತೃ ಗದ್ದುಗೆಯ ಹಿಂದೆ ಗುಹೆಯಂತೆ ಶೋಭಿಸುತ್ತಿರುವ ಮಠವೇ ಮೂಲ ಮೂರುಸಾವಿರಮಠವಾಗಿದೆ. ಇದು ಹನ್ನೆರಡನೇ ಶತಮಾನ ದಿಂದಲೂ ಬೆಳಗುತ್ತಲಿದೆ. ಆದರ ಆಕಾರ, ಕಟ್ಟಡ, ನಕ್ಷೆ ಪೂರ್ಣ ಹಳೆಯದನ್ನೇ ಹೋಲುತ್ತದೆ. ಆಗ ಅದು ಲತಾಪೂರ್ಣ ವನಶ್ರೀಯಿಂದ ಕೂಡಿ ಆಶ್ರಮದ ಮಧ್ಯದಲ್ಲಿ ಶೋಭಿಸುತ್ತಿರಬಹುದು. ಇದು ಕೇವಲ ಕಲ್ಲಿನ ಹೊದಿಕೆಯಿಂದ ಕೂಡಿದ್ದು, ಕಮಾನುಗಳಿಂದ ಸಂಶೋಭಿತವಾಗಿದ್ದು ಇದೆ. ಆದರೆ ಈ ಮೂಲ ಮೂರುಸಾವಿರಮಠವು ಕೇವಲ ಹಾವಿನ ಹುತ್ತಗಳಿಂದ ಆವೃತವಾಗಿ ಯಾರೂ ಒಳಗೆ ಹೋಗಲು ಹೆದರುತ್ತಿದ್ದರು. ಅಲ್ಲಿ ಒಂದು ಕರಿಕೂದಲುಗಳು ತುಂಬಿದ ದೊಡ್ಡ ಸರ್ಪವಿದೆಯೆಂದು ಹಿರಿಯರು ಹೇಳುತ್ತಿರುವ ವಾಡಿಕೆ ಇದ್ದುದರಿಂದ ಯಾರೂ ಒಳಗೆ ಹೋಗಲು ಹೆದರುತ್ತಿದ್ದರು. ಈಗಿನ ಜಗದ್ಗುರುಗಳಾದರೂ ೨೫ ವರ್ಷಗಳಿಂದಲೂ ಒಳಗೆ ಹೋಗಿದ್ದಿಲ್ಲ. ಹೋಗುವ ಪರಿಸ್ಥಿತಿಯೂ ಬಂದಿದ್ದಿಲ್ಲ. ಚೇಳು ಹಾವುಗಳೇ ತುಂಬಿ ತುಳುಕುತ್ತಿದ್ದವು. ಇದನ್ನು ಹೀಗೆಯೇ ಎಲ್ಲರೂ ಭಯಭೀತರಾಗಿ ನೋಡುವಂತಿದ್ದರೆ ಏನೂ ಪ್ರಯೋಜನವಾಗದೆಂದು ಬಗೆದು, ಇದರ ಜೀರ್ಣೋದ್ಧಾರ ಮಾಡಿದರೆ ಸದ್ಭಕ್ತರಿಗೆ ಸಂದರ್ಶನ ತೆಗೆದುಕೊಳ್ಳಲು ಅನುಕೂಲವಾಗಬಹುದೆಂದು ತಿಳಿದು, ಒಳಗಿನ ಹುತ್ತಗಳನ್ನು, ಕಲ್ಲು–ಮಣ್ಣು ಗಳನ್ನು, ತಗ್ಗು-ದಿನ್ನೆಗಳನ್ನು ಧೈರ್ಯದಿಂದ ಹೊರತೆಗೆದು, ಎಲ್ಲವನ್ನೂ ಸ್ವಚ್ಛ

ಮಾಡಿದಾಗ, ಒಳಗೆ ಕಟ್ಟೆಯೊಂದು ಕಾಣಿಸಿತು. ಅದು ಬಹುಶಃ ಹಿಂದಿನ ತಪಸ್ವಿಗಳಾದ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು ಅನುಷ್ಠಾನ ಮಾಡುವ ಪೂಜಾಸ್ಥಾನವಿರಬೇಕೆಂದು ಬಯಸಿ, ಅದೇ ಸ್ಥಾನದಲ್ಲಿ ಶ್ರೀ ಎಸ್. ಎಸ್. ಕಮಡೊಳ್ಳಿಶೆಟ್ಟರ ಭಕ್ತಿಯ ಸೇವೆಯಿಂದ ಮತ್ತೆ ಅದನ್ನೇ ಸುಂದರಗೊಳಿಸಿ, ಅವರು ಪೂಜೆಗೆ ಕೂಡ್ರುವ ಸ್ಥಾನವನ್ನು ಅದೇ ರೀತಿ ಮತ್ತೆ ಸುಂದರಗೊಳಿಸಿದರು. ಶ್ರೀ ಜಗದ್ಗುರು ಸನ್ನಿಧಿಯವರು ಪ್ರಾಚೀನ ಮಠಕ್ಕೆ ಮೆರಗುಕೊಟ್ಟು, ಹಳೆಯದನ್ನು ಕಳೆಯದೇ ಹೊಸ ರೂಪವನ್ನು ಕೊಟ್ಟರು. ಪ್ರಾಚೀನ ಸಂಸ್ಕೃತಿ ಕಾಪಾಡಬೇಕೆಂಬುದೇ ಶ್ರೀ ಜಗದ್ಗುರುಗಳ ಇಚ್ಛೆಯಾಗಿದೆ. ನೆಲಕ್ಕೆ ಸುಂದರ ಕಲ್ಲುಗಳನ್ನು ಹಾಕಿಸಿದರು. ಯಾರಾದರೂ ತಪಸ್ವಿಗಳು ಶ್ರೀಮಠಕ್ಕೆ ಬಂದರೆ ಅವರ ಪೂಜೆಗೆ ಅಲ್ಲಿ ಅನುಕೂಲವಾಗುವಂತೆ ವ್ಯವಸ್ಥೆ ಮಾಡಿಸಿದ್ದಾರೆ. ಇದರ ಜೀರ್ಣೋದ್ಧಾರಕ್ಕಾಗಿ ಸುಮಾರು ೫೦ ಸಾವಿರ ರೂಪಾಯಿಗಳು ವೆಚ್ಚವಾಗಿರಬಹುದು. ಪ್ರಾಚೀನ ಮೂಲ ಮೂರುಸಾವಿರಮಠದ ಜೀರ್ಣೋದ್ಧಾರಕ್ಕಾಗಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನಲ್ಲಿ ಅತ್ಯಂತ ನಿಷ್ಠೆಯುಳ್ಳವರಾದ ಶ್ರೀಮತಿ ಪಾರ್ವತಮ್ಮನವರು ಕೋಂ. ಚನ್ನಯ್ಯನವರು ಎಮ್ಮೆಟ್ಟಿ ಹಿರೇಮಠ ಹಾಗೂ ಶ್ರೀಮತಿ ಗೋದುಬಾಯಿ ಕೋಂ. ದುರುಗೋಜಿರಾವ ರಂಗ್ರೇಜಿ ಸಾ॥ ಹುಬ್ಬಳ್ಳಿ, ಶ್ರೀಮತಿ ಪಾರ್ವತೆಮ್ಮನವರು ಕೋಂ. ಹಸರಡ್ಡಿ ಇವರು ಧನಸಹಾಯ ಮಾಡಿ, ಭಕ್ತಿಸೇವೆ ಸಲ್ಲಿಸಿದ್ದಾರೆ. ಹಾಳು ಬಿದ್ದಿದ್ದ ಪ್ರಾಚೀನ ಮೂಲ ಮೂರುಸಾವಿರಮಠವನ್ನು ಉಳಿಸಿ, ಪ್ರಾಚೀನ ಸಂಸ್ಕೃತಿಯನ್ನು ಬೆಳೆಸಿ ಮೂರುಸಾವಿರಮಠದ ಸದ್ಭಕ್ತರಿಗೆ ಮಹದುಪಕಾರ ಮಾಡಿದ್ದಾರೆ. ಶ್ರೀ ಜಗದ್ಗುರುಗಳವರ ಬಹು ದೂರದೃಷ್ಟಿಯು ಎದ್ದು ಕಾಣುತ್ತದೆ. ಹಾಳುದೇಗುಲದಂತಿದ್ದ, ಸರ್ಪ ವಾಸಸ್ಥಾನವಾಗಿದ್ದ ಹಳೇ ಮೂರುಸಾವಿರಮಠವನ್ನು ಈಗ ನೋಡಿದವರು ಅಚ್ಚರಿಪಡುತ್ತಾರೆ.

## ವಿಶ್ವವಿಭೂತಿ ಬಸವೇಶ್ವರ ಪ್ರಸಾದ ನಿಲಯ:

ಶ್ರೀ ಜಗದ್ಗುರು ಮೂರುಸಾವಿರಮಠಕ್ಕೆ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರು ಪೀಠಾರೋಹಣ ಮಾಡಿದ ಮೇಲೆ ಪರ ಊರಿನಿಂದ ಮೂರುಸಾವಿರಮಠಕ್ಕೆ ಬರು-ಹೋಗುವವರ ಸಂಖ್ಯೆ ಮಿತಿಮೀರಿ ಬೆಳೆದಿದ್ದರಿಂದ, ಅವರಿಗೆ ಪೂಜೆ, ಪ್ರಸಾದಕ್ಕೆ ಅನುಕೂಲವಾಗುವಂತೆ ಮಹಾತ್ಮಾ ಬಸವೇಶ್ವರರ ಹೆಸರಿನಲ್ಲಿ ಕೇವಲ ಸದ್ಭಕ್ತರಿಗಾಗಿ ಪ್ರಸಾದ ನಿಲಯವನ್ನು ಸ್ಥಾಪಿಸಿದರು. ಅದಕ್ಕೆ ಪ್ರತ್ಯೇಕ ಸ್ಥಾನಕಲ್ಪಿಸಲಾರದೇ ಇದ್ದ ಭವ್ಯ ಮೂರುಸಾವಿರಮಠದೊಳಗಿರುವ 'ಲಕ್ಷ್ಮೀ ಹಾಲ್' ಎಂದು ಪ್ರಸಿದ್ಧವಾಗಿದ್ದುದ್ದನ್ನೇ ಪುನಃ ಜೀರ್ಣೋದ್ಧಾರ ಮಾಡಿದರು. ಆ ಭವನವು ದೊಡ್ಡ ದೊಡ್ಡ ಹಲಗೆ, ಜಂತಿ, ಕಂಭ ಮುಂತಾದವುಗಳಿಂದ ಕೂಡಿದ್ದು ಇದ್ದರೂ

ಅದು ಎಂದು ಬೀಳುವದೋ ಎನ್ನುವ ಭಯಾನಕ ಪರಿಸ್ಥಿತಿಯಲ್ಲಿತ್ತು. ಮುರಿದು ಬೀಳುತ್ತಿರುವ ಆ ಎಲ್ಲ ಕಟ್ಟಿಗೆಗಳನ್ನು ತೆಗೆದು ಹಾಕಿಸಿ, ನೂತನ ತೊಲೆ–ಜಂತಿ, ಹಲಗೆ, ಕಂಬಗಳನ್ನು ಜೋಡಿಸಿ ಸುಂದರಗೊಳಿಸಿದರು. ಉದುರಿಬೀಳುತ್ತಿರುವ ಮಣ್ಣಿನ ಗೋಡೆಗಳಿಗೆ ಸುಂದರ ಅಮೃತಶಿಲೆಗಳನ್ನು ಜೋಡಿಸಿ ಪ್ರಸಾದ ನಿಲಯವು ಭದ್ರವಾಗಿಯೂ, ಸುಂದರವಾಗುವಂತೆಯೂ ನಿರ್ಮಿಸಿದರು. ನೆಲಕ್ಕೂ ಸಹ ಸುಂದರ ಸಂಗಮವರಿ ಕಲ್ಲುಗಳನ್ನು ಕೂಡ್ರಿಸಿ, ಜನಕ್ಕೆ ಉಪಯೋಗವಾಗುವಂತೆ ಮಾಡಿದರು. ಶ್ರೀ ಜಗದ್ಗುರುಗಳು ಒಳಗಿನ ಭಾಗದಿಂದ ಹಿಡಿದುಕೊಂಡು ಸಾಮಾಜಿಕ ರಂಗದ ಸುಧಾರಣೆಯವರಿಗೂ ಬಹು ಪರಿಶ್ರಮಿಸಿದ್ದಾರೆ. ಮಠ ಸುಧಾರಿಸಿದರೆ ಘಟವು ಸುಧಾರಣೆಯಾಗಿ, ಸಮಾಜಕ್ಕೆ ಬಲ ಬರುತ್ತದೆ ಎಂಬುದೇ ಶ್ರೀಗಳವರ ಅಭಿಮತ. ಲಿಂಗೈಕ್ಯರಾದ ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರು ತಾವು ಲಿಂಗೈಕ್ಯ ರಾಗುವ ಮುನ್ನ ನಾವು ಹೊರಗಿನ ಸೇವೆ ಮಾಡಿದ್ದೇವೆ. ನೀವು ಒಳಗಿನ ಸೇವೆ ಮಾಡಬೇಕು. ಬೀಳುತ್ತಿರುವ ಮಠವನ್ನು ಭದ್ರಗೊಳಿಸಿ ಪ್ರಾಚೀನ ಸಂಸ್ಕೃತಿಯನ್ನುಳಿ ಸುವಂತೆ ಅವರು ಹೇಳಿದ ನುಡಿಯನ್ನು ಮನಸಾ ಮಾಡಿ, ಅವರ ಆತ್ಮಕ್ಕೆ ಶಾಂತಿ ನೀಡಿ ದ್ದಾರೆ.ಅವರ ಇಚ್ಛೆಯನ್ನು ಪೂರೈಸಿದ್ದಾರೆ. ಈ ಪ್ರಸಾದ ನಿಲಯ ನವೀಕರಿಸಲು ಅಜಮಾಸು ಎರಡು ಲಕ್ಷದಷ್ಟು ಹಣ ಖರ್ಚಾಗಿರಬಹುದು. ಮಠದ ಪ್ರತಿಯೊಂದು ಭಾಗವನ್ನು ಚೆನ್ನಾಗಿ ನಿರೀಕ್ಷಿಸಿ, ಅದು ಸದುಪಯೋಗವಾಗುವಂತೆ ಮಾಡಿದ ಸಾಹಸ ಶ್ರೀ ಜಗದ್ಗುರುಗಳಿಗೆ ಸಲ್ಲತಕ್ಕದ್ದು. ೨೫ ವರ್ಷಗಳ ಹಿಂದೆ ಶ್ರೀ ಜಗದ್ಗುರು ಮೂರುಸಾವಿರಮಠವನ್ನು ನೋಡಿದವರು, ಈಗ ಬಂದು ನೋಡಿದರೆ, ಗುರ್ತು ಹಿಡಿಯದಂತೆ ಮಾಡಿದ್ದು ಜನರಿಗೆ ಅಚ್ಚರಿಯಾಗುತ್ತದೆ. ಅವರ ಕರ್ತೃತ್ವಶಕ್ತಿಗೆ ಜನ ಬಾಗಿ ಏನೇ ಆಗಲಿ ಶ್ರೀ ಮೂರುಸಾವಿರಮಠವು ಬೆಳಗುವಂತೆ ಮಾಡಿದ ಶ್ರೇಯಸ್ಸು ಇವರದಾಗಿದೆ. ಶ್ರೀ ಗುರುಸಿದ್ಧೇಶ್ವರನೇ ಇವರ ಮನಸ್ಸಿನಲ್ಲಿ ಮೂಡಿ ಕೆಲಸ ಮಾಡಿಸಿಕೊಂಡಂತೆ ಕಾಣುತ್ತದೆ, ೬–೭ ತಲೆಯಿಂದಾಗದ ಕಾರ್ಯವನ್ನು ಈಗಿನ ಜಗದ್ಗುರುಗಳು ತಮ್ಮ ಘನವ್ಯಕ್ತಿತ್ವದಿಂದ ಭಕ್ತರ ಸಹಾಯ ಪಡೆದು, ಶ್ರೀ ಮೂರುಸಾವಿರಮಠದ ಜೀರ್ಣೋದ್ಧಾರ ಮಾಡಿಸಿ, ಶ್ರೀಮಠದ ಘನತೆ ಯನ್ನು ಎತ್ತಿಹಿಡಿದಿದ್ದಾರೆ. ಮುಂದಿನ ಪೀಠಾಧಿಕಾರಿಗಳಿಗೆ ಯಾವ ಕಷ್ಟವೂ ಬರದಂತೆ ಮಾಡಿದ್ದಾರೆ. ವಿಶ್ವವಿಭೂತಿ ಶ್ರೀ ಬಸವೇಶ್ವರ ಪ್ರಸಾದ ನಿಲಯವೆಂದು ಹೆಸರಿಸಿ, ಸದ್ಭಕ್ತರಿಗೂ, ಕರ್ತೃ ಗುರುಸಿದ್ಧೇಶ್ವರ ಪೂಜಾ ಸೇವಾ ಸಮಿತಿಯವರಿಗೂ ಅನುಕೂಲವಾಗುವಂತೆ ನವೀನತೆಯೊಡನೆ ಸುಂದರಗೊಳಿಸಿರುವದನ್ನು ಎಲ್ಲರೂ ಬೆರಗುಗೊಳ್ಳುವಂತೆ ಮಾಡಿದ್ದಾರೆ. ಈ ರೀತಿ ನವೀಕರಿಸಲು ಪ್ರೋತ್ಸಾಹ ನೀಡಿ ದವರು ಶ್ರೀ ಜಗದ್ಗುರು ಮೂರುಸಾವಿರಮಠದ ವಿದ್ಯಾವರ್ಧಕ ಸಂಘದಚೇರಮನ್ನ ರಾದ ಶ್ರೀ ವೀರಚಂದ್ ನಾರಾಣಜಿ ಕಾನಜಿ ಅವರಾಗಿದ್ದಾರೆ. ವಿಶ್ವವಿಭೂತಿ

ಬಸವೇಶ್ವರ ಪ್ರಸಾದ ನಿಲಯದ ಜೀರ್ಣೋದ್ಧಾರಕ್ಕೆ ಶ್ರೀಮತಿ ಸಿದ್ಧಲಿಂಗಮ್ಮನವರು ಕೋಂ. ಮುರಿಗೆಪ್ಪನವರು ಸಾಂಗೋಲಿಯವರು, ಶ್ರೀ ಎಸ್. ಎಲ್. ಪಾಟೀಲರು ಮತ್ತು ಸಹೋದರರು ಅಕ್ಕಿಹೊಂಡ, ಹುಬ್ಬಳ್ಳಿ, ಶ್ರೀ ಶೇಖರಪ್ಪನವರು ಚೆನ್ನಮಲ್ಲಪ್ಪನವರು ಅಸುಂಡಿ ಸಾ|| ಬಿಡನಾಳ, ಶ್ರೀ ಶರಣಪ್ಪನವರು ಬಸಪ್ಪನವರು ಹೊಸಮನಿ ಹುಬ್ಬಳ್ಳಿ ಇವರೆಲ್ಲರೂ ತಲಾ ೧೧೦೦೦ ರೂಪಾಯಿಗಳಂತೆಯೂ, ಶ್ರೀ ಶಂಕರಪ್ಪನವರು ಮಲ್ಲಿಕಾರ್ಜುನಪ್ಪನವರು ಶೆಟ್ಟರ್ ಹಾಗೂ ಶ್ರೀ ವಿರುಪಾಕ್ಷಪ್ಪನವರು ಬಸಪ್ಪನವರು ಬೂದಪ್ಪನವರ ಇವರು ತಲಾ ೫೦೦೦ ರೂಪಾಯಿಗಳಂತೆ ಧನಸಹಾಯ ಮಾಡಿ, ಇದರ ಅಭಿವೃದ್ಧಿಗೊಳಿಸಲು ಪ್ರೋತ್ಸಾಹಿಸಿದ್ದಾರೆ. ಶ್ರೀ ಜಗದ್ಗುರು ಸನ್ನಿಧಿಯವರು ಏನೇ ಮಾಡಲಿ ಸದ್ಭಕ್ತರನ್ನು ಬಿಟ್ಟು ಮಾಡುವದಿಲ್ಲ. ಅವರಿರದಿದ್ದರೆ ಶ್ರೀಮಠಕ್ಕೆ ಶೋಭೆಯಾಗಲಾರದೆಂಬುದೇ ಅವರ ಅಭಿಮತ. ಶ್ರೀ ಸನ್ನಿಧಿಯವರು ಏನೇ ಕಾರ್ಯ ಮಾಡಿದರೂ ಭಕ್ತರಿಗಾಗಿ, ಸಮಾಜಕ್ಕಾಗಿಯೇ ಹೊರತು ಮತ್ತೊಂದಕ್ಕೆಂಬುದು ತಿಲಮಾತ್ರವೂ ಅವರಲ್ಲಿಲ್ಲ. ಈ ರೀತಿಯ ಸಮಾಜಕ್ಕಾಗಿ ನಿಷ್ಠೆಯಿಂದ, ನಿಸ್ವಾರ್ಥದಿಂದ ಒಳ ಹೊರಗು ಸೇವೆ ಮಾಡತಕ್ಕವರು ಮಠಾಧೀಶರಲ್ಲಿ ದೊರೆಯುವದು ದುರ್ಲಭ. ಇಷ್ಟೆಲ್ಲ ಮಾಡಿದರೂ ತಮ್ಮದೆಂಬುದು ಎನಿತೂ ಇಲ್ಲವೇ ಇಲ್ಲ. ಬಂಧು-ಬಾಂಧವರಂತೂ ಸನಿಹದಲ್ಲಿಯೂ ಕಾಣುವದಿಲ್ಲ. ಈ ಬಗೆಯಾಗಿ ಹಗಲಿರುಳು ನಿರಂತರ ದುಡಿಯುತ್ತಿರುವ ಶ್ರೀ ಮೂರುಸಾವಿರಮಠದ ಜಗದ್ಗುರುಗಳವರ ಕರ್ತವ್ಯನಿಷ್ಠೆಯನ್ನು, ಅಗಾಧಶಕ್ತಿಯನ್ನು ಸಮಾಜವು ಒಮ್ಮನಸ್ಸಿನಿಂದ ತಿಳಿದುಕೊಂಡರೆ ಸಾಕು. ಅದುವೇ ಅವರಿಗೆ ಕೃತಜ್ಞತೆ ಸಲ್ಲಿಸಿದಂತಾಗುವದು.

**ಶಿವಜೀವನದ ಶಾಂತ ಪರಿಸರ:**
**ಶ್ರೀ ಕುಮಾರೇಶ್ವರ ಭವನ**

ಶ್ರೀಮದ್ವೀರಶೈವ ಶಿವಯೋಗಮಂದಿರ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆ ಸಂಸ್ಥಾಪಕರಾದ ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರೇಶ್ವರ ಶಿವಯೋಗಿಗಳೆಂದರೆ ಶ್ರೀ ಜಗದ್ಗುರುಗಳಿಗೆ ಪಂಚಪ್ರಾಣ. ತಮಗೆ ಏನೆಲ್ಲ ಬಲ ಬರಬೇಕಾದರೆ ಕುಮಾರ ಶಿವಯೋಗಿಗಳೇ ಕಾರಣರೆಂದು ಪದೇ ಪದೇ ಅಪ್ಪಣೆಕೊಡಿಸುತ್ತಿದ್ದಾರೆ. ನಮ್ಮ ನಾಡಿನಲ್ಲಿ ಏನಾದರೂ ಸ್ವಲ್ಪ ಧರ್ಮ, ಸಾಹಿತ್ಯ, ಸಂಸ್ಕೃತಿ ಉಳಿಯಬೇಕಾದರೆ ಲಿಂ. ಕುಮಾರ ಶಿವಯೋಗಿಗಳವರು ಅಂದು ಸಮಾಜ ಸೇವೆಯನ್ನು ಧೀರೋದಾತ್ತ ದೃಷ್ಟಿಯಿಂದ, ನಿಷ್ಠೆಯಿಂದ ಮುನ್ನಡೆಸಿರುವದರ ಫಲವೇ ನಾಡಿನ ಮಠಾಧಿಪತಿಗಳಲ್ಲಿ ಒಳ್ಳೇ ಸಂಸ್ಕಾರ ಕಾಣುತ್ತಿರುವದಾಗಿದೆ.

ಈಗಾಗಲೇ ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಕುಮಾರ ಶಿವಯೋಗಿಯ ಸಂಸ್ಮರಣೆಗಾಗಿ ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿ

ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲಾ, ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ಗಳನ್ನು ಪ್ರಾರಂಭಿಸಿ, ಶಿವಯೋಗಿಗಳನ್ನು ತಯಾರು ಮಾಡಿ, ನಾಡಿಗೆ ನೀಡಿ ದಕ್ಷಿಣ ಭಾರತದಲ್ಲಿ ಧಾರ್ಮಿಕ ಜಾಗೃತಿಯಾಗುತ್ತಿರುವ ವಿಷಯ ತಿಳಿದಮಾತಾಗಿದೆ. ಇದಲ್ಲದೇ ಕುಮಾರೇಶನ ಹೆಸರಿನಲ್ಲಿ ಧಾರವಾಡದಲ್ಲಿ ಕುಮಾರೇಶ್ವರ ಆಯುರ್ವೇದ ಆಸ್ಪತ್ರೆಗಾಗಿ ಸ್ಥಾನಕೊಟ್ಟು, ಆಸ್ಪತ್ರೆಯೂ ನಡೆದು ದೀನದಲಿತರ ಸೇವೆಯಾಗುತ್ತ ಲಿದೆ. ಇಷ್ಟಕ್ಕೇ ತೃಪ್ತಿಯಾಗದೇ ಶ್ರೀ ಜಗದ್ಗುರು ಸನ್ನಿಧಿಯವರು ಜೀರ್ಣವಾದ ಮೂರುಸಾವಿರಮಠದ ಎರಡನೇ ಮಹಡಿಯ ಒಂದು ಭಾಗವನ್ನು ಲಕ್ಷಾಂತರ ಹಣ ಖರ್ಚು ಮಾಡಿ, ಜೀರ್ಣೋದ್ಧಾರ ಮಾಡಿಸಿ, ಆ ಸ್ಥಳಕ್ಕೆ 'ಶ್ರೀ ಕುಮಾರೇಶ್ವರ ಭವನ' ವೆಂದು ಹೆಸರನ್ನಿಟ್ಟು ಅದರ ಸದುಪಯೋಗ ಮಾಡಿಕೊಳ್ಳುತ್ತಿರುವದು ಪ್ರತ್ಯಕ್ಷ ನಿದರ್ಶನವಾಗಿದೆ. ಅದನ್ನು ಸನ್ನಿಧಿಯವರು ತಮ್ಮ ಸ್ವಂತಕ್ಕಾಗಿ, ಅಧ್ಯಯನಕ್ಕಾಗಿ ಮೀಸಲಾಗಿರಿಸಿ ಅದಕ್ಕೊಂದು ನವೀನತೆಯ ರೂಪಕೊಟ್ಟಿದ್ದಾರೆ. ಅದರಲ್ಲಿ ಸಂದರ್ಶಕರಿಗೆ ಪ್ರತ್ಯೇಕ ಚೇಂಬರ್ ಮಾಡಿಸಿ ಅನುಕೂಲ ಒದಗಿಸಿಕೊಟ್ಟಿದ್ದಾರೆ. ಶ್ರೀಮಠದ ಕಾರ್ಯ ವ್ಯಾಪ್ತಿ ಹೆಚ್ಚಾದಂತೆ ಸಿಬ್ಬಂದಿಯೊಡನೆ ಕಾರ್ಯ ಮಾಡಿಸಲು ಅನುಕೂಲ ನೀಡಿದ್ದಾರೆ. ಅದಕ್ಕೆ ಕುಮಾರೇಶ್ವರನ ಹೆಸರು ಇಡಲೂ ಸಹ ಒಂದು ಕಾರಣವಿದೆ, ತತ್ತ್ವವಿದೆ. ಆ ಹೆಸರು ಸನ್ನಿಧಿಯವರು ವಾಸಿಸುವ ಸ್ಥಳವಾದುದರಿಂದ ನಿತ್ಯವೂ ಆ ಹೆಸರಿನ ನೆನಪು ಹಾಗೂ ಕುಮಾರೇಶ್ವರನು ಮಾಡಿದ ಧಾರ್ಮಿಕ ಹಾಗೂ ಸಮಾಜ ಸೇವೆಯ ನೆನಪು ಬಂದು ಕಾರ್ಯ ಮಾಡಲು ಚೈತನ್ಯ ದೊರೆಯಲೆಂಬುದೇ ಅವರ ಮನೀಷೆ ಇದ್ದಂತೆ ಕಾಣುತ್ತದೆ. ಮನೋವೈಜ್ಞಾನಿಕ ದೃಷ್ಟಿಯಿಂದಲೂ ಶ್ರೀ ಜಗದ್ಗುರುಗಳ ಮುಂಧೋರಣೆ ಮೆಚ್ಚುವಂತಹದು. ಯಾವುದೇ ಕಾರ್ಯ ಮಾಡಲಿ, ಸಂಸ್ಥೆಯನ್ನು ಕಟ್ಟಲಿ, ಅದಕ್ಕೊಂದು ತತ್ತ್ವವನ್ನು ಇರಿಸಿಕೊಂಡು, ಸಂಸ್ಕೃತಿಯ ತಳಹದಿಯ ಮೇಲೆ ಭಾವನೆಯಭವನವನ್ನು ನಿರ್ಮಿಸಿ, ಬಂಧುರತೆಯನ್ನು ಕಾಪಾಡಿಕೊಂಡು ಜನಜಾಗೃತಿ ಮಾಡುವ ಪೂಜ್ಯ ಶ್ರೀ ಜಗದ್ಗುರುಗಳಾಗಿದ್ದಾರೆ. ಕುಮಾರೇಶ್ವರನ ಭವನದಲ್ಲಿಯೇ ಚಿಕ್ಕ ಗ್ರಂಥಾಲಯ ಅವರಿಗೆ ಅಚ್ಚುಮೆಚ್ಚಿನ ದಾಗಿದೆ. ಸಾಲಂಕೃತ ಕುಮಾರೇಶ್ವರ ಭವನದಲ್ಲಿದ್ದುಕೊಂಡು, ತಮ್ಮ ಮನೋ ಮಂದಿರದಲ್ಲಿ ವಿಚಾರಪೂರ್ಣ ಯೋಚನೆಗಳನ್ನು ತುಂಬಿಕೊಂಡು ಅವುಗಳ ಯೋಜನೆಯನ್ನು ಕಾರ್ಯರೂಪಕ್ಕೆ ತರುತ್ತಿರುವ ಶ್ರೀ ಜಗದ್ಗುರುಗಳು ನಿಜಕ್ಕೂ ಸ್ತುತ್ಯಾರ್ಹರು; ನಾಡಿನ ಭಾಗ್ಯ ಸ್ವರೂಪರು. ಶ್ರೀ ಕುಮಾರೇಶ್ವರನು ಹಾಕಿಕೊಟ್ಟ ಹೆದ್ದಾರಿಯಲ್ಲಿ ಚಾಚೂ ತಪ್ಪದೇ ತಾವು ಜಗದ್ಗುರುಗಳೆಂಬ ಅಹಂಕಾರವಿಲ್ಲದೇ ನಿಜವಾದ ಮಾನವೀಯ ಸೇವೆಯನ್ನು ಹೃದಯವಂತಿಕೆಯಿಂದ ಮಾಡುತ್ತಿರುವದು ಸಮಾಜದ ಪುಣ್ಯ ವಿಶೇಷವಾಗಿದೆ. ಆ 'ಕುಮಾರೇಶ್ವರರ ಭವನ'ದಲ್ಲಿ ಕುಳಿತು ಬರೆಯುವ ಅವರ ಗ್ರಂಥಗಳು ಎಲ್ಲರಿಗೂ ದಾರಿದೀಪಗಳಾಗಲಿ, ಭಾರತೀಯತೆ

ಯನ್ನು ಎತ್ತಿ ಬೆಳಗುವಂತಹ ಬೆಳಕನ್ನು ಕೊಡಲಿ, ಸಂಸ್ಕೃತಿ ಸೌರಭ ಹರಡು ವಂತಾಗಲಿ.

**ಧರ್ಮಜಾಗೃತಿಗಾಗಿ ವಾಹನ ಸೌಕರ್ಯ:**

ಹನ್ನೆರಡನೆಯ ಶತಮಾನದಲ್ಲಿ ಬಸವತತ್ತ್ವವನ್ನು ಪ್ರಚಾರಗೊಳಿಸಿದ ಶ್ರೀ ಜಗದ್ಗುರು ಮೂರುಸಾವಿರಮಠವು ತನ್ನ ಐತಿಹಾಸಿಕ ಪರಂಪರೆಗೆ ಸಾಕ್ಷಿಯಾಗಿ ೨೦ನೇ ಶತಮಾನದ ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಶೈಕ್ಷಣಿಕ ಹಾಗೂ ಸಾಮಾಜಕ ರಂಗಗಳಲ್ಲಿ ಕನ್ನಡ ನಾಡಿನಲ್ಲಿ ಅಗ್ರಸ್ಥಾನದಲ್ಲಿದೆಯೆಂದರೆ ತಪ್ಪಾಗಲಿಕ್ಕಿಲ್ಲ.

ಶ್ರೀ ಜಗದ್ಗುರುಗಳು ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದಿಂದ ಅದರ ಅಂಗವಾಗಿ ಈಗಾಗಲೇ ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರ, ಕನ್ನಡ ಗ್ರಂಥಗಳಿಗೆ ಪುರಸ್ಕಾರ, ವೀರಶೈವ ಗ್ರಂಥಗಳಿಗೆ ವಿಶೇಷ ಪುರಸ್ಕಾರ, ವೀರಶೈವ ಭಾರತಿ, ಮೂರುಸಾವಿರಮಠದ ಗ್ರಂಥಮಾಲೆ, ಪರಂಜ್ಯೋತಿ ಮಾಸಪತ್ರಿಕೆ ಮುಂತಾದವುಗಳನ್ನು ವ್ಯವಸ್ಥಿತ ರೂಪವಾಗಿ ನಡೆಸುತ್ತಿರುವದು ತಿಳಿದ ವಿಷಯವಾಗಿದೆ. ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಸಾಧನೆಗಳು ಇನ್ನಷ್ಟು ಬೃಹದಾಕಾರವಾಗಿ ಪ್ರಚಾರ ಮಾಡಬೇಕಾದರೆ ಒಂದು ವಾಹನವು ಅತ್ಯವಶ್ಯಬೇಕೆಂದು ಬಗೆದು, ಶ್ರೀ ಜಗದ್ಗುರು ಸನ್ನಿಧಿಯವರು ಜೆ. ಜಿ. ಮಂಡಳದ ವತಿಯಿಂದ ಒಂದು ಲಕ್ಷ ರೂಪಾಯಿ ಕಿಮ್ಮತ್ತಿನ ಒಂದು ಸುಂದರ ನೂತನ ವಾಹನವನ್ನು (ಟೆಂಪೋ) ಖರೀದಿಸಿ ಅದರ ಮುಖಾಂತರ ಧಾರ್ಮಿಕ ಜಾಗೃತಿ ಮಾಡುತ್ತಿರುವದು ಅತಿ ಯೋಗ್ಯವಾಗಿದೆ.

ಈಗಾಗಲೇ ಪಂ|| ಬಸವಕುಮಾರಶಾಸ್ತ್ರಿಗಳನ್ನು ಧರ್ಮಪ್ರಚಾರಕ್ಕೆ ನಿಯುಮಿಸಿ, ೫೦–೬೦ ಹಳ್ಳಿಗಳಿಗೆ ಅವರನ್ನು ಕಳಿಸಿ, ಕೀರ್ತನ ಮುಖಾಂತರ ಪ್ರವಚನ ಮಾಡಿಸಿ, ಧರ್ಮಪ್ರಚಾರ ಮಾಡಿಸಲಾಗಿದೆ. ಇದಲ್ಲದೇ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯದ ವಿದ್ಯಾರ್ಥಿ–ವಿದ್ಯಾರ್ಥಿನಿಯರು ರಜೆಯಿದ್ದಾಗ ಹಳ್ಳಿಗಳಿಗೆ ವಾಹನ ತೆಗೆದುಕೊಂಡು ಹೋಗಿ ಧರ್ಮಜಾಗೃತಿ ಮಾಡುತ್ತಿದ್ದಾರೆ ಮತ್ತು ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ಪ್ರತಿವರ್ಷ ಶಾಲೆಗೆ ಬಿಡುವಿದ್ದಾಗ ಹಳ್ಳಿಗಳಿಗೆ ಹೋಗಿ ಧರ್ಮಪ್ರಚಾರ ಮಾಡಲು ಬಹಳ ಅನುಕೂಲವಾಗಿದೆ. ಜ್ಞಾನ ಪ್ರಸಾರದ ಕಾರ್ಯಕ್ಷೇತ್ರದಲ್ಲಿ ಮೂರುಸಾವಿರಮಠದ ಗ್ರಂಥಮಾಲೆ ಹೊರತಂದ ಗ್ರಂಥಗಳ ರಾಶಿಯೇ ಬೆರಗುಗೊಳಿಸುವಷ್ಟು ವೈವಿಧ್ಯಪೂರ್ಣವಾಗಿದೆ. ಅಪಾರ ಜ್ಞಾನತೃಷೆಯುಳ್ಳ ಪೂಜ್ಯ ಜಗದ್ಗುರುಗಳು ಪ್ರಚಾರಾರ್ಥವಾಗಿ ಹಾಗೂ ಪುಸ್ತಕಗಳ ಕಡಿಮೆ ಬೆಲೆಯಲ್ಲಿ ಮಾರಾಟಕ್ಕಾಗಿ, ಪ್ರತ್ಯೇಕ ವಿಭಾಗವನ್ನು ಇದಕ್ಕೆ ಸಿದ್ಧಮಾಡಿ ತನ್ನದೇ ಆದ ಗ್ರಾಮಾಂತರ ಗ್ರಂಥ ಪ್ರಸಾರ

ವನ್ನು ಈ ವಾಹನದಿಂದ ಮಾಡಲಾಗುತ್ತದೆ. ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರವನ್ನೇರ್ಪಡಿಸಿದಾಗ ಅದರ ಕಾರ್ಯಕಲಾಪಗಳನ್ನು ನಡೆಯಿಸುವ ಸಲುವಾಗಿ ಈ ವಾಹನವು ಉಪಯೋಗವಾಗುತ್ತದೆ. ಇನ್ನೂ ಇದರ ಸದುಪಯೋಗವು ಚೆನ್ನಾಗಿ ಆಗಬೇಕೆಂಬುದೇ ಶ್ರೀ ಜಗದ್ಗುರುಗಳ ಬಲವಾದ ಇಚ್ಛೆಯಾಗಿದ್ದು, ಅದಕ್ಕಾಗಿ ಮತ್ತೊಂದು ಹೊಸ ಯೋಜನೆಯಲ್ಲಿದ್ದಾರೆಂಬುದು ತಿಳಿದುಬಂದಿದೆ. ಆಧುನಿಕ ಯುಗದಲ್ಲಿ ಪ್ರಸಾರಕ್ಕೆ ಹೆಚ್ಚಿನ ಮಹತ್ವ ನೀಡಿದರೆ ಮಾತ್ರ ಶ್ರಮವಹಿಸಿ ಪುಸ್ತಕ ಪ್ರಕಟಪಡಿಸಿದವುಗಳನ್ನು ಮಾರಾಟವಾದರೆ ಶ್ರಮ ಸಾರ್ಥಕವಾಗುತ್ತದೆ. ಸಾಹಿತ್ಯ ಸಂಶೋಧನೆಗಾಗಿ ಹಾಗೂ ಸಾಹಿತ್ಯ ಪ್ರಚಾರಕ್ಕಾಗಿ ಇನ್ನೂ ಅನೇಕ ಯೋಜನೆಗಳನ್ನು ಶ್ರೀ ಜಗದ್ಗುರುಗಳವರು ಹಾಕಿಕೊಂಡಿದ್ದಾರೆ. ಅಂತೂ ಈ ವಾಹನದಿಂದ ಧಾರ್ಮಿಕ ಗ್ರಂಥಗಳ ಪ್ರಸಾರ, ಗ್ರಾಮೀಣ ಜನತೆಯಲ್ಲಿ ಹೋಗಿ ಲಿಂಗವಿಲ್ಲದವರಿಗೆ ಲಿಂಗ ದೀಕ್ಷೆ, ಪ್ರವಚನದ ಮುಖಾಂತರ ದುಶ್ಚಟಗಳನ್ನು ಬಿಡಿಸುವದು ಮುಂತಾದ ಧರ್ಮಕಾರ್ಯಗಳಿಗೆ ವಾಹನ ಸೌಕರ್ಯ ಅತ್ಯುಪಯುಕ್ತವಾಗಿ ಜನಜಾಗೃತಿ ಮಾಡಲು ಸಾಧನವಾಗಿದೆ. ಶರಣ ಸಂಸ್ಕೃತಿಯ ಪುನರುತ್ಥಾನಗೊಳಿಸಲು ಅನುಕೂಲವಾಗಿದೆ. ಇದೊಂದು ಶ್ರೀ ಜಗದ್ಗುರುಗಳವರ ಮುಂಧೋರಣೆಯ ದೃಷ್ಟಿಯಾಗಿದೆ.

### ಜ್ಞಾನ-ಯೋಗದ ಸರಿಗಮವೇ ಗುರು–ವಿರಕ್ತರ ಸಂಗಮ: ಪುರಾಪ್ರಯತ್ನ

ಗುರು-ವಿರಕ್ತರು ಭಾವೈಕ್ಯದಿಂದ ಇರಬೇಕು. ಸಮಾಜದ ರಥಕ್ಕೆ ಗುರು-ವಿರಕ್ತರು ಎರಡು ಗಾಲಿಗಳಿದ್ದಂತೆ. ಇವರು ಭಾವೈಕ್ಯದಿಂದ ನಡೆದು ವೀರಶೈವ ಸಮಾಜ ರಥವನ್ನು ಎಳೆದರೆ ಸಮಾಜಕ್ಕೆ ಶಕ್ತಿ ಬಂದು, ಬಂಧುರತೆ ಬರುತ್ತದೆ ಎಂಬುದೇ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಅಭಿಮತ. ಇವರೀರ್ವರ ಭಾವೈಕ್ಯಕ್ಕಾಗಿ ೧೦–೧೨ ವರ್ಷಗಳಿಂದಲೂ ಶ್ರೀ ಜಗದ್ಗುರು ಸನ್ನಿಧಿಯವರು ಹೋರಾಡುತ್ತಿದ್ದಾರೆ, ಬಹಳ ಪರಿಶ್ರಮ ವಹಿಸುತ್ತಿದ್ದಾರೆ, ನಿಂದೆಯ ಹೊರೆಯನ್ನು ಹೊತ್ತಿದ್ದಾರೆ. ಅವುಗಳನ್ನು ಲೆಕ್ಕಿಸದೇ ಲಿಂಗೈಕ್ಯ ಹಾನಗಲ್ಲ ಕುಮಾರೇಶನ ಇಚ್ಛೆಯನ್ನು ಪೂರೈಸಲು ಹೋರಾಡುವದು ತಮ್ಮ ಧರ್ಮವೆಂದು ಪೂಜ್ಯ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಪದೇ ಪದೇ ಅಪ್ಪಣೆಕೊಡಿಸುತ್ತಿದ್ದಾರೆ. ಅದರಂತೆ ಪ್ರಯತ್ನವನ್ನೂ ಸಹ ಮಾಡಿದ್ದಾರೆ; ಮಾಡುತ್ತಲೂ ಇದ್ದಾರೆ. ಗುರು–ವಿರಕ್ತರ ಭಾವೈಕ್ಯದ ಬಗ್ಗೆ ಶ್ರೀ ಮೂಜಗಂ ಅವರೇ ತಮ್ಮ ಪರಂಜ್ಯೋತಿಯಲ್ಲಿ ಆಶೀರ್ವಾಣಿ ಮೂಲಕ ಬರೆದ ವಿಚಾರಗಳನ್ನು ಓದುಗರ ಮುಂದಿಟ್ಟರೆ ಮತ್ತಷ್ಟು ಅರ್ಥವಾಗುವದು.

'ಗುರು–ವಿರಕ್ತರು ವೀರಶೈವ ಸಮಾಜಕ್ಕೆ ಕಣ್ಣುಗಳೆರಡಿದ್ದಂತೆ. ಸಮಾಜ ಪುರುಷನು ಬಲಶಾಲಿಯಾಗಿ, ತನ್ನ ಅಂತಃಸತ್ವದ ಹಾಗೂ ಸತ್ಯದ ಬೆಳಕನ್ನು ಹರಡಲು ಗುರು–ವಿರಕ್ತರ ಭಾವೈಕ್ಯ ಅತ್ಯವಶ್ಯ. ಈ ಭಾವೈಕ್ಯ ಹೃದಯದಿಂದ ಕೂಡಿಕೊಂಡು ಪರಿಪೂರ್ಣವಾಗಬೇಕು. ಅಲ್ಲಿ ಸ್ವಪ್ರತಿಷ್ಠೆ, ಅಹಂಕಾರ, ಮಮಕಾರ, ತಮ್ಮದೇ ಸಾಧಿಸಬೇಕೆನ್ನುವ ಛಲ ಇವೆಲ್ಲವುಗಳಿಂದ ದೂರಿದ್ದಾಗ ಅದು ಸಾಧ್ಯವಾಗಬಹುದು. ನಾ ಹೆಚ್ಚು ನೀ ಹೆಚ್ಚು ಎನ್ನುವ ಹುಚ್ಚಿನ ಕಿಚ್ಚಿನಲ್ಲಿ ಬಿದ್ದುಕೊಂಡು ಸ್ವಾರ್ಥ ಸಾಧಿಸ ಹೊರಟರೆ ಸಮಾಜವು ಎಂದೂ ಸುಧಾರಿಸದು. ಸಮಾಜಾಭಿಮಾನವಿದ್ದವರ ರೀತಿಯೇ ಬೇರೆ. ಮಾತಿನಲ್ಲಿ ದೊಡ್ಡ ದೊಡ್ಡ ಗುಡ್ಡದಂತಹ ಮಾತು ಹೇಳುತ್ತ ಕೃತಿಯಲ್ಲಿ ಶರಣ ಸಂಸ್ಕೃತಿ ಅವಹೇಳನ ಮಾಡುವ ಛಲವನ್ನು ಸೂಕ್ಷ್ಮವಾಗಿ ಸಾಧಿಸ ಹೊರಟರೆ ತಿಳಿವಳಿಕೆಯುಳ್ಳವರಿಂದಲೇ ಸಮಾಜಕ್ಕೆ ದ್ರೋಹ ಬಗೆದಂತಾಗುವದು. ಹಾಲೆರೆದವರಿಗೆ ವಿಷವನ್ನು ನೀಡುವದು ವಿಕೃತಿಯಾದೀತೆ ಹೊರತು ಸಂಸ್ಕೃತಿಯಾಗದು. 'ಮಾನವ ಕುಲವೇ ಒಂದು' ಎನ್ನುವ ಇಂದಿನ ವಿಜ್ಞಾನ ಯುಗದಲ್ಲಿ ಕೂಪಮಂಡೂಕ ನ್ಯಾಯದಂತೆ ಜೀವನ ಸಾಗಿಸಿದರೆ ಬೇರೆಯವರು ನಗದೆ ಇರುವರೆ? ಸಮಾಜಾಭಿವೃದ್ಧಿಯಾಗಲು ನಿಷ್ಠಾಪೂರ್ಣ ಅಭಿಮಾನಬೇಕು. ಮುಂಬರುವ ಯುವ ಪೀಳಿಗೆಯು ಶಪಿಸದಂತೆ ಇರಬೇಕು. ಅವರಿಗೆ ಸಮನ್ವಯ ಮಾರ್ಗವನ್ನು ತೋರಿಸಬೇಕು. ಸಂಘಟನೆ ದುರ್ಘಟನೆಗೆ ಕಾರಣವಾಗದಂತೆ ನೋಡಿಕೊಳ್ಳಬೇಕು. ಸದ್ಭಾವನೆಯು ಹೂವು ಅರಳುತ್ತ ಹೋದರೆ ಅದರ ಕಂಪನ್ನು ಎಲ್ಲರೂ ಸೇವಿಸಬಯಸುತ್ತಾರೆ. ಹಿಂದಿನ ಮಹಾತ್ಮರ, ಶರಣರ, ಗುರು–ವಿರಕ್ತರ ಆದರ್ಶ ಜೀವನವನ್ನು ನಮ್ಮ ಮುಂದಿಟ್ಟುಕೊಂಡರೆ ಯಾವ ಭಿನ್ನ ಭಾವನೆ ಬರಲಾರದು. ಅದಿಲ್ಲದೆ ಬರಿ ಬುದ್ಧಿ ವೈಚಾರಿಕತೆಗೆ ಹೆಚ್ಚು ಮಹತ್ವ ನೀಡಿದರೆ ಕಷ್ಟ ಪರಂಪರೆ ನಷ್ಟವಾಗದು. ಅದಕ್ಕಾಗಿ ಗುರು–ವಿರಕ್ತರೀರ್ವರು ಕೇವಲ ವೈಯಕ್ತಿಕ ಪ್ರತಿಷ್ಠೆಯ ಕಡೆಗೆ ಗಮನಕೊಡದೆ, ಸಮಾಜ ಹಿತಚಿಂತನೆಯತ್ತ ವಿಶೇಷ ಲಕ್ಷ್ಯವಹಿಸಿ ಕಾರ್ಯಗೈದರೆ ಸಮಾಜವು ಬದುಕಿ ಬೆಳಗೀತು?' ಎಂದು ಮುಂತಾಗಿ ಆಶೀರ್ವಾಣಿಯಲ್ಲಿ ಬರೆದ ಜಗದ್ಗುರುಗಳು ಕೇವಲ ಬರೆದು ಹಾಗೆಯೇ ಸುಮ್ಮನೆ ಕುಳಿತಿಲ್ಲ. ಭಾವೈಕ್ಯಕ್ಕಾಗಿ ಬಹು ಪರಿಶ್ರಮಿಸಿದ್ದಾರೆ. ಹುಬ್ಬಳ್ಳಿಗೆ ಯಾರೇ ಜಗದ್ಗುರುಗಳು ಬರಲಿ ಭಿನ್ನ ಭಾವನೆ ಮಾಡದೆ ಶ್ರೀಮಠಕ್ಕೆ ಕರೆಯಿಸಿ,ಅವರನ್ನು ಮರ್ಯಾದಯೋಜನೆ ಬರಮಾಡಿಕೊಂಡು, ಸತ್ಕರಿಸಿ ಕಳಿಸುವ ಸಂಪ್ರದಾಯವನ್ನು ಇಂದಿಗೂ ಬಿಟ್ಟಿಲ್ಲ. ಅದೇಪ್ರಕಾರ ಹುಬ್ಬಳ್ಳಿಗೆ ಆಗಮಿಸಿದ ಕಾಶೀ ಜ್ಞಾನ ಸಿಂಹಾಸನಾಧೀಶ್ವರರಾದ ಜಂಗಮವಾಡಿಯ ಪೂಜ್ಯ ಜಗದ್ಗುರುಗಳಾದ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಶ್ರೀಮಠಕ್ಕೆ ಬರಮಾಡಿಕೊಂಡು, ಗುರು–ವಿರಕ್ತರ ಭಾವೈಕ್ಯ ಬಗ್ಗೆ ಸಮಾಲೋಚಿಸಿ, ಇಬ್ಬರೂ ಆನಂದ ವ್ಯಕ್ತ ಮಾಡಿದ್ದು

ನೋಡಿದಾಗ ಇತಿಹಾಸದ ಪುಟಗಳಲ್ಲಿ ಬರೆಯುವಂತೆ ಮಾಡಿದ್ದಾರೆ. ಇಂದಿನಿಂದ ಗುರು–ವಿರಕ್ತರ ಭಾವೈಕ್ಯಕ್ಕಾಗಿ ಶ್ರೀ ಮೂರುಸಾವಿರಮಠದ ಜಗದ್ಗುರು ಬೀಜಾರೋಪಣ ಮಾಡಿ ಸ್ವಲ್ಪನ್ನಾದರೂ ಸಾಧಿಸಿದರಲ್ಲವೆಂಬುದು ಭಕ್ತಜನಕೋಟಿಗೆ ಆನಂದ ತರುವಂತಹದಾಗಿದೆ.ಕಾಶೀ ಜಗದ್ಗುರುಗಳದು ಸಹ ಗುರು-ವಿರಕ್ತರ ಭಾವೈಕ್ಯದಿಂದಲೇ ಸಮಾಜ ಸುಧಾರಣೆಯೆಂಬುದು ಅವರ ಅಭಿಮತವಾಗಿದೆ. ಅಂತೆಯೇ ಆವರೀರ್ವರೂ ಹೃದಯಪೂರ್ವಕ ಕೂಡಿದರು. ಮೂರುಸಾವಿರಮಠದ ಜಗದ್ಗುರುಗಳು ಸಹ ವಿದೇಶಕ್ಕೆ ಹೋಗಿ, ಮರಳಿ ಭಾರತಕ್ಕೆ ಬರುವಾಗ ಕಾಶಿಗೆ ದಯಮಾಡಿಸಿದ್ದರು. ಆ ಸಮಯದಲ್ಲಿ ಕಾಶೀ ಜಗದ್ಗುರುಗಳು ಇವರನ್ನು ತಮ್ಮ ಮಠಕ್ಕೆ ಬರಮಾಡಿಕೊಂಡು ಗೌರವಿಸಿದ್ದು ಇನ್ನೂ ಚಿರಸ್ಮರಣೀಯವಾಗಿ ಉಳಿದಿದೆ. ಇದೇ ರೀತಿ ಎಲ್ಲ ಜಗದ್ಗುರುಗಳು ಮಾಡುತ್ತ ಹೋದರೆ ಸಮಾಜವು ಸ್ವಾಸ್ಥ್ಯದಿಂದಿದ್ದು ಬಲಬಂದೀತು. ಕೆಲವು ದಿನಗಳ ಹಿಂದೆ ಪಂಚಪೀಠದ ಜಗದ್ಗುರುಗಳು ಹುಬ್ಬಳ್ಳಿಗೆ ಆಗಮಿಸಿದಾಗ ಶ್ರೀ ಜಗದ್ಗುರುಗಳು ಹಾಗೂ ಹುಬ್ಬಳ್ಳಿಯ ಗಣ್ಯ ಭಕ್ತರು ಮೂರುಸಾವರಮಠಕ್ಕೆ ಕರೆಯಿಸಿ,ಭಾವೈಕ್ಯವನ್ನು ಭದ್ರವನ್ನಾಗಿ ಮಾಡಬೇಕೆಂದು ಹಗಲಿರುಳು ಪರಿಶ್ರಮಿಸಿದರು, ಪರಿಪರಿಯಿಂದ ತಿಳಿಸಿ ಹೇಳಿದರು. ಕೆಲವು ಕಾರಣಾಂತರಗಳಿಂದ ಅದು ಯಶಸ್ವಿಯಾಗದಿದ್ದುದು ಎಂತಹ ವ್ಯಕ್ತಿಗೂ ದುಃಖವಾಗದಿರದು. ಅದು ಶ್ರೀ ಜಗದ್ಗುರುಗಳಿಗೆ ಬಹಳ ನೋವನ್ನುಂಟು ಮಾಡಿತು. ಇಷ್ಟಾದರೂ ಮೂರುಸಾವಿರಮಠದ ಶ್ರೀ ಜಗದ್ಗುರುಗಳಿಗೆ ಅಧೈರ್ಯ ಸಂಕುಚಿತತನವೆಂಬುದೇ ಇಲ್ಲ. ತೆಗಳಿಕೆ–ಹೊಗಳಿಕೆಗೆ ಮಹತ್ವಕೊಡುವದೇ ಇಲ್ಲ. ಒಳ್ಳೇ ಕಾರ್ಯಕ್ಕೆ ಎಷ್ಟೇ ಅಡಚಣೆ ಬಂದರೂ ಸಹ ಧೈರ್ಯವನ್ನು ಕಳೆದುಕೊಳ್ಳಲಾರದ ದೈವೀಯ ಚೈತನ್ಯ ಶಕ್ತಿಯು ಇವರ ಹೃದಯದಲ್ಲಿ ಮನೆಮಾಡಿಕೊಂಡಿದೆ. ಆ ಶಕ್ತಿಯ ಪ್ರಭಾವದ ವಿಶಾಲ ಮನೋಭಾವನೆಯು ಇವರಲ್ಲಿ ತುಂಬಿ ತುಳುಕಿರುವದರಿಂದ, ಸಂಕುಚಿತತೆ ಇವರಲ್ಲಿ ಎಲ್ಲಿಯೂ ಸುಳಿಯದು. ಒಮ್ಮೆ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯರು ಆಜಾರಿಯಲ್ಲಿದ್ದಾಗ ಆ ವಿಷಯ ಕೇಳಿದೊಡನೆಯೇ ಅವರಿದ್ದ 'ಹರಿಹರಕ್ಕೆ–ಎಸ್.ಜಿ. ಕವಳಿ, ಶಿರಹಟ್ಟಿಮಠ ವಕೀಲರು, ಎಮ್ಮೆಟ್ಟಿ ಹಿರೇಮಠರು, ಎಸ್.ಎಸ್. ಕಮಡೊಳ್ಳಿಶೆಟ್ಟರು, ಜಿ. ಎಸ್. ಉಮದಿ ಮುಂತಾದವರನ್ನು ಕರೆದುಕೊಂಡು ಹೋಗಿ ಯೋಗಕ್ಷೇಮ ಕೇಳಿಕೊಂಡು ಬಂದರಲ್ಲದೆ ತಮ್ಮ ಮಠದ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಅಧ್ಯಯನ ಮಾಡಿ, ಶೀಲಸಂಸ್ಕೃತಿ ಪರಿಪೂರ್ಣರಾದ, ವಿದ್ವಾಂಸರಾದ ಉಮಾಪತಿದೇವರನ್ನು ಅವರ ಸಂಸ್ಥಾನಮಠಕ್ಕೆ ಉತ್ತರಾಧಿಕಾರಿಯಾಗಲು ಅನುಮತಿಕೊಟ್ಟು ಬಂದರು.' ಆ ಪ್ರಸಂಗದಲ್ಲಿ ನಡೆದ ಘಟನೆ ಇಂತಿದೆ:

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯರು ಹಾಗೂ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳು ಒಂದೇ ಹಾಸಿಗೆಯ ಮೇಲೆ ಕುಳಿತಾಗ ಉತ್ತರಾಧಿಕಾರಿಗಳಾಗಲಿರುವ ಉಮಾಪತಿದೇವರನ್ನು ಒಳಗೆ ಬರಮಾಡಿಕೊಂಡು, ಕದವನ್ನು ಮುಚ್ಚಿಸಿ ಹೇಳಿದ ನುಡಿಗಳನ್ನು ಕೇಳಿದರೆ ಎಂತಹ ವಿಶಾಲ ಮನೋಭಾವನೆ ಎಂಬುದು ಅರಿಯದಿರದು. ಅದು ಇಂತಿದೆ–'ಉಮಾಪತಿದೇವರೇ ನೀವುಗಳು ವಿರಕ್ತರ ಮಠದ ಜಗದ್ಗುರುಗಳಾದ ಮೂರುಸಾವಿರಮಠದ ಜಗದ್ಗುರುಗಳ ಆಶ್ರಯದಲ್ಲಿರುವ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಬಹುದಿನಗಳವರೆಗೆ ಅಧ್ಯಯನ ಮಾಡಿದ್ದೀರಿ. ನಾವು ಸಹ ಮೊದಲು ಅಥಣಿ ಶಿವಯೋಗೀಶ್ವರರಲ್ಲಿ, ಶಿವಯೋಗ ಮಂದಿರದಲ್ಲಿ ಇದ್ದೆವು. ಆದರೆ ನೀವುಗಳು ಮೂರುಸಾವಿರಮಠದ ಪೀಠಕ್ಕೂ ಹಾಗೂ ನಮ್ಮ ಶ್ರೀಶೈಲ ಸಂಸ್ಥಾನ ಪೀಠಕ್ಕೂ ಯಾವ ಚ್ಯುತಿ ಬರದಂತೆ ನಡೆದುಕೊಂಡು ಹೋಗಬೇಕು. ಇದೇ ಸಮಾಜ ಸೇವೆ' ಎಂದು ಅಪ್ಪಣೆಕೊಡಿಸಿ, ಮೂರುಸಾವಿರಮಠ ಜಗದ್ಗುರುಗಳಿಗೂ ನಮಸ್ಕಾರ ಹಾಕಿಸಿದ್ದು ನೆನೆದುಕೊಂಡರೆ ಅತಿ ಸಂತಸವೆನಿಸುತ್ತದೆ. ಅವರ ಕಳಕಳಿಯ ನುಡಿಗಳು ಇಂದಿಗೂ ಚಿರಂಜೀವಿಗಳಾಗಿವೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳಂತೂ ಬಹಳ ಆನಂದವುಳ್ಳವರಾಗಿ, ತಮ್ಮೊಡನೆ ಬಂದ ಸದ್ಭಕ್ತರಿಗೆ ತಿಳಿಸಿ ಎಲ್ಲವನ್ನು ಸಂತೋಷಸಾಗರದಲ್ಲಿ ತೇಲಿಸಿದರು. ಇಂತಹ ಮನೋಭಾವನೆಯು ಎಲ್ಲಿಯವರೆಗೆ ಬೆಳೆಯುವದಿಲ್ಲವೋ ಅಲ್ಲಿಯವರೆಗೆ ಸಮಾಜಕ್ಕೆ ಶಕ್ತಿ ಬರಲಾರದು. ಒಂದೊಂದು ರಾಷ್ಟ್ರವು ಐಕ್ಯದಲ್ಲಿದ್ದು, ತಮ್ಮ ದೇಶವನ್ನು ಆ ಜನತೆಯು ಮುಂದೊಯ್ಯುತ್ತಿರುವಾಗ ವೀರಶೈವವು ವಿಶ್ವಧರ್ಮವೆಂದು ಸಾರುತ್ತಿರುವ ನಾವುಗಳು ಒಂದಾಗದಿದ್ದರೆ ನಾಚಿಕೆಪಡುವಂತಹದಾಗಿದೆ. ಭಾವೈಕ್ಯವು ಬಹಳ ದೊಡ್ಡ ವಿಷಯವಲ್ಲ. ಹೃದಯ ಪರಿವರ್ತನೆ, ಅಹಂಕಾರ ನಿರಸನವಾದರೆ ತಾನೇ ಭಾವೈಕ್ಯಕ್ಕಾಗಿ ದಾರಿದೀಪವಾಗುತ್ತದೆ. ಗುರುವರ್ಗದವರು ವಿರಕ್ತರ ಪೀಠಗಳಿಗೆ ತಾವಾಗಿಯೇ ಬಂದು ಧರ್ಮಜಾಗೃತಿ ಬಗ್ಗೆ ಆಪ್ತಾಲೋಚನೆ ಮಾಡಿ ಹೋಗಬೇಕು ಮತ್ತು ವಿರಕ್ತಪೀಠದ ಜಗದ್ಗುರುಗಳು ಸಹ ಗುರುವರ್ಗದ ಜಗದ್ಗುರು ಪೀಠಗಳಿಗೆ ಹೋಗಿ ಧಾರ್ಮಿಕ ಜಾಗೃತಿ ಹಾಗೂ ಸಮಾಜ ಕಲ್ಯಾಣ ಬಗ್ಗೆ ಆಪ್ತಾಲೋಚನೆ ಮಾಡುವ ಪರಂಪರೆ ಸಹಜವಾಗಿ ಬಂದು ಹೋಗಿ ಬಿಟ್ಟರೆ ಅದು ನಿಜವಾದ ಭಾವೈಕ್ಯ ಹಾಗೂ ಸಮಾಜ ಸುಧಾರಣೆ ಎಂದು ಪೂಜ್ಯ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಆಶೆ. ಅಂತಹ ಸನ್ನಿವೇಶ ಬರಲೂಬಹುದೆಂಬ ಆಶೆಯೂ ಸಹ ಅದೆ.

ದಾವಣಗೆರೆಯಲ್ಲಿ ೭–೨–೮೬ ರಂದು ಮತ್ತೊಮ್ಮೆ ಶ್ರೀಶೈಲ ಹಿರಿಯ ಜಗದ್ಗುರುಗಳ ಹಾಗೂ ಮೂರುಸಾವಿರಮಠದ ಜಗದ್ಗುರುಗಳ ಸಮಾಗಮವಾಗಿ ಉಭಯ ಜಗದ್ಗುರುಗಳು ಒಂದೇ ಕಾರಿನಲ್ಲಿ ಉತ್ಸವದಿಂದ ಭಕ್ಕೇಶ್ವರ ದೇವಸ್ಥಾನಕ್ಕೆ

ಹೋಗಿ, ಭಕ್ಕೇಶ್ವರ ದರ್ಶನ ಪಡೆದು, ಸಮಾನವಾದ ಸಿಂಹಾಸನದ ಮೇಲೆ ಉಭಯ ಜಗದ್ಗುರುಗಳು ಕುಳಿತು ಅಂದಿನ ಸಮಾರಂಭವನ್ನು ಯಶಸ್ವಿಗೊಳಿಸಿದ್ದನ್ನು ಭಕ್ತರು ನೋಡಿ ಆನಂದಸಾಗರದಲ್ಲಿ ತೇಲಿದರು. ಶ್ರೀಶೈಲ ಜಗದ್ಗುರುಗಳು 'ಓಂ ಇರದಿದ್ದರೆ ನಮಃಶಿವಾಯಕ್ಕೆ ಶಕ್ತಿ ಬರಲಾರದು. ಓಂ, ಅಂದರೆ ಗಣಾಧೀಶ್ವರ ರೆಂದರ್ಥ. ಅದಕ್ಕಾಗಿ ನಮಃಶಿವಾಯ ಇದಕ್ಕೆ ಹಿಂದೆ 'ಓಂಕಾರ' ಆಸರೆ ಬೇಕೇ ಬೇಕು ಎಂದು ಹೇಳುತ್ತ ನಾವೆಲ್ಲರೂ ಒಂದೇ. ಭಿನ್ನ ಭಾವ ಬಂದರೆ ಏನನ್ನೂ ಸಾಧಿಸಲಾಗದು. ಮೂರುಸಾವಿರಮಠದಂತಹ ಜಗದ್ಗುರುಗಳು ಇದ್ದರೆ ಸಮಾಜ ಬದುಕುತ್ತದೆ. ಧರ್ಮ ಬದುಕುತ್ತದೆ. ನಾವಿಬ್ಬರೂ ಅಂದರೆ ಗುರು-ವಿರಕ್ತರು ಅಂತರಂಗವನ್ನು ಅರ್ಥಮಾಡಿಕೊಂಡು ಸಮಾಜದ ಹಿತದೃಷ್ಟಿಯಿಂದ ನಡೆದು ಕೊಂಡರೆ ಸಮಾಜಕ್ಕೆ ಭದ್ರಬುನಾದಿ' ಎಂದು ಅಪ್ಪಣೆಕೊಡಿಸಿದಾಗ ಎಲ್ಲರಿಗೂ ಹೇಳತೀರದಷ್ಟು ಸಂತಸಪನಿಸಿತು. ಮೂರುಸಾವಿರಮಠದ ಶ್ರೀ ಜಗದ್ಗುರುಗಳೂ ಸಹ 'ವಯಸ್ಸಿನಿಂದ ದೊಡ್ಡವರು ಬಹಳ ಜನ ಸಿಗುತ್ತಾರೆ. ಪಕ್ವ ಹೃದಯದಿಂದ, ವಿದ್ಯೆಯಿಂದ, ಸ್ವಭಾವದಿಂದ ದೊಡ್ಡವರಾದ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯರ ಮಾರ್ಗದರ್ಶನ ಎಲ್ಲ ಜಗದ್ಗುರುಗಳಿಗೂ ಇಂದು ಅತ್ಯವಶ್ಯ ಎಂದು ತಿಳಿಸಿದರಲ್ಲದೆ, ಇಂತಹ ವಿಶಾಲಮನೋಭಾವನೆಯ ಜಗದ್ಗುರುಗಳು ೮-೧೦ ವರ್ಷ ಮೊದಲೇ ದೊರೆತಿದ್ದರೆ ಕುಮಾರೇಶ್ವರನ ಇಚ್ಛೆ ಪೂರೈಸುವದು ಬಹಳ ಸುಲಭವಾಗುತ್ತಿತ್ತು. ಆದರೂ ನಾವೀರ್ವರೂ ಇದಕ್ಕಾಗಿ ಒಂದು ಯೋಜನೆ ಹಾಕಿಕೊಳ್ಳಬೇಕೆಂದು ಆಪ್ತಾಲೋಚನೆ ಮಾಡಿಕೊಂಡಿದ್ದೇವೆಂದು ತಿಳಿಸಿದರು. ಆದರೆ ಅದು ಕೈಗೂಡದೇ ಹೋಗಿದ್ದಕ್ಕೆ ಮೂರುಸಾವಿರಮಠದ ಶ್ರೀ ಜಗದ್ಗುರು ಗಳು ವ್ಯಥೆಪಟ್ಟುಕೊಂಡಿದ್ದಾರೆ. ಯಾಕೆಂದರೆ ಈ ವಿಷಯ ಮಾತನಾಡಿದ ೪-೫ ತಿಂಗಳಲ್ಲಿಯೇ ಹಿರಿಯ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಲಿಂಗೈಕ್ಯರಾದರು. ಲಿಂಗೈಕ್ಯರಾದ ವಾರ್ತೆ ತಿಳಿ ದೊಡನೆ ಮೂರುಸಾವಿರಮಠದ ಶ್ರೀ ಜಗದ್ಗುರುಗಳು, ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರೊಡನೆ ಹರಿಹರಕ್ಕೆ ಹೋಗಿ, ಹೂಮಾಲೆ ಅರ್ಪಿಸಿ ಗೌರವ ಸಲ್ಲಿಸಿ ದರು. ಆಗ ಹರಿಹರದಲ್ಲಿ ಕ್ರಿಯಾಸಮಾಧಿ ಎಲ್ಲಿ ಮಾಡಬೇಕೆಂಬ ವಾದ-ವಿವಾದ ಹೆಚ್ಚಾದಾಗ, ಜಗದ್ಗುರುಗಳ ಇಚ್ಛೆಯಂತೆಯೇ ದಾವಣಗೆರೆಯಲ್ಲಿ ಮಾಡಬೇಕೆಂದು ಅವರ ವಾದ ಬಗೆಹರಿಸಿ, ತೃಪ್ತಿಪಡಿಸಿ, ಮೂರುಸಾವಿರಮಠದ ಶ್ರೀ ಜಗದ್ಗುರು ಗಳು ಮತ್ತೆ ದಾವಣಗೆರೆಗೆ ಹೋಗಿ ಉತ್ಸವವನ್ನು ಸಾಗಿಸಿ, ಮರಳಿ ಹುಬ್ಬಳ್ಳಿಗೆ ದಯಮಾಡಿಸಿದ್ದು ನೋಡಿದರೆ ಭಾವೈಕ್ಯದ ಪ್ರತೀಕವಲ್ಲದೆ ಮತ್ತೇನು? ಒಳ್ಳೆದು ಮಾಡುವದೇ ಹುಬ್ಬಳ್ಳಿ ಜಗದ್ಗುರುಗಳ ವೈಶಿಷ್ಟ್ಯ. ಯಾವ ಜಾತಿ-ಗೀತಿ ನೋಡುವ ದಿಲ್ಲ. ಮಾನವೀಯತೆಯ ಅನುಕಂಪವೇ ಅವರ ಹೃದಯದಲ್ಲಿ ಮಿಡಿಯುತ್ತಿರುತ್ತದೆ.

ಅವರು ಗುರು–ವಿರಕ್ತರ ಭಾವೈಕ್ಯಕ್ಕೆ ಕಷ್ಟಪಟ್ಟದ್ದು ಅಸದಳವಾದುದು. ಇಷ್ಟಕ್ಕೂ ತೃಪ್ತಿಯಿಲ್ಲ. ವೀರಶೈವರಲ್ಲಿಯ ಎಲ್ಲ ಒಳಪಂಗಡಗಳ ಒಡಕುಗಳು ತೊಲಗಬೇಕು, ಒಂದೇ ಸಿದ್ಧಾಂತವಾಗಬೇಕು. ಪರಸ್ಪರ ಪ್ರೇಮದಿಂದ ಪ್ರತಿಯೊಬ್ಬರೂ ಸಮಾಜ ರಥವನ್ನು ಮುನ್ನಡೆಸಬೇಕೆಂಬುದೇ ಜಗದ್ಗುರುಗಳ ಬಲವಾದ ಆಶೆ. 'ಕಾಯಕವೇ ಕೈಲಾಸ' ಈ ಬಸವತತ್ತ್ವವೂ ಇದರೊಡನೆ ಸೇರಿ, ಒಂದೆಂಬ ಭಾವನೆಯೂ ಸಮರ್ಪಣದೊಡನೆ ದಾರಿ ಸಾಗಿದರೆ ಸಮಾಜದ ಭಾಗ್ಯದ ಬಾಗಿಲು ತೆರೆದಂತೆ ಎಂದು ಜಗದ್ಗುರುಗಳು ಅನ್ನುತ್ತಿದ್ದಾರೆ. ಅದಕ್ಕಾಗಿ ಕಾದುನೋಡಬೇಕು. ಎಲ್ಲರೂ ಜಗದ್ಗುರುಗಳ ಇಚ್ಛೆಯಂತೆ ಮನೋವಿಕಾಸ ಮಾಡಿಕೊಂಡರೆ ಅದು ಸುಲಭ ಸಾಧ್ಯ. ಆ ಅವಕಾಶ ಬರಬಹುದೆಂದು ಆಶೆಯನ್ನು, ದೇವರಲ್ಲಿ ಪ್ರಾರ್ಥನೆಯನ್ನು ಮಾಡ ಬೇಕಲ್ಲವೇ? ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಬರೆದ ಚಿತ್ಸುಮನ ವಚನ ಗ್ರಂಥದಲ್ಲಿಯ ಒಂದು ಸುಂದರ ವಚನವನ್ನು ಇಲ್ಲಿ ಪ್ರಸ್ತಾಪಿಸಿದರೆ ಸಾಕೆನಿಸುತ್ತದೆ. ಅದು ಇಂತಿದೆ:

'ಗುರುವಿರಕ್ತರೆಂಬುವರು ಸಮಾಜ ಪುರುಷಂಗೆ ಕಣ್ಣೆರಡು ನೋಡಾ|
ಪರೆ ಬಂದ ಕಂಗಳಂತೆ, ಇವರೀರ್ವರ ಪರಿ ಆಗಬಾರದು ನೋಡಾ|
ಕಂಗಳ ಪರೆ ಹರಿದು ತಿಂಗಳ ಸಿರಿ ಅಂಗವಿಸಿ, ಮಂಗಳ ಭಾವೈಕ್ಯವಾ–
ದಾಗಳೆ ಸಮಾಜದ ಅಂಗಳ ಬೆಳಗುವದು ನೋಡಾ|
ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ.

## ೬೦೦ ಗ್ರಂಥಗಳ ದಾರಿಯಲ್ಲಿ ೩೦೦ ಗ್ರಂಥಗಳ ಪ್ರಕಟನೆ: ಪ್ರಕಾಶನ

ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಶೈಕ್ಷಣಿಕ, ಸಾಮಾಜಿಕ, ವೈದ್ಯಕೀಯ ರಂಗಗಳಲ್ಲಿ ಅಹೋರಾತ್ರಿ ಪರಿಶ್ರಮಿಸಿ, ಅದರ ಜೊತೆಗೆ ಸಾಹಿತ್ಯಿಕ ಹಾಗೂ ಧಾರ್ಮಿಕ ಗ್ರಂಥಗಳನ್ನು ತಮ್ಮ ೨೫ ವರ್ಷಗಳ ಪೀಠಾರೋಹಣದ ಅವಧಿಯೊಳಗೆ ೨೭೫ ಗ್ರಂಥಗಳನ್ನು ಪ್ರಕಟಿಸಿ, ೨೫ ಗ್ರಂಥಗಳು ಮತ್ತೆ ಅಚ್ಚಿಗೆ ಸಿದ್ಧವಾಗಿ ತ್ರಿಶತಕ ಗ್ರಂಥೋತ್ಸವಕ್ಕೆ ಅಣಿಯಾಗುತ್ತಿರುವದು ನೋಡಿದರೆ ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ? ಒಂದು ಕೆಲಸವನ್ನು ಮಾಡುವದರಲ್ಲಿ ಮನುಷ್ಯನು ಸೋತು ಹೋಗುತ್ತಾನೆ. ಆದರೆ ಶ್ರೀ ಜಗದ್ಗುರುಗಳು ಇಷ್ಟೆಲ್ಲ ಕಾರ್ಯ ಹಮ್ಮಿ ಕೊಂಡು ಗ್ರಂಥ ಪ್ರಕಟಿಸುತ್ತಿರುವದು ಅತ್ಯಾಶ್ಚರ್ಯದ ಸಂಗತಿ, ಪವಾಡಸದೃಶ ಕಾರ್ಯವಾಗಿದೆ.

ಒಂದು ನಿಮಿಷವೂ ಸಹ ವಿರಾಮ ತೆಗೆದುಕೊಂಡಂತೆ ಕಾಣುವದಿಲ್ಲ. ಇವರ ಅದ್ಭುತ ಸಾಹಸ ನಾಡಿಗೆ ಬೆಳಕನ್ನು ನೀಡುತ್ತದೆ. ನಿದ್ರೆ-ನೀರಡಿಕೆಯಿಲ್ಲದೇ ಬಿಡುವಿಲ್ಲದ ಜೀವನದಲ್ಲಿ ನಿರಂತರ ತಪಸ್ವಿ ಜೀವನದಂತೆ ಕಾಲ ಕಳೆಯುತ್ತಿರುವದು ನಾಡಿನ ಭಾಗ್ಯ

ವಿಶೇಷ. ಬೇರೆ ವಿದ್ವಾಂಸರ ಗ್ರಂಥಗಳನ್ನು ಪ್ರಕಟಿಸುವದಲ್ಲದೇ ತಾವು ಸ್ವತಃ ೨೦–೨೫ ಗ್ರಂಥಗಳನ್ನು ಬರೆದು ನಾಡಿಗೆ ನೀಡಿದ್ದು ಅದ್ಭುತ ಸಾಹಸದ ಕಾರ್ಯವಾಗಿದೆ. ಬಹುಶಃ ನಾಡಿನ ಮಠಗಳಲ್ಲಿ ಇಷ್ಟು ಗ್ರಂಥಗಳನ್ನು ೨೫ ವರ್ಷಗಳಲ್ಲಿ ಪ್ರಕಟಿಸಿದ್ದು ನೋಡಿದರೆ ಶ್ರೀ ಜಗದ್ಗುರು ಮೂರುಸಾವಿರಮಠ ಒಂದೇ ಅಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಈ ಗ್ರಂಥಗಳ ಪ್ರಕಟನೆಗಾಗಿ ನಾಡಿನ ಹಲವಾರು ಸದ್ಭಕ್ತರ ಸಹಾಯ ಪಡೆದಿರುವರಲ್ಲದೇ ಶ್ರೀಮಠದ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ ಈ ಬೃಹತ್ ಸಂಸ್ಥೆಯಿಂದ ೫೦ ಲಕ್ಷ ರೂಪಾಯಿಯಷ್ಟು ಈಗಾಗಲೇ ಗ್ರಂಥ ಪ್ರಕಟನೆಗಾಗಿ ವಿನಿಯೋಗ ಮಾಡಿದ್ದು ನೋಡಿದರೆ ಎಂತಹ ಅದ್ಭುತ ಕಾರ್ಯವು ಎಂಬ ಅರಿವು ಬರದಿರದು. ಈ ಗ್ರಂಥಗಳು ನವೀನ ಹಾಗೂ ಪ್ರಾಚೀನತೆಯಿಂದೊಡಗೂಡಿವೆ. ಎನಿತೋ ಸಂಶೋಧನಾತ್ಮಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಕೇವಲ ಕನ್ನಡ ಭಾಷೆಯೊಂದಿರದೆ ಹಿಂದಿ, ಸಂಸ್ಕೃತ, ಇಂಗ್ಲಿಷ, ತೆಲಗು ಈ ಭಾಷೆಗಳಲ್ಲಿ ಶರಣ ಸಾಹಿತ್ಯ ಸಂಸ್ಕೃತಿ ಬೀರಬಲ್ಲ ಗ್ರಂಥಗಳು ಪ್ರಕಟವಾಗಿವೆ. ಹಳತು–ಹೊಸತುಗಳು ಕೂಡಿಕೊಂಡು, ಇವೆಲ್ಲವುಗಳನ್ನು ರೂಢಿಸಿಕೊಂಡು ಕ್ರಿಯಾತ್ಮಕ ರೀತಿಯಲ್ಲಿ ತೊಡಗಿ ಗ್ರಂಥ ಪ್ರಕಟನೆಯ ಕಾರ್ಯವನ್ನು ಯಶಸ್ವಿಗೊಳಿಸಿದ್ದಾರೆ. ಇದು ಇಷ್ಟು ರೀತಿಯಿಂದ ಬೆಳೆಯಲು ಶ್ರೀ ಜಗದ್ಗುರುಗಳು ಮೊದಲಿನಿಂದಲೂ ಸಾಹಿತ್ಯಿಕ ಜೀವನವನ್ನು ನಡೆಯಿಸಿಕೊಂಡು ಬಂದಿದ್ದರ ಪರಿಣಾಮ ವಾಗಿಯೇ ಈ ಸಾಹಿತ್ಯ ಕ್ಷೇತ್ರವು ಪ್ರಬುದ್ಧವಾಗಿ ಬೆಳೆದು ಬೆಳಗಿದೆ ಎಂದು ಹೇಳಬಹುದು. ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಹಚ್ಚಿದ ಸಸಿಯನ್ನು ಬೃಹತ್ಪ್ರಮಾಣವಾಗಿ ಬೆಳೆಯಿಸಿ, ಪ್ರತಿಯೊಬ್ಬರೂ ಅದರ ಫಲವನ್ನು ಸವಿಯುವಂತೆ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ಆದರ್ಶ ವ್ಯಕ್ತಿಗಳಾಗಿದ್ದಾರೆ. ಲಿಂಗೈಕ್ಯ ಜಗದ್ಗುರುಗಳ ಆತ್ಮಕ್ಕೆ ಶಾಂತಿ ನೀಡಿದ್ದಾರೆ. ಧರ್ಮ ಪ್ರಚಾರಕ ಮಂಡಳದ ಗಮ್ಯ ಗುರಿಯನ್ನು ಸಾಧಿಸಿ, ಜ್ಞಾನಾನುಭಾವ ಪ್ರದೀಪ ಪ್ರಕಾಶಿಸುವಂತಹ ಸಕ್ರಿಯಾಶೀಲತೆಯನ್ನು ಪಡೆದು ನಾಡಿನ ಸಾಹಿತ್ಯ ಕ್ಷೇತ್ರದ ಶಕ್ತಿಯನ್ನು ಬಲಪಡಿಸಿದ್ದಾರೆ. ಕನ್ನಡಮ್ಮನ ಸೇವೆಯನ್ನು ನಿಷ್ಠೆಯಿಂದ ಮಾಡಿದ್ದಾರೆ.

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ಹುಟ್ಟ ಮೊದಲು ಸಂಸ್ಥಾಪಿಸಿದವರು ಲಿಂಗೈಕ್ಯ ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳು ಮೂರುಸಾವಿರಮಠ ಅವರಾಗಿದ್ದಾರೆ. ೬೦ ವರ್ಷಕ್ಕಿಂತ ಪೂರ್ವದಲ್ಲಿ ಇದರ ಸ್ಥಾಪನೆಯಾಗಿ, ಮೆಲ್ಲಗೆ ಕಾರ್ಯ ಪ್ರಾರಂಭಿಸಿದಂತೆ ಕಾಣುತ್ತದೆ. ಮೊದಲಿಗೆ ಲಿಂ. ಜಗದ್ಗುರು ಗಂಗಾಧರ ಮಹಾಸ್ವಾಮಿಗಳ ಕಾಲದಲ್ಲಿ ೧) ವಿಶೇಷಾರ್ಥ ಪ್ರಕಾಶಿಕಾ (ಸಂಸ್ಕೃತ), ೨) ತಂತ್ರ ಸಂಗ್ರಹ, ೩) ಶಿವಮಂತ್ರ ಜಪವಿಧಿ ಈ ಮೂರು ಗ್ರಂಥಗಳನ್ನು ಅಂದು ಪ್ರಕಟಿಸಿ ಸಾಹಿತ್ಯ ಸಂವರ್ಧಿಸಲು ಉತ್ತೇಜನ ನೀಡಿದರು.

ನಂತರ ಲಿಂಗೈಕ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಅದಕ್ಕೆ ಮತ್ತಷ್ಟು ಚಾಲನೆ ಕೊಟ್ಟು, ತಮ್ಮ ಅಧಿಕಾರಾವಧಿಯಲ್ಲಿ ೧೫೦ಗ್ರಂಥಗಳನ್ನು ಪ್ರಕಟಿಸಿ ಸಾಹಿತ್ಯ ಶಕ್ತಿಯನ್ನು ಬೆಳೆಸಿದರು. ನಂತರ ಈಗಿನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ೨೭೫ ಗ್ರಂಥಗಳನ್ನು ತಮ್ಮ ೨೫ ವರ್ಷಗಳ ಅಧಿಕಾರಾವಧಿಯಲ್ಲಿ ಪ್ರಕಟಿಸಿದ್ದು ನೋಡಿದರೆ ಆತ್ಯಾಶ್ಚರ್ಯವೆನಿಸದಿರದು. ೬೦೦ ಗ್ರಂಥಗಳನ್ನು ಪ್ರಕಟಿಸಬೇಕೆಂಬುವ ಯೋಜನೆಯನ್ನು ಹಾಕಿಕೊಂಡಿರುವರಲ್ಲದೆ ಈ ರಜತ ಮಹೋತ್ಸವದ ನಂತರ ಭಾರತದ ಎಲ್ಲ ರಾಜ್ಯಗಳಲ್ಲಿಯೂ ಆ ಆ ರಾಜ್ಯದ ಭಾಷೆಯಲ್ಲಿ ಶರಣ ಸಂಸ್ಕೃತಿಯ ಗ್ರಂಥಗಳನ್ನು ಪ್ರಕಟಿಸಿ, ಅಲ್ಲಿ ಸಭೆ ಸಮ್ಮೇಲನ ಗಳನ್ನು ಸಂಸ್ಕೃತಿ ಪ್ರಸಾರೋಪನ್ಯಾಸ ಶಿಬಿರಗಳನ್ನು ಏರ್ಪಡಿಸುವ ಯೋಜನೆಯ ಸಿದ್ಧತೆಯನ್ನು ಮಾಡಲು ಡಾ|| ಪ್ರಭುಶಂಕರ ಮೈಸೂರ ಅವರಿಗೆ ಒಪ್ಪಿಸಿದ್ದಾರೆಂದು ತಿಳಿದುಬಂದಿದೆ. ಶ್ರೀ ಜಗದ್ಗುರುಗಳ ಬಹುದೂರದೃಷ್ಟಿಯನ್ನು ಎಲ್ಲರೂ ಮೆಚ್ಚುವಂತೆ ಮಾಡುತ್ತಿದ್ದಾರೆ. ಯಾರೇ ಬರಲಿ, ಅವರವರ ಧೋರಣೆಯಂತೆ ಕಾರ್ಯ ಮಾಡಲು, ಸಮಾಜದ ಸೇವೆ ಮಾಡಲು ಪ್ರೋತ್ಸಾಹ ನೀಡಲು ಅಗ್ರಗಣ್ಯ ರಾಗಿದ್ದಾರೆ. ಕನ್ನಡ ಭಾಷೆಗೆ ಮಹತ್ವ ಕೊಡುತ್ತ, ಉಳಿದ ಭಾಷೆಯ ಸಂಸ್ಕೃತಿ, ಸಾಹಿತ್ಯವು ಕನ್ನಡದಲ್ಲಿ ಬರಬೇಕೆಂಬುವ ಆಶೆಯನ್ನು ವ್ಯಕ್ತಮಾಡುತ್ತಿದ್ದಾರೆ.

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥ ಮಾಲೆ ಇದೊಂದು ಪ್ರಾಚೀನ ಗ್ರಂಥಮಾಲೆ. ಶ್ರೀ ಜಗದ್ಗುರುಗಳು ಇದಕ್ಕಾಗಿ ಹಗಲಿರುಳು ಪರಿಶ್ರಮಿಸಿ, ಪೋಷಿಸಿಕೊಂಡು ಹೋಗುತ್ತಿದ್ದಾರೆ. ಇದಲ್ಲದೆ ಶ್ರೀ ಮೂರುಸಾವಿರಮಠದ ಗ್ರಂಥಾಲಯದಲ್ಲಿರುವ ಎಲ್ಲ ತಾಡೋಲೆಗಳ ಲಿಸ್ಟ್ ಮಾಡಿ ಅದನ್ನು ಕ್ಯಾಟಲಾಗ ಮಾಡಿಸುವ ಮಹೋದ್ದೇಶದಿಂದ ಉತ್ತಮ ಸಂಶೋಧಕರಾದ ಗುಂಡಾ ಜೋಯಿಸ್ ಅವರನ್ನು ನಿಯಮಿಸಿಕೊಂಡು ಕಾರ್ಯಪ್ರವೃತ್ತರಾಗಿದ್ದಾರೆ. ಬಹುಶಃ ಇದು ಇನ್ನೊಂದು ವರ್ಷದೊಳಗಾಗಿ ೧೦೦೦ ಪುಟದ ಬೃಹತ್‌ಪ್ರಮಾಣದ ಕ್ಯಾಟಲಾಗ ಆಗುತ್ತದೆ. ಅದರಲ್ಲಿರುವ ಅಪ್ರಕಟಿತ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸುವ ಯೋಜನೆಯಲ್ಲಿದ್ದಾರೆ. ಇವುಗಳಿಗಾಗಿ ಪ್ರತ್ಯೇಕ ಸಂಶೋಧನ ಮಂದಿರವನ್ನು ಓಲೆಮಠದಲ್ಲಿ ನಿರ್ಮಾಣ ಮಾಡಿ, ಆಧುನಿಕ ರೀತಿಯಲ್ಲಿ ವ್ಯವಸ್ಥಿತಗೊಳಿಸುವದಕ್ಕಾಗಿ ರೂಪರೇಷೆ ತಯಾರ ಮಾಡಿದ್ದು ಶ್ರೀ ಜಗದ್ಗುರುಗಳ ಮುಂಧೋರಣೆಯ ದೃಷ್ಟಿ ಯಾಗಿದೆ. ಇದರಂತೆ ಎಲ್ಲ ಜಗದ್ಗುರುಗಳೂ, ಸ್ವಾಮಿಗಳೂ ಅನುಸರಿಸಿದರೆ ರಾಷ್ಟ್ರಕ್ಕೆ ದೊಡ್ಡ ಶಕ್ತಿ ಬಂದೀತು. ಈಗಾಗಲೇ ಕೆಲವರು ಇವರ ಅನುಕರಣೆ ಮಾಡಿ ಕಾರ್ಯಪ್ರವೃತ್ತರಾಗಿದ್ದಾರೆ. ಶ್ರೀ ಪೂಜ್ಯ ಜಗದ್ಗುರುಗಳಿಗೆ ಯಾರೇ ಮಾಡಲಿ ತಮ್ಮ ತಮ್ಮ ಭಾಗಗಳಲ್ಲಿ ಸಾಹಿತ್ಯ ಪ್ರಚಾರ ಮಾಡಿ ಬೆಳೆಸಿದರೆ ಸಾಕು, ಅದುವೇ ಅವರಿಗೆ ಸಂತೃಪ್ತಿ. ಇವರಿಗಿರುವಷ್ಟು ಪ್ರೋತ್ಸಾಹದ ಬುದ್ಧಿ, ವಿಶಾಲ

ಮನೋಭಾವನೆ ಸರ್ವರಿಗೂ ಬಂದರೆ ನಾಡಿಗೆ ಕಲ್ಯಾಣ. ಆ ದಾರಿಯನ್ನು ನಿರೀಕ್ಷಿಸಬಹುದೆ?

## ಪಟ್ಟ ಮಹೋತ್ಸವಗಳಿಗೆ ಗಟ್ಟಿ ತಳಹದಿ:

ಶ್ರೀ ಜಗದ್ಗುರು ಮಹಾಸನ್ನಿಧಿಯವರು ಹುಬ್ಬಳ್ಳಿಯ ಶ್ರೀ ಮೂರುಸಾವಿರ ಮಠಕ್ಕೆ ಪೀಠಾರೋಹಣವಾದ ನಂತರ ಕೇವಲ ತಮ್ಮ ಪೀಠವೊಂದನ್ನೇ ಬೆಳೆಸದೇ ಕರ್ನಾಟಕದಲ್ಲಿರುವ ಅನೇಕ ಮಠಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ್ದಾರೆ. ಇದಲ್ಲವೇ ಪಟ್ಟ ಮಹೋತ್ಸವಗಳಿಗೆ ಸಹಕಾರ–ಸಹಾಯ ನೀಡಿ, ಅವುಗಳಿಗೆ ಗಟ್ಟಿ ತಳಹದಿ ಹಾಕಿ ನಾಡಿನಲ್ಲಿ ಧಾರ್ಮಿಕ, ಶೈಕ್ಷಣಿಕ ಜಾಗೃತಿಗೆ ಕಾರಣರಾಗಿದ್ದಾರೆಂಬುದು ಯಾರೂ ಮರೆಯುವಂತಿಲ್ಲ. ತಮ್ಮ ಮಠವೊಂದನ್ನೇ ಬೆಳಸುತ್ತ ಸ್ವಾರ್ಥ ಸ್ವಪ್ರತಿಷ್ಠೆಯಲ್ಲಿ ಕುಳಿತಿದ್ದರೆ, ಇನ್ನುಳಿದ ಮಠಗಳು ಬೆಳಕಿಗೆ ಬರುತ್ತಿದ್ದಿಲ್ಲ. ಅನೇಕ ಮಠಗಳ ಪಟ್ಟ ಮಹೋತ್ಸವ ಮಾಡಲು ತಾವು ಸ್ವತಃ ಹೋಗಿ, ಆ ಊರಿನ ಅನೇಕ ಸಮಸ್ಯೆಗಳನ್ನು ಬಿಡಿಸಿ, ಮಹೋತ್ಸವಕ್ಕಾಗಿ ನಿಧಿ ಸಂಗ್ರಹಿಸಿ ಪಟ್ಟಾಭಿಷೇಕ ಮಾಡಿದ ಮಠಗಳು ಸಾಕಷ್ಟಿವೆ. ಅವುಗಳಿಗೆಲ್ಲ ಶ್ರೀಕಾರ ಹಾಕಿ ಅವರ ಧಾರ್ಮಿಕ ಜಾಗೃತಿಗೆ ಕಾರಣರೆಂಬುದು 'ಕೆಲವರು' ಮರೆತಿರಬಹುದು. ಆದರೆ ಪ್ರಾರಂಭದಲ್ಲಿ ಆದ ನೋವು–ನಲಿವು ನೆನಸಿದವರಿಗೆ, ನೋಡಿದವರಿಗೆ ಅದರ ಅರ್ಥವಾಗುತ್ತದೆ. ಸಿಂಹಾವಲೋಕನ ಮಾಡಿದಾಗ ಅದರ ಅರಿವು ಹೊಳೆಯುತ್ತದೆ. ಶ್ರೀ ಜಗದ್ಗುರುಗಳು ವ್ಯಕ್ತಿಪ್ರತಿಷ್ಠೆಗಿಂತ ಸಮಾಜದ ಒಳಿತಿಗಾಗಿ ಹಲವು ಮಠಾಧೀಶರಿಗೆ ಪ್ರೋತ್ಸಾಹ ನೀಡಿ, ತಿಳಿವಳಿಕೆ ನೀಡಿ ದುಡಿದುದರ ಫಲವೇ ಇಂದು ನಾಡಿನಲ್ಲಿ ಅನೇಕ ಜನ ಸ್ವಾಮಿಗಳು ಎದ್ದುಕಾಣುತ್ತಿದ್ದಾರೆ. ಶ್ರೀ ಜಗದ್ಗುರು ಸನ್ನಿಧಿಯವರು ಪೂರ್ವಭಾವಿಯಾಗಿ ಪ್ರತಿಯೊಂದು ದೃಷ್ಟಿಯಲ್ಲಿಯೂ ದುಡಿದು, ಹಿತಚಿಂತನೆ ಮಾಡಿ ಸಮಾಜಕ್ಕೆ ಬಹುಮುಖ ಸೇವೆಯನ್ನು ಸಲ್ಲಿಸಿದ್ದು ಮರೆಯದಂತಾಗಿದೆ. ಶ್ರೀ ಜಗದ್ಗುರುಗಳು ಕೇವಲ ಸ್ವಪ್ರತಿಷ್ಠೆಯಲ್ಲಿ ಮನಸ್ಸು ಹಾಕಿ ತಮ್ಮಷ್ಟಕ್ಕೆ ತಾವೇ ಇದ್ದರೆ ನಾಡಿನಲ್ಲಿ ಇಷ್ಟೆಲ್ಲ ಸ್ವಾಮಿಗಳು ಕಾರ್ಯ ಮಾಡಲು ಮುಂದೆ ಬರುತ್ತಿದ್ದಿಲ್ಲ. ತಮ್ಮ ಮಠ ಬೆಳೆದಂತೆ ನಾಡಿನ ಎಲ್ಲ ಮಠಗಳೂ ಬೆಳೆಯಬೇಕು, ಬೆಳಗಬೇಕೆಂಬುವ ವಿಶಾಲ ಮನೋಭಾವನೆ ಇವರಲ್ಲಿದ್ದಷ್ಟು ಅನ್ಯರಲ್ಲಿ ಕಾಣುವದು ದುರ್ಲಭ. ಶ್ರೀ ಜಗದ್ಗುರುಗಳು ಸ್ವಾರ್ಥತ್ಯಾಗ ಮಾಡಿ ಅವರೂ ತಮ್ಮಂತೆ ಕಾಯಕ ನಿಷ್ಠೆಯುಳ್ಳವರಾಗಲಿ ಎಂಬ ಚಿಂತೆಯೇ ಇವರಿಗಿದೆ ಎನ್ನುವದನ್ನು ಹತ್ತಿರದಿಂದ ಕಂಡಾಗವರಿಗೆ ಅರ್ಥವಾಗದಿರದು. ತಮ್ಮ ಕಾರ್ಯ ಮುಗಿಸಿದೊಡನೆಯೇ, ಸ್ವಾರ್ಥ ತೀರಿದೊಡನೆಯೇ ಎನಿತೋ ಜನರು ಕೈಬಿಟ್ಟವರೂ ಆಗಿದ್ದಾರೆ; ನೋವು ಕೊಟ್ಟವರೂ ಆಗಿದ್ದಾರೆ. ಅವೆಲ್ಲ ಕಷ್ಟ–ನಷ್ಟವನ್ನು ಒಳಗೇ ಸಹಿಸಿಕೊಂಡು, ಎಲ್ಲರ ಮನೋಭಾವನೆಗಳನ್ನು

ಅರಿತುಕೊಂಡು ಎಲ್ಲರ ಆಸರೆಗಂಬವಾಗಿದ್ದುದನ್ನು ಸ್ಮರಿಸುವದು ಸಮಾಜದ ಆದ್ಯ ಕರ್ತವ್ಯ. ಮೇಲಿಂದ ಮೇಲೆ ಶ್ರೀ ಜಗದ್ಗುರುಗಳು 'ನಮ್ಮ ಕರ್ತವ್ಯವನು ನಿಷ್ಠೆಯಿಂದ ಮನಮೆಚ್ಚುವಂತೆ, ದೇವರು ಮೆಚ್ಚುವಂತೆ ಮಾಡಿದರೆ ಸಾಕು. ಅದೇ ಸಮಾಜಕ್ಕೆ ಸದುಪಯೋಗ. ಸ್ತುತಿ–ನಿಂದೆಗಳಿಗೆ ಬಲಿಬೀಳದೆ, ಮತ್ತೊಬ್ಬರ ಕಾರ್ಯಕ್ಕೆ ಅಡ್ಡಿಯಾಗದೇ, ಅಸೂಯೆ ಪಡದೇ ಸಮಾಜ ಸೇವೆ ಮಾಡುತ್ತಿದ್ದರೆ ಅದುವೇ ನಿಜವಾದುದು.' ಈ ರೀತಿ ಅನ್ನುತ್ತಿರುವದು ಇದೀಗ ನಮ್ಮ ಸ್ಮರಣೆಗೆ ಬರುತ್ತದೆ. ಅವರು ಅಪ್ಪಣೆಕೊಡಿಸಿದಂತೆ ಮಾಡಿ ತೋರಿಸಿದ್ದಾರೆ, ತೋರಿಸುತ್ತಿದ್ದಾರೆ. ಅವರಿಗಾದ ಕಷ್ಟವನ್ನು ನೋಡಿದರೆ ಎಂತಹ ವ್ಯಕ್ತಿಗೂ ದುಃಖವಾಗದಿರದು. ಅವರ ಮನೋಧೈರ್ಯ, ಸಾಹಸ ಮೆಚ್ಚುವಂತಹದು. ಮೇಲೆ ನೋಡಿದರೆ ಬಹಳ ಮೃದು ಕಂಡತೆ ಕಂಡರೂ ಅವರ ಛಲ, ಸಾಹಸ, ಬಿಗಿತವನ್ನು ನೋಡಿದರೆ ಸಂಸ್ಮರಣೀಯವಾದುದು.

ಬಹುಶಃ ನಾಡಿನಲ್ಲಿ ಯಾವ ಜಗದ್ಗುರುಗಳೂ ಸಹ ಮಠಾಧೀಶರ ಪಟ್ಟಾಭಿಷೇಕಕ್ಕಾಗಿ ಮನೆಮನೆಗೆ ಹೋಗಿ ಭಿಕ್ಷೆ ಬೇಡಿ ಶ್ರೀಗಳವರಂತೆ ಪಟ್ಟಾಭಿಷೇಕ ಮಾಡಿಸಿ ವಿಶಾಲ ಮನೋಭಾವನೆ ತೋರಿದವರು ಕಂಡುಬರುತ್ತಿಲ್ಲ. ಆ ಕೆಲಸವನ್ನು ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಕಾರ್ಯರೂಪದಲ್ಲಿ ಮಾಡಿ ತೋರಿಸಿದ್ದು ಪ್ರತ್ಯಕ್ಷ ನಿದರ್ಶನವಿದೆ. ಪ್ರತಿಯೊಬ್ಬರಿಗೂ ಮಾರ್ಗದರ್ಶನ ಮಾಡಿದ್ದಾರೆ. ಇಂತಹ ವ್ಯಕ್ತಿತ್ವ ಸಾಧಿಸಿದ್ದಾರೆ. ಅವರಲ್ಲಿ ಕೇವಲ ಮಾನವೀಯತೆಯ ಅನುಕಂಪವನ್ನು ಕಾಣುತ್ತೇವೆ. ಕೆಲವರು ಪೀಠಾರೋಹಣವಾದ ಕೂಡಲೇ ಸ್ವಪ್ರತಿಷ್ಠೆಯ ಪೆಡಂಭೂತವನ್ನೇ ಬೆನ್ನಿಗೆ ಹಚ್ಚಿಕೊಳ್ಳುತ್ತಿದ್ದಾರೆ. ಅದರ ಲವಲೇಶವು ಎನಿತೂ ಇವರಲ್ಲಿ ಕಾಣದಿರುವದೇ ಮೂರುಸಾವಿರಮಠದ ಶ್ರೀ ಜಗದ್ಗುರುಗಳ ವೈಶಿಷ್ಟ್ಯವಾಗಿದೆ. ನಾಡಿನ ಅನೇಕ ಮಠಗಳ ಪಟ್ಟಾಭಿಷೇಕಕ್ಕೆ ಗಟ್ಟಿ ತಳಹದಿಯಾಗಿ ಕಾರ್ಯಗೈದಿದ್ದಾರೆ, ಶೋಭೆ ನೀಡಿದ್ದಾರೆ.

ಈಗಾಗಲೇ ಮೊನ್ನೆಯೇ ಆಗಿರುವ ಚಿತ್ತರಗಿ-ಇಲಕಲ್ಲ ಮಹಾಂತಸ್ವಾಮಿಗಳ ಪಟ್ಟಾಭಿಷೇಕದ ದ್ವಾದಶ ವಾರ್ಷಿಕೋತ್ಸವ ಸಮಾರಂಭಕ್ಕಾಗಿ ಒಂದು ತಿಂಗಳು ಶ್ರೀ ಜಗದ್ಗುರುಗಳವರು ಇಲಕಲ್ಲಿನಲ್ಲಿದ್ದು, ಅದಕ್ಕಾಗಿ ದುಡಿದು, ಭಕ್ತರಿಗೆ ಪ್ರೇರಣೆ ನೀಡಿ ಒಂದು ಚೈತನ್ಯಶಕ್ತಿಯಾಗಿ ಕಾರ್ಯ ಮಾಡಿದ್ದು ಇಂದಿಗೂ ಅಚ್ಚ ಹಸಿರಾಗಿ ಕಾಣುತ್ತಿದೆ. ಏನೇ ಮಾಡಲಿ ನಿಷ್ಠೆಯಿಂದ, ಮಾನವೀಯತೆಯಿಂದ ಮಾಡುತ್ತಿದ್ದಾರೆಂಬುದಕ್ಕೆ ಇದುವೇ ನಿದರ್ಶನ. ಇದರಂತೆ ಗದಗ, ಹೊಸಪೇಟೆ, ಅನಂತಪುರಂ, ಕೊಣ್ಣೂರ, ನಿಡಗುಂದಿ, ಕೆಳದಿ, ದುಧನಿ, ಬೈಲಹೊಂಗಲ, ಖೇಳಗಿ, ಗುಲಬುರ್ಗಾ, ಹುಲಸೂರ ಇನ್ನೂ ಮುಂತಾದ ಪೀಠಗಳ ಪಟ್ಟಾಭಿಷೇಕಕ್ಕಾಗಿ ಪ್ರೇರಣೆ

ನೀಡಿ ಕಾರ್ಯ ಮಾಡಿ ಯಶಸ್ವಿಗೊಳಿಸಿದ್ದು ಇವರ ಮುಂಧೋರಣೆಯ, ಭಾವೈಕ್ಯದ, ವಿಶಾಲತೆಯ ಪ್ರತೀಕವೆಂದರೆ ತಪ್ಪಾಗಲಿಕ್ಕಿಲ್ಲ. ಒಳ್ಳೆಯ ಕೆಲಸಗಳಿಗಾಗಿ ತಮ್ಮ ಪೀಠದ ಘನತೆಯನ್ನು ನೋಡದೆ ಹೃದಯವಂತಿಕೆಯಿಂದ ಕೆಲಸ ಮಾಡುತ್ತಿರುವದು ನಾಡಿಗೇ ಭೂಷಣಪ್ರಾಯವಾಗಿದೆ, ಮಾರ್ಗದರ್ಶಕವಾಗಿದೆ. ಈ ರೀತಿ ಎಲ್ಲ ಸ್ವಾಮಿಗಳು ಅನುಸರಿಸಿದರೆ ರಾಷ್ಟ್ರಕ್ಕೇ ಚೈತನ್ಯಶಕ್ತಿ ಬಂದಂತೆ. ಶ್ರೀ ಜಗದ್ಗುರುಗಳಿಗೆ ಕೃತಕತೆ ಎಂದರೆ ಸರಿಬರದು. ನಡೆದಂತೆ ನುಡಿ, ನುಡಿದಂತೆ ನಡೆ ಇದ್ದರೆ ಸಾಕು ಎಂತಹ ವ್ಯಕ್ತಿಗಳನ್ನಾದರೂ ಮೇಲಕ್ಕೆ ಎತ್ತುತ್ತಾರೆ. ಅವರ ಅಂತರಂಗವನ್ನು ಅರ್ಥಮಾಡಿಕೊಳ್ಳದೆ ಎಷ್ಟೋ ಜನರು ಕಾಡುತ್ತಿರುವದನ್ನು ನೋಡಿ ಮರಗುವರಲ್ಲದೇ, ಅವರಿಗೆ ಒಳ್ಳೆಯ ಬುದ್ಧಿಯನ್ನು ಕೊಡಲು ದೇವರನ್ನೇ ಪ್ರಾರ್ಥಿಸುತ್ತಿದ್ದಾರೆಂದಮೇಲೆ ಇವರ ವ್ಯಕ್ತಿತ್ವ ಸಾಧನೆ ಎಂತಹದೆಂಬುದು ಅರಿಯದಿರದು. ಕಾಯಕವಿಲ್ಲದೆ ಬದುಕಲು ಹಕ್ಕಿಲ್ಲವೆಂಬ ಶರಣರ ನುಡಿಯಂತೆ ಶ್ರೀ ಜಗದ್ಗುರುಗಳು ನಡೆದು ತೋರಿಸಿಕೊಟ್ಟಿದ್ದಾರೆ.

## ಉದ್ಯೋಗಸ್ಥ ಮಹಿಳೆಯರಿಗಾಗಿ ವಸತಿಗೃಹ:

ಹುಬ್ಬಳ್ಳಿ ಮಹಾನಗರವು ಕರ್ನಾಟಕದಲ್ಲಿ ಎರಡನೆಯ ದೊಡ್ಡ ಪಟ್ಟಣ. ಜನವಸತಿ ದಿನೇ ದಿನೇ ಹೆಚ್ಚುತ್ತ ನಡೆದಿದೆ. ಶಾಲೆ, ಕಾಲೇಜು, ವ್ಯಾಪಾರೋದ್ಯಮ, ಬ್ಯಾಂಕು ಮುಂತಾದವುಗಳು ಬೆಳೆಯುತ್ತ ನಡೆದಿವೆ, ಹೊರಗಿನ ಊರಿಂದ ಬಂದು ಹುಬ್ಬಳ್ಳಿಯಲ್ಲಿ ವಿವಿಧೆಡೆಗಳಲ್ಲಿ ಉದ್ಯೋಗ ಕೈಗೊಂಡ ಮಹಿಳೆಯರಿಗೆ ವಾಸಿಸಲು ವಸತಿಗೃಹಗಳು ಇಲ್ಲದ್ದನ್ನು ಕಂಡು ಶ್ರೀ ಜಗದ್ಗುರುಗಳು, ಜಗದ್ಗುರು ಮೂರುಸಾವಿರಮಠದ ವಿದ್ಯಾವರ್ಧಕ ಸಂಘದಚೇರಮನ್ನರಾದ ಶ್ರೀ ವೀರಚಂದ ನಾರಾಣಜಿ ಕಾನಜಿ ಅವರೊಡನೆ ಹಾಗೂ ಇನ್ನುಳಿದ ಸದಸ್ಯರೊಡನೆ ಹುಬ್ಬಳ್ಳಿಯಲ್ಲಿ ಸುಶಿಕ್ಷಿತ ಉದ್ಯೋಗಸ್ಥ ಮಹಿಳೆಯರಿಗೆ ವಸತಿಗೃಹವನ್ನು ಕಟ್ಟಲು ವಿಚಾರಿಸಿ, ನಿರ್ಣಯವಾದ ನಂತರ ಅದಕ್ಕೊಂದು ಕಮಿಟಿ ಮಾಡಿ ಹುಬ್ಬಳ್ಳಿಯಲ್ಲಿ ವಸತಿಗೃಹವನ್ನು ಕಟ್ಟಿಸುವದು ನಿರ್ಧಾರವಾಯಿತು.

ಉದ್ಯೋಗಸ್ಥ ಮಹಿಳೆಯರಿಗಾಗಿ ವಸತಿಗೃಹ ಕಟ್ಟಿಸುವವರಿಗೆ ಕೇಂದ್ರ ಹಾಗೂ ರಾಜ್ಯ ಸರಕಾರದಿಂದ ಧನ ಸಹಾಯವೂ ದೊರೆಯುತ್ತದೆ ಎಂಬುದನ್ನು ತಿಳಿದುಕೊಂಡು ಅರ್ಜಿ ಸಲ್ಲಿಸಲಾಯಿತು. ಹೆಣ್ಣುಮಕ್ಕಳಿಗೆ ಅನುಕೂಲವಿರುವ ಸ್ಥಳವೊಂದು ಬೇಕಾಗಿತ್ತು. ಅದಕ್ಕಾಗಿ ವಿಚಾರಿಸುತ್ತಿರುವ ಸಂದರ್ಭದಲ್ಲಿ ಬೆಂಡಿಗೇರಿ ಓಣಿಯಲ್ಲಿರುವ ಶ್ರೀಮತಿ ಚನ್ನಬಸವ್ವ ಸಿದ್ಧಪ್ಪ ಬೆಂಡಿಗೇರಿ ಅವರು ವಾಸಿಸುವ ಮನೆಯನ್ನು ಶ್ರೀ ಜಗದ್ಗುರುಗಳವರ ಸನ್ನಿಧಿಗೆ ಬರೆದುಕೊಟ್ಟರು. ಅದೇ ಸ್ಥಾನ

ದಲ್ಲಿ ಇದೀಗ ಸುಮಾರು ಆರು ಲಕ್ಷ ರೂಪಾಯಿ ವೆಚ್ಚದಿಂದ ಕಟ್ಟಲಾಗುತ್ತಿರುವ ಉದ್ಯೋಗಸ್ಥ ಮಹಿಳೆಯರ ವಸತಿಗೃಹವು ಮೂರು ಅಂತಸ್ತುಗಳಾಗಿ ಅರ್ಧದಷ್ಟು ಮುಗಿದಿದೆ. ಇನ್ನು ಕೆಲವೇ ತಿಂಗಳುಗಳಲ್ಲಿ ಅದು ಉಪಯೋಗಕ್ಕಾಗಿ ಅನುಕೂಲ ವಾಗುವದು. ಈ ಸ್ಥಾನವನ್ನು ಶ್ರೀಮತಿ ಚನ್ನಬಸಮ್ಮ ಬೆಂಡಿಗೇರಿ ಅವರು ಕೊಟ್ಟಿ ರುವದರಿಂದ ಅವರ ಹೆಸರನ್ನೇ ಈ ಉದ್ಯೋಗಸ್ಥ ಮಹಿಳಾ ವಸತಿಗೃಹಕ್ಕೆ ಇಟ್ಟು ಶ್ರೀ ಜಗದ್ಗುರುಗಳು ಉದಾರತೆ ತೋರಿಸಿದ್ದಾರೆ. ಇದರಿಂದ ಹುಬ್ಬಳ್ಳಿಯಲ್ಲಿ ರುವ ಬೇರೆ ಊರುಗಳ ಉದ್ಯೋಗಸ್ಥ ಮಹಿಳೆಯರ ವಸತಿಗೆ ವರದಾನವಾದಂತಾ ಗುವದು. ಇದೊಂದು ಮೂರುಸಾವಿರಮಠದ ಶ್ರೀ ಜಗದ್ಗುರುಗಳವರ ಸಾಹಸದ ಕಾರ್ಯವಾಗಿದೆ.

## "ಚೌಲಗುಡ್ಡ"ಕ್ಕೆ ಬನ್ನಿ: ಶಾಖಾ ಮೂರುಸಾವಿರಮಠ ನೋಡಿ

ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠಕ್ಕೆ ಸಹಸ್ರಾರು ಶಾಖಾ ಮಠಗಳಿದ್ದು ಅವುಗಳಲ್ಲಿ ಎಷ್ಟೋ ಬೇರೆಯವರ ಪಾಲಾಗಿ ಹೋಗಿವೆ, ಕೆಲವು ಹಾಳಾಗಿ ಹೋಗಿ ನೆಲಸಮವಾಗಿ ಬಿಟ್ಟಿವೆ. ಕಾರವಾರ ಜಿಲ್ಲೆಯಲ್ಲಿ ಬಹಳ ಮಠಗಳು ಇದ್ದು ಕಾರವಾರದಲ್ಲಿಯೇ ೫೦ ಎಕರೆಯಷ್ಟು ಸ್ಥಳವಿದ್ದುದು ಅಲ್ಲಿನ ವೃದ್ಧ ಜನರ ಅಭಿಪ್ರಾಯವಿರುವದನ್ನು ಅಲ್ಲಿಗೆ ಹೋದವರು ತಿಳಿದುಕೊಂಡು ಬಂದಿದ್ದಾರೆ. ಮಠ ಗಳ ಅಂಶವು ಅಲ್ಲಿ ತಿಳಿಯದಷ್ಟು ನಿರ್ನಾಮವಾಗಿವೆ. ಸಮುದ್ರ ದಂಡೆಯಲ್ಲಿದ್ದವು ಗಳು ಸಮುದ್ರದ ಪಾಲಾಗಿವೆ. ಕರ್ನಾಟಕದಲ್ಲಿ ಸಾಕಷ್ಟು ಮಠಗಳು ಹಾಳಾಗಿ ಹೋಗಿರುವದನ್ನು ಹುಡುಕಿ ತೆಗೆಯಲು ಶತಮಾನಗಳೇ ಬೇಕಾಗಬಹುದು. ಶ್ರೀಮಠದಲ್ಲಿ ದಾಖಲೆಯಿರುವದನ್ನು ನೋಡಿ, ಅವು ಇದ್ದ ಸ್ಥಳಕ್ಕೆ ಹೋದರೆ ಬೇರೆಯವರ ಆಧೀನಕ್ಕೊಳಪಟ್ಟು ಗುರುತೇ ಸಿಗದಂತೆ ಆಗಿಹೋಗಿವೆ. ನೋಡಿದ ಜನರ ಆಡುಮಾತಿನಿಂದಲೇ ಅಲ್ಲಿ ಮಠವಿತ್ತೆನ್ನುವಷ್ಟರಮಟ್ಟಿಗೆ ಪರಿಸ್ಥಿತಿ ಇದೆ. ಮೊದಲಿಂದಲೂ ಅವುಗಳನ್ನು ಐತಿಹಾಸಿಕ ಸ್ಥಳಗಳಂತೆ ಹಾಗೂ ಅವುಗಳಿಗೆ ಸಂಬಂಧಪಟ್ಟ ದಾಖಲೆಗಳನ್ನು ಸರಿಯಾಗಿ ಕಾಪಾಡಿಕೊಂಡು ಬಂದಿಲ್ಲವಾದ್ದರಿಂದ ಈ ಗತಿಯಾದಂತೆ ತೋರುತ್ತದೆ. ಕಾರವಾರ ಜಿಲ್ಲೆಯ ಕೆಲವು ಸ್ಥಳಗಳಲ್ಲಿ ಮಠ ಗಳಿದ್ದವುಗಳು ಶಾಲೆ-ಕಾಲೇಜುಗಳಾಗಿ ಬಿಟ್ಟಿವೆ. ಆ ಸ್ಥಳಗಳನ್ನು ನೋಡಿಕೊಳ್ಳಲು ಯಾರೂ ಇಲ್ಲದ್ದರಿಂದಲೋ ಏನೋ ಸರ್ಕಾರವು ತನ್ನ ತಾಬಾ ತೆಗೆದುಕೊಂಡಂತೆ ಕಾಣುತ್ತದೆ. ಆದರೂ ಇಂದಿನ ಶ್ರೀ ಜಗದ್ಗುರುಗಳು ಸಾಧ್ಯವಾದಷ್ಟುಮಟ್ಟಿಗೆ ಪ್ರಯತ್ನಮಾಡಿ, ಜೀರ್ಣವಿದ್ದ ಮಠಗಳು ದೊರೆತಲ್ಲಿ ಶ್ರೀಮಠದಿಂದ ಸಹಾಯ ಮಾಡಿ ಅವುಗಳನ್ನು ಪುನಶ್ಚೇತನಗೊಳಿಸುತ್ತಿದ್ದಾರೆ. ಎಷ್ಟೋ ಜನ ಸಂಶೋಧಕರು ಈ ಕೆಲಸವನ್ನು ಪ್ರಾಧಾನ್ಯವಾಗಿಟ್ಟುಕೊಂಡು ಶ್ರೀ ಜಗದ್ಗುರುಗಳಿಗೆ ತಿಳಿಸಿದ್ದಾರೆ. ಆದರೆ ಶ್ರೀ ಜಗದ್ಗುರುಗಳು ಇದನ್ನೇ ಮುಖ್ಯವಾಗಿಟ್ಟುಕೊಂಡು ಹೋದರೆ ಇದೇ

ಕೆಲಸಕ್ಕೆ ಎಷ್ಟೋ ತಲೆಮಾರುಗಳು ಬೇಕಾಗುವವು. ಆ ಮಠಗಳ ಜಾಗೆಯನ್ನಾಶ್ರಯಿಸಿದ ವ್ಯಕ್ತಿಗಳು ಬಿಟ್ಟುಕೊಡಲು ತಯಾರಿಲ್ಲ. ಬಿಡಿಸಲೇಬೇಕೆಂದರೆ ಕೋರ್ಟ ಕಚೇರಿಗಳಿಗೆ ಅಲೆಯಬೇಕು. ಹೀಗಾದಲ್ಲಿ ೨೦–೩೦ ವರ್ಷಗಳೇ ಆಗಬಹುದು. ಅದೇ ಉದ್ಯೋಗ ಮಾಡುತ್ತ ಹೋದರೆ ಸಾಮಾಜಿಕ, ಶೈಕ್ಷಣಿಕ ಸೇವೆಗೆ ಅಡ್ಡಿಯಾಗುವದೆಂದು ತಿಳಿದು ಅನುಕೂಲವಿದ್ದಷ್ಟು ಕಾರ್ಯ ಕೈಗೊಂಡು ಮಠಗಳನ್ನುಳಿಸುವ ಪ್ರಯತ್ನ ಮಾಡುವೆವೆಂದು ಶ್ರೀ ಸನ್ನಿಧಿಯವರು ಅಪ್ಪಣೆಕೊಡಿಸುತ್ತಿದ್ದಾರೆ. ಈಗಾಗಲೇ ಎಷ್ಟೋ ಶಾಖಾ ಮೂರುಸಾವಿರಮಠಗಳನ್ನು ತಮ್ಮಂತೆ ಮಾಡಿಕೊಂಡು ಕಾಯ್ದೆ ಕಾನೂನಿನ ವಿರುದ್ಧ ಮೂಲ ಮೂರುಸಾವಿರಮಠದೊಡನೆ ಹೋರಾಡುತ್ತಿರುವದೂ ಕಂಡುಬಂದಿದೆ. ಆದರೂ ಶ್ರೀ ಜಗದ್ಗುರುಗಳು ಬಹಳ ಪ್ರಯತ್ನವಾದಿಗಳಾಗಿದ್ದು, ಇದ್ದವುಗಳನ್ನಾದರೂ ಉಳಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡುತ್ತಿರುವದು ಸಂತೋಷದಾಯಕವಾಗಿದೆ. ಶ್ರೀ ಜಗದ್ಗುರುಗಳು ಈ ರೀತಿ ಅಭಿಪ್ರಾಯಪಡುತ್ತಾರೆ–'ಹುಬ್ಬಳ್ಳಿ ಮೂರುಸಾವಿರಮಠದ ಶಾಖಾ ಮೂರುಸಾವಿರಮಠಗಳನ್ನು ಯಾರೇ ಉಪಭೋಗ ಮಾಡುತ್ತಿರಲಿ, ಅವು ಸಾರ್ವಜನಿಕರಿಗೆ ಉಪಯೋಗವಾಗಬೇಕು ಮತ್ತು ಹುಬ್ಬಳ್ಳಿ ಮೂಲ ಮೂರುಸಾವಿರಮಠಕ್ಕೆ ಶಾಖೆಗಳಾಗಿದ್ದು, ಅವು ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ಮಾಡಿದರೆ ಸಾಕು' ಎನ್ನುತ್ತಾರೆ. ಹಿಂದಿನ ತಪಸ್ವಿಗಳು ರೂಪಿಸಿದ್ದನ್ನು ಅಳಿಸಬಾರದೆಂಬುದೇ ಶ್ರೀ ಜಗದ್ಗುರುಗಳವರ ಪ್ರಬಲವಾದ ಇಚ್ಛೆಯಾಗಿದೆ. ಆ ರೀತಿ ಕೆಲವು ಶಾಖಾಮಠಗಳು ಕೆಲಸ ಮಾಡುತ್ತಿರುವದು ಶ್ರೀ ಜಗದ್ಗುರುಗಳಿಗೆ ತೃಪ್ತಿ ತಂದಿದೆ. ಕೆಲವು ಮಠಗಳಿಂದ ಅತೃಪ್ತಿಯೂ ಆಗಿದೆ. ಆದರೂ ಸಾಧ್ಯವಿದ್ದಷ್ಟು ಮಠದ ಸೊತ್ತು ಸಮಾಜಕ್ಕಾಗಿಯೇ ಉಪಯೋಗವಾಗಬೇಕೆಂಬುದೇ ಅವರ ಹಿರಿಯಾಸೆ.

ಹೀಗಿರುತ್ತಿರುವಾಗ ಒಂದು ದಿನ ಶ್ರೀ ಜಗದ್ಗುರುಗಳಿಗೆ ಶ್ರೀ ಕಾಡಪ್ಪನವರು ನಿರಂಜನಶೆಟ್ಟರು ಚೌಲಗುಡ್ಡದಲ್ಲಿ ಒಂದು ಶಾಖಾ ಮೂರುಸಾವಿರಮಠವಿದೆ. ಅಲ್ಲಿ ಗುರುಸಿದ್ಧೇಶ್ವರ ಗದ್ದಿಗೆಯೆಂದು ಪ್ರಸಿದ್ಧವಾದ ಒಂದು ಗದ್ದಿಗೆ ಇದೆ. ಅದಕ್ಕೆ ಎಲ್ಲ ಸಮಾಜದವರೂ ನಡೆದುಕೊಳ್ಳುತ್ತಾರೆ. ಬಹಳ ಜಾಗೃತ ಸ್ಥಾನವದು. ಅದರ ಜೀರ್ಣೋದ್ಧಾರಕ್ಕೆ ಮನಸ್ಸು ಹಾಕಬೇಕೆಂದು ಕೇಳಿಕೊಂಡರು. ಪ್ರತಿವರ್ಷ ಶ್ರೀ ಜಗದ್ಗುರುಗಳವರನ್ನು, ಹುಬ್ಬಳ್ಳಿಯ ಹೊಸಮಠ, ರಾಯನಾಳದ ವಿರಕ್ತಮಠ ಶ್ರೀಗಳನ್ನು ಕರೆಯಿಸಿ ಆರಾಧನೆ ಮಾಡಿಸಿ, ಜಾತ್ರೆಯನ್ನು ವೈಭವದಿಂದ ಮಾಡಿಸುತ್ತಿರುವ ಅವರ ಅಭಿಮಾನವನ್ನು ಶ್ರೀ ಜಗದ್ಗುರುಗಳು ನೋಡಿ ಆನಂದಪಟ್ಟು ಆ ಶಾಖಾಮಠದ ಜೀರ್ಣೋದ್ಧಾರ ಮಾಡಲಿಕ್ಕೆ ೧೫ ಸಾವಿರ ರೂಪಾಯಿಗಳನ್ನು ಕೊಟ್ಟು ಆಶೀರ್ವಾದ ಮಾಡಿದರು. ಶ್ರೀ ಕಾಡಪ್ಪಶೆಟ್ಟರೂ ಸಹ ಅಲ್ಲಲ್ಲಿ ಭಕ್ತರ ಸಹಾಯ ಪಡೆದು ೬೦–೭೦ ಸಾವಿರ ರೂಪಾಯಿಗಳ ಹಣ ಕೂಡಿಸಿ ಆ ಮಠವನ್ನು

ಸುಂದರಗೊಳಿಸಿದ್ದಾರೆ. ಅವರ ಸಾಹಸ ಮೆಚ್ಚುವಂತಹದು. ಮಳೆ-ಬಿಸಿಲು ಎನ್ನದೇ ಅದಕ್ಕಾಗಿ ದುಡಿದು ಶ್ರೀ ಕಾಡಪ್ಪಶೆಟ್ಟರು ತಮ್ಮ ಜೀವನ ಸಾರ್ಥಕಗೊಳಿಸಿದ್ದಾರಷ್ಟೇ ಅಲ್ಲದೆ ಒಂದು ಪ್ರಾಚೀನ ಮಠವನ್ನು ಉಳಿಸಿ, ಸತ್‌ಪರಂಪರೆಯನ್ನು ಬೆಳೆಸಿದ ಕೀರ್ತಿ ಅವರದು. ಇನ್ನು ಕೆಲವು ದಿನಗಳಲ್ಲಿ ಅದರ ಉದ್ಘಾಟನೆ ಆಗುವದಿದೆ. ಇದರಂತೆಯೇ ಅನೇಕ ಊರುಗಳಲ್ಲಿದ್ದ ಮಠಗಳ ಜೀರ್ಣೋದ್ಧಾರಕ್ಕೆ ಭಕ್ತರು ಮನಸ್ಸು ಮಾಡಿದರೆ ಮೂರುಸಾವಿರಮಠದ ಉಚ್ಚ ಸಂಸ್ಕೃತಿಯನ್ನೇ ಉಳಿಸಿದಂತೆ. ಏಕೆಂದರೆ ಭಕ್ತರಿದ್ದರೇನೆ ಮಠಕ್ಕೆ ಭೂಷಣ. ಭಕ್ತರು ದುಡಿದು ಭಕ್ತಿಯನ್ನರ್ಪಿಸಿದರೆ ಆ ಮಠದ ವೈಭವ ಹೇಳಲಸದಳ. ಭಕ್ತರ ಉದ್ಧಾರಕ್ಕಾಗಿಯೇ ಮಠಗಳು ಅನ್ನುವದನ್ನು ಎಲ್ಲ ಸ್ವಾಮಿಗಳವರೂ ಅರಿತುಕೊಂಡರೆ ಮಠಗಳ ವೈಭವ ತನ್ನಿಂದ ತಾನೇ ಬೆಳೆಯುವದು. ಅದರಂತೆ ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಮಠದ ದುಡ್ಡು ಸಮಾಜಕ್ಕಾಗಿ ಮೀಸಲಿಟ್ಟು ಹಗಲಿರುಳು ದುಡಿಯುತ್ತಿರುವದರಿಂದಲೇ ಶ್ರೀ ಮೂರುಸಾವಿರಮಠವು ಕರ್ನಾಟಕಕ್ಕೇ ಏಕೆ ಭಾರತಕ್ಕೇ ಆದರ್ಶವಾಗಿದೆ. ಶ್ರೀ ಜಗದ್ಗುರುಗಳು ಶ್ರೀ ಕಾಡಪ್ಪಶೆಟ್ಟರ ಸಾಹಸಕ್ಕೆ ಮೆಚ್ಚಿ ಪದೇ ಪದೇ ಅವರ ಬಗ್ಗೆ ಹೇಳುತ್ತಿರುತ್ತಾರೆ. ಏನೇ ಆಗಲಿ, ಹಾಳಾಗಿ ಹೋಗುತ್ತಿದ್ದ ಚವಲಗುಡ್ಡ ಶಾಖಾ ಮೂರುಸಾವಿರಮಠವು ಸುಂದರವಾಗಿ ಕಂಗೊಳಿಸುವಂತಾಗಿದೆ. ಇದರ ಪ್ಲ್ಯಾನ್ ತಯಾರಿಸಲು ಹುಬ್ಬಳ್ಳಿ ಶಿವಬಸವ ಸ್ವಾಮಿಗಳು ಹೊಸಮಠ ಅವರು ಸಹಾಯ ಮಾಡಿ, ಒಬ್ಬ ಉತ್ತಮ ಇಂಜಿನಿಯರರಂತೆ ಸಲಹೆ ನೀಡಿ ಪೂರ್ತಿಗೊಳಿಸಿದ್ದು ಶ್ರೀ ಜಗದ್ಗುರುಗಳಿಗೆ ಅತ್ಯಾನಂದವಾಗಿದೆ. ಶಿಥಿಲಗೊಂಡ ಯಾವುದೇ ಶಾಖಾ ಮೂರುಸಾವಿರಮಠಗಳನ್ನು ಬೆಳೆಸುವದಕ್ಕೆ ಯಾರೇ ಮುಂದೆ ಬರಲಿ ಅವರಿಗೆ ಶ್ರೀ ಜಗದ್ಗುರುಗಳು ಒಪ್ಪದೇ ಕಳಿಸುವದಿಲ್ಲ ಬದಲಾಗಿ ಏನಾದರೂ ಆಶೀರ್ವಾದ ಮಾಡಿಯೇ ಕಳಿಸುತ್ತಾರೆ. ಈ ರೀತಿ ಅಭಿಮಾನದಿಂದ ದುಡಿಯುವವರು ಎಷ್ಟು ಜನರಿದ್ದಾರೆ? ಎಂದು ಶ್ರೀ ಜಗದ್ಗುರುಗಳು ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುತ್ತಾರೆ.

**ಆಕಳು ನಮ್ಮವು: ಆದರೆ....**

೩-೪ ವರ್ಷಗಳಿಂದ ನಾಡಿನಲ್ಲಿ ಬರಗಾಲ ಬೀಳುತ್ತಿರುವದು ಸರ್ವರಿಗೂ ಕಷ್ಟಕೊಡುವಂತಹದಾಗಿದೆ. ದನ-ಕರುಗಳನ್ನು ಕಟುಕರಿಗೆ ಮಾರುವ ಪ್ರಸಂಗವೊದಗಿ, ಜನಗಳಿಗೂ ದನಗಳಿಗೂ ಜೀವನಾಂಶಕ್ಕೂ ಕಠಿಣ ಬಂದಾಗ ಶ್ರೀ ಜಗದ್ಗುರುಗಳು ಹುಬ್ಬಳ್ಳಿಯ ಸಕಲ ಸಮಾಜದ ಸದ್ಭಕ್ತರನ್ನು ಕರೆಯಿಸಿ, ನಾಡಿನ ದನ-ಕರುಗಳ ದುಸ್ಥಿತಿಯನ್ನು ವಿವರಿಸಿ ತಾವು ಗೋ ರಕ್ಷಣೆಯ ಸಲುವಾಗಿ ಪಾದಯಾತ್ರೆ ಮಾಡಿ, ಧನ ಸಂಗ್ರಹಿಸಿ, ಆ ದುಡ್ಡಿನಿಂದ ದನಗಳ ಸಂರಕ್ಷಣೆ ಮಾಡುವ ಸದಿಚ್ಛೆಯನ್ನು ವ್ಯಕ್ತ ಮಾಡಿದ ಕೂಡಲೇ ಎಲ್ಲರೂ ಒಪ್ಪಿ ೩-೪ ದಿನಗಳಲ್ಲಿ ಹುಬ್ಬಳ್ಳಿಯಲ್ಲಿ ಪಾದ

ಯಾತ್ರೆಯನ್ನು ಸದ್ಭಕ್ತರೊಡಗೂಡಿ ಮಾಡಿದರು. ಲಕ್ಷಾಂತರ ಧನ ಸಂಗ್ರಹ ವಾಯಿತು. ಆ ದುಡ್ಡಿನಿಂದ ಮೇವು ಸಂಗ್ರಹಿಸಿ, ಗೋಶಾಲೆ ನಡೆದ ಸ್ಥಳಗಳಲ್ಲಿ ಮೇವು ಹಾಗೂ ಧನವನ್ನು ನೀಡಿ ಸಹಸ್ರಾರು ದನಗಳು ಬದುಕುವಂತೆ ಮಾಡಿದರು. ಅದಕ್ಕಾಗಿ 'ಮೂರುಸಾವಿರಮಠ ಗೋ ಸಂರಕ್ಷಣಾ ಸೇವಾ ಸಮಿತಿ' ರಚಿಸಿ ಅದರ ಮುಖಾಂತರ ಆ ಕಾರ್ಯವನ್ನು ತೃಪ್ತಿಕರವಾಗಿ ಮಾಡಿ ತೋರಿಸಿದರು. ಹುಬ್ಬಳ್ಳಿಯ ಜನರು ಎಷ್ಟೇ ಕಷ್ಟದಲ್ಲಿದ್ದರೂ, ಜಗದ್ಗುರುಗಳು ಪಾದಯಾತ್ರೆ ಹೊರಟ್ಟಿದ್ದಾರೆಂದ ಮೇಲೆ ಅವರ ಈ ಮಾನವೀಯ ಸೇವೆಗೆ ಎಲ್ಲರೂ ಸಹಕರಿಸಿ ದುಡಿದರು. ಪ್ರಧಾನ ವಾಗಿ ಸರ್ವಶ್ರೀಗಳಾದ ವೀರಚಂದ ನಾರಾಣಜಿ ಕಾನಜಿ, ಮಾಜಿ ಶಾಸಕರಾದ ಶ್ರೀ ಎಂ. ಜಿ. ಜರತಾರಘರ, ಕವಾಡ ಶೇಠರು, ಕೆಂಪಣ್ಣವರ, ಶಿವಣ್ಣ ಕೋಕಾಟಿ, ಗಂಗಣ್ಣ ಬತ್ತಿ, ಸಿ. ಸಿ. ಎಮ್ಮೆಟ್ಟಿ ಹಿರೇಮಠ, ಎಸ್. ಎಲ್. ಪಾಟೀಲ, ಎಚ್. ಪಿ. ಹುಲ್ಯಾಳ ಮುಂತಾದವರು ನಿಷ್ಠೆಯಿಂದ ದುಡಿದು ಯಶಸ್ವಿಗೊಳಿಸಿದರು. ಆ ಸೇವಾ ಸಮಿತಿಯಿಂದ ಇಂತಹ ಮಾನವೀಯ ಕಾರ್ಯಕ್ಕೆ ಈಗಲೂ ಸಹಾಯ ಸಲ್ಲಿಸುತ್ತಿರುವದು ಅಭಿನಂದನಾರ್ಹವಾಗಿದೆ.

## ಮರಶಿಲ್ಪದಲ್ಲಿ ಶಿವಶಿಲ್ಪದತಲ್ಪ: ಕುಶಲ ಶೈಲಿಯ ಕಟ್ಟಿಗೆಯ ಸಿಂಹಾಸನ

ಶ್ರೀ ಮೂರುಸಾವಿರಮಠವು ಕಟ್ಟಿಗೆಯ ಕೆತ್ತನೆಯಲ್ಲಿ ಕಲೆಯ ಕುಸುರಿಯನ್ನು ತೋರಿಸುವದರಲ್ಲಿ ನಾಡಿನಲ್ಲಿಯೇ ಸುಪ್ರಸಿದ್ಧವಾದುದು. ಕಟ್ಟಿಗೆಯ ಕೆತ್ತನೆಯ ಕಲೆ ನೋಡಲು ವಿದೇಶದವರೂ ಸಹ ಮೂರುಸಾವಿರಮಠಕ್ಕೆ ಬಂದು ಕಲಾಪೂರ್ಣ ವಾದ ತೇರು ನೋಡಿ ಆಶ್ಚರ್ಯಚಕಿತರಾಗುತ್ತಾರೆ. ಹೊರ ಆವರಣವು ಪ್ರಾಚೀನ ಕಲೆಯಿಂದ ಬೆಳಗುತ್ತಲಿದೆ. ಸುಂದರವಾದ ಕಟ್ಟಿಗೆಯ ಕಲಾಪೂರ್ಣ ಸಿಂಹಾಸನಗಳು ನೋಡಲು ಈಗಲೂ ಲಭ್ಯವಿವೆ. ಆದರೆ ಅವುಗಳಲ್ಲಿ ಕೆಲವು ಮುರಿದು ಹಾಳಾಗಿ ಹೋಗಿವೆ. ಕೆಲವು ಅರ್ಧ ಚೆನ್ನಾಗಿದ್ದು, ಇನ್ನರ್ಧ ತೇಪೆ ಹಚ್ಚಿಸಿಕೊಂಡು ಪ್ರಾಚೀನತೆಯನ್ನು ತೋರಿಸುತ್ತವೆ. ಆದರೆ ಮತ್ತೆ ಕಲೆ ಹಾಗೇ ಇರಬೇಕೆಂದು ಬಯಸಿ ಶ್ರೀ ಸಿದ್ಧೇಶ್ವರ ಕಂಪನಿಯ ನೀಲಕಂಠಪ್ಪನವರು ಕಮ್ಮಾರ ಅವರು ೧೫ ವರ್ಷಗಳ ಹಿಂದೆ ಕಲಾಪೂರ್ಣ ಕಟ್ಟಿಗೆಯ ಸಿಂಹಾಸನವನ್ನು ಮಾಡಿಸಿ, ಶ್ರೀ ಮೂರು ಸಾವಿರಮಠಕ್ಕೆ ಅರ್ಪಿಸಿ ತಮ್ಮ ಭಕ್ತಿ ಸೇವೆ ಅರ್ಪಿಸಿದ್ದಾರೆ. ಅದೇ ರೀತಿ ಶ್ರೀ ವೀರ ಚಂದ ನಾರಾಣಜಿ ಕಾನಜಿ ವ್ಯಾಪಾರಸ್ಥರು ಕಾಟನ್ ಮಾರ್ಕೆಟ್ ಹುಬ್ಬಳ್ಳಿ ಅವರೂ ಕಲೆಯಿಂದ ಸುಶೋಭಿತ ಕಟ್ಟಿಗೆಯ ಸಿಂಹಾಸನವನ್ನು ಮಾಡಿಸಿ ಮೂರುಸಾವಿರ ಮಠಕ್ಕೆ ೩ ವರ್ಷಗಳ ಹಿಂದೆ ಅರ್ಪಿಸಿದ್ದು ಸ್ತುತ್ಯಾರ್ಹವಾಗಿದೆ. ಇದೀಗ ಮತ್ತೆ ಶ್ರೀ ಜಗದ್ಗುರುಗಳವರ ಪೀಠಾರೋಹಣ ರಜತಮಹೋತ್ಸವದ ಸವಿನೆನಪಿಗಾಗಿ ಬೆಳಗಾಂವ ಜಿಲ್ಲೆಯ ಮೇಲ್ಮಟ್ಟಿಯ ಸದ್ಭಕ್ತರು ಸೇರಿ ಒಂದು ಸುಂದರ ಕಟ್ಟಿಗೆಯ ಕಲಾಪೂರ್ಣ ಸಿಂಹಾಸನವನ್ನು ಹಳ್ಯಾಳದಲ್ಲಿ ಮಾಡಿಸುತ್ತಿದ್ದಾರೆ. ಅದನ್ನು ಆ

ಶುಭ ಸಂದರ್ಭದಲ್ಲಿ ಶ್ರೀ ಮೂರುಸಾವಿರಮಠಕ್ಕೆ ಅರ್ಪಿಸುವ ಇಚ್ಛೆಯನ್ನಿಟ್ಟು ಕೊಂಡಿದ್ದಾರೆ. ಇದರಿಂದ ಪ್ರಾಚೀನ ಕಲೆಗೂ ಮಹತ್ವ ನೀಡಿ ಕಲಾಕಾರರಿಗೂ ಪ್ರೋತ್ಸಾಹ ನೀಡಿದಂತಾಗುತ್ತದೆ. ಮೂರುಸಾವಿರಮಠದ ಮುಂಭಾಗವನ್ನೂ ಬೆಂಗಳೂರಿನ ಶ್ರೀಯುತ ಮಾನ್ಯ ಯಮುನಪ್ಪ ಸಿಂಧೆ ಅವರು ಕಲೆಯ ಕೆತ್ತನೆಯು ಹಾಳಾಗದಂತೆ ಜೀರ್ಣೋದ್ಧಾರ ಮಾಡಿಸಿ ಕೊಡುತ್ತೇವೆಂದು ಒಪ್ಪಿದ್ದು ಎಲ್ಲರಿಗೂ ಸಂತಸ ತಂದಿದೆ.

## ಹುಕ್ಕೇರಿಯಲ್ಲಿ ಆಂಗ್ಲ ಮಾಧ್ಯಮ ಶಾಲೆ:

ಬೆಳಗಾಂವ ಜಿಲ್ಲೆಯ ಹುಕ್ಕೇರಿಯಲ್ಲಿ ೫-೬ ವರ್ಷಗಳಿಂದ ಅಲ್ಲಿಯ ಸರಕಾರೀ ಅಧಿಕಾರಿಗಳಿಂದ ಒಂದು ಇಂಗ್ಲಿಷ್ ಮೀಡಿಯಂ ಸ್ಕೂಲು ನಡೆಯುತ್ತ ಬಂದಿದೆ. ಈ ಸ್ಕೂಲಿನ ಆಡಳಿತ ನಡೆಸತಕ್ಕ ಅಧಿಕಾರಿಗಳು ೩ ವರ್ಷಕ್ಕೊಮ್ಮೆ ಬೇರೆಡೆ ವರ್ಗ ವಾಗುತ್ತಿರುವದರಿಂದ ಶಾಲೆಯ ಬೆಳವಣಿಗೆಗೆ ಕಷ್ಟವಾಗುವದನ್ನು ಕಂಡು ಶ್ರೀ ಜಗದ್ಗುರುಗಳವರ ಹತ್ತಿರ ಬಂದು ಈ ಶಾಲೆಯನ್ನು ತಮ್ಮ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘಕ್ಕೆ ಕೊಡಮಾಡುತ್ತೇವೆ, ಅದನ್ನು ತಾವುಗಳು ಸ್ವೀಕರಿಸಬೇಕೆಂದು ಕೇಳಿಕೊಂಡ ನಂತರ ಶ್ರೀ ಜಗದ್ಗುರು ಗಳವರು ಅದಕ್ಕೆ ಅನುಮತಿ ನೀಡಿದರಲ್ಲದೇ, ವಿದ್ಯಾವರ್ಧಕ ಸಂಘದ ಚೇರಮನ್ನ ರಾದ ಶ್ರೀ ವೀರಚಂದ ನಾರಾಣಜಿ ಕಾಸಜಿಯವರಿಗೂ ಆ ಶಾಲೆಯನ್ನು ತೋರಿಸಿ ಒಪ್ಪಿಗೆ ಪಡೆದರು. ನಂತರ ಕೆಲವು ದಿನಗಳ ನಂತರ ಕಾನೂನಿನ ಪ್ರಕಾರ ಆ ಶಾಲೆ ಯನ್ನು ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಆಡಳಿತಕ್ಕೆ ತೆಗೆದುಕೊಂಡು ಇದೀಗ ಆ ಶಾಲೆಯು ವಿದ್ಯಾವರ್ಧಕ ಸಂಘದ ವತಿ ಯಿಂದ ಸುವ್ಯವಸ್ಥಿತ ರೀತಿಯಿಂದ ನಡೆಯುತ್ತಲಿದೆ. ಆ ಶಾಲೆಗೆ ಅಲ್ಲಿ ಸ್ಥಾನಿಕ ಕಮೀಟಿಯೊಂದನ್ನು ಮಾಡಿ ಘಟಪ್ರಭಾದ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿಗಳಾದ ಶ್ರೀ ಡಾ|| ವಿಲಾಸ ನಾಯಕ ವಾಡಿ ಅವರನ್ನು ಚೇರಮನ್ನರನ್ನಾಗಿ ಮಾಡಲಾಗಿದೆ. ಈ ಶಾಲೆಯ ಚಿಕ್ಕಮಕ್ಕಳ ಸಂಸ್ಕೃತಿ ರೂಪಿಸುವ ಕಡೆಗೆ ಹೆಚ್ಚಿನ ಗಮನ, ಆದ್ಯತೆಗಳನ್ನು ನೀಡಲಾಗುತ್ತಿದೆ. ೩೦೦ ಕ್ಕಿಂತ ಹೆಚ್ಚು ಮಕ್ಕಳು ಇದ್ದು ೬ ಜನರು ಅಧ್ಯಾಪಕ-ಅಧ್ಯಾಪಕಿಯರಿದ್ದಾರೆ. ಶಾಲಾ ಕಟ್ಟಡವನ್ನೂ ವಿದ್ಯಾವರ್ಧಕ ಸಂಘಕ್ಕೆ ಕೊಟ್ಟಿದ್ದಾರೆ. ಬೆಳಗಾಂವ ಜಿಲ್ಲೆಯ ಗೋಕಾಕ್ ಹಾಗೂ ಹುಕ್ಕೇರಿ ತಾಲೂಕಿನ ಭಕ್ತರು ಈ ಕಡೆಯ ಭಾಗದಲ್ಲಿ ಹುಬ್ಬಳ್ಳಿ ಮೂರುಸಾವಿರಮಠ ಶಿಕ್ಷಣ ಸಂಸ್ಥೆಗಳನ್ನು ತೆರೆಯಬೇಕೆಂಬ ಅವರ ಇಚ್ಛೆಯನ್ನು ಪೂರ್ವಭಾವಿಯಾಗಿ ಈಡೇರಿಸಿದಂತಾಗಿದೆ. ಕ್ರಮೇಣ ಇದನ್ನು ಆ ಕಡೆ ಭಾಗದಲ್ಲಿ ಒಂದು ರೆಸಿಡೆನ್ಸಿಯಲ್ ಸ್ಕೂಲ್ (ವಸತಿಶಾಲೆ)ಯನ್ನು ತೆರೆಯಬೇಕೆಂಬುವ ಹೊಂಗ ನಸನ್ನು ಶ್ರೀ ಜಗದ್ಗುರುಗಳವರು ಕಂಡಿದ್ದಾರೆ. ಅದಕ್ಕೆ ಆ ಭಾಗದ ಭಕ್ತರ, ಶಿಕ್ಷಣ

ಪ್ರೇಮಿಗಳ, ಶಿಕ್ಷಣ ತಜ್ಞರ ಸಹಾಯ-ಸಹಕಾರ ಅತ್ಯವಶ್ಯವೆಂದು ಹೇಳುತ್ತಿದ್ದಾರೆ. ಬೆಳಗಾಂವ ಜಿಲ್ಲೆಯಲ್ಲಿಯೂ ಬಾಲವಿಕಾಸ ಯೋಜನೆಯಿಂದ ಪ್ರಾರಂಭಿಸಿ ಮುಂದೆ ಬೃಹತ್ಪ್ರಮಾಣವಾಗಿ ಬೆಳೆಸುವ ಇಚ್ಛೆಯನ್ನಿಟ್ಟುಕೊಂಡಿರುವದು ಸ್ತುತ್ಯಾರ್ಹವಾಗಿದೆ. ಶ್ರೀ ಜಗದ್ಗುರುಗಳ ಕಾರ್ಯ ವ್ಯಾಪ್ತಿ ಇದೇ ರೀತಿ ಮುಂದುವರೆಯುತ್ತಿರಲಿ, ಅವರ ಜ್ಞಾನದೀಪ ನಾಡಿನ ತುಂಬ ಪ್ರಸರಿಸಿ ಎಲ್ಲರಿಗೂ ಸಂತಸವನ್ನು ಕೊಡುತ್ತಿರಲೆಂಬುದೇ ಅವರಲ್ಲಿ ಕಳಕಳಿಯ ಅಂತಃಕರಣಪೂರ್ವಕ ಪ್ರಾರ್ಥನೆ. ಯಾವದೇ ಒಳ್ಳೆಯ ಕೆಲಸಕ್ಕೂ ಹಿಂಜರಿಯದ ಶ್ರೀ ಜಗದ್ಗುರುಗಳು ಈ ಕಡೆ ಭಾಗದಲ್ಲಿ ವೈದ್ಯಕೀಯ ರಂಗದಲ್ಲಿ ಅದ್ಭುತ ಕ್ರಾಂತಿ ಮಾಡಿ ಲಿಂ|| ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಇಚ್ಛೆಯನ್ನು ಈಡೇರಿಸಿ ಮಾನವೀಯ ಸೇವೆಯನ್ನು ಗೈಯುತ್ತಿರುವಾಗ ಶಿಕ್ಷಣ ಕೇಂದ್ರಗಳನ್ನು ಬೆಳೆಸಿ ಆದರ್ಶಯುತ ಮಾಡುತ್ತಾರೆಂಬುವ ಹಂಬಲವೂ ಎಲ್ಲರ ದಾಗಿದೆ. ಹಿಡಿದ ಕೆಲಸ ಬಿಡದ ಶ್ರೀ ಜಗದ್ಗುರುಗಳ ಕಾರ್ಯ ಸ್ತುತ್ಯವಾದುದು. ಅನುಕರಣೀಯವಾದುದು. ಅವರಿಗೆ ಪ್ರತಿಯೊಬ್ಬರ ಸಹಕಾರ ಅಂತಃಕರಣಪೂರ್ವಕ ವಾಗಿ ಬೆಳಗಾಂವ ಜಿಲ್ಲೆಯ ಸಮಸ್ತ ಭಕ್ತರು ನೀಡಿದರೆ ನಿಷ್ಠೆಯಿಂದ ದುಡಿಯಲು ಸಿದ್ಧರಿದ್ದೇವೆಂದು ಶ್ರೀ ಜಗದ್ಗುರುಗಳು ಅಪ್ಪಣೆಕೊಡಿಸುತ್ತಿದ್ದಾರೆ. ಶ್ರೀ ಜಗದ್ಗುರು ಗಳ ಬೆಂಬಲಿಗರಾಗಿ ಶ್ರೀ ನಿ. ಪ್ರ. ಸಿದ್ಧಪ್ರಭುಸ್ವಾಮಿಗಳು ಚಿಂಚಣಿ, ಅಮ್ಮಿನ ಭಾವಿಯ ಶ್ರೀ ಬಸವನಗೌಡರು, ಇನ್ನುಳಿದ ಅನೇಕ ಫ್ಯಾಕ್ಟರಿಯ ಕಾರ್ಯಕರ್ತರು, ಚೇರ್‌ಮನ್ನರು ಸಹಕರಿಸುತ್ತಿರುವುದು ಶ್ರೀ ಜಗದ್ಗುರುಗಳವರಿಗೆ ಕಾರ್ಯ ಮುಂದು ವರೆಸಲು ಸಹಾಯ ದೊರೆತಂತಾಗಿದೆ. ಬೆಳಗಾಂವ ಜಿಲ್ಲೆಯಲ್ಲಿಯ ಊರುಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ತೆರೆದು ಭಕ್ತರ ಮನೋಬಯಕೆ ಈಡೇರಿಸುವರೆಂದು ಬಲ ವಾದ ಆಶೆ ಇದೆ.

## ಇನ್ನೊಂದು ಸಭಾಭವನ:

ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠದ ವಿದ್ಯಾವರ್ಧಕ ಸಂಘವು ದಿನೇ ದಿನೇ ಅಭಿವೃದ್ಧಿ ಹೊಂದುತ್ತ ನಡೆದು, ಈಗಾಗಲೇ ಅನೇಕ ಶಾಲೆ-ಕಾಲೇಜು ಗಳನ್ನು ಸುವ್ಯವಸ್ಥಿತ ರೀತಿಯಿಂದ ನಡೆಸುತ್ತ ಶೈಕ್ಷಣಿಕ ಪ್ರಗತಿಯನ್ನು ಸಾಧಿಸು ತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಹುಬ್ಬಳ್ಳಿಯಲ್ಲಿಯ ಶ್ರೀಮಠದ ಶಾಲೆ-ಕಾಲೇಜುಗಳ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಸಭೆ-ಸಮಾರಂಭ ಮಾಡಲಿಕ್ಕೆ ಒಂದು ಸಭಾಭವನದ ಅವಶ್ಯಕತೆ ಇತ್ತು. ಅದರ ನಿವಾರಣೆಯನ್ನು ಶ್ರೀ ಜಗದ್ಗುರು ಮಹಾಸನ್ನಿಧಿಯವರು ಹಾಗೂ ಚೇರಮನ್ನರಾದ ನಾರಾಣಜಿ ಕಾನಜಿ ಅವರು ಸತತ ಪ್ರಯತ್ನ ಮಾಡಿ ಸುಮಾರು ಸಾವಿರಾರು ವಿದ್ಯಾರ್ಥಿಗಳು ಕೂಡಿ ಸಭೆ-ಸಮಾರಂಭ ಗಳನ್ನಾಚರಿಸಲು ಅನುಕೂಲವಾಗುವಂತೆ ಸಭಾಮಂದಿರವನ್ನು ಕಟ್ಟಿಸುತ್ತಿರುವದು ಸ್ತುತ್ಯಾರ್ಹವಾದುದು. ಇದನ್ನು ಕಟ್ಟಿಸಲು ಲಾಟರಿ ಯೋಜನೆಯ ಒಂದು ನೂತನ

ಯೋಜನೆ ಸಫಲಗೊಳಿಸಿದ್ದು ಎಲ್ಲರಿಗೂ ಸಮಾಧಾನವನ್ನುಂಟು ಮಾಡಿದೆ. ಈ ಯೋಜನೆಯಿಂದ ಯಾರಿಗೂ ಕಷ್ಟವಾಗದಂತೆ ಈ ಯೋಜನೆ ಯಶಸ್ವಿಗಾಗಿ, ಮಹಿಳಾ ಕಾಲೇಜು, ಮೂರುಸಾವಿರಮಠ ಗರ್ಲ್ಸ್ ಹೈಸ್ಕೂಲ, ಶ್ರೀ ಜಗದ್ಗುರು ಗಂಗಾಧರ ಹೈಸ್ಕೂಲ್‌ದ ಎಲ್ಲ ಸಿಬ್ಬಂದಿ ವರ್ಗದವರು ಸತತ ಪರಿಶ್ರಮ ವಹಿಸಿದರು. ಅಂತೆಯೇ ಈ ಕಟ್ಟಡವನ್ನು ಕಟ್ಟಿಸುವದಕ್ಕೆ ಅನುಕೂಲವಾಯಿತು. ಇದಲ್ಲದೇ ಈ ಯೋಜನೆಯನ್ನು ಸಫಲಗೊಳಿಸುವದಕ್ಕಾಗಿ ಶ್ರೀ ಮೂರುಸಾವಿರಮಠದ ಅಭಿಮಾನಿ ಭಕ್ತರು ಪರಿಶ್ರಮಿಸಿದ್ದು ಸಂಸ್ಮರಣೀಯವಾದುದು. ಈಗಾಗಲೇ ಈ ಕಟ್ಟಡಕ್ಕಾಗಿ ಒಂದು ಲಕ್ಷ ಐವತ್ತು ಸಾವಿರ ರೂ. ಖರ್ಚಾಗಿದ್ದು ಇನ್ನೂ ಆ ಕಾರ್ಯ ಮುಂದುವರೆದಿದೆ. ಸುಮಾರು ೪ ಲಕ್ಷ ರೂ. ವೆಚ್ಚದಿಂದ ಈ ಸಭಾಮಂದಿರ ನಿರ್ಮಾಣವಾಗಲಿದೆ. ಪ್ರತಿಯೊಂದು ರಂಗದಲ್ಲಿಯೂ ಪ್ರಗತಿ ಸಾಧಿಸಬೇಕೆಂಬುವ ಶ್ರೀ ಜಗದ್ಗುರುಗಳ ಇಚ್ಛೆ ಕೈಗೂಡುತ್ತಿರುವದು ಅವರ ಕರ್ತವ್ಯ ನಿಷ್ಠೆಯ ದ್ಯೋತಕವಾಗಿದೆ. ಈ ಸಭಾಮಂದಿರದ ಕಟ್ಟಡದ ಯೋಜನೆಯನ್ನು ಸಫಲ ಗೊಳಿಸಲು ಶ್ರೀಯುತ ನಾರಾಣಜಿ ಕಾನಜಿ ಅವರ ಸತತ ಪರಿಶ್ರಮವೇ ಮೂಲ ಕಾರಣವಾಗಿದೆ.

## ಹುಟ್ಟಿದೂರಿಗೆ ಕೊಟ್ಟ ಕರುಣೆಯ ಕೊಡುಗೆ: ಸಸಿವಾಳದ ಆಸ್ಪತ್ರೆ

ಮೂರುಸಾವಿರಮಠದ ಶ್ರೀ ಜಗದ್ಗುರುಗಳ ಜನ್ಮಸ್ಥಳ ಹಾಸನ ಜಿಲ್ಲೆಯ ಅರಸಿಕೆರೆ ತಾಲೂಕಿನ 'ಸಸಿವಾಳ'. ಈ ಚಿಕ್ಕ ಹಳ್ಳಿ ನಿಸರ್ಗ ಸೌಂದರ್ಯದಿಂದ ಶೋಭಿಸುತ್ತದೆ. ಪರಮ ತಪಸ್ವಿ ಚಿತ್ತರಗಿ–ಇಲಕಲ್ಲ ಶ್ರೀ ವಿಜಯಮಹಾಂತೇಶ್ವರ ಮಹಾಶಿವಯೋಗಿಗಳು ಸಹ ಇದೇ ಚಿಕ್ಕ ಹಳ್ಳಿಯಲ್ಲಿ ಜನ್ಮವೆತ್ತವರು.

ಈ ಸಸಿವಾಳದ ಕೆಲವು ಜನ ಸದ್ಭಕ್ತರು ಮೂರುಸಾವಿರಮಠದ ಶ್ರೀ ಜಗದ್ಗುರು ಗಳವರ ಹತ್ತಿರ ಬಂದು ನಮ್ಮ ಊರನಲ್ಲಿ ತಾವು ಜನ್ಮತಾಳಿ ತಮ್ಮ ಯಾರೇ ಸಂಬಂಧಿಕರನ್ನು ಹಚ್ಚಿಕೊಳ್ಳದೇ ದೂರವಿರುವಿರಿ. ಕೊನೆಗೆ ಇಲ್ಲಿನ ಹಾಗೂ ಸುತ್ತ ಮುತ್ತಲಿನ ಹಳ್ಳಿಗಳ ಜನತೆಗಾದರೂ ಒಂದು ಚಿಕ್ಕ ದವಾಖಾನೆಯನ್ನು ಮಾಡಿಸಲು ತಾವು ೨೫ ಸಾವಿರ ರೂಪಾಯಿ ಕೊಡಬೇಕೆಂದು ವಿನಂತಿ ಮಾಡಿಕೊಂಡಕೂಡಲೇ ೨೫ ಸಾವಿರ ರೂ. ಗಳನ್ನು ನೀಡಿದರು. ತಾವು ಜನ್ಮವೆತ್ತ ಊರಿನ ಋಣವನ್ನು ತೀರಿಸಲು ಮನಸ್ಸು ಮಾಡಿದ್ದು ನಮ್ಮೆಲ್ಲರ ಪುಣ್ಯ ಎಂದು ಸಸಿವಾಳ ಗ್ರಾಮದ ಭಕ್ತರು ಮಾತನಾಡುತ್ತಿರುವದು ಸಂಸ್ಮರಣೀಯ. ಆ ಆಸ್ಪತ್ರೆಯ ಕಟ್ಟಡದ ನಿವೇಶನ ಕ್ಕಾಗಿ ೩ ಎಕರೆ ಭೂಮಿಯನ್ನು ಸರ್ಕಾರದಿಂದ ಪಡೆದುದಲ್ಲದೇ ಲಕ್ಷಾಂತರ ರೂ. ಹಣವನ್ನು ಸರ್ಕಾರದಿಂದ ಸಹಾಯ ಪಡೆದುಕೊಂಡು ಒಂದು ಸುಂದರ ದವಾಖಾನೆ ಯನ್ನು ಕಟ್ಟಿಸುವ ಯೋಜನೆಯನ್ನು ಅಲ್ಲಿನ ಸದ್ಭಕ್ತರು ಕೂಡಿಕೊಂಡು ಪರಿಶ್ರಮಿ

ಸುತ್ತಿದ್ದಾರೆ. ಶ್ರೀ ಜಗದ್ಗುರುಗಳೂ ಸಹ ಸರ್ಕಾರಕ್ಕೆ ತಿಳಿಸಿ, ಆ ಯೋಜನೆ ಸಫಲಗೊಳ್ಳುವಂತೆ ಪ್ರಯತ್ನ ಮಾಡುತ್ತಿದ್ದಾರೆ.

## ಹುಬ್ಬಳ್ಳಿಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕಲ್ಯಾಣಮಂಟಪ ಹಾಗೂ ಸಂಶೋಧನ ಮಂದಿರದ ಭವ್ಯ ಯೋಜನೆ:

ಹುಬ್ಬಳ್ಳಿ ನಗರವು ಬೆಳೆಯುತ್ತ ನಡೆದಿದೆ. ಜನಸಂಖ್ಯೆ ದಿನೇ ದಿನೇ ವಿಪರೀತ ಹೆಚ್ಚುತ್ತಿದೆ. ಹುಬ್ಬಳ್ಳಿ ಮಹಾನಗರಕ್ಕೆ ಬೇಕಾಗುವಷ್ಟು ಕಲ್ಯಾಣಮಂಟಪಗಳಿಲ್ಲದೆ ತುಂಬ ತೊಂದರೆಯಾಗುತ್ತಲಿದೆ. ಈಗಾಗಲೇ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಪೀಠಾರೋಹಣವಾದ ೩-೪ ವರ್ಷಗಳಲ್ಲಿ ಶ್ರೀಮಠದ ಆವರಣದಲ್ಲಿ ಬಿಡನಾಳದ ನೇಗಿಲಯೋಗಿ ಆಸುಂಡಿ ಚನ್ನಮಲ್ಲಪ್ಪನವರ ಸಹಾಯದಿಂದ ಅವರ ಹೆಸರಿನಲ್ಲಿ ಚಿಕ್ಕದೊಂದು ಕಲ್ಯಾಣಮಂಟಪವನ್ನು ದೀನ-ದಲಿತರಿಗಾಗಿ ಕಟ್ಟಿಸಿದ್ದು, ಅದು ಸರ್ವರಿಗೂ ಉಪಯೋಗವಾಗುತ್ತಿರುವದು ಎಲ್ಲರಿಗೂ ತಿಳಿದ ವಿಷಯ. ಹುಬ್ಬಳ್ಳಿಯ ಸದ್ಭಕ್ತರು ಶ್ರೀ ಜಗದ್ಗುರುಗಳಿಗೆ-ತಾವುಗಳು ಹುಬ್ಬಳ್ಳಿಯನ್ನು ಶೈಕ್ಷಣಿಕ ಕೇಂದ್ರವನ್ನಾಗಿ ಮಾಡಿದಿರಿ. ಇದೀಗ ಹುಬ್ಬಳ್ಳಿಗೆ ಒಂದು ಬೃಹತ್ ಪ್ರಮಾಣದ ಕಲ್ಯಾಣಮಂಟಪದ ಅವಶ್ಯಕತೆಯಿದೆ. ಅದೊಂದನ್ನು ಕಟ್ಟಿಸಲು ತಾವು ಮನಸ್ಸು ಮಾಡಿದರೆ ಭಕ್ತರೆಲ್ಲರೂ ಸಹಾಯ ಮಾಡಲು ಸಿದ್ಧರಿದ್ದೇವೆ ಎಂದು ವಿನಂತಿಸಿಕೊಂಡ ಪ್ರಕಾರ, ಶ್ರೀ ಜಗದ್ಗುರು ಮಹಾಸನ್ನಿಧಿಯವರು ಬಮ್ಮಾಪೂರ ಓಣಿಯಲ್ಲಿರುವ ಓಲಿಮಠವನ್ನೇ ಪರಿವರ್ತಿಸಿ, ಸುಂದರವಾದ ಕಲ್ಯಾಣ ಮಂಟಪದ ಪ್ಲ್ಯಾನು ತಯಾರು ಮಾಡಿದ್ದು, ಅದರ ಯೋಜನೆ ಇನ್ನು ಕೆಲವೇ ದಿನಗಳಲ್ಲಿ ರೂಪುಗೊಂಡು, ಕಾರ್ಯಕ್ಕೆ ಅಣಿಗೊಳ್ಳುವ ಸಿದ್ಧತೆ ಕಂಡುಬರುವದು ಸದ್ಭಕ್ತರಿಗೆ ಆನಂದವನ್ನುಂಟುಮಾಡಿದೆ. ಓಲಿಮಠವು ಪೂರ್ಣ ಶಿಥಿಲಗೊಂಡಿದ್ದು, ಅದನ್ನು ಪೂರ್ಣ ತೆಗೆದು, ಪ್ರಾಚೀನ ಕಲೆಯನ್ನು ಅಳಿಸದೇ ಹೊಸ ನಕಾಶೆ ತಯಾರಾಗಿದೆ. ಎರಡು ಅಂತಸ್ತಿನಲ್ಲಿ ಕಲ್ಯಾಣಮಂಟಪವಾಗಿ, ಮೂರನೇ ಅಂತಸ್ತಿನಲ್ಲಿ ಓಲಿಗರಿಗಳನ್ನಿಡುವ ದೊಡ್ಡ ಹಾಲ್ ಮತ್ತು ಅದರ ಬದಿಗೇ ಸಂಶೋಧಕರಿಗಾಗಿ ಸಂಶೋಧನ ಮಂದಿರವೂ ತಯಾರಾಗಲಿದೆ. ಇದೆಲ್ಲ ಪೂರ್ತಿಗೊಳ್ಳಲು ಸುಮಾರು ೪-೫ ವರ್ಷಗಳಾದರೂ ಬೇಕಾಗಬಹುದೆಂದು ಅಂದಾಜು ಮಾಡಲಾಗಿದೆ. ಇದರ ವೆಚ್ಚವೂ ಸುಮಾರು ೫೦ ಲಕ್ಷ ರೂ. ಆಗಬಹುದೆಂದು ಕಟ್ಟಡ ತಜ್ಞರ ಅಭಿಪ್ರಾಯವಾಗಿದೆ. ಈ ಕಲ್ಯಾಣಮಂಟಪಕ್ಕೆ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ಹೆಸರನ್ನೇ ಇಡುವದನ್ನು ಸಹ ನಿರ್ಧಾರ ಮಾಡಿದ್ದಾರೆ. ಆಧುನಿಕ ಸೌಕರ್ಯದಿಂದೊಡಗೂಡಿದ ಆದರ್ಶ ಕಲ್ಯಾಣಮಂಟಪವನ್ನಾಗಿ ಮಾಡುವ ನಿರ್ಧಾರ ಕೈಗೊಂಡಿದ್ದು, ಹುಬ್ಬಳ್ಳಿಯ ಜನತೆ ಹರ್ಷಪುಲಕಿತರಾಗಿದ್ದಾರೆ. ಶ್ರೀ ಜಗದ್ಗುರುಗಳವರು ಯಾವುದೇ ಕಾರ್ಯ

ವನ್ನು ಮಾಡಲು ಬಹಳ ವಿಚಾರ ಮಾಡುತ್ತಾರೆ. ನಿರ್ಣಯಕ್ಕೆ ಬಂದ ಮೇಲೆ ಎಷ್ಟೇ ಕಷ್ಟಗಳು ಬರಲಿ, ಅದನ್ನು ಬಿಡಲಾರದ ಹಟವಾದಿಗಳು. ಅವರ ಯೋಜನೆಗೆ ತಕ್ಕಂತೆ ಜನತೆ ಸಹಕಾರ ನೀಡಿದರೆ, ಏನೆಲ್ಲವನ್ನು ಮಾಡಲು ಉತ್ಸಾಹವುಳ್ಳವರಾಗಿದ್ದಾರೆ. ಈ ಕಲ್ಯಾಣಮಂಟಪಕ್ಕೆ ಜನರ ಸಹಾಯವನ್ನು ಅಪೇಕ್ಷಿಸಿ, ಒಂದುಲಕ್ಷ ರೂ. ನೀಡಿದವರು ಮಹಾಪೋಷಕರು ಹಾಗೂ ೨೫ ಸಾವಿರ ರೂ. ನೀಡಿದವರು ಪೋಷಕರು, ೧೫ ಸಾವಿರ ರೂ. ನೀಡಿದವರು ಉಪಪೋಷಕರೆಂದು ಕರೆದು, ೧ ರಿಂದ ೧೪ ಸಾವಿರ ರೂ. ನೀಡಿದವರಿಗೆ ಆಶ್ರಯದಾತರೆಂದು ಕರೆದು, ಒಂದು ಸಹಾಯ ನಿಧಿಯ ಯೋಜನೆ ಮಾಡಲು ಭಕ್ತರು ತಿಳಿಸಿದ ಪ್ರಕಾರ, ಶ್ರೀ ಜಗದ್ಗುರುಗಳು ಒಪ್ಪಿ ಕಾರ್ಯತತ್ಪರರಾಗಿದ್ದಾರೆ. ಒಂದು ಸಂಸ್ಥೆ ಬೃಹತ್ಪ್ರಮಾಣವಾಗಿ ಬೆಳೆದು, ಜನಸಾಮಾನ್ಯರಿಗೆ ನೆರಳು ನೀಡಬೇಕಾದರೆ ಒಬ್ಬ ವ್ಯಕ್ತಿಯಿಂದಾಗದು. ಸಮಾಜವು ಸಹಾಯ ಮಾಡಿದರೇನೆ ಆ ಸಂಸ್ಥೆ ಬೆಳೆದು ಬದುಕಬಹುದೆಂದು ಶ್ರೀ ಜಗದ್ಗುರುಗಳ ಮನೀಷೆ. ಆ ರೀತಿ ಕಾರ್ಯಪ್ರವೃತ್ತರಾಗಿದ್ದಾರೆ. ಜನರ ಸಹಾಯವನ್ನು ಶ್ರೀ ಸನ್ನಿಧಿಯವರು ಕೋರಿ, ಇದಕ್ಕೊಂದು ಕಮೀಟಿ ರಚಿಸಿ, ಕಾರ್ಯವ್ಯಾಪ್ತಿಗೊಳಿಸುವ ಇಚ್ಛೆಯನ್ನಿಟ್ಟುಕೊಂಡಿದ್ದಾರೆ. ನಗರಕ್ಕೊಂದು ಸುಂದರ ಕಲ್ಯಾಣಮಂಟಪವಾಗುತ್ತಿದೆಯೆಂದಮೇಲೆ ಅದಕ್ಕೆ ಸಹಾಯ-ಸಹಕಾರ ನೀಡುವದು ಎಲ್ಲರ ಕರ್ತವ್ಯ.

**ಶಿಖರದಿಂದ ಶಿಖರಕ್ಕೆ:**

ಎತ್ತರಕ್ಕೆ ಏರಿದಂತೆ ನೂರು ಶಿಖರಗಳು ಕೈಚಾಚಿ ಕರೆಯುತ್ತವೆ. ಒಂದು ಬಾಗಿಲು ತೆರೆದಾಗ ನೂರು ಬಾಗಿಲು ತೆರೆಯುತ್ತವೆ. ಈ ಮಾತು ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಜೀವನ ಪುಟಗಳಿಂದ ಪುಟಿದು ಬಂದ ಸತ್ಯ. ಜಗದ್ಗುರುಗಳು ಸದಾ ದುಡಿಯುತ್ತಿರುವ ಒಂದು ಮಾನವ ಯಂತ್ರ. ನೂರು ಡಿಪಾರ್ಟಮೆಂಟುಗಳ ಸಾವಿರ ಕೆಲಸಗಳನ್ನು ನಿರ್ಧರಿಸಿ, ನಿರ್ಣಯಿಸಿ ಆಜ್ಞೆ ನೀಡುವ ಕಂಪ್ಯೂಟರ ಮಶೀನ್. ಇಷ್ಟಾದರೂ ಇವರು ಆಕಳಿಸಿದ್ದನ್ನು ಹುಬ್ಬಳ್ಳಿಯವರಾರೂ ಈ ೩೦ ವರ್ಷಗಳಲ್ಲಿ ಕಂಡಿಲ್ಲ; ತೂಕಡಿಸಿದ್ದನ್ನು ನೋಡಿಲ್ಲ. ಕೆಲಸದ ಒತ್ತಡದಿಂದ ಒಬ್ಬರ ಮೇಲೆ ಹರಿಹಾದುದನ್ನು ಗಮನಿಸಿಲ್ಲ. ಈ ದೃಷ್ಟಿಯಿಂದ ಜಗದ್ಗುರುಗಳ ಬದುಕು ಕರ್ಮಯೋಗದ ಆಶಾಶೀಲ ಪುಷ್ಪ! ಶಿಖರದಿಂದ ಶಿಖರಕ್ಕೆ ಏರುತ್ತಿರುವ ಇವರ ಜೀವನ ವೃತ್ತಾಂತವನ್ನು ಸಾರಗ್ರಹಣ ಮಾಡುವವೇ ಒಂದು ಸಾಹಸ.

## "ರಜತ ದೀಪ್ತಿ": ದಾಖಲೆಯ ಪುಸ್ತಕ

ಸಹಸ್ರಮುಖವಾಗಿ ಧುಮುಕಿದ ಇವರ ಪರಿಶ್ರಮದ ನಿರಂತರ ಕಾಯಕದ ಹೊಳೆ ಕನ್ನಡ ನಾಡಿನ ಶರಣಬಾಂಧವರಲ್ಲಿ ಶಕ್ತಿ ತುಂಬಿದೆ. ಇದೆಲ್ಲವೂ ಓರ್ವ ಅಸಾಧಾರಣ ವ್ಯಕ್ತಿಯ 'ರೆಕಾರ್ಡ್' ಆಗಿ ನಿಲ್ಲಬೇಕಾದ ಸಾಹಸ ಸಾಧನೆ. ಮನುಷ್ಯರ ಮರಹು ಅತ್ಯಂತ ಶೀಘ್ರ. ಶ್ರೀಮಠದ ಪ್ರತಿಯೊಂದು ಕಲ್ಲು-ಕಂಬ-ಶಿಲೆ-ತೊಲೆಗಳ ಹಿಂದೆ ಇವರ ಸಮರ್ಪಿತ ಕಾಯಕದ ಸೇವೆ ಇದೆ. ಮಠದ ಕಾರ್ಯಕ್ಷೇತ್ರ ನೂರುಮುಖ. ಧರ್ಮ-ಸಾಹಿತ್ಯ-ಸಮಾಜ-ಕಲೆ-ಸಂಶೋಧನೆ-ಸಾಧನೆ-ಬೋಧನೆ - ಆರೋಗ್ಯ - ಪ್ರಕಾಶನ-ಪ್ರಚಾರ-ಪ್ರಸಾರ-ಪ್ರಸಾದ-ಪತ್ರಿಕೆ ಹೀಗೆ ನೂರೆಂಟು ಕೊಂಬು ಕವಲುಗಳು. ಕೋಟ್ಯಾಂತರ ಹಣ ವೆಚ್ಚ, ಜೊತೆಗೆ ಪಾದಯಾತ್ರೆ, ದೇಶ-ವಿದೇಶಗಳಲ್ಲಿ ಧರ್ಮಪ್ರಸಾರ, ನಾನಾಜಾತಿಗಳಲ್ಲಿ ಸಾಮರಸ್ಯ, ಹಿಂದೂ-ಮುಸ್ಲಿಂ ಸಾಮರಸ್ಯ, ಗುರು-ವಿರಕ್ತ ಸಾಮರಸ್ಯ ಹೀಗೆ ಸೇವೆ ಹಾಗೂ ಸಾಮರಸ್ಯದ ಸಾಕಾರಮೂರ್ತಿ ಶ್ರೀಗಳು. ಇವೆಲ್ಲವುಗಳನ್ನು ಅಧಿಕೃತ ದಾಖಲೆಗೊಳಿಸುವ 'ಮಠದ ಗೆಝೆಟ್' ರೂಪದಲ್ಲಿ ಪ್ರಕಟಗೊಳಿಸುವ ಯೋಜನೆ ನಮ್ಮದಾಯಿತು. ಆದ್ದರಿಂದ ಈ ಪುಸ್ತಕ (ರಜತ ದೀಪ್ತಿ) 'ಮಠದ ಅಧಿಕೃತ ದಾಖಲೆ ಪುಸ್ತಕ' (ಗೆಝೆಟ್) ಮಾದರಿಯಲ್ಲಿ ಸಾಧ್ಯವಾಯಿತು. ಪೂಜ್ಯ ಶ್ರೀಗಳ ೨೫ ವರ್ಷಗಳ ಕಾರ್ಯರಂಗವನ್ನು ಸಾಧ್ಯವಿದ್ದಷ್ಟು ವಿಶ್ಲೇಷಿಸಿ ನಿದರ್ಶಿಸಲು ಇಲ್ಲಿ ಪ್ರಯತ್ನಿಸಿದ್ದೇವೆ. ಆದರೂ ಕೆಲವು ಘಟನೆಗಳು ಪುಸ್ತಕ ಬಾಹುಳ್ಯದ ಭಯದಿಂದ ಇಲ್ಲವೆ ಮರಹಿನಿಂದ ಮರೆತೂ ಹೋಗಿರಬಹುದು. ಅದಕ್ಕಾಗಿ ವಿಷಾದಿಸುತ್ತೇವೆ. ಯಾರಾದರೂ ಗಮನಕ್ಕೆ ತಂದರೆ, ಎರಡನೇ ಮುದ್ರಣದಲ್ಲಿ ಸೇರ್ಪಡೆ ಮಾಡಲು ಪ್ರಯತ್ನಿಸುತ್ತೇವೆ. ಈ ಗ್ರಂಥ ಪಕ್ಷಿನೋಟವಾದರೂ, ವಿಸ್ತರಿಸಿ ಬರೆಯುವವರಿಗೆ ಸಾವಿರಾರು ಪುಟಗಳ ಪೂರೈಕೆ ನೀಡುವ ಸೂಚನೆ ಹೊಂದಿದೆ. ಅಂಥವರಿಗೆ ಅಭ್ಯಾಸ ಯೋಗ್ಯ ಪುಸ್ತಕವಾಗಿ ಇದು ಬಂದಿದೆ.

## ಅರವತ್ತರ ಅರುಹಿನ ಶಿಖರಕ್ಕೆ ಮತ್ತು ಆಚೆಗೆ:

೬೦ ವರ್ಷಗಳ ಸಮಗ್ರ ಸಮರ್ಪಣೆಯ ಅಸಾಧಾರಣ ಸೇವೆಯಿಂದ ಕರ್ನಾಟಕದಲ್ಲಿ ಶ್ರೀ ಮೂರುಸಾವಿರಮಠ ಅಗ್ರಪಂಕ್ತಿಯಲ್ಲಿ ನಿಂತಿದೆ. ಇಂದು ಪ್ರಥಮ ದರ್ಜೆಯ ಪ್ರಥಮ ಸ್ಥಾನ ಸಲ್ಲುವದಾದರೆ ಇದೇ ಮಠಕ್ಕೆ ಸಲ್ಲಬೇಕು. ಕರ್ನಾಟಕದ ಮಠಾಧೀಶರಲ್ಲೇ ಮೊದಲ ಬಾರಿಗೆ ಸಾಗರೋತ್ತರಯಾನ ಕೈಕೊಂಡು, ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ ಪಾಲ್ಗೊಂಡು ಬಂದುದಾಯಿತು. ಇನ್ನು ಮುಂದೇನು? ಜಗದ್ಗುರುಗಳು ಹೇಳುತ್ತಾರೆ ಮುಂದಿನ ದಾರಿ ಇನ್ನೂ ಹಿರಿದಾಗಿದೆ ಎಂದು. ಮೊಟ್ಟಮೊದಲು ಕರ್ನಾಟಕದಲ್ಲಿ ಅದರಲ್ಲಿಯೂ ಹುಬ್ಬಳ್ಳಿಯಲ್ಲಿ-ಮಹಿಳಾ

ವಿದ್ಯಾಲಯ ಸ್ಥಾಪಿಸುವ ಸೂಚನೆ ನೀಡಿದರು. ನಂತರ ಅನೇಕ ಶಿಕ್ಷಣ ತಜ್ಞರು, ಮಾನ್ಯ ಶ್ರೀ ಬಿ. ಡಿ. ಜತ್ತಿಯವರೂ ಮುಂತಾದವರು ಕಿತ್ತೂರಿನಲ್ಲಿ ಮಾಡಿದರೆ ಒಳಿತೆಂದು ತಿಳಿಸಿದ ನಂತರ, ಎಲ್ಲಿಯೇ ಆಗಲಿ ಉತ್ತರ ಕರ್ನಾಟಕದಲ್ಲಿ ಮಾಡಿದರೆ ಸಾಕೆಂಬುದು ಜಗದ್ಗುರುಗಳು ಈ ಅಭಿಪ್ರಾಯಕ್ಕೆ ಬಂದಿದ್ದಾರೆಂದು ತಿಳಿದು ಬಂದಿದೆ. ವೈದ್ಯಕೀಯ ಕಾಲೇಜು ತೆರೆಯುವದು, ಬೃಹತ್‌ಪ್ರಮಾಣದ ಕಲ್ಯಾಣ ಮಂಟಪ, ವೀರಶೈವ ವಸ್ತುಸಂಗ್ರಹಾಲಯ, ಸಂಶೋಧನ ಮಂದಿರ ಮುಂತಾದವುಗಳನ್ನು ಕಟ್ಟುವ ಆಕಾಂಕ್ಷೆ ಇದೆ. ಇವರ ಸಂಕಲ್ಪಕ್ಕೆ ಸಕಲ ಸದ್ಭಕ್ತರು ಸಮವಾಗಿ ಸಹಯೋಗ ನೀಡಿದರೆ ಮಾತ್ರ ಅಪೇಕ್ಷೆ ಇದೆ ಎಂದಿದ್ದಾರೆ. ಜಗತ್ತಿನ ೨೦-೨೫ ಭಾಷೆಗಳಲ್ಲಿ ವೀರಶೈವ ಸಾಹಿತ್ಯ-ಸಿದ್ಧಾಂತ-ಇತಿಹಾಸಗಳನ್ನು ವಿಸ್ತೃತಪಡಿಸುವ ಗುರಿ ಇದೆ. ಇದೀಗ ೭೧ನೆಯ ವಯಸ್ಸಿನಲ್ಲಿದ್ದ ಶ್ರೀ ಜಗದ್ಗುರುಗಳು ತಮ್ಮ ಕಾರ್ಯ ರಂಗದ ವ್ಯಾಪ್ತಿಗೆ ತಕ್ಕಂತೆ ೭೩ರ ಸುಮಾರಿಗೆ ಒಬ್ಬ ಸಮರ್ಥ ಮರಿದೇವರನ್ನು ಸಿದ್ಧಪಡಿಸಿ ಬೆಳೆಸಬೇಕೆಂಬ ಲವಲವಿಕೆ ಇದೆ. ಅವರಿಗೆ ೫-೬ ವರ್ಷ ಟ್ರೇನಿಂಗ್ ಕೊಡುವ ಆಶೆಯನ್ನು ಸಹ ಇಟ್ಟುಕೊಂಡಿದ್ದಾರೆ. ಇದಲ್ಲದೆ ಸಾಧನೆಯ ದಾರಿ ಇನ್ನೂ ದೂರ. ಯೋಗ ಸಾಧನೆಯ ಒಲವು ಎಷ್ಟೇ ಇದ್ದರೂ ಕಾರ್ಯರಂಗದಿಂದ ಪ್ರಗತಿ ಸಾಧ್ಯವಾಗಿಲ್ಲ. ಇನ್ನು ಮೇಲೆ ಹೆಚ್ಚು ಹೆಚ್ಚು ಅಂತರ್ಮುಖಿಯಾಗಿ ತೇಲಿ ಹೋಗುವ ಅಪೇಕ್ಷೆ ಹೆಚ್ಚಾಗುತ್ತಿದೆ. ವಾರಕ್ಕೆ ಒಂದು ದಿನ ಮಾಡುತ್ತ ಬಂದಿರುವ ಮೌನವ್ರತದ ಅವಧಿಯನ್ನು ಅಧಿಕಗೊಳಿಸುತ್ತ ಹೋಗುವ ಲವಲವಿಕೆ ಇದೆ. ಅಂತ ರಂಗದ ಅರುಹಿನ ಕೂಗು ಕೈಬೀಸಿ ಕರೆಯುತ್ತಿದೆ. ಇದಕ್ಕೆಲ್ಲಾ ಸಮಸ್ತ ಭಕ್ತರ ಅಭಿಮಾನ-ಪ್ರೋತ್ಸಾಹ-ಪ್ರೀತಿ ಬೇಕೆಂದು ಹೇಳುತ್ತಾರೆ. ಪೂಜ್ಯ ಜಗದ್ಗುರುಗಳು ಯಾವ ಕಾರ್ಯವನ್ನೇ ಮಾಡಲಿ ಭಕ್ತರನ್ನು ಬಿಟ್ಟು ಮಾಡಿಯೇ ಇಲ್ಲ. ಹೊಸದಾದ ಕಾರ್ಯ ಏನೇ ಇರಲಿ, ನೂರಾರು ಭಕ್ತರಿಗೆ ತಮ್ಮ ಯೋಜನೆಗಳನ್ನು ತೋರಿಸಿ, ತರ್ಕಿಸಿ, ಪರಾಮರ್ಶಿಸಿ ಕಾರ್ಯರಂಗಕ್ಕೆ ಧುಮುಕುವ ಗುಣ ಇವರದು. ಇದರಿಂದ ಪೂರ್ವ ಮುನ್ನೆಚ್ಚರಿಕೆ ಬೆಳೆದು, ವಿಷಯ ಸಾಧಿತವಾಗುತ್ತ ಬಂದಿವೆ.

ಆದ್ದರಿಂದ ಸವೆದ ದಾರಿಗಿಂತಲೂ ಸವೆಯದ ದಾರಿ ಇನ್ನೂ ದೂರ. ಅರವತ್ತರ ಅರುಹಿನ ಬೆಟ್ಟಕ್ಕೆ ಏರಬೇಕಾದರೆ ರಾಜಯೋಗದ ರಾಜಋಷಿಯೇ ಆಗಬೇಕಲ್ಲವೆ? ಅರವಿಂದಾಶ್ರಮ, ರಾಮಕೃಷ್ಣಾಶ್ರಮ, ಈಶ್ವರೀಯ ವಿಶ್ವ ವಿದ್ಯಾಲಯದಂಥ ಮುಂದುವರೆದ ಯೋಗಸಂಸ್ಥೆಗಳಿಗೆ ಮೇಲಿಂದ ಮೇಲೆ ಹೋಗಿ ಯೋಗದ ಒಲವು ಅರಳಿಸಿಕೊಂಡಿದ್ದಾರೆ. ಮೇಲಾಗಿ 'ಶಿವನೊಬ್ಬನೇ ಸತ್ಯ' ಎಂಬ ಶಿವಯೋಗದ ಜ್ಞಾನಪೂರ್ಣ ಪರಂಜ್ಯೋತಿಯ ದಾರಿಯನ್ನು ಶರಣರು ನಿಚ್ಚಳ ವಾಗಿ ತೋರಿಸಿಕೊಟ್ಟಿದ್ದಾರೆ. ಈ ಎಲ್ಲ ಹಿನ್ನೆಲೆಯಲ್ಲಿ ಮುನ್ನಡೆಗೆ ಸಾಗುವ ಸಜ್ಜಿನಲ್ಲಿ ಜಗದ್ಗುರುಗಳು ಇದ್ದಾರೆ. ಅವರು ಸಂಕಲ್ಪ ವೀರರು. ಯಾವ ಸಂಕಲ್ಪ

ಮಾಡುವರೋ ಆ ಗುರಿ ಮುಟ್ಟುವವರೆಗೂ ಪರಿಶ್ರಮಿಸದೇ ಬಿಟ್ಟವರಲ್ಲ. ಪ್ರಾಮಾಣಿಕ ಸಾಹಸ ಇವರ ಆತ್ಮದ ಉಸಿರು. ಅವರ ಸಂಕಲ್ಪಗಳು ಶಿವಯೋಗದ ಕಿಡಿಗಳಾಗಿವೆ. ಸಿದ್ಧರಾಮನ ಕರ್ಮಯೋಗದಲ್ಲಿಯೇ ಕಾಯ ಸವೆದು ಹೋಯಿತು. ೭೩ ರ ನಂತರ ಇನ್ನು ಮೇಲೆ ಏಕಾಂತ ಶಿವಯೋಗ, ಭಗವಂತನೊಂದಿಗೆ ಏಕರಸಾವಸ್ಥೆಯಲ್ಲಿ ಒಂದಾಗಿ, ಯುಗಕಲ್ಪದ ಕಲ್ಪವೃಕ್ಷದಲ್ಲಿ ಸತ್ಯಸಾಕ್ಷಾತ್ಕಾರ ಮಾಡಿಕೊಳ್ಳುವ ಆತ್ಮನ ಕೂಗು ಅವರಿಗಿದೆ. ಶಾಂತಿಯ ಸಾಗರನಾದ, ಆನಂದ ಸಾಗರನಾದ, ಸತ್ಯದ ಸಾಗರನಾದ ಶಿವನೊಂದಿಗೆ ಸಮರಸ ಸಂಪಾದಿಸುವ ಶೂನ್ಯ ಸಂಪಾದನೆಯ ಸತ್ಯ ಶರಣರ ಕೂಗು ಕರೆಯುತ್ತಿದೆ. ಕಮಲಪುಷ್ಪ ಸಮಾನವಾಗಿ ವಿಮಲ ಆತ್ಮ ಅರಳುತ್ತಿದೆ. ಜ್ಯೋತಿಯ ಜಂಗಮ ಶಾಂತಿಧಾಮದತ್ತ ಸಾಗುವ ಲಿಂಗದ ಕರೆ ಕರೆಯುತ್ತಿದೆ. ಅವರ ಅಂತರಂಗದ ಅರುಹಿನ ಸಾಧನೆಗೆ ಸಕಲರೂ ತಕ್ಕ ವಾತಾವರಣ ನೀಡಿ, ಅವರ ಮಠವೇ ಮುಕ್ತಿಧಾಮವಾಗುವಂತೆ ಸಹಯೋಗ ನೀಡಿ ಭಗವಂತನ ಸಂಕಲ್ಪಕ್ಕೆ ಸಹಕಾರ ನೀಡಬೇಕು.

**ಮೂರುಸಾವಿರಮಠದ ಮಡಿಲ ವಿವಿಧ ವಿದ್ಯಾ ಸಂಸ್ಥೆಗಳು:**

೧) ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘ, ಹುಬ್ಬಳ್ಳಿ
೨) ಶ್ರೀ ಜಗದ್ಗುರು ಗಂಗಾಧರ ಗಂಡುಮಕ್ಕಳ ಪ್ರೌಢಶಾಲೆ, ಹುಬ್ಬಳ್ಳಿ
೩) ಶ್ರೀ ಮೂರುಸಾವಿರಮಠ ಹೆಣ್ಣುಮಕ್ಕಳ ಪ್ರೌಢಶಾಲೆ, ಹುಬ್ಬಳ್ಳಿ
೪) ಹೆಣ್ಣುಮಕ್ಕಳ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಹುಬ್ಬಳ್ಳಿ
೫) ಮಹಿಳಾ ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ
೬) ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಮಹಾವಿದ್ಯಾಲಯ, ಹುಬ್ಬಳ್ಳಿ
೭) ಶ್ರೀ ಕುಮಾರೇಶ್ವರ ವೈದಿಕ ಜ್ಯೋತಿಷ್ಯ ಪಾಠಶಾಲೆ, ಹುಬ್ಬಳ್ಳಿ
೮) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯ, ಹುಬ್ಬಳ್ಳಿ
೯) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಜನರಲ್ ಹಾಸ್ಟೇಲ್, ಹುಬ್ಬಳ್ಳಿ
೧೦) ಅಕ್ಕ ಉಳವಪ್ಪ ವಿದ್ಯಾರ್ಥಿನಿಲಯ, ಹುಬ್ಬಳ್ಳಿ
೧೧) ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ, ಹುಬ್ಬಳ್ಳಿ
೧೨) ಶ್ರೀ ಕುಮಾರೇಶ್ವರ ಅತಿಥಿಗೃಹ, ಹುಬ್ಬಳ್ಳಿ
೧೩) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪೂಜಾ ಸೇವಾ ಸಮಿತಿ, ಹುಬ್ಬಳ್ಳಿ
೧೪) ಸಂಸ್ಕೃತಿ ಪ್ರಚಾರೋಪನ್ಯಾಸ ಮಾಲೆ, ಹುಬ್ಬಳ್ಳಿ
೧೫) 'ಪರಂಜ್ಯೋತಿ' ಧಾರ್ಮಿಕ ಮಾಸಪತ್ರಿಕೆ, ಹುಬ್ಬಳ್ಳಿ
೧೬) ಕನ್ನಡ ಗ್ರಂಥ ಪುರಸ್ಕಾರ ಸಮಿತಿ, ಹುಬ್ಬಳ್ಳಿ
೧೭) ವೀರಶೈವ ಭಾರತಿ, ಹುಬ್ಬಳ್ಳಿ
೧೮) ಲಿಂಗರಾಜ ಪ್ರಸಾದ ನಿಲಯ, ಹುಬ್ಬಳ್ಳಿ

೧೯) ಗುರುಸಿದ್ಧೇಶ್ವರ ಗ್ರಂಥಾಲಯ, ಹುಬ್ಬಳ್ಳಿ
೨೦) ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಹುಬ್ಬಳ್ಳಿ
೨೧) ಅಸುಂಡಿ ಚನ್ನಮಲ್ಲಪ್ಪ ಕಲ್ಯಾಣಮಂಟಪ, ಹುಬ್ಬಳ್ಳಿ
೨೨) ಬಸವ ಮಂಗಲ ಭವನ, ಧಾರವಾಡ
೨೩) ಹೆಣ್ಣುಮಕ್ಕಳ ವಸತಿಗೃಹ, ಹುಬ್ಬಳ್ಳಿ
೨೪) ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ, ಹುಬ್ಬಳ್ಳಿ
೨೫) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ, ಘಟಪ್ರಭಾ
೨೬) ನರ್ಸುಗಳ ಶಾಲೆ, ಘಟಪ್ರಭಾ (School of Nurses)
೨೭) ಕ್ಷಯರೋಗ ಆಸ್ಪತ್ರೆ, ಘಟಪ್ರಭಾ
೨೮) ಶ್ರೀ ಜಗದ್ಗುರು ಗಂಗಾಧರ ಬಡರೋಗಿಗಳ ಉಚಿತ ಪ್ರಸಾದ ನಿಲಯ, ಘಟಪ್ರಭಾ
೨೯) ಕಾರ್ಯನಿರತ ಮಹಿಳೆಯರ ವಸತಿಗೃಹ, ಹುಬ್ಬಳ್ಳಿ
೩೦) ಶ್ರೀ ಜಗದ್ಗುರು ಗಂಗಾಧರ ಹಿಂದಿ ವಿದ್ಯಾಲಯ, ಹುಬ್ಬಳ್ಳಿ
೩೧) ವಿಜಯಮಹಾಂತೇಶ್ವರ ಲಲಿತ ಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ
೩೨) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ನರ್ಸರಿ ಶಾಲೆ, ಹುಬ್ಬಳ್ಳಿ
೩೩) ಅನ್ನದಾಸೋಹ ಸಮಿತಿ, ಮೂರುಸಾವಿರಮಠ, ಹುಬ್ಬಳ್ಳಿ
೩೪) ವಿಶ್ವವಿಭೂತಿ ಬಸವೇಶ್ವರ ಪ್ರಸಾದನಿಲಯ ಮೂರುಸಾವಿರಮಠ, ಹುಬ್ಬಳ್ಳಿ
೩೫) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕಲ್ಯಾಣಮಂಟಪ ಓಲೆಮಠ, ಹುಬ್ಬಳ್ಳಿ
೩೬) ಇಂಗ್ಲಿಷ ಮೀಡಿಯಮ್ ಸ್ಕೂಲ, ಹುಕ್ಕೇರಿ
೩೭) ಶ್ರೀ ಜಗದ್ಗುರು ಗಂಗಾಧರ ಗ್ರಂಥ ಭಾಂಡಾರ, ಹುಬ್ಬಳ್ಳಿ
೩೮) ವಿಶ್ವ ವೀರಶೈವ ಚೆನ್ನಬಸವೇಶ್ವರ ಸಂಶೋಧನ ಕೇಂದ್ರ, ಹುಬ್ಬಳ್ಳಿ

**ಶ್ರೀ ಜಗದ್ಗುರು ಮೂರುಸಾವಿರಮಠದಿಂದ ಸಹಾಯ ಪಡೆದ ಸಂಘ-ಸಂಸ್ಥೆಗಳು:**

೧) ಲಿಂಗಾಯತ ವಿದ್ಯಾವರ್ಧಕ ನಿಧಿ
೨) ಶ್ರೀ ಶಿವಯೋಗಮಂದಿರ
೩) ಗೋ ರಕ್ಷಣಾ ಸಂಸ್ಥೆ, ಹುಬ್ಬಳ್ಳಿ
೪) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ವಿದ್ಯಾರ್ಥಿನಿಲಯ
೫) ಗಡಹಿಂಗ್ಲಜ ಹೈಸ್ಕೂಲ, ಗಡಹಿಂಗ್ಲಜ
೬) ಅನಾಥ ಬಾಲಕಾಶ್ರಮ, ಹುಬ್ಬಳ್ಳಿ
೭) ಶ್ರೀ ಜಗದ್ಗುರು ಗಂಗಾಧರ ವಾಣಿಜ್ಯ ಮಹಾವಿದ್ಯಾಲಯ, ಹುಬ್ಬಳ್ಳಿ

೮) ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಾಥಮಿಕ ಶಿಕ್ಷಕರ ಪ್ರಶಿಕ್ಷಣ ಮಹಾ ವಿದ್ಯಾಲಯ, ಹುಬ್ಬಳ್ಳಿ
೯) ಶ್ರೀ ಕಾಡಸಿದ್ಧೇಶ್ವರ ಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ
೧೦) ಶ್ರೀ ವಿಜಯಮಹಾಂತೇಶ್ವರ ಪ್ರೌಢಶಾಲೆ, ಹುನಗುಂದ
೧೧) ಶ್ರೀ ಜಗದ್ಗುರು ಗಂಗಾಧರ ಗಾಂಧಿ ಸ್ಮಾರಕ ನೇತ್ರ ಚಿಕಿತ್ಸಾ ಕೇಂದ್ರ, ಹುಬ್ಬಳ್ಳಿ
೧೨) ಕೈ. ಶ್ರೀ ಎಸ್. ಎಸ್. ಬಸವನಾಳ ಸ್ಮಾರಕ ನಿಧಿ ಸಮಿತಿ, ಧಾರವಾಡ
೧೩) ಅಕ್ಕನ ಬಳಗ, ಹುಬ್ಬಳ್ಳಿ
೧೪) ಮಹಿಳಾ ವಿದ್ಯಾಪೀಠ, ಹುಬ್ಬಳ್ಳಿ
೧೫) ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲೆ, ಹಾವೇರಿ
೧೬) ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ
೧೭) ಶ್ರೀ ಕಾಡಸಿದ್ಧೇಶ್ವರ ಪ್ರೌಢಶಾಲೆ, ಹುಕ್ಕೇರಿ
೧೮) ಶ್ರೀ ಕುಮಾರೇಶ್ವರ ಆಯುರ್ವೇದ ಚಿಕಿತ್ಸಾಲಯ, ಧಾರವಾಡ
೧೯) ಶ್ರೀ ಕುಮಾರೇಶ್ವರ ಉಚಿತ ಆಯುರ್ವೇದ ಚಿಕಿತ್ಸಾಲಯ, ಧಾರವಾಡ
೨೦) ಶ್ರೀ ವಿಜಯ ಮಹಾಂತೇಶ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಇಲಕಲ್ಲ
೨೧) ಕನ್ನಡ ಗಂಡುಮಕ್ಕಳ ಪ್ರಾಥಮಿಕ ಶಾಲೆ, ಮಲ್ಲಾಪೂರ
೨೨) ಕನ್ನಡ ಗಂಡುಮಕ್ಕಳ ಪ್ರಾಥಮಿಕ ಶಾಲೆ, ಕುಸುಗಲ್ಲ
೨೩) ರಾಷ್ಟ್ರೀಯ ರಕ್ಷಣಾ ನಿಧಿ ಸಮಿತಿ, ಭಾರತ ಸರಕಾರ
೨೪) ಬಡವಿದ್ಯಾರ್ಥಿಗಳ ನಿಧಿ ಸಮಿತಿ, ಕರ್ನಾಟಕ ರಾಜ್ಯ ಸರಕಾರ
೨೫) 'ಬಸವ ಭವನ' ನಿರ್ಮಾಣ ಸಮಿತಿ, ಮುಂಬೈ
೨೬) ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆ, ಹುಬ್ಬಳ್ಳಿ
೨೭) ಗಂಡುಮಕ್ಕಳ ಪ್ರಾಥಮಿಕ ಶಾಲೆ, ಹುಬ್ಬಳ್ಳಿ
೨೮) ಪ್ರಾಥಮಿಕ ಶಾಲೆ, ಶಿರಬಡಗಿ
೨೯) ಶ್ರೀ ಗುರುಸಿದ್ಧೇಶ್ವರ ಸಹಕಾರಿ ಬ್ಯಾಂಕ, ಹುಬ್ಬಳ್ಳಿ
೩೦) ವೀರಶೈವ ಸಂಘಟನಾ ಸಮಿತಿ, ಹುಬ್ಬಳ್ಳಿ
೩೧) ಕೆಲವು ಮಠಗಳ ಜೀರ್ಣೋದ್ಧಾರಕ್ಕಾಗಿ ಸಹಾಯ ನೀಡಿದ್ದು
೩೨) ಶ್ರೀ ಜಗದ್ಗುರು ಗಂಗಾಧರ ಮೂರುಸಾವಿರಮಠ ಕೈಗಾರಿಕಾ ತರಬೇತಿ ಸಂಸ್ಥೆ, ಇಲಕಲ್ಲ
೩೩) ಪ್ರಾಥಮಿಕ ಶಾಲೆ, ಘಟಪ್ರಭಾ
೩೪) ಭೂಮರಡ್ಡಿ ಇಂಜನಿಯರಿಂಗ ಕಾಲೇಜ, ಹುಬ್ಬಳ್ಳಿ

೩೫) ನೀಲಕಂಠೇಶ್ವರ ಹಾಯ್‌ಸ್ಕೂಲ, ಯಾದವಾಡ, ಜಿ॥ ಬೆಳಗಾಂವ
೩೬) ಪ್ರಾಥಮಿಕ ಶಾಲೆ, ಕಮರಿಪೇಟೆ, ಹುಬ್ಬಳ್ಳಿ
೩೭) ವಿಶ್ವ ಹಿಂದು ಪರಿಷತ್‌ಗೆ ಸಹಾಯ ಧನ
೩೮) ದತ್ತಮಂದಿರ, ಗುರುಸಿದ್ಧೇಶ್ವರ ನಗರ, ಹುಬ್ಬಳ್ಳಿ
೩೯) ಅಮ್ಮ ಹಾಸ್ಟೇಲ್, ಬೆಂಗಳೂರು
೪೦) ಶ್ರೀ ಜಗದ್ಗುರು ಗಂಗಾಧರ ಅಂಗವಿಕಲರ ಸಂಸ್ಥೆ, ವೀರಾಪೂರ ಓಣಿ, ಹುಬ್ಬಳ್ಳಿ
೪೧) ಶ್ರೀ ಜಗದ್ಗುರು ಗಂಗಾಧರ ಮೂರುಸಾವಿರಮಠ ಹಾಸ್ಪಿಟಲ್, ಸಸಿವಾಳ (ತಾ. ಅರಸಿಕೆರೆ, ಜಿ. ಹಾಸನ)
೪೨) ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಶಿಷ್ಯವೇತನ

## ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ ಮೂರುಸಾವಿರಮಠ ಹುಬ್ಬಳ್ಳಿಯ ಗ್ರಂಥಮಾಲೆಯಲ್ಲಿ ಪ್ರಕಟವಾದ ಗ್ರಂಥಗಳು

### ಸಂಸ್ಕೃತ

| ಪುಸ್ತಕದ ಹೆಸರು | ಲೇಖಕರ ಹೆಸರು |
|---|---|
| ೧ ವೀರಶೈವಾನಂದ ಚಂದ್ರಿಕೆ | ಸಂ. ಗುರುಲಿಂಗದೇವರು |
| ೨ ವಿಶೇಷಾರ್ಥ ಪ್ರಕಾಶಿಕಾ | ಮಾಯಿದೇವ ವಿರಚಿತ |
| ೩ ತಂತ್ರ ಸಂಗ್ರಹ | ಸಂ. ಶಂಕರಪ್ಪ ಟೊಪಗಿ |
| ೪ ಶಿವಮಂತ್ರ ಜಪವಿಧಿ | |
| ೫ ಸಂಸ್ಕೃತ ಪ್ರವೇಶ | ಪಂ. ಬಸವರಾಜ ಶಾಸ್ತ್ರಿಗಳು |
| ೬ ಸಂಸ್ಕೃತ ವ್ಯಾಕರಣ ದರ್ಪಣ | ಪಂ. ಬಸವರಾಜ ಶಾಸ್ತ್ರಿಗಳು |
| ೭ ಸಂಸ್ಕೃತ ಮಾರ್ಗದರ್ಶಃ | ಪಂ. ಬಸವರಾಜ ಶಾಸ್ತ್ರಿಗಳು |
| ೮ ವೀರಶೈವ ಸದಾಚಾರ ಸಂಗ್ರಹಃ | ಪಂ. ಬಸವರಾಜ ಶಾಸ್ತ್ರಿಗಳು |
| ೯ ಶ್ರೀಮತ್ ಕುಮಾರ ಗೀತಾ | ಡಾ॥ ಪುಟ್ಟರಾಜ ಗವಾಯಿಗಳು |
| ೧೦ ಹಾನಗಲ್ ಶ್ರೀ ಕುಮಾರ ಸ್ವಾಮಿನಾಂ ಜೀವನ ಚರಿತಂ | |
| ೧೧ ಶಿವಾದ್ಯಷ್ಟಕ ಸ್ತೋತ್ರಮಣಿಮಾಲಾ | ಕಂದಗಲ್ಲ ಪರ್ವತ ಸುಧೀಕೃತ |
| ೧೨ ಶ್ರೀ ಕರಡೀಶ ಚರಿತಾಮೃತ ಚಂಪೂ ಪ್ರಬಂಧ | ಸಂ॥ ಡಾ॥ ಗುರುಸಿದ್ಧ ದೇವರು ಕೆಳದಿ |
| ೧೩ ಸಿದ್ಧೇಶ್ವರ ವಚನ | ಸಂ॥ ಚನ್ನಮಲ್ಲಪ್ಪ ಮೇಷ್ಟ್ರು |
| ೧೪ ಕಾಡಸಿದ್ಧೇಶ್ವರ ವಚನ | ಸಂ॥ ಚಂ. ಶಾಸ್ತ್ರಿಗಳು ಹೊಳಲು |

| ಪುಸ್ತಕದ ಹೆಸರು | ಲೇಖಕರ ಹೆಸರು |
|---|---|
| ೧೫ ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು | ಸಂ॥ ಚಂ. ಶಾಸ್ತ್ರಿಗಳು, ಹೊಳಲು |
| ೧೬ ಹರಿಹರದೇವ | ಸಂ॥ ಕೆ. ಜಿ. ಕುಂದಣಗಾರ |
| ೧೭ ಕನ್ನಡ ನೀತಿಶತಕ | ಸದಾಶಿವ ಶಾಸ್ತ್ರಿಗಳು, ಹುಕ್ಕೇರಿ |
| ೧೮ ಅಸ್ಪೃಶ್ಯತಾ ನಿವಾರಣೆ | — |
| ೧೯ ಬಸವಜಯಂತಿ ತತ್ವಗುಚ್ಛ | ಗಂಗಾಧರಪ್ಪ ಹೊದ್ಲೂರು |
| ೨೦ ಲಿಂ॥ ಚಟ್ಟಿಮಾಮಲೆದಾರರ ಚರಿತ್ರೆ | ತು. ರ. ಕೋಪರ್ಡೆ |
| ೨೧ ಲಿಂ॥ ಜಗದ್ಗುರು ಗಂಗಾಧರ ಸ್ವಾಮಿಗಳ ಲಾವಣಿ | — |
| ೨೨ ಗುಮ್ಮಗೋಳಮಠದ ರುದ್ರಯ್ಯನವರ ಚರಿತ್ರೆ | ತುಕಾರಾಮ ಕೋಪರ್ಡೆ |
| ೨೩ ರಘುವಂಶ ರಹಸ್ಯ | — |
| ೨೪ ಬಸವಸ್ತವ ಮಂಜರಿ | ದೊಡ್ಡಯ್ಯ ಚಿಕ್ಕಮಠ |
| ೨೫ ಗುರು ಮಹಿಮೆ | ನ. ಶ್ರೀ. |
| ೨೬ ಕ್ಷೇತ್ರಜ್ಞ, ಸುಮನೋವಾದಂ | ಸಂ॥ ಪಂ. ಬಸವರಾಜ ಶಾಸ್ತ್ರಿಗಳು, ಪಗಡದಿನ್ನಿ |
| ೨೭ ಲಿಂಗಲೀಲಾ ವಿಲಾಸ ಚರಿತಂ | — |
| ೨೮ ಚಿದಾನಂದ ಚಿಲುಮೆ | ಆರ್. ಕೆ. ಹಿರೇಮಠ |
| ೨೯ ಹೂವು ಹಣ್ಣು | ಸಂಗಮೇಶ ಹೊಸಮನಿ |
| ೩೦ ಮಣಿ ವಚನಗಳು | ಡಾ॥ ಶ್ರೀ ಜ. ಚ. ನಿ. |
| ೩೧ ಲಿಂ॥ ಜಗದ್ಗುರು ಗುರುಸಿದ್ಧ ಸ್ವಾಮಿಗಳ ಚರಿತ್ರೆ | — |
| ೩೨ ಆನಂದ ಮಾಲಾ | ಆನಂದ ಕವಿ, ಕುರುಗುಂದ |
| ೩೩ ಅಥಣಿ ಮರುಳಸಿದ್ಧ ನಾಮಾವಳಿ | ಶ್ರೀ ಮೂ. ಜ. ಗಂ. |
| ೩೪ ಶ್ರೀಗುರುಸಿದ್ಧೇಶ್ವರ ಸುಪ್ರಭಾತ | ಶ್ರೀ ಗಂಗಪ್ಪ ವಾಲಿ |
| ೩೫ ವಚನಶಾಸ್ತ್ರ ರಹಸ್ಯ | ಸಂ॥ ರುಗನಾಥ ದಿವಾಕರ |
| ೩೬ ಜೀವನ ವಿಕಾಸ | ಶ್ರೀ ಮೂ. ಜ. ಗಂ. |
| ೩೭ ವಿವೇಕ ಚಿಂತಾಮಣಿ | ಸಂ॥ ಉಮಾಪತಿ ಶಾಸ್ತ್ರಿಗಳು |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೩೮ | ಅಮೃತ ಬಿಂದು (ಭಾಗ–೧) | ಶ್ರೀ ಮೂ. ಜ. ಗಂ. |
| ೩೯ | ಆಶೀರ್ವಾಣಿ | ,, |
| ೪೦ | ಸಂಸ್ಕೃತಿ | ಸ. ಸ. ಮಾಳವಾಡ |
| ೪೧ | ಶ್ರೀಗುರು ಕುಮಾರೇಶ್ವರ ಸುಪ್ರಭಾತ | ಗಂಗಪ್ಪ ವಾಲಿ |
| ೪೨ | ನೀತಿ ಸಂಗ್ರಹ | ಸಂ॥ ಮಹಾಲಿಂಗಯ್ಯನವರು, ದ್ಯಾಂಪೂರ |
| ೪೩ | ಹೊಂಗಿರಣ | ಶ್ರೀ ಮೂ. ಜ. ಗಂ. |
| ೪೪ | ಮೂರುಸಾವಿರಮಠದ ವಿಹಂಗಮ ನೋಟ | ಶ್ರೀ ಸಂಗಣ್ಣ ಕಲ್ಲೂರ |
| ೪೫ | ವಿಜಯಮಹಾಂತೇಶರ ಲಾವಣಿ | ಶ್ರೀ ಮೂ. ಜ. ಗಂ. |
| ೪೬ | ಅಪ್ಪಯ್ಯಸ್ವಾಮಿಗಳ ಜೀವನಚರಿತ್ರೆ | ,, |
| ೪೭ | ಶ್ರೀ ಕುಮಾರೇಶ್ವರ ಸುಪ್ರಭಾತ | ಡಾ॥ ಪುಟ್ಟರಾಜ ಗವಾಯಿಗಳು |
| ೪೮ | ಲಿಂ॥ ಗುರುಸಿದ್ಧೇಶ್ವರ ಪುರಾಣ | ಶ್ರೀ ಕೋಪರಡೆ |
| ೪೯ | ಹೊಂಬೆಳಗು | ಕಲ್ಲೂರ ಸಂಗಣ್ಣ |
| ೫೦ | ವಿಶ್ವಾತ್ಮನಿಗೆ | ಶ್ರೀ ಆರ್. ಆರ್. ದಿವಾಕರ |
| ೫೧ | ಚೈತ್ರಪಕ್ಷಿ | ಜಿ. ಎಚ್. ಹನ್ನೆರಡುಮಠ |
| ೫೨ | ಚಿತ್ರಭೆ | ಸಂ॥ ,, |
| ೫೩ | ಸಂಗಮನಾಥನ ವಚನಗಳು | ಸಂಗಮೇಶ ಹೊಸಮನಿ |
| ೫೪ | ಪಥಿಕ | ಶ್ರೀ ಮೂ. ಜ. ಗಂ. |
| ೫೫ | ಮೊಗ್ಗೆಯ ಮಾಲೆ | ,, |
| ೫೬ | ಪೂಮಾಲೆ | ,, |
| ೫೭ | ಶ್ರೀ ಗುರುಸಿದ್ಧೇಶ್ವರ ನಾಮಾವಳಿ | ,, |
| ೫೮ | ಚಿತ್ಸುಮನ | ,, |
| ೫೯ | ಹಾವೇರಿ ಶಿವಬಸವೇಶ್ವರ ನಾಮಾವಳಿ | ,, |

| ಪುಸ್ತಕದ ಹೆಸರು | ಲೇಖಕರ ಹೆಸರು |
|---|---|
| ೬೦ ಕರ್ತೃ ಶ್ರೀ ಗುರುಸಿದ್ಧೇಶ್ವರ ಭಕ್ತಿಗೀತೆಗಳು | ಸಂ. ಡಾ|| ಕೆಳದಿ ಪಟ್ಟಾಧ್ಯಕ್ಷರು |
| ೬೧ ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳು | ಬಸವಕುಮಾರ ಶಾಸ್ತ್ರಿಗಳು |
| ೬೨ ವಚನಕಾರ ಅಂಬಿಗರಚೌಡಯ್ಯ | ಎಸ್.ಎಸ್. ಭೂಸರೆಡ್ಡಿ |
| ೬೩ ನಮನ | ಡಾ|| ಡಿ.ಎಸ್.ಕರ್ಕಿ |
| ೬೪ ಮೂರುಸಾವಿರಮಠದ ಪರಿಚಯ ಪರಿಮಳ | ಪಂ. ಕಲ್ಲೂರ ಸಂಗಣ್ಣ |
| ೬೫ ಕರ್ತೃ ಶ್ರೀ ಗುರುಸಿದ್ಧೇಶ್ವರ ಲೀಲಾಮೃತ | ಪಂ. ಬಸವಕುಮಾರ ಶಾಸ್ತ್ರಿಗಳು |
| ೬೬ ಅರ್ಚನ | ಸಂ. ಕುಮಾರೇಶ್ವರ ಶಿವಯೋಗಿ ಸಂಘ, ಹುಬ್ಬಳ್ಳಿ |
| ೬೭ ಕುಮಾರವಾಣಿ | ಸಂ. ಡಾ|| ಕೆಳದಿ ಪಟ್ಟಾಧ್ಯಕ್ಷರು |
| ೬೮ ಶಿವಯೋಗಮಂದಿರ | ಶ್ರೀ ಮೂ. ಜ. ಗಂ. |
| ೬೯ ಮರುಳ ಶಂಕರದೇವರು | ಶ್ರೀ ಮೂ. ಜ. ಗಂ. |
| ೭೦ ಗುರು ಬಸವಾರ್ಯಮಠ ಮಾಸ್ತರರು | ಬಸವರಾಜ ತೆಗ್ಗಿನಮಠ |
| ೭೧ ಕರ್ತೃ ಗುರುಸಿದ್ಧೇಶ್ವರ ಲಾವಣಿ | ಬಸವರಾಜ ತಾಳಕೇರಿ |
| ೭೨ ಕೋಳೂರು ಕೊಡಗೂಸು | ಹರಿ ಸರ್ವೋತ್ತಮಾಚರ್ಯ |
| ೭೩ ಕಾಡಿನಲ್ಲಿ ಕೈವಲ್ಯ | ಜಿ. ಎಚ್. ಹನ್ನೆರಡುಮಠ |
| ೭೪ ಕೊಂಡಗುಳಿ ಕೇಶಿರಾಜನ ಕೃತಿಗಳು | ಡಾ|| ಎಂ. ಎಂ. ಕಲಬುರ್ಗಿ |
| ೭೫ ರಾಮದಾಸರು ಹೇಳಿದ ಕಥೆಗಳು | ಬಿ. ಡಿ. ಜತ್ತಿ |
| ೭೬ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಪುರಾಣ | ಡಾ|| ಪುಟ್ಟರಾಜಗವಾಯಿಗಳು |
| ೭೭ ಅಷ್ಟಾವರಣಗಳು | ಪಂ. ನಾಗಭೂಷಣ ಶಾಸ್ತ್ರಿಗಳು |
| ೭೮ ನಮ್ಮ ವಿದೇಶ ಯಾತ್ರೆ | ಶ್ರೀ ಮೂಜಗಂ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೭೯ | ಗಣದಾಸಿ ವೀರಣ್ಣನ ವಚನಗಳು | ಎಸ್. ಎಸ್. ಭೂಸರೆಡ್ಡಿ |
| ೮೦ | ವಚನ ತೀರ್ಥ | ಸಂಗಮೇಶ ಹೊಸಮನಿ |
| ೮೧ | ಚೆಲುವಿನ ಅಲೆಗಳು | ಪಂಚಾಕ್ಷರಿ ಹಿರೇಮಠ |
| ೮೨ | ಸರ್ವಜ್ಞನ ವೀರಗಣ ಸ್ತೋತ್ರದ ವಚನಗಳು | ಎಸ್. ಎಸ್. ಭೂಸರೆಡ್ಡಿ |
| ೮೩ | ಆಯ್ದಕ್ಕಿ ಲಕ್ಕಮ್ಮನ ವಚನಗಳು | ಎಸ್. ಎಸ್. ಭೂಸರೆಡ್ಡಿ |
| ೮೪ | ಜೇನಹನಿ | ಶ್ರೀ ಮೂ. ಜ. ಗಂ. |
| ೮೫ | ಆಶೀರ್ವಾಣಿ (ಭಾಗ–೨) | ಶ್ರೀ ಮೂ. ಜ. ಗಂ. |
| ೮೬ | ಚಿತ್‌ಕಿರಣ | ಶ್ರೀ ಮೂ. ಜ. ಗಂ. |
| ೮೭ | ಸಜ್ಜಲಗುಡ್ಡದ ಶರಣಮ್ಮನವರು | ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ |
| ೮೮ | ಬಸವಯುಗದ ಶಿವಶರಣೆಯರು | ಶಾಂತಾದೇವಿ ಮಾಳವಾಡ |
| ೮೯ | ಇಂದಿನ ಶಿವಶರಣೆಯರು | ಶಿವಲಿಂಗಮ್ಮ ಕಟ್ಟಿ |

**ಸಂಸ್ಕೃತಿ ಪ್ರಸಾರೋಪನ್ಯಾಸ ಮಾಲೆಯ ಪುಸ್ತಕಗಳು**

| | | |
|---|---|---|
| ೯೦ | ಯುಗಪುರುಷ ಯೋಗಿಕುಮಾರ | ಶ್ರೀ ಮೂ. ಜ. ಗಂ. |
| ೯೧ | ವೀರಶೈವ ಸಂಸ್ಕೃತಿ | ಡಾ॥ ತಿಪ್ಪೇರುದ್ರಸ್ವಾಮಿಗಳು |
| ೯೨ | ಕಾಯಕ ಕ್ರಾಂತಿ | ಡಾ॥ ಶ್ರೀ ಜ. ಚ. ನಿ. |
| ೯೩ | ಲಿಂಗತತ್ತ್ವ ಪರಾಮರ್ಶೆ | ಶ್ರೀ ಮಹಾಂತಸ್ವಾಮಿಗಳು, ಇಲಕಲ್, |
| ೯೪ | ಶರಣ ಸಂದೇಶ | ಶ್ರೀ ಶಾಂತಲಿಂಗಸ್ವಾಮಿಗಳು, ದುಧನಿ. |
| ೯೫ | ಕಣ್ಣಿನ ಕ್ಯಾನ್ಸರ್ | ಡಾ॥ ಎಂ. ಎಂ. ಜೋಶಿ |
| ೯೬ | ಬಸವಣ್ಣನವರ ಸಪ್ತಸೂತ್ರಗಳು | ಡಾ॥ ಡಿ. ಕೆ. ಭಾಗೋಜ |
| ೯೭ | ಕಾಶ್ಮೀರದ ಮಹಾಯೋಗಿನಿ ಲಲ್ಲೇಶ್ವರಿ | ಪಂಚಾಕ್ಷರಿ ಹಿರೇಮಠ |
| ೯೮ | ಶರಣ | ಡಾ॥ ಎಂ. ಎಸ್. ಸುಂಕಾಪೂರ |
| ೯೯ | ಶರಣೆಯರ ಸೊಳ್ನುಡಿಗಳು | ಶಿವಲಿಂಗಮ್ಮ ಕಟ್ಟಿ |
| ೧೦೦ | ಬಸವೇಶ್ವರ ವರಲಾಲರು (ತಮಿಳು) | — |

| ಪುಸ್ತಕದ ಹೆಸರು | ಲೇಖಕರ ಹೆಸರು |
|---|---|
| ೧೦೧ ಗುರು | ತೆಲಸಂಗ ಪಟ್ಟಾಧ್ಯಕ್ಷರು |
| ೧೦೨ ಶರಣ ನುಲಿಯ ಚಂದಯ್ಯ | ಡಾ|| ಎಂ. ಎಸ್. ಲಠ್ಠೆ |
| ೧೦೩ ಪ್ರಸಾದ | ಡಾ|| ಜ. ಚ. ನಿ. |
| ೧೦೪ ಲಿಂಗ | ತೆಲಸಂಗ ಪಟ್ಟಾಧ್ಯಕ್ಷರು |
| ೧೦೫ ಶಿವಯೋಗ | ಪ್ರೊ. ಎಚ್. ಮೃತ್ಯುಂಜಯ |
| ೧೦೬ ಶರಣರು ನಕ್ಕಾಗ | ದಾನಪ್ಪ ಜತ್ತಿ |
| ೧೦೭ ವಿಭೂತಿ | ಕರ್ಜಗಿ ಶ್ರೀಗಳು |
| ೧೦೮ ಮಂತ್ರ | ತೆಲಸಂಗ ಪಟ್ಟಾಧ್ಯಕ್ಷರು |
| ೧೦೯ ಭಕ್ತಿ | ಪ್ರೊ. ಸಂಗಮೇಶ ಹಂಡಗಿ |
| ೧೧೦ ಶಿವನ ಡಂಗುರ | ಡಾ|| ದೇವೇಂದ್ರಕುಮಾರ ಹಕಾರಿ |
| ೧೧೧ ಮಾದರ ಚೆನ್ನಯ್ಯ | " |
| ೧೧೨ ಚೈತನ್ಯ ಚೇತನ | ಸೋಮಶೇಖರ ಜತ್ತಿ |
| ೧೧೩ ಉರಿಲಿಂಗ ಪೆದ್ದಿ | ಎಸ್. ಎಸ್. ಭೂಸರೆಡ್ಡಿ |
| ೧೧೪ ಜಾನಪದ ಸಾಹಿತ್ಯದಲ್ಲಿ ಜೀವನ ದರ್ಶನ | ಡಾ|| ಎಸ್. ಬಿ. ತೋಟದ |
| ೧೧೫ ಶಿವಶರಣರು ಬೋಧಿಸಿದ ಕಾಯಕ ತತ್ತ್ವ | ಡಾ|| ಬಿ. ಸಿ. ಜವಳಿ |
| ೧೧೬ ಸದಾಚಾರ | ಮಲ್ಲಿಕಾರ್ಜುನದೇವರು, ತೆಲಸಂಗ |
| ೧೧೭ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರು | ಪಂ|| ಬಸವಕುಮಾರ ಶಾಸ್ತ್ರಿಗಳು |
| ೧೧೮ ದಾಸೋಹ | ಡಾ|| ಬಿ. ಸಿ. ಜವಳಿ |
| ೧೧೯ ಪಾದೋದಕ | ನಾಗಭೂಷಣ ಶಾಸ್ತ್ರಿಗಳು |
| ೧೨೦ ಸತ್ಯಕ್ಕ | ಎಸ್. ಎಸ್. ಭೂಸರೆಡ್ಡಿ |
| ೧೨೧ ಘನಮಠ ಶಿವಯೋಗಿಗಳು | ಪಂ|| ನಾಗಭೂಷಣ ಶಾಸ್ತ್ರಿಗಳು |
| ೧೨೨ ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | ಪ್ರೊ. ಎಸ್. ವಾಯ್ ಹಂಜಿ |
| ೧೨೩ ಲಿಂ. ಜ. ಗುರುಸಿದ್ಧ ರಾಜಯೋಗೀಂದ್ರರು | ತೆಲಸಂಗ ಪಟ್ಟಾಧ್ಯಕ್ಷರು |
| ೧೨೪ ಜನಪದ ಸಾಹಿತ್ಯದಲ್ಲಿ ದೈವೀಶ್ರದ್ಧೆ | ಎಂ. ಎಸ್. ಸುಂಕಾಪೂರ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೧೨೫ | ಜನಪದ ಸಾಹಿತ್ಯದಲ್ಲಿ ಗರತಿ | ಎಂ. ಎಸ್. ಸುಂಕಾಪೂರ |
| ೧೨೬ | ಲಿಂ॥ ಜಗದ್ಗುರು ಗಂಗಾಧರ ಮಹಾಸ್ವಾಮಿಗಳು | ಡಾ॥ ಕೆಳದಿ ಪಟ್ಟಾಧ್ಯಕ್ಷರು |
| ೧೨೭ | ಶರಣಸತಿ ಲಿಂಗಪತಿ | ಬಿ. ಎಮ್. ಮಾಗಿ |
| ೧೨೮ | ಬಾಲಲೀಲಾ ಮಹಾಂತ ಶಿವಯೋಗಿಗಳು | ಪಂ॥ ನಾಗಭೂಷಣ ಶಾಸ್ತ್ರಿಗಳು |
| ೧೨೯ | ನಿಜಗುಣ ಶಿವಯೋಗಿಗಳು | ಪಂ॥ ಜಿ. ಎಂ. ಉಮಾಪತಿ ಶಾಸ್ತ್ರಿಗಳು |
| ೧೩೦ | ರುದ್ರಾಕ್ಷಿ | ಪಂ॥ ನಾಗಭೂಷಣ ಶಾಸ್ತ್ರಿಗಳು |
| ೧೩೧ | ಜಂಗಮ | ಪಂ॥ ನಾಗಭೂಷಣ ಶಾಸ್ತ್ರಿಗಳು |
| ೧೩೨ | ಮಾನವತಾವಾದಿ ಬಸವಣ್ಣ | ಪ್ರೊ. ವಿ. ವಿ. ಸಂಗಮದ |
| ೧೩೩ | ಇಷ್ಟಲಿಂಗದ ವೈಜ್ಞಾನಿಕ ಪರಿಕಲ್ಪನೆ | ಪ್ರೊ. ವಿ. ಜಿ. ಮಾರಿಹಾಳ |
| ೧೩೪ | ಕರ್ತೃ ಶ್ರೀ ಗುರುಸಿದ್ಧೇಶ್ವರರು | ಶ್ರೀಮತಿ ಶಶಿಕಲಾ ವಸ್ತ್ರದ |
| ೧೩೫ | ಶರಣ ಮೇದಾರ ಕೇತಯ್ಯ | ಡಾ॥ ಎಂ. ಎಸ್. ಲಠ್ಠೆ |
| ೧೩೬ | ಮೋಳಿಗೆಯ ಮಹಾದೇವಿ | ಡಾ॥ ನಿಜಲಿಂಗಮ್ಮ ಕೊಪ್ಪಳ |
| ೧೭೩ | ಶಿವಶರಣ ಹರಳಯ್ಯ | ಶ್ರೀ ಬಾಳೇಶ ಲಕ್ಷೆಟ್ಟಿ |
| ೧೩೮ | ಆಯ್ದಕ್ಕಿ ಮಾರಯ್ಯ | ಶ್ರೀ ಬಿ. ಎಸ್. ಸ್ವಾಮಿ |
| ೧೩೯ | ಮರುಳ ಶಂಕರದೇವರು | ಡಾ॥ ಬಿ. ಸಿ. ಜವಳಿ |
| ೧೪೦ | ಸಕಲೇಶ ಮಾದರಸ | ಶ್ರೀ ಮಲ್ಲಿಕಾರ್ಜುನದೇವರು ತೆಲಸಂಗ |
| ೧೪೧ | ಗಂಗಾಂಬಿಕೆ | ಶ್ರೀಮತಿ ಶಾಂತಾದೇವಿ ಮಾಳವಾಡ |
| ೧೪೨ | ಗುಡ್ಡಾಪುರದ ದಾನಮ್ಮ | ಸಿಂಪಿ ಲಿಂಗಣ್ಣ |
| ೧೪೩ | ಹಾವಿನಾಳ ಕಲ್ಲಯ್ಯ | ಸಿಂಪಿ ಲಿಂಗಣ್ಣ |
| ೧೪೪ | ಉರಿಲಿಂಗದೇವ | ಎಂ. ಎಸ್. ಇಂಚಲ |
| ೧೪೫ | ನೀಲಾಂಬಿಕೆ | ಶಾಂತಾದೇವಿ ಮಾಳವಾಡ |
| ೧೪೬ | ಡೋಹರ ಕಕ್ಕಯ್ಯ | ಶ್ರೀಮತಿ ಟಿ. ನೀಲಾಂಬಿಕೆ |
| ೧೪೭ | ಅಕ್ಕಮಹಾದೇವಿ | ಶ್ರೀಮತಿ ಸಂಗಮ್ಮ ಕರವೀರಶೆಟ್ಟರ |
| ೧೪೮ | ಮುಕ್ತಾಯಕ್ಕಾ | ಎಚ್. ಎಸ್. ಮುಕ್ತಾಯಕ್ಕಾ |
| ೧೪೯ | ಮೋಳಿಗೆ ಮಾರಯ್ಯ | ಡಾ॥ ದೇವೇಂದ್ರಕುಮಾರ ಹಕಾರಿ |
| ೧೫೦ | ಮಲುಹಣ ದೇವ | ಡಾ॥ ವ್ಹಿ. ಶಿವಾನಂದ |
| ೧೫೧ | ಕದಿರೆ ರೇಮಯ್ಯ | ಡಾ॥ ಪುಟ್ಟರಾಜಗವಾಯಿಗಳು |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೧೫೨ | ಕಾರಿಕಾಲಮ್ಮ | ಶ್ರೀ ಎಸ್. ವ್ಹಿ. ಶಹಪೂರಮಠ |
| ೧೫೩ | ಮಲ್ಹಣ ಸ್ತೋತ್ರ (ಸಂಸ್ಕೃತ) | ಎಂ. ಬಿ. ಪರಡ್ಡಿ |
| ೧೫೪ | ಹರಿಜನರ ಬಗ್ಗೆ ಹಿಂದೂಗಳ ಆದ್ಯ ಕರ್ತವ್ಯ | ಪಂ॥ ನಂಜುಂಡಾರಾಧ್ಯರು |
| ೧೫೫ | ವರದಾನಿ ಗುಡ್ಡಾಪೂರ ದಾನಮ್ಮ | ಮಲ್ಲಿಕಾರ್ಜುನ ದೇವರು, ತೆಲಸಂಗ |
| ೧೫೬ | ಗ್ರಾಮೀಣ ಸಂಪದ | ಡಾ॥ ಎಂ. ಎಸ್. ಸುಂಕಾಪೂರ |
| ೧೫೭ | ಸೂಫಿ ಮತ್ತು ಶರಣರ ಅನುಭಾವ ಪಥ | ಪಂ॥ ಷಣ್ಮುಖಯ್ಯ ಅಕ್ಕೂರಮಠ |
| ೧೫೮ | ಚಿದ್ವಿಭೂತಿಯೋಗ | ಡಾ॥ ಶ್ರೀ ಜ. ಚ. ನಿ. |
| ೧೫೯ | ಶರಣರು ಗುರುತಿಸಿದ ಬದುಕಿನ ಮೌಲ್ಯಗಳು | ಟಿ. ಆರ್. ಮಹಾದೇವಯ್ಯ |
| ೧೬೦ | ಹರಿಹರ–ಬಸವಣ್ಣ | " |
| ೧೬೧ | ಕಂಪ್ಲಿ ಜಡಿಯಪ್ಪನವರು | ಜಿ. ಎಚ್. ಹನ್ನೆರಡುಮಠ |
| ೧೬೨ | ಲಿಂ. ರಾಚಪ್ಪನವರು ನೀಲಿ | ಪ್ರೊ. ಎಂ. ಎಸ್. ಇಂಚಲ |
| ೧೬೩ | ಪಿ. ಬಿ. ಹರ್ತಿ | ಸಂಗಮ್ಮ ಕರವೀರಶೆಟ್ರ |
| ೧೬೪ | ಪಿ. ಎಂ. ನಾಡಗೌಡರು | ಬಸವರಾಜ ತೆಗ್ಗಿನಮಠ |
| ೧೬೫ | ಶರಣಾಗತ ರಕ್ಷಕ ಬಸವಣ್ಣನವರು | ಕೆ. ಪಿ. ಶಿವಲಿಂಗಯ್ಯ |
| ೧೬೬ | ವೀರವಿರಾಗಿ ಶಿವಬಸವಯೋಗಿ | ಶಿವಲಿಂಗಸ್ವಾಮೀಜಿ, ಹುಕ್ಕೇರಿಮಠ |
| ೧೬೭ | ಜ್ಯೋತಿಷ್ಯಶಾಸ್ತ್ರ ಮತ್ತು ವಚನಕಾರರ ಸಮಾಲೋಚನೆ | ಷಣ್ಮುಖಯ್ಯ ಅಕ್ಕೂರಮಠ |
| ೧೬೮ | ಶಕುನ ಶಾಸ್ತ್ರ–ಶರಣರ ಆಲೋಚನೆ | " |
| ೧೬೯ | ಜಾತಿಯವಿರುದ್ಧ ಶರಣರ ಹೋರಾಟ | ಬಿ. ಎಸ್. ಸ್ವಾಮಿ |
| ೧೭೦ | ಬಾಳಿನ ಬುತ್ತಿ | " |
| ೧೭೧ | ಸಿದ್ಧಗಂಗಾಕ್ಷೇತ್ರದ ಉದ್ಧಾನಶಿವಯೋಗೀಶ್ವರ | ಚೆನ್ನಪ್ಪ ಎರೇಸೀಮೆ |
| ೧೭೨ | ಬಸವಣ್ಣನವರ ವಚನಗಳಲ್ಲಿ ವನಸಂಪತ್ತು | ಹೀ. ಚಿ. ಶಾಂತವೀರಯ್ಯ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೧೭೩ | ಮಹಾನುಭಾವಿ ಚನ್ನಮಲ್ಲಿಕಾರ್ಜುನರು (ಬೃಹತ್ ಸಂಸ್ಮರಣ ಗ್ರಂಥ) | ಸಂ॥ ಎಚ್. ದೇವೀರಪ್ಪ ಮತ್ತು ಚನ್ನಪ್ಪ ಎರೇಸೀಮೆ |
| ೧೭೪ | ಗುತ್ತಿ ಆಕ್ಕುಲಯ್ಯ ದೀಕ್ಷಿತರು | ಎಂ. ಜಿ. ಸಂಜುಂಡಾರಾಧ್ಯರು |
| ೧೭೫ | ಗೌಡರ ವೀರಭದ್ರಪ್ಪನವರು ಮತ್ತು ಆದರ್ಶ ಶಿವಶರಣೆ ಕರಿಬಸಮ್ಮನವರು | " |
| ೧೭೬ | ಪ್ರಭುದೇವರ ಯಕ್ಷಗಾನ | ಡಾ॥ ಎಂ. ಎಸ್. ಲಠ್ಠೆ ಮತ್ತು ಡಾ॥ ಸಂಗಮೇಶ ಸವದತ್ತಿಮಠ |
| ೧೭೭ | ಸಂಗನಬಸವಣ್ಣ | ಡಾ॥ ಶ್ರೀ ಜ. ಚ. ನಿ. |
| ೧೭೮ | ಜೀವನಾಗಸದ ಚಿದ್ರವಿ | " |
| ೧೭೯ | ಲಿಂಗಾನುಭಾವಿ ಲಿಂಗಮ್ಮ | " |
| ೧೮೦ | ಕ್ರಿಯಾಶೀಲ ಶಿವಶರಣೆಯರು | ಡಾ॥ ಸರೋಜಿನಿ ಚವಲಾರ |
| ೧೮೧ | ಕರೆಯಿಸಿಕೊಂಡು ಬಂದವರು | ಸಿಂಪಿ ಲಿಂಗಣ್ಣ |
| ೧೮೨ | ಕವಿ ಕೊಂಡಗುಳಿ ಕೇಶಿರಾಜ | ಭೀಮರಾಯ ಕುಂಬಾರ |
| ೧೮೩ | ಜಾನಪದ ಮೂಲಭೂತ ತತ್ತ್ವಗಳು | ಡಾ॥ ದೇವೇಂದ್ರಕುಮಾರ ಹಕಾರಿ |
| ೧೮೪ | ಜಾನಪದ ಸಮ್ಮುಖ | ಡಾ॥ ದೇವೇಂದ್ರಕುಮಾರ ಹಕಾರಿ |
| ೧೮೫ | ಶರಣಪಥ | ಡಾ॥ ದೇ. ಜ. ಗೌ. |
| ೧೮೬ | ದೀಪಧಾರಿ | ಆರ್. ಕೆ. ಹಿರೇಮಠ |
| ೧೮೭ | ಕಂದಗಲ್ಲ ಪರ್ವತಶಾಸ್ತ್ರಿ ಕೃತ ವಿಜಯ ಮಹಾಂತೇಶ ಚಂಪು ಪ್ರಬಂಧ | ಸಂ॥ ಎಂ. ಬಿ. ಪರಡ್ಡಿ |
| ೧೮೮ | ಶಿವಶರಣೆ ಬತ್ತಿ ವೀರಮ್ಮನವರು | ಆರ್. ಟಿ. ಮಜ್ಜಗಿ |
| ೧೮೯ | ಸಮಾಹಿತ | ಡಾ॥ ಸರೋಜಿನಿ ಚವಲಾರ |
| ೧೯೦ | ಸಸ್ಯಶ್ಯಾಮಲೆ | " " " |
| ೧೯೧ | ಸಾಹಿತ್ಯಶ್ರೀ | " " " |
| ೧೯೨ | ಸುಭಾಷಿತ ಸುಧಾಝರೀ | ಸಂ॥ ಎ. ಎಲ್. ಹಿರೇಮಠ |
| ೧೯೩ | ಅಪ್ಪಣ್ಣ ಗೌಡರು | ಪ್ರೊ. ಎಸ್. ವಾಯ್. ಹಂಜಿ |
| ೧೯೪ | ತ್ರಿವೇಣಿ ಸಂಗಮ | ಶಿವಶರಣೆ ನೀಲಮ್ಮ ಅಸುಂಡಿ |

| ಪುಸ್ತಕದ ಹೆಸರು | ಲೇಖಕರ ಹೆಸರು |
|---|---|
| ೧೯೫ ರುದ್ರಾಕ್ಷ-ಪ್ರಭೆ | ಪಂ|| ನಾಗಭೂಷಣ ಶಾಸ್ತ್ರಿಗಳು |
| ೧೯೬ ಗುಡ್ಡದ ವೀರಸಂಗಪ್ಪನವರು | ಶ್ರೀಮತಿ ಶಿವಲಿಂಗಮ್ಮ ಕಟ್ಟಿ |

**'ವೀರಶೈವ ಭಾರತೀಯ ಪುಸ್ತಕಗಳು'**

| | |
|---|---|
| ೧೯೭ ಮಡಿವಾಳ ಮಾಚಿದೇವ | ದು. ನಿಂ. ಬೆಳಗಲಿ |
| ೧೯೮ ಹಂಪೆಯ ಹರಿಹರ | ಡಾ|| ಬಸವರಾಜ ಮಲಶೆಟ್ಟಿ |
| ೧೯೯ ಮಹಾಕವಿ ರಾಘವಾಂಕ | ನೀಲಗಿರಿ ತಳವಾರ |
| ೨೦೦ ಸರ್ವಜ್ಞ | ಉಳುವೀಶ ಹುಲೆಪ್ಪನವರಮಠ |
| ೨೦೧ ನುಲಿಯ ಚಂದಯ್ಯ | ಶ್ರೀ ಎಸ್. ಎಸ್. ಭೂಸರೆಡ್ಡಿ |
| ೨೦೨ ಸಿದ್ಧರಾಮ ಶಿವಯೋಗಿ | ಶ್ರೀಮತಿ ಶಾಂತಲಾ ಯಡ್ರಾವಿ |
| ೨೦೩ ಶರಣ ಅಜಗಣ್ಣ | ಪ್ರೊ. ಎ. ಎನ್. ವಾಲಿ |
| ೨೦೪ ಬಿಜ್ಜ ಮಹಾದೇವಿ | ಸುವರ್ಣಾ ವಾಲಿಶೆಟ್ಟಿ |
| ೨೦೫ ಚನ್ನಬಸವಣ್ಣ | ಶ್ರೀ ಯೋಗೀಶ ಯಡ್ರಾವಿ |
| ೨೦೬ ನೆಲ್ಲೂರ ನೆಂಬೆಕ್ಕ | ಶ್ರೀ ಚನ್ನವೀರಸ್ವಾಮಿ ಹಿರೇಮಠ |
| ೨೦೭ ಜಾನಪದ ನಾಲ್ದಳ | ಎಸ್. ಸಿ. ಚರಂತಿಮಠ |
| ೨೦೮ ಧರ್ಮ ಮತ್ತು ವಿಜ್ಞಾನ | ಎಸ್. ಎಮ್. ಹುಲ್ಲೋಳಿ |
| ೨೦೯ ಶಿವಶರಣ ನಂಬಿಯಣ್ಣ | ಸಿ. ವ್ಹಿ. ಕೆರಿಮನಿ |
| ೨೧೦ ಕಾಡಸಿದ್ಧೇಶ್ವರರು | ದು. ನಿಂ. ಬೆಳಗಲಿ |
| ೨೧೧ ಬೊಂತಾದೇವಿ | ಸುವರ್ಣಾ ವಾಲಿಶೆಟ್ಟಿ |
| ೨೧೨ ಇಳಿಹಾಳ ಬೊಮ್ಮಯ್ಯ | ಚನ್ನಕ್ಕ ಯಲಿಗಾರ |
| ೨೧೩ ಗಣದಾಸಿ ವೀರಣ್ಣ | ಸಿಂಪಿ ಲಿಂಗಣ್ಣ |
| ೨೧೪ ಮಹಾದಾಸೋಹಿ ಶರಣಬಸವೇಶ್ವರ | ಬಿ. ಗಿ. ಯಲ್ಲಟ್ಟಿ |
| ೨೧೫ ಕವಿ ಷಡಕ್ಷರದೇವ | ವಿರೂಪಾಕ್ಷ ಬಡಿಗೇರಿ |
| ೨೧೬ ಸರ್ಪಭೂಷಣ ಶಿವಯೋಗಿ | ಶ್ರೀಮತಿ ಶಾಂತಲಾ ಯಡ್ರಾವಿ |
| ೨೧೭ ಅಲ್ಲಮಪ್ರಭುದೇವರು | ಶ್ರೀ ಯೋಗೀಶ ಯಡ್ರಾವಿ |
| ೨೧೮ ಕುಂಬಾರ ಗುಂಡಯ್ಯ | ಡಾ|| ಸರೋಜಿನಿ ಚವಲಾರ |
| ೨೧೯ ಇಟಗಿಯ ಭೀಮಾಂಬಿಕಾದೇವಿ | ನೀಲಮ್ಮತಾಯಿ ಅಸುಂಡಿ |
| ೨೨೦ ಅಮ್ಮುಗೆ ರಾಯಮ್ಮನ ವಚನಗಳು | ಪ್ರೊ. ಎಚ್. ಎಮ್. ಬೀಳಗಿ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೨೨೧ | ನೀಲಲೋಚನೆಯು ವಚನಗಳಲ್ಲಿ ಬಸವಣ್ಣ | ಪ್ರೊ. ಎಸ್. ಎಸ್. ಭೂಸರೆಡ್ಡಿ |
| ೨೨೨ | ಅಕ್ಕಮ್ಮನ ನೂರೊಂದು ವಚನಗಳು | ಡಾ॥ ಸಂಗಮೇಶ ಸವದತ್ತಿಮಠ |
| ೨೨೩ | ಅರಿವಿನ ಮಾರಿತಂದೆಗಳ ವಚನಗಳು | ಡಾ॥ ವೀರಣ್ಣ ರಾಜೂರು |
| ೨೨೪ | ಮೋಳಿಗೆ ಮಾರಯ್ಯನ ವಚನಗಳು | ಡಾ॥ ಬಿ. ಸಿ. ಜವಳಿ |
| ೨೨೫ | ಶಿವಲೆಂಕ ಮಂಚಣ್ಣನ ವಚನಗಳು | ಡಾ॥ ಎಂ. ಬಿ. ನೇಗಿನಾಳ |
| ೨೨೬ | ಪಾಲ್ಕುರಿಕೆ ಸೋಮನಾಥ ಕವಿ | ಎಸ್. ಆರ್. ಸೋಮಶೇಖರ ಶರ್ಮಾ |
| ೨೨೭ | ಕಡಕೋಳ ಮಡಿವಾಳೇಶ್ವರ ನಿಜಲೀಲಾಮೃತ ವಚನಗಳು | ಡಾ॥ ಎಮ್. ಎಸ್. ಲಠ್ಠೆ |
| ೨೨೮ | ನೀಲಾಂಬಿಕೆಯ ವಚನಗಳು | ಡಾ॥ ಸರೋಜಿನಿ ಚವಲಾರ |
| ೨೨೯ | ಉರಿಲಿಂಗಪೆದ್ದಿಯ ವಚನಗಳು | ಡಾ॥ ಬಿ. ವಿ. ಶಿರೂರು |
| ೨೩೦ | ಮಾದರ ಧೂಳಯ್ಯನ ವಚನಗಳು | ಡಾ॥ ಎಸ್. ಎಸ್. ಕೋತಿನ್ |
| ೨೩೧ | ಶಿವಯೋಗಿ ಸಿದ್ಧರಾಮನ ವಚನಗಳು | ಶ್ರೀ ನಿ. ಪ್ರ. ಕುಮಾರಸ್ವಾಮಿಗಳು ಹಾನಗಲ್ಲ |
| ೨೩೨ | ಷಣ್ಮುಖ ಶಿವಯೋಗಿಗಳ ವಚನಗಳು | ಡಾ॥ ವಿ. ಎಂ. ಶಿವಾನಂದ |
| ೨೩೩ | ಆದಯ್ಯನ ನೂರೊಂದು ವಚನಗಳು | ಪ್ರೊ. ಜಿ. ಎಂ. ಛಿವಾರಿ |
| ೨೩೪ | ಮಹಾದೇವಿಯಕ್ಕನ ವಚನಗಳು | ಡಾ॥ ಚೆನ್ನಕ್ಕ ಯಲಿಗಾರ |
| ೨೩೫ | ಹಡಪದ ಅಪ್ಪಣ್ಣನ ವಚನಗಳು | ಶ್ರೀ ಚನ್ನವೀರ ಶಿವಾಚಾರ್ಯರು |
| ೨೩೬ | ಜಗಜ್ಯೋತಿ ಬಸವಣ್ಣನವರ ನೂರೊಂದು ವಚನಗಳು | ಕೊಟ್ರೇಶ ಗು. ಆರಾಧ್ಯಮಠ |
| ೨೩೭ | ಸಕಲೇಶ ಮಾದರಸರ ವಚನಗಳು | ಪ್ರೊ. ನಿರ್ಮಲಾ ಪಟ್ಟಣಶೆಟ್ಟಿ |
| ೨೩೮ | ಜೇಡರ ದಾಸಿಮಯ್ಯನ ವಚನಗಳು | ಡಾ॥ ಆರ್. ಸಿ. ಹಿರೇಮಠ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೨೩೯ | ಕೋಲ ಶಾಂತಯ್ಯನ ವಚನಗಳು | ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿ |
| ೨೪೦ | ಮಡಿವಾಳ ಮಾಚಿದೇವನ ವಚನಗಳು | ಡಾ॥ ಬಿ. ಆರ್. ಹಿರೇಮಠ |
| ೨೪೧ | ಲಿಂಗಮ್ಮನ ನೂರೊಂದು ವಚನಗಳು | ಶ್ರೀ ರುದ್ರಮುನಿದೇವರು, ತಿಪಟೂರ |
| ೨೪೨ | ಅಲ್ಲಮನ ವಚನ ಚಂದ್ರಿಕೆ | ಡಾ॥ ಎಲ್. ಬಸವರಾಜ |
| ೨೪೩ | ೬೩ ಪುರಾತನರ ಚರಿತ್ರೆ | ಶ್ರೀ ಮಹಾರುದ್ರಪ್ಪನವರು ಮಿರ್ಜಿ |
| ೨೪೪ | ವೀರಶೈವ ತತ್ವಾರ್ಥ ವಿವೇಚನೆ | ಡಾ॥ ಬಿ. ವಿ. ಮಲ್ಲಾಪೂರ |
| ೨೪೫ | ೨೫ ವಚನಕಾರ್ತಿಯರು | ಶ್ರೀಮತಿ ಜಗದಂಬಾ ಮಲ್ಲೇದೇವರು |
| ೨೪೬ | ವೀರಶೈವ ಸಾಹಿತ್ಯ ಸಮೀಕ್ಷೆ | ಡಾ॥ ಬಿ. ವಿ. ಮಲ್ಲಾಪೂರ |
| ೨೪೭ | ಸೋಮನಾಥ ಶಾಸ್ತ್ರಿಗಳ ಚರಿತ್ರೆ | ಪಂ॥ ತೆಲಸಂಗ ಪಟ್ಟಾಧ್ಯಕ್ಷರು |
| ೨೪೮ | ಶಾಂತಿಮಾಂತ್ರಿಕ ಮೂಜಗಂ | ಗಂಗಪ್ಪ ವಾಲಿ |
| ೨೪೯ | ಸೊಡ್ಡಳ ಬಾಚರಸನ ವಚನಗಳು | ಸಂ॥ ಎಸ್. ಎಸ್. ಭೂಸರೆಡ್ಡಿ |
| ೨೫೦ | ವೀರಶೈವ ಹೋರಾಟಗಾರರು | ಡಾ॥ ಸರೋಜಿನಿ ಚವಲಾರ |
| ೨೫೧ | ಸಾಹಿತ್ಯ ಮತ್ತು ಸಮಾಜ ಬದಲಾವಣೆ | ಪ್ರೊ. ಎಂ. ಎಸ್. ಹುಲ್ಲೋಳಿ |
| ೨೫೨ | ರಜತದೀಪ್ತಿ | ಸಂ॥ ಪ್ರೊ. ಜಿ. ಎಚ್. ಹನ್ನೆರಡುಮಠ |
| ೨೫೩ | ಮಹಾರುದ್ರಪ್ಪ ಮಿರ್ಜಿ | ಡಾ॥ ಬಿ. ಸಿ. ಜವಳಿ |
| ೨೫೪ | ಪಾದಯಾತ್ರಾ ದರ್ಶನ | ಸಂ॥ ಶ್ರೀ ಬಸವಕುಮಾರಶಾಸ್ತ್ರಿಗಳು ಕುಂದರ್ಗಿಮಠ |
| ೨೫೫ | ಹೂಬಳ್ಳಿ | ಶ್ರೀ ಮೂ. ಜ. ಗಂ. |
| ೨೫೬ | ಮೂರುಸಾವಿರಮಠ ಹಸ್ತಪ್ರತಿ ಸೂಚಿ | ಸಂ॥ ಪಂ. ಗುಂಡಾಜೋಯಿಸ ಕೆಳದಿ |
| ೨೫೭ | ಕಾಡಸಿದ್ಧೇಶ್ವರ ವಚನಗಳು | ಸಂ॥ ಎ. ಎಲ್. ಹಿರೇಮಠ |
| ೨೫೮ | ಕಬೀರದಾಸ ಶತಕಂ | ಪ್ರೊ. ಪರಡ್ಡಿ |
| ೨೫೯ | ಶರಣರ ಸಾಮಾಜಿಕ ಜೀವನ ಮೌಲ್ಯಗಳು | ಪ್ರೊ. ಕೆ. ಎಸ್. ಕೌಜಲಗಿ |
| ೨೬೦ | ಭಕ್ತಿಮಾರ್ಗ (ಮರಾಠಿ) | ಪ್ರೊ. ಸಂಗಮೇಶ ಹಂಡಗಿ |
| ೨೬೧ | ಶೂನ್ಯ ಸಂಪಾದನೆ | ಸಾ. ಶಿ. ಮರುಳಯ್ಯನವರು |
| ೨೬೨ | ಫಕೀರ ಶಿವಯೋಗಿ | ಫಕೀರ ಮಲ್ಲಿಕಾರ್ಜುನದೇವರು |
| ೨೬೩ | ವೀರಶೈವ ಸಾಹಿತ್ಯ (ಬಂಗಾಲಿ) | ಡಾ॥ ಪ್ರಭುಶಂಕರ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೨೬೪ | ಬಸವೇಶ್ವರ ಶತಕ (ಸಂಸ್ಕೃತ) | ಪ್ರೊ. ಪರಡ್ಡಿ |
| ೨೬೫ | ಅರುವಿನ ಆಗರದಲ್ಲಿ | ಸಾ. ಶಿ. ಮರುಳಯ್ಯ |
| ೨೬೬ | ಸಹಕಾರಮೂರ್ತಿ | ಎಸ್. ವಾಯ್. ಹಂಜಿ |
| | ವ್ಹಿ. ಎಲ್. ಪಾಟೀಲ್ | |
| ೨೬೭ | ತೋಟದ ಮಲ್ಲಪ್ಪನವರು | — |
| ೨೬೮ | ಚನ್ನಬಸವೇಶ್ವರ ಸ್ತೋತ್ರದ ವಚನಗಳು | — |
| ೨೬೯ | ಬಿರುದಾವಳಿ ಸ್ತೋತ್ರದ ವಚನಗಳು | — |
| ೨೭೦ | ಶರಣರು ಕಂಡ ಅನುಭಾವ | ಶ್ರೀ ಕೆ. ಎಸ್. ಮಠ |
| ೨೭೧ | ಅಣ್ಣನ ವಚನಗಳಲ್ಲಿ ಅಷ್ಟಾವರಣ | ಯೋಗೀಶ ಯಡ್ರಾವಿ |
| ೨೭೨ | ಕಲಾ ತಪಸ್ವಿ ಡಾ॥ ಮಿಣಜಗಿ | ಎಸ್. ವ್ಹಿ. ಪಾಟೀಲ |
| ೨೭೩ | ಜಂಗಮಾಧಿಕ್ಯ | ಶಿರಾಳಕೊಪ್ಪದ ಚನ್ನಮಲ್ಲಪ್ಪ ಮೇಷ್ಟ್ರು |
| ೨೭೪ | ಬಸವೇಶ್ವರ ಲಾವಣಿ | ಶ್ರೀಮತಿ ಸಂಗಮ್ಮನವರು ಕರವೀರಪೆಟ್ರು |
| ೨೭೫ | ಪಂ॥ ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ | ವಿಶ್ವನಾಥ ಹಿರೇಮಠ |
| ೨೭೬ | ಮೂರುಸಾವಿರಮಠದ ಸೊಲಬಪ್ಪಜ್ಜ | „ |
| ೨೭೭ | ಕವಿ ವಾಲಿ ಗಂಗಪ್ಪನವರ ಸಮಗ್ರ ಕಾವ್ಯಗಳು | — |
| ೨೭೮ | ಎಸ್. ಆರ್. ಕಂಠಿ | ವಿಶ್ವನಾಥ ಹಿರೇಮಠ |

**ಹಿಂದಿ**

| | | |
|---|---|---|
| ೨೭೯ | ವೀರಶೈವ ತತ್ತ್ವದರ್ಶನ | ಡಾ॥ ಸರೋಜಿನಿ ಮಹಿಷಿ |
| ೨೮೦ | ಶಿವಾದ್ವೈತ ದರ್ಶನ | ಶ್ರೀ ಮೂ. ಜ. ಗಂ. |
| ೨೮೧ | ವಿವಿಧತಾ ಮೆ ಏಕತಾ | ಶ್ರೀ ಮೂ. ಜ. ಗಂ. |
| ೨೮೨ | ಹಾನಗಲ್ಲ ಕುಮಾರೇಶ್ವರ ಚರಿತ್ರೆ | ಪ್ರೊ. ರುದ್ರದೇವ ಜಂಬಗಿ |
| ೨೮೩ | ಅಕ್ಕಮಹಾದೇವಿ ವಚನಗಳು | ಶ್ರೀಮತಿ ಸುಲೋಚನಾ ಆರಾಧ್ಯ |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| | **ಇಂಗ್ಲೀಷ್** | |
| ೨೮೪ | The Lingayat Movement | S. M. Hunashal |
| ೨೮೫ | Yogiraja of Karnataka | Shree Mujagam |
| ೨೮೬ | Kumar Shivayogi of Hanagal | L. C. Hiremath |
| ೨೮೭ | Light Supernal | Venkappa Shastri |
| ೨೮೮ | Heart's Blossoms | Shree Mujagam |
| ೨೮೯ | Conference of Religion and Peace | R. R. Diwakar |
| ೨೯೦ | Yuga Purusha | Panchaxari Hiremath |
| ೨೯೧ | A Garlend of Pearls | Dr. Umashankar |
| ೨೯೨ | Soul Unto the Sublime | Dr. H. Tipperudraswamy & C. N. Hiremath |
| ೨೯೩ | The Light that never was | ,, |
| ೨೯೪ | Religion & Social Justice | Editor A. L. Hiremath |
| ೨೯೫ | Shivageeta | Dr. Umashankar |
| ೨೯೬ | The Maker's Mint | Dr. Tipperudraswamy & C. N. Hiremath |
| ೨೯೭ | Vachanas of Basavanna | Prof. S. Ananthanarayana |
| ೨೯೮ | Vachanas of Allamaprabhu | ,, |
| ೨೯೯ | Vachanas of Akkamahadevi | ,, |
| ೩೦೦ | Vachanas of Channabasavanna | ,, |
| ೩೦೧ | Vachanas of Shiddharama | ,, ,, |
| ೩೦೨ | History of Hubli | Varadaraj Umarji |
| ೩೦೩ | Towards Perfection | Dr. H. Tipperudraswamy |
| ೩೦೪ | ಪೂರ್ಣಜ್ಞ ವಚನಗಳು | ಶ್ರೀ ಮೂ. ಜ. ಗಂ. |
| ೩೦೫ | ವಿಜಯ ಮಹಾಂತೇಶ್ವರ ಪುರಾಣ | ಚನ್ನಕವಿಗಳು |
| ೩೦೬ | ಹಾನಗಲ್ಲ ಕುಮಾರೇಶ್ವರ ಪುರಾಣ | " |

| | ಪುಸ್ತಕದ ಹೆಸರು | ಲೇಖಕರ ಹೆಸರು |
|---|---|---|
| ೩೦೭ | ಕರ್ತೃ ಜ. ಗುರುಸಿದ್ಧೇಶ್ವರ ಚಂಪೂ ಮಹಾಕಾವ್ಯ | ಡಾ॥ ಪುಟ್ಟರಾಜ ಗವಾಯಿಗಳು |
| ೩೦೮ | ಅಭಿನಂದನ ಸಂಪುಟ–೧ | ಸಂ॥ ಪ್ರೊ. ಜಿ. ಎಚ್. ಹನ್ನೆರಡುಮಠ |
| ೩೦೯ | " –೨ | " |
| ೩೧೦ | " –೩ | " |
| ೩೧೧ | ಮೂಜಗಂ ಶತಕ (ಸಂಸ್ಕೃತ) | ಡಾ॥ ಎಂ. ಬಿ.. ಪರಡ್ಡಿ |
| ೩೧೨ | ವರುಷದ ಬುತ್ತಿ | ಸಂ॥ ಸ. ಸ. ಮಾಳವಾಡ |
| ೩೧೩ | ಶ್ರೀ ಬಿ.ಪಾಟೀಲರು ಧಾರವಾಡ | ಆರ್. ಟಿ. ಮಜ್ಜಗಿ |
| ೩೧೪ | ಉಳುವಿ ಚನ್ನಬಸವೇಶ್ವರ ನೂರೆಂಟು ನಾಮಾವಳಿ | ಎಸ್. ಎಸ್. ಕಮಡೊಳ್ಳಿಶೆಟ್ಟಿ |
| ೩೧೫ | ಕರ್ನಾಟಕದ ಕಲಾವಿದರು | ಶ್ರೀ ಗವೀಶ ಹಿರೇಮಠ |

**ಹಬ್ಬಿ ಹರಡಿದ ಕಾವಿಯು ಬಳ್ಳಿ**
**ಮೂರುಸಾವಿರಮಠದ ಯೋಗಬಳ್ಳಿ**

ಶ್ರೀ ಜಗದ್ಗುರು ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಆಶ್ರಮದಲ್ಲಿ ಪೂಜ್ಯ ಜಗದ್ಗುರುಗಳ ಸಮಗ್ರ ಮಾರ್ಗದರ್ಶನದಲ್ಲಿ ಅಧ್ಯಯನ ಗೈದು ಉತ್ಕ್ರಾಂತಿ ಸಂಪಾದಿಸಿ ಮಠಾಧೀಶರಾದವರ ಹೆಸರುಗಳು ಇಂತಿವೆ—

೧ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ತೋಂಟದಾರ್ಯಮಠ, ಗದಗ–ಡಂಬಳ.

೨ ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀಶೈಲ ಸಂಸ್ಥಾನಮಠ, ಶ್ರೀಶೈಲ.

೩ ಶ್ರೀ ಮ. ನಿ. ಪ್ರ. ಜಗದ್ಗುರು ಮಲ್ಲಿಕಾರ್ಜುನ ಮುರಘರಾಜೇಂದ್ರ ಸ್ವಾಮಿಗಳು, ಮುರಘರಾಜೇಂದ್ರಮಠ, ಆನಂದಪುರಂ.

೪ ಶ್ರೀ ಜಗದ್ಗುರು ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು, ಸಿದ್ಧಸಂಸ್ಥಾನಮಠ, ನಿಡಸೋಸಿ.

೫ ಶ್ರೀ ಫಕೀರಮಲ್ಲಿಕಾರ್ಜುನದೇವರು, ಜಗದ್ಗುರು ಫಕೀರೇಶ್ವರಮಠ, ಶಿರಹಟ್ಟಿ.

೬ ಶ್ರೀ ಮ. ನಿ. ಪ್ರ. ಜಡೆಯ ಶಾಂತಲಿಂಗಸ್ವಾಮಿಗಳು, ದುಧನಿ–ನಿಂಬಾಳ

೭ ಶ್ರೀ ಮ. ನಿ. ಪ್ರ. ರೇವಣಸಿದ್ಧಸ್ವಾಮಿಗಳು ಗದ್ದುಗೆಮಠ, ಕಲಬುರ್ಗಿ

೮ ಶ್ರೀ ಮ. ನಿ. ಪ್ರ. ಸಿದ್ಧಲಿಂಗಸ್ವಾಮಿಗಳು ಎರಡೆತ್ತಿನಮಠ, ಹುಬ್ಬಳ್ಳಿ

೯ ಶ್ರೀ ಮ. ನಿ. ಪ್ರ. ಸಿದ್ಧಲಿಂಗಸ್ವಾಮಿಗಳು ವಿರಕ್ತಮಠ, ಮೊರಟಗಿ

೧೦ ಶ್ರೀ ಮ. ನಿ. ಪ್ರ. ವಿರುಪಾಕ್ಷಸ್ವಾಮಿಗಳು ರುದ್ರಮುನೀಶ್ವರಮಠ, ಬೇಕಲಪರ್ವಿ

೧೧ ಶ್ರೀ ಮ. ನಿ. ಪ್ರ. ಶಿವಾನಂದಸ್ವಾಮಿಗಳು ವಿರಕ್ತಮಠ, ಕರ್ಜಗಿ (ಮಹಾರಾಷ್ಟ್ರ)

೧೨ ಶ್ರೀ ಮ. ನಿ. ಪ್ರ. ಮರುಳಸಿದ್ಧಸ್ವಾಮಿಗಳು ವಿರಕ್ತಮಠ, ಮಾಡ್ಯಾಳ

೧೩ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳು ಕಲ್ಮಠ, ಸವಣೂರ

೧೪ ಶ್ರೀ ಮ. ನಿ. ಪ್ರ. ಶಿವಲಿಂಗಸ್ವಾಮಿಗಳು ಬಣ್ಣದಮಠ, ಶಿರ್ಶಿ–ಹಂದಿಗನೂರ

೧೫ ಶ್ರೀ ಮ. ನಿ. ಪ್ರ. ಚನ್ನವೀರಸ್ವಾಮಿಗಳು ಸುವರ್ಣಗಿರಿ ವಿರಕ್ತಮಠ, ಕಪೋತಗಿರಿ

೧೬ ಶ್ರೀ ಷ. ಬ್ರ. ರುದ್ರಮುನಿ ಶಿವಾಚಾರ್ಯರು ರುದ್ರಸ್ವಾಮಿಮಠ, ನಿಡಗುಂದಿ

೧೭ ಶ್ರೀ ಷ. ಬ್ರ. ಚನ್ನಬಸವ ಶಿವಾಚಾರ್ಯರು ಹಿರೇಮಠ, ಮಟಮರಿ

೧೮ ಶ್ರೀ ಷ. ಬ್ರ. ಶಾಂತವೀರ ಶಿವಾಚಾರ್ಯರು ಹಿರೇಮಠ, ಬಂದರವಾಡ

೧೯ ಶ್ರೀ ಷ. ಬ್ರ. ಗುರುನಂಜೇಶ್ವರ ಶಿವಾಚಾರ್ಯರು ಗುರುನಂಜೇಶ್ವರಮಠ, ಕೂಡಲ

೨೦ ಶ್ರೀ ಷ. ಬ್ರ. ಚನ್ನವೀರ ಶಿವಾಚಾರ್ಯರು ಹಿರೇಮಠ, ನರಗುಂದ

೨೧ ಶ್ರೀ ಷ. ಬ್ರ. ವಿರುಪಾಕ್ಷ ಶಿವಾಚಾರ್ಯರು ಹಿರೇಮಠ, ಕೆರೂಟಗಿ

೨೨ ಶ್ರೀ ಮ. ನಿ. ಪ್ರ. ಶಿವಲಿಂಗಸ್ವಾಮಿಗಳು, ವಾಗ್ದರಿ (ಮಹಾರಾಷ್ಟ್ರ)

೨೩ ಶ್ರೀ ಮ. ನಿ. ಪ್ರ. ಶಿವಾನಂದಸ್ವಾಮಿಗಳು ಮಹಾಂತೇಶ್ವರಮಠ, ಬೆಲ್ಲದಬಾಗೇವಾಡಿ

೨೪ ಶ್ರೀ ಮ. ನಿ. ಪ್ರ. ಚೆನ್ನಬಸವಸ್ವಾಮಿಗಳು ಗುಡ್ಡದವಿರಕ್ತಮಠ, ನೀಲಗುಂದ

೨೫ ಶ್ರೀ ಮ. ನಿ. ಪ್ರ. ಶಿವಲಿಂಗಸ್ವಾಮಿಗಳು ಅಡವಿಸಿದ್ಧೇಶ್ವರಮಠ, ಮುಂಟೂರ

೨೬ ಶ್ರೀ ಷ. ಬ್ರ. ಚಂದ್ರಗುಂಡ ಶಿವಾಚಾರ್ಯರು, ಹೊನ್ನಕಿರಣಗಿ

೨೭ ಶ್ರೀ ಗುರುಸಿದ್ಧದೇವರು ಕಾರಂಜಿಮಠ, ಬೆಳಗಾಂವ

೨೮ ಶ್ರೀ ವೃಷಭಲಿಂಗದೇವರು, ಬಂಥನಾಳ

೨೯ ಶ್ರೀ ಶಿವಶಂಕರದೇವರು, ತೇರದಾಳ

೩೦ ಶ್ರೀ ಚಂದ್ರಶೇಖರದೇವರು, ಮುಳ್ಳೂರ

೩೧ ಶ್ರೀ ಸದಾಶಿವದೇವರು, ನಂದಗಾಂವ

೩೨ ಶ್ರೀ ರೇಣುಕದೇವರು, ಕಡಕಲಾಟ

೩೩ ಶ್ರೀ ಲಿಂ. ಚಂದ್ರಕಾಂತದೇವರು, ಹೊಳೆಹಿಪ್ಪರಗಿ
೩೪ ಶ್ರೀ ಸಿದ್ಧರಾಮದೇವರು ಹಿರೇಮಠ. ಕೆಂಭಾವಿ
೩೫ ಶ್ರೀ ಶಿವಲಿಂಗ ಶಿವಾಚಾರ್ಯರು ಶಿವಲಿಂಗೇಶ್ವರಮಠ, ಮುಧೋಳ, ಗಂಜಿಗಟ್ಟಿ
೩೬ ಶ್ರೀ ಶಿವಯೋಗಿದೇವರು ವಿರಕ್ತಮಠ, ಮುಳ್ಳಳ್ಳಿ–ಬೊಮ್ಮನಹಳ್ಳಿ
೩೭ ಶ್ರೀ ಸಿದ್ಧರಾಮಶಿವಾಚಾರ್ಯರು ಮಹಾಜನಮಠ, ಗುಲಬುರ್ಗಾ
೩೮ ಶ್ರೀ ಶಾಂತವೀರದೇವರು ಹೊಸಮಠ, ಸವದತ್ತಿ
೩೯ ಶ್ರೀ ಜಗದ್ಗುರುದೇವರು ಗವಿಮಠ, ಮುಧೋಳ
೪೦ ಶ್ರೀ ಸಿದ್ಧಲಿಂಗದೇವರು ಸಿದ್ಧಲಿಂಗೇಶ್ವರಮಠ, ರಾವೂರ
೪೧ ಶ್ರೀ ಚೆನ್ನಬಸವದೇವರು ಗೊಡ್ಡಹುಣಸಿಮಠ, ಸವಣೂರ
೪೨ ಶ್ರೀ ಗಜದಂಡದೇವರು, ಮುದ್ದೇಬಿಹಾಳ
೪೩ ಶ್ರೀ ಬಸವಲಿಂಗದೇವರು ವಿರಕ್ತಮಠ, ತೆಲಸಂಗ
೪೪ ಶ್ರೀ ಶಿವಕುಮಾರದೇವರು ಬೂದಿಸ್ವಾಮಿಮಠ, ಹೊಸಳ್ಳಿ
೪೫ ಶ್ರೀ ಚಂದ್ರಶೇಖರದೇವರು ಪರಸಿಮಠ, ಗುಲಬುರ್ಗಾ
೪೬ ಶ್ರೀ ಗಂಗಾಧರದೇವರು ಹಿರೇಮಠ, ಗಂವ್ಹಾರ
೪೭ ಶ್ರೀ ರುದ್ರಮುನಿದೇವರು ಷಡಕ್ಷರಿಮಠ, ತಿಪಟೂರ
೪೮ ಶ್ರೀ ಕೊಟ್ಟೂರದೇವರು ಕಲ್ಮಠ, ಗಂಗಾವತಿ
೪೯ ಶ್ರೀ ಪಂಚಾಕ್ಷರಿದೇವರು ವಿರಕ್ತಮಠ, ಯಕ್ಕುಂಡಿ
೫೦ ಶ್ರೀ ಶಿವಾನಂದದೇವರು ಸಿದ್ಧೇಶ್ವರಮಠ, ಹಂದಿಗಾಂವ
೫೧ ಶ್ರೀ ಪ್ರಭುದೇವರು, ಶಿರಸಂಗಿ
೫೨ ಶ್ರೀ ಮಹಾಂತಸ್ವಾಮಿಗಳು ವಿರಕ್ತಮಠ, ನರೋಣ
೫೩ ಶ್ರೀ ಚನ್ನವೀರ ಶಿವಾಚಾರ್ಯರು, ಹಿರೇಮಠ, ಹಾರಕೂಡ
೫೪ ಶ್ರೀ ಮ. ನಿ. ಪ್ರ. ಸಿದ್ಧಲಿಂಗಸ್ವಾಮಿಗಳು ವಿರಕ್ತಮಠ, ಸಿಂದಗಿ
೫೫ ಶ್ರೀ ಮಹಾಂತದೇವರು ಹಿರೇಮಠ, ಅಂಕಲಗಿ
೫೬ ಶ್ರೀ ಗುರುಬಸವದೇವರು ಹಿರೇಮಠ, ಸೊನ್ನ
೫೭ ಶ್ರೀ ವಿಜಯಕುಮಾರದೇವರು ವಿರಕ್ತಮಠ, ತಾಂಬಾಳ
೫೮ ಶ್ರೀ ಸೋಮಶೇಖರದೇವರು ಕಂಬಳೇಶ್ವರಮಠ, ಚಿತಾಪೂರ
೫೯ ಶ್ರೀ ಮಹಾಂತದೇವರು ನಿರ್ವಾಣೇಶ್ವರಮಠ, ಉಗರಗೋಳ
೬೦ ಶ್ರೀ ಸಿದ್ಧಲಿಂಗದೇವರು ವಿರಕ್ತಮಠ, ಎಲ್ಲಾನೂರ (ಆಂಧ್ರಪ್ರದೇಶ)
೬೧ ಶ್ರೀ ಶಿವಾನಂದದೇವರು ವಿರಕ್ತಮಠ, ಸೊನ್ನ
೬೨ ಶ್ರೀ ಚನ್ನವೀರದೇವರು ಮಡಿವಾಳೇಶ್ವರಮಠ, ಬುಡರಕಟ್ಟಿ
೬೩ ಶ್ರೀ ಚನ್ನವೀರದೇವರು, ಗುಂಡಗುರ್ತಿ

## ಪೀಠಾರೋಹಣಕ್ಕೆ ಪ್ರೇರಣೆ

[ಮೂರುಸಾವಿರಮಠದ ಪೂಜ್ಯ ಶ್ರೀಗಳವರಿಂದ ಪ್ರೇರಣೆ ಪ್ರೋತ್ಸಾಹ ಪಡೆದು ಮಠಾಧೀಶ್ವರರಾದವರು]

೧ ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು ಹೊಸಪೇಟ, ಬಳ್ಳಾರಿ
೨ ಲಿಂ. ಗುರು ಮಹಾಂತಸ್ವಾಮಿಗಳು ಚಿತ್ತರಗಿ, ಸಂಸ್ಥಾನಮಠ ಇಲಕಲ್ಲ
೩ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಲಕಲ್ಲ
೪ ಡಾ|| ಶ್ರೀ ಷ. ಬ್ರ. ಗುರುಸಿದ್ಧಶಿವಾಚಾರ್ಯರು ಕೆಳದಿ ಹಿರೇಮಠ ತಾ. ಸಾಗರ
೫ ಶ್ರೀ ನಿ. ಪ್ರ. ಗಂಗಾಧರ ಮಹಾಸ್ವಾಮಿಗಳು ಶಾಖಾ ಮೂರುಸಾವಿರಮಠ ಬೈಲಹೊಂಗಲ

## ಜಗದ್ಗುರುಗಳ ಜೀವನ ಚರಿತ್ರೆಯನ್ನು ಅಧ್ಯಯನ ಮಾಡುವ ಓದುಗರಿಗೆ ಅನುಕೂಲವಾಗುವ ಮಹತ್ವದ ತಾರೀಖುಗಳು

| | | |
|---|---|---|
| ೧ | ಪೂಜ್ಯ ವಿಜಯಮಹಾಂತ ಶಿವಯೋಗಿಗಳ ಜನನ (ಸಸಿವಾಳ) | ೧೮೫೦ |
| ೨ | ಪೂಜ್ಯ ಹಾನಗಲ್ಲ ಕುಮಾರಸ್ವಾಮಿಗಳ ಜನನ (ಜೋಯಿಸರ ಹರಳಳ್ಳಿ) | ೧೮೬೭ |
| ೩ | ವಿಜಯಮಹಾಂತ ಶಿವಯೋಗಿಗಳು ಪಟ್ಟಕ್ಕೆ ಕುಳಿತದ್ದು | ೧೮೭೯ |
| ೪ | ಅಖಿಲಭಾರತ ವೀರಶೈವ ಮಹಾಸಭೆಯ ಸ್ಥಾಪನೆ | ೧೯೦೪ |
| ೫ | ಶಿವಯೋಗಮಂದಿರ ಸ್ಥಾಪನೆಯ ಬಗ್ಗೆ ಬಾಗಲಕೋಟೆಯಲ್ಲಿ ೪ನೆಯ ಅಖಿಲ ಭಾರತ ವೀರಶೈವ ಮಹಾಸಭೆಯ ನಿರ್ಣಯ | ೧೯೦೮ |
| ೬ | ವಿಜಯಮಹಾಂತ ಸ್ವಾಮಿಗಳು ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಶಿವಯೋಗಮಂದಿರ ಸ್ಥಾನ ನಿರ್ದೇಶನ ಮಾಡಿದ್ದು | ೧೯೦೮ |
| ೭ | ಶಿವಯೋಗಮಂದಿರ ಸ್ಥಾಪನೆ | ೧೯೦೯ |
| ೮ | ವಿಜಯಮಹಾಂತ ಸ್ವಾಮಿಗಳ ಐಕ್ಯ | ೧೯೧೧ |
| ೯ | ಹಾನಗಲ್ಲ ಕುಮಾರಶಿವಯೋಗಿಗಳು ಸಸಿವಾಳಕ್ಕೆ ಬಂದದ್ದು | ೧೯೨೫ |
| ೧೦ | ಮಗು 'ಮಹಾಂತೇಶ' [ಜಗದ್ಗುರುಗಳು]ನ ಜನನ[1] | ೧೯೨೭ |
| ೧೧ | ಹಾನಗಲ್ಲ ಕುಮಾರಸ್ವಾಮಿಗಳ ಐಕ್ಯ | ೧೯೩೦ |

1 ಮಗು 'ಮಹಾಂತೇಶ' [ಜಗದ್ಗುರುಗಳ]ನ ಜನನ: ಅಕ್ಷಯ ಸಂವತ್ಸರ: ಶಾಲಿವಾಹನ ಶಕೆ: 1848 ಮಾಘ ಶುದ್ಧ: 10: ಶುಕ್ರವಾರ: ಕ್ರಿಸ್ತಶಕೆ 1927: ಫೆಬ್ರುವರಿ: 11 ರಂದು: ರಾತ್ರಿ 7–45 ಗಂಟೆಗೆ ಮೃಗಶಿರಾ ನಕ್ಷತ್ರವಿದ್ದಾಗ.

೧೨ ಮಗು 'ಮಹಾಂತೇಶ' ಶಿವಯೋಗಮಂದಿರಕ್ಕೆ ಬಂದುದು ೧೯೩೨

೧೩ ಶಿವಯೋಗಮಂದಿರದ ಇವರ (ಜಗದ್ಗುರುಗಳ) ಪ್ರಥಮ ಲಭ್ಯ ಫೋಟೋ ೧೯೪೬

೧೪ "ಶ್ರೀ ವಿಜಯಮಹಾಂತೇಶ ಲಾವಣಿ" ರಚನೆ ೧೯೪೫

೧೫ "ಶ್ರೀ ಮರುಳಸಿದ್ಧೇಶ್ವರ ನಾಮಾವಳಿ" ರಚನೆ ೧೯೪೬

೧೬ "ಶ್ರೀ ಶಿವಬಸವೇಶ್ವರ ನಾಮಾವಳಿ" ರಚನೆ ೧೯೪೬

೧೭ "ಅಪ್ಪಯ್ಯ ಸ್ವಾಮಿಗಳ ಚರಿತೆ" ರಚನೆ ೧೯೫೦

೧೮ "ಕಾವ್ಯತೀರ್ಥ" ಪದವಿ (ಕಲಕತ್ತಾ ಬಂಗಾಲ ಅಸೋಸಿಯೇಶನ್) ೧೯೫೧

೧೯ "ಸಾಹಿತ್ಯರತ್ನ" ಪದವಿ (ಢಾಕಾ) ೧೯೫೨

೨೦ "ವೇದಾಂತಾಚಾರ್ಯ" ಪದವಿ (ಕಾಶಿ ಹಿಂದೂ ವಿಶ್ವವಿದ್ಯಾಲಯ ೧೯೫೭

೨೧ "ಪೂಮಾಲೆ"; ಕವಿತಾಸಂಕಲನ: ರಚನೆ ೧೯೫೪

೨೨ "ಪಥಿಕ"; ಕವಿತಾಸಂಕಲನ ರಚನೆ ೧೯೫೪

೨೩ "ಪೂದೋಟ"; ಅಪ್ರಕಟಿತ ಅಭಿಜ್ಞಾನ ಶಾಕುಂತಲದ ವಿಮರ್ಶೆ (ಅಪ್ರಕಟಿತ) ೧೯೫೫

೨೪ "Yogiraj of Karnatak" ರಚನೆ ಸಂಸ್ಕೃತ ಕವಿಚರ್ಚಾ ಅಪ್ರಕಟಿತ ೧೯೫೫

೨೫ ಮೂರುಸಾವಿರಮಠದ ಭಾವಿಜಗದ್ಗುರುಗಳೆಂದು ಹುಬ್ಬಳ್ಳಿಯಲ್ಲಿ ನಿಯೋಜಿತರಾದದ್ದು ೨-೧೧-೧೯೫೭

೨೬ ಇವರ ಗುರುಗಳಾದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರು ಲಿಂಗೈಕ್ಯರಾದದ್ದು (ಮಹಾಶಿವಯೋಗ) ೧೭-೨-೧೯೫೮

೨೭ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರರಾಗಿ ಪೀಠಾರೋಹಣ ೧-೫-೧೯೫೮

೨೮ ಇಲಕಲ್ಲ; ಹುನಗುಂದ; ಚಿತ್ತರಗಿ; ನವಲಗುಂದ ಸಂದಗಿ ಅಡ್ಡಪಾಲಕಿ ೧೯೫೯

೨೯ ಇಲಕಲ್ಲ ಮಠಕ್ಕೆ ತಮ್ಮ ತರುವಾಯ ಗುರುಮಹಾಂತ ಸ್ವಾಮಿಗಳನ್ನು ಆಯ್ಕೆ ಮಾಡಿದ್ದು ೧೯೬೩

೩೦ ಶ್ರೀ ವಿಜಯಮಹಾಂತೇಶ್ವರ ವಿದ್ಯಾವರ್ಧಕ ಸಂಘ ಹಾಗೂ ಕಾಲೇಜ: ಇಲಕಲ್ಲ ಸ್ಥಾಪನೆ ೧೯೬೪

ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠದ ವಿದ್ಯಾವರ್ಧಕ ಸಂಘ ಸ್ಥಾಪನೆ

೩೧ "ಪರಂಜ್ಯೋತಿ" ಪತ್ರಿಕೆ ಆರಂಭ ೧೯೬೮

೩೨ ದಿಲ್ಲಿಯ ವಿಶ್ವಶಾಂತಿ ಪರಿಷತ್ತು ೧೨-೧-೧೯೬೮
೩೩ ಇಂದಿರಾಗಾಂಧಿ ಅವರೊಂದಿಗೆ ಸಂದರ್ಶನ (ದಿಲ್ಲಿ) ೧೩-೧-೧೯೬೮
೩೪ ಕಾಶಿಯಲ್ಲಿ ಗುರುವಿರಕ್ತರ ಸಮ್ಮೇಲನ ೧೫-೧-೧೯೬೮
೩೫ ಜಪಾನಿನ ಕ್ಯೊಟೊ (Kyoto) ದಲ್ಲಿ ವಿಶ್ವಶಾಂತಿ ಸಮ್ಮೇಲನ ಆರಂಭ ೧೬-೧೦-೧೯೭೦
೩೬ ವಿಶ್ವಶಾಂತಿ ಸಮ್ಮೇಲನದಲ್ಲಿ ಜಗದ್ಗುರುಗಳ ಉಪನ್ಯಾಸ ೧೭-೧೦-೧೯೭೦
೩೭ ಕ್ಯೊಟೊ; ನಾರಾ; ಟೇರಾ ಸಂದರ್ಶನ ೧-೧೦-೧೯೭೦
೩೮ ಓಸಾಕಾ ಸಂದರ್ಶನ ೨೦-೧೦-೧೯೭೦
೩೯ ಟೋಕಿಯೊ ಸಂದರ್ಶನ ೨೨-೧೦-೧೯೭೦
೪೦ ಹಾಂಗಕಾಂಗ ಸಂದರ್ಶನ ೨೪-೧೦-೧೯೭೦
೪೧ ಸಿಂಗಾಪೂರ ಸಂದರ್ಶನ ೨೯-೧೦-೧೯೭೦
೪೨ ಕೌಲಾಲಂಪೂರ ಸಂದರ್ಶನ ೧-೧೧-೧೯೭೦
೪೩ ಥೈಲ್ಯಾಂಡ ಸಂದರ್ಶನ ೩-೧೧-೧೯೭೦
೪೪ ಬ್ಯಾಂಕಾಕ್ ಸಂದರ್ಶನ ೩-೧೧-೧೯೭೦
೪೫ ಮರಳಿ ಭಾರತಕ್ಕೆ (ಕಲಕತ್ತಾ) ೭-೧೧-೧೯೭೦
೪೬ ಕಲಕತ್ತೆಯಿಂದ ಮುಂಬೈಗೆ ೧೦-೧೧-೧೯೭೦
೪೭ ಮುಂಬೈಯಿಂದ ಬೆಳಗಾವಿ, ಹುಬ್ಬಳ್ಳಿಗೆ ೧೧-೧೧-೧೯೭೦
೪೮ ಮೈಸೂರಲ್ಲಿ ಮೆರವಣಿಗೆ: ಸತ್ಕಾರ ೨೭-೧೧-೧೯೭೦
೯೪ ೧೨ ವರ್ಷದ ಒಂದು ಪಟ್ಟ ಪೂರೈಸಿದುದು ೧೯೭೦
೫೦ "ಆಶೀರ್ವಾಣಿ" ಪುಸ್ತಕ ಪ್ರಕಟಣೆ ೧೯೭೦
೫೧ ದ್ವಾದಶ ಪೀಠಾರೋಹಣ ಮಹೋತ್ಸವ (ಇದರ ಅಂಗವಾಗಿ ಕೆಳಗಿನ ಸಮ್ಮೇಲನಗಳು) ೨-೪-೧೯೭೨ ರಿಂದ ೧೦-೪-೧೯೭೨ವರೆಗೆ
೧ ಸುಸ್ಮರಣ ವಿಚಾರಸಂಕಿರಣ "ಚಿತ್ಪ್ರಭೆ" ಪ್ರಕಟನೆ ೨-೪-೭೨
೨ ಲಿಂ. ವಿಜಯಮಹಾಂತ ಶಿವಯೋಗಿಗಳ ೬೦ ನೆಯ ಸ್ಮಾರಕೋತ್ಸವ ೨-೪-೭೨
೩ ತೋಂಟದ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ೩-೪-೭೨
೪ ಹಾನಗಲ್ಲ ಕುಮಾರ ಶಿವಯೋಗಿಗಳ ಶತಮಾನೋತ್ಸವ ೩-೪-೭೨
೫ ಅಖಿಲ ಭಾರತ ಶಿವಾನುಭವ ಸಮ್ಮೇಲನ ೪-೪-೭೨
೬ ಅಖಿಲ ಭಾರತ ಅಕ್ಕನ ಬಳಗಗಳ ೮ನೆಯ ಸಮ್ಮೇಳನ ೪-೪-೭೨
೭ ಒಳಗಿನ ಮಹಾದ್ವಾರದ ಉದ್ಘಾಟನೆ ೫-೪-೭೨
೮ ಧರ್ಮ ಪ್ರಚಾರಕ ಕಟ್ಟಡದ ಉದ್ಘಾಟನೆ ೫-೪-೭೨

೯ ಸಂಸ್ಕೃತ ವಿದ್ವಲ್ ಪರಿಷತ್ತು ೫-೪-೭೨
೧೦ ನಿಜಗುಣ ಶಿವಯೋಗಿಗಳ ಸ್ಮಾರಕೋತ್ಸವ ೫-೪-೭೨
೧೧ ಪತ್ರಿಕಾಕರ್ತರ ಸಮ್ಮೇಳನ ೬-೪-೭೨
೧೨ ಮೂರುಸಾವಿರಮಠ ಗ್ರಂಥಮಾಲೆಯ ಸುವರ್ಣ ಮಹೋತ್ಸವ: "ಚಿತ್ರಭೆ" ಉದ್ಘಾಟನೆ ಕವಿ ಸಮ್ಮೇಲನ ೬-೪-೭೨
೧೩ Symposium on Basaveswar ೭-೪-೭೨
೧೪ ಸಂಗೀತ ಸಮ್ಮೇಲನ ೭-೪-೭೨
೧೫ ಸರ್ವಧರ್ಮ ಶಾಂತಿ ಸಮ್ಮೇಲನ ೮-೪-೨೭
೧೬ ನೂರೊಂದು ಮಂಟಪ ಪೂಜೆ ೧೦-೪-೭೨
೧೭ ನೆಹರೂ ಮೈದಾನದಲ್ಲಿ "ಮಹಾಪ್ರಸಾದ" ೧೦-೪-೭೨
೧೮ ದ್ವಾದಶ ವಾರ್ಷಿಕೋತ್ಸವ ಸಿಂಹಾಸನಾರೋಹಣ ೧೦-೪-೭೨ (ಇತ್ಯಾದಿ)
೫೨ ಲ್ಯೂವನ್ನಿನ (Leuven) ವಿಶ್ವಧರ್ಮಗಳ ವಿಶ್ವಶಾಂತಿ ಸಮ್ಮೇಲನಕ್ಕಾಗಿ ಬೆಲ್ಜಿಯಂಕ್ಕೆ ಪ್ರಯಾಣ ಆರಂಭ ೨೨-೮-೧೯೭೪
೫೩ ದಿಲ್ಲಿಯಲ್ಲಿ ರಾಷ್ಟ್ರಪತಿ ಫಕುರುದ್ದೀನ ಅಲಿ ಅಹಮ್ಮದ ಮತ್ತು ಉಪರಾಷ್ಟ್ರ ಪತಿ ಬಿ. ಡಿ. ಜತ್ತಿ ಅವರಿಗೆ ಸಂದರ್ಶನ ೨೩-೮-೭೪
೫೪ ಲ್ಯೂವನ್ನಿಗೆ ದಿಲ್ಲಿಯಿಂದ ವಿಮಾನಯಾನ ೨೫-೮-೭೪
೫೫ ವಿಶ್ವಧರ್ಮಗಳ ಶಾಂತಿಸಮ್ಮೇಲನ ಆರಂಭ ೨೮-೮-೭೪
೫೬ ಸಮ್ಮೇಲನದಲ್ಲಿ ಶ್ರೀಗಳ ಉಪನ್ಯಾಸ ೨೮-೮-೭೪
೫೭ 'ಲಾಲಿಬರಾ ಬೆಲ್ಜಿಕ್' ಪತ್ರಿಕೆಯಲ್ಲಿ ಜಗದ್ಗುರುಗಳ ಬಗ್ಗೆ ಅಗ್ರವರದಿ; ಫೋಟೋ ೨೯-೮-೭೪
೫೮ ಸಮ್ಮೇಲನದ ಬಹಿರಂಗ ಸಭೆಯಲ್ಲಿ ಉಪನ್ಯಾಸ ೩೦-೮-೭೪
೫೯ "ಹಾರ್ಟ್ಸಬ್ಲಾಸಮ್" ಜಗದ್ಗುರುಗಳ ಇಂಗ್ಲೀಷ ಗ್ರಂಥದ ಉದ್ಘಾಟನೆ ಡಾ|| ಹೋಮರ ಎ. ಜಾಕ್ ಅವರಿಂದ ೩೧-೮-೭೪
೬೦ ಕೇಂದ್ರೀಯ ಆರ್ಥಿಕ ಸಮಿತಿಗೆ (ನ್ಯೂಯಾರ್ಕ) ಜಗದ್ಗುರುಗಳ ಆಯ್ಕೆ ೩-೯-೭೪
೬೧ ಲಂಡನ್ನಿಗೆ ವಿಮಾನಯಾನ ೪-೯-೭೪
೬೨ ಡಾ|| ಸಚ್ಚಿದಾನಂದ ಮೂರ್ತಿ ಮನೆಯಲ್ಲಿ ವಾಸ್ತವ್ಯ ೪-೯-೭೪ ರಿಂದ ೫ ದಿನ
೬೩ ಲಂಡನ್ ದರ್ಶನ ೫-೯-೭೪
೬೪ ಸೌಥ್‌ಹ್ಯಾಂಪ್ಟನ್ನಿಗೆ ೬-೯-೭೪
೬೫ ಆಕ್ಸ್‌ಫರ್ಡ ವಿಶ್ವವಿದ್ಯಾಲಯ ದರ್ಶನ ೮-೯-೭೪

□

ಆರು ವರ್ಣದ ಪಕ್ಷಿ ಮೂರು ವರ್ಣದ ಗೂಡ
ಭಾರಿ ಮರದಲ್ಲಿ ಕಟ್ಟಿ ಮರಿ ಇಟ್ಟಿಹುದು
ಪಾರಮಾರ್ಥವಿದು! ಪೂರ್ಣಜ್ಞ.

ಭಯಬೇಕು ಹಿರಿಯರಲಿ, ನಯಬೇಕು ನಡತೆಯಲಿ
ಜಯಬೇಕು ಕರಣ ನಿಗ್ರಹದಿ; ದಲಿತರಿಗೆ
ದಯೆ ತೋರಬೇಕು ಪೂರ್ಣಜ್ಞ.

ನಡೆ ನುಡಿಯು ಒಂದಿರದ ಕಡುಕಷ್ಟ ಕೊಡುತಿರುವ
ಜಡಮತಿಗಳೊಡನೆ ಮಾತು ಮಸೆದಾಡಿದರೆ
ಸಿಡಿಲುಬಡಿದಂತೆ ಪೂರ್ಣಜ್ಞ.

ಮಾತಿನಲಿ ಮಾಧುರ್ಯ ಕೃತಿಯಲ್ಲಿ ಸೌಂದರ್ಯ
ಖ್ಯಾತಿಯಲ್ಲಿ ನಿಸ್ಪೃಹತೆ ಇರುವ ಮನುಜಂಗೆ
ಯಾತರದು ಭೀತಿ? ಪೂರ್ಣಜ್ಞ.

ಕಣ್ಣಿನಲಿ ಹೊರಗಣ್ಣು ಕಣ್ಣಿನಲಿ ಒಳಗಣ್ಣು
ಕಣ್ಣಿನೊಳಗಿರುವ ತಿಳಿಗಣ್ಣು ಪಿಡಿದಿರುವ
ಅಣ್ಣಗಳು ಯಾರು? ಪೂರ್ಣಜ್ಞ.

ಆಧುನಿಕ ಅಣ್ವಸ್ತ್ರ ಮೇದಿನಿಯ ತುತ್ತಲಿದೆ
ಸಾಧುಗುಣ ಬೆಳೆಯದಿರೆ, ವಿಜ್ಞಾನದೊಡನೆ
ಮೇದಿನಿಗೆ ಪ್ರಳಯ! ಪೂರ್ಣಜ್ಞ.

ಬಿದ್ದವರನೆತ್ತುವದು ಶುದ್ಧಮಾನವಧರ್ಮ
ತಿದ್ದಿ ಜನಮನವ ಸಂಸ್ಕಾರ ಕೊಡುವವನು
ಸದ್ಧರ್ಮಿಯಯ್ಯಾ ಪೂರ್ಣಜ್ಞ॥

ಜನಹಿತವೆ ಕರ್ತವ್ಯ, ಜನಹಿತವೆ ಗಂತವ್ಯ
ಜನಹಿತವೆ ನಮ್ಮ ಭವಿತವ್ಯವೆಂಬುವದೆ
"ಜನಧರ್ಮ" ನಿಜದಿ ಪೂರ್ಣಜ್ಞ॥

ಬಣಜಿಗರು ಜಂಗಮರು ನೊಣಬ ಶಿವಸಿಂಪಿಗರು
ಗಾಣಿಗ ಸಾದರರು ಭಾವೈಕ್ಯ ನುಡಿಯಲ್ಲಿ
ಗೊಣಗುವರು ಬರಿದೆ ಪೂರ್ಣಜ್ಞ॥

ರಮಜಾನ ಹಬ್ಬವದು ಕರ್ಮಕಳೆಯುವ ಹಬ್ಬ
ವಿಮಲ ಮಾನಸದಿ ಪ್ರೇಮ ಸಂವರ್ಧಿಸುವ
ಸಮ್ಮುದದ ಹಬ್ಬ ಪೂರ್ಣಜ್ಞ॥

ಏಸುವಿನ ಉಪದೇಶ ಏಸು ಜನ ಕೇಳುವರು?
ಅಸುರೀ ಶಕ್ತಿ ತೊರೆದು ನೆನೆಯಿರಿ ದಿವ್ಯ
ಏಸುವಿನ ವಚನ ಪೂರ್ಣಜ್ಞ॥

ಜೈನಧರ್ಮದ ಶುದ್ಧಿ, ಜೈನಧರ್ಮದ ಶಕ್ತಿ
ಜೈನಧರ್ಮಕ್ಕೆ ಅಡಿಗಲ್ಲು ತ್ಯಾಗಗಳು
ದಾನಶ್ರದ್ಧೆಗಳು ಪೂರ್ಣಜ್ಞ॥

ಹಿಂದು ಧರ್ಮಿಗಳೆಲ್ಲ; ಒಂದೆಂಬುದನು ಮರೆತು
ಹಿಂದಾಗಬೇಡಿ, ಚೆಂದಾಗಿ;ಒಂದಾಗಿ
ಮುಂದಾಗಿ ಇಂದು ಪೂರ್ಣಜ್ಞ॥

—ಶ್ರೀ ಮೂಜಗಂ

ಕುಬಾರಗರಡಿ ಹತ್ತಿರ, ಗಂಗಾಪೂರ ಓಣಿ,
ತ್ವರಿತ ಮುದ್ರಣಾಲಯ ಗದಗ-೫೮೨ ೧೦೧